# ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ

(ಕೂಡ್ಲಿಗಿ ಪಟ್ಟಣದ ಬೇಡ ಬುಡಕಟ್ಟು ದೇವದಾಸಿ ಸಮುದಾಯವನ್ನು ಅನುಲಕ್ಷಿಸಿ)

ಪಿಎಚ್. ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ



ಸಂಶೋಧನಾ ವಿದ್ಯಾರ್ಥಿ
ಶ್ರೀಮತಿ ಟಿ. ಕೊತ್ಲಮ್ಮ

ಮಾರ್ಗದರ್ಶಕರು
ಡಾ. ಕೆ. ಕೇಶವನ್ ಪ್ರಸಾದ್
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ





ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭

# ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ

## (ಕೂಡ್ಲಿಗಿ ಪಟ್ಟಣದ ಬೇಡ ಬುಡಕಟ್ಟು ದೇವದಾಸಿ ಸಮುದಾಯವನ್ನು ಅನುಲಕ್ಷಿಸಿ)

ಪಿಎಚ್. ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ

---


ಸಂಶೋಧನಾ ವಿದ್ಯಾರ್ಥಿ

ಶ್ರೀಮತಿ ಟಿ. ಕೊತ್ಲಮ್ಮ

ಮಾರ್ಗದರ್ಶಕರು

ಡಾ. ಕೆ ಕೇಶವನ್ ಪ್ರಸಾದ್

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ







ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ (ಕೂಡ್ಲಿಗಿ ಪಟ್ಟಣದ ಬೇಡ ಬುಡಕಟ್ಟು ದೇವದಾಸಿ ಸಮುದಾಯವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್,ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಡಾ. ಕೆ ಕೇಶವನ್ ಪ್ರಸಾದ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಸದರಿ ಮಹಾಪ್ರಬಂಧವು ಈ ಮೊದಲು ಯಾವ ಪದವಿಗೂ ಸಲ್ಲಿಸಲ್ಪಟ್ಟಿಲ್ಲವೆಂದು ದೃಢೀಕರಿಸುತ್ತೇನೆ.

T. Kotti

೦೫.೦೭.೨೦೦೭
ವಿದ್ಯಾರಣ್ಯ

**(ಶ್ರೀಮತಿ ಟಿ. ಕೊತ್ಲಮ್ಮ)**
ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಮತಿ ಟಿ. ಕೊತ್ಲಮ್ಮ ಅವರು ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ (ಕೂಡ್ಲಿಗಿ ಪಟ್ಟಣದ ಬೇಡ ಬುಡಕಟ್ಟು ದೇವದಾಸಿ ಸಮುದಾಯವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್, ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಲ್ಪಟ್ಟಿಲ್ಲವೆಂದು ದೃಢೀಕರಿಸುತ್ತೇನೆ.

೦೫.೦೭.೨೦೦೭
ವಿದ್ಯಾರಣ್ಯ

(ಡಾ. ಕೆ. ಕೇಶವನ್ ಪ್ರಸಾದ್)
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ

## ಹೃದಯವಂತರ ಹೃದಯಕ್ಕೆ ....

ನನ್ನನ್ನು ಸಂಶೋಧನಾ ಕ್ಷೇತ್ರದ ಕಡೆಗೆ ಗಮನ ಹರಿಸುವ ಚೈತನ್ಯ ನೀಡಿದ ದಿವಂಗತ ಸಹೋದರರಾದ ಶ್ರೀ ಟಿ. ಕೃಷ್ಣ ಹಾಗೂ ತಿರುಮಲೇಶ್ ಇವರಿಗೆ

ನನ್ನ ಅಧ್ಯಯನಕ್ಕೆ ಸಹಾಯ, ಸಹಕಾರ ನೀಡಿ, ಅತ್ಯಂತ ಪ್ರೀತಿಯಿಂದ ಕುಟುಂಬದ ಒಬ್ಬ ಸದಸ್ಯರಂತೆ ನನ್ನನ್ನು ಸಹನೆಯಿಂದ ಪ್ರೋತ್ಸಾಹಿಸಿ, ಮಾರ್ಗದರ್ಶನ ನೀಡಿದ ಗುರುಗಳಾದ ಡಾ.ಕೇಶವನ್ ಪ್ರಸಾದ್ ಕೆ. ಮರಟ್ಟಿ ಇವರಿಗೆ ನಾನು ಚಿರಋಣಿ.

ನನ್ನ ಸಂಶೋಧನೆಗೆ ವಿಷಯವನ್ನು ಸೂಚಿಸಿ, ಉತ್ತೇಜನವನ್ನು ನೀಡಿದ ಆತ್ಮೀಯ ಗುರುಗಳಾದ ಶ್ರೀಯುತ ಡಾ.ಕಾಮಣ್ಣ ಮೈತ್ರಿ ಅವರಿಗೆ, ವಿಷಯದ ಬಗ್ಗೆ ವಿಶೇಷ ಮುತುವರ್ಜಿ ವಹಿಸಿ ಸಲಹೆ, ಸೂಚನೆಗಳನ್ನು ನೀಡಿದ ಆತ್ಮೀಯರಾದ ಶ್ರೀಯುತ ಎ.ಎಸ್.ಪ್ರಭಾಕರ್ ಅವರಿಗೆ, ಸದಾ ಪ್ರೋತ್ಸಾಹವನ್ನು ನೀಡುತ್ತಾ ಬಂದ ಶ್ರೀಯುತ ಚೆಲುವರಾಜ್, ಹಿರಿಯರಾದ ಪಿ.ಚಿ.ಬೋರಲಿಂಗಯ್ಯ ಇವರಿಗೆ ಮತ್ತು ಯಾವತ್ತೂ ಸಹಾಯ, ಸಹಕಾರ ನೀಡಿದ ವಿರೂಪಾಕ್ಷ ಪೂಜಾರಹಳ್ಳಿ ಹಾಗೂ ದಳವಾಯಿ ವೆಂಕಟಗಿರಿ, ಶ್ರೀಮತಿ ಮಲ್ಲಿಕಾ ಘಂಟಿ ಇವರಿಗೆ

ನನ್ನ ವಿದ್ಯಾಭ್ಯಾಸಕ್ಕಾಗಿ ಶ್ರಮ ವಹಿಸಿ, ಛಲದಿಂದ ಮುನ್ನಡೆಯಲು ಪ್ರೇರಣೆ ನೀಡಿದ ಪಿತೃಸಮಾನರಾದ ನಮ್ಮೆಲ್ಲರ ಪ್ರೀತಿಗೆ ಪಾತ್ರರಾದ ಮಾಮ ಶ್ರೀಯುತ ಪಿ.ಕುಮಾರಪ್ಪ ವಾಣಿಜ್ಯ ತೆರಿಗೆ ನಿರೀಕ್ಷಕರು ಇವರಿಗೆ

ನನ್ನ ಅಧ್ಯಯನಕ್ಕೆ ಸ್ಫೂರ್ತಿ ನೀಡಿದ ಮಾತಾಪಿತೃ ಸ್ವರೂಪಿಗಳಾದ ಅತ್ತೆ ಶ್ರೀಮತಿ ಗಿರಿಯಮ್ಮ ಹಾಗೂ ಮಾವ ದಳವಾಯಿ ವೀರಣ್ಣ ಇವರಿಗೆ, ತಾಯಿಯಾದ ಶ್ರೀಮತಿ ಸೊಲ್ಲಮ್ಮ, ತಂದೆ ತೂಗದಲಿ ದೊಡ್ಡ ಭೀಮಪ್ಪ, ಪ್ರೀತಿಯ ಅಣ್ಣನಾದ ವಿಠಲ, ತಂಗಿ ಲಕ್ಷ್ಮಿ, ರಮೇಶ, ಅತ್ತಿಗೆಯರಾದ ಲಕ್ಷ್ಮಿದೇವಿ, ವಸಂತ ಸೊಸೆ ಸೌಮ್ಯ ಇವರಿಗೆ.

ನನ್ನ ಅಧ್ಯಯನದ ಸಂದರ್ಭದಲ್ಲಿ ಅಪಾರ ಸಹನೆಯಿಂದ ಸಹಕರಿಸಿದ ನನ್ನ ಮಕ್ಕಳಾದ ಅಶ್ವಿನಿ, ಅನುಷಾ, ಸ್ವಾತಿ, ಭುವನ, ಸೋಮಶೇಖರ್, ಅಕ್ಷಯ ಇವರಿಗೆ

ನನ್ನ ಅಧ್ಯಯನದ ಕಾಲದಲ್ಲಿ ಕಾಳಜಿ ವಹಿಸಿ ಪ್ರೀತಿಯಿಂದ ನೋಡಿಕೊಂಡ ಶಾಂತಾ ಕೆ. ಪ್ರಸಾದ್ ಮರಟ್ಟಿ ಚಿರಂಜೀವಿಗಳಾದ ಆಕರ್ಷಕ, ಪ್ರಾಮಾಣಿಕ ಇವರಿಗೆ

ದೇವದಾಸಿ ವಿಮೋಚನಾ ಸಂಘದ ಕಾರ್ಯಕರ್ತರಾದ ಶ್ರೀಯುತ ಸಿದ್ದಣ್ಣ ಉತ್ನಾಳ, ಮೇಲ್ವಿಚಾರಕರಾದ ಪಾಟೀಲ್‌ರವರು ಹಾಗೂ ಸಿಬ್ಬಂದಿಯವರು ಅಧ್ಯಯನಕ್ಕೆ ಬೇಕಾದ ಆಕರ ಗ್ರಂಥಗಳನ್ನು ನೀಡಿ ಸಹಕರಿಸಿದ ವಿಮೋಚನಾ ಸಂಘ ಇವರಿಗೆ

ಮಹಾಪ್ರಬಂಧವನ್ನು ಕಂಪ್ಯೂಟರ್‌ಗೆ ಅಳವಡಿಸಿದ ಶ್ರೀಮತಿ ಭಾಗ್ಯ ಪ್ರಭಾಕರ್ ಇವರಿಗೆ, ಹಾಗು ಮಕ್ಕಳಾದ ಸಿದ್ಧಾರ್ಥ ಮತ್ತು ಭಾವನಾರಿಗೆ

ತಮ್ಮ ಬದುಕಿನ ಬವಣೆಗಳನ್ನು ಗಾಢ ವಿಷಾದಗಳ ಮೂಲಕ ತೋಡಿಕೊಂಡು ಈ ಪ್ರಬಂಧ ರೂಪುಗೊಳ್ಳಲು ಕಾರಣರಾದ ಎಲ್ಲಾ ನನ್ನ ದೇವದಾಸಿ ಬಂಧುಗಳಿಗೆ ಹಾಗೂ ಪ್ರತ್ಯಕ್ಷ ಪರೋಕ್ಷವಾಗಿ ಸಹಕರಿಸಿದ ಸಮಸ್ತ ಮಹನೀಯರಿಗೆ ನನ್ನ ನಮಸ್ಕಾರಗಳು

ನನ್ನೊಂದಿಗೆ ಒಂದಾಗಿ ಈ ಮಹಾಪ್ರಬಂಧಕ್ಕೆ ಒಂದು ಚೌಕಟ್ಟು ಜೋಡಿಸಿ, ಚರ್ಚಿಸಿ, ಮಂಥಿಸಿ, ಅನುಮೋದಿಸಿ, ಭಿನ್ನಾಭಿಪ್ರಾಯಗಳ ತುತ್ತ ತುದಿಗೇರಿ ಮತ್ತೆ ಸಹಮತಕ್ಕೆ ಬಂದು ಜವಾಬ್ದಾರಿ, ಜಂಜಾಟಗಳ ನಡುವೆ ಹಗಲು ರಾತ್ರಿಗಳ ವ್ಯತ್ಯಾಸವಿಲ್ಲದೆ ನನ್ನ ಬವಣೆಗಳಿಗೆ ಸಹಭಾಗಿತ್ವ ನೀಡಿದ ನನ್ನ ಸಂಗಾತಿಗೆ ಅನಂತ ಕೃತಜ್ಞತೆಗಳು ಸಲ್ಲಬೇಕು.

**ಟಿ. ಕೊತ್ಲಮ್ಮ**

## ಪರಿವಿಡಿ

## ಕೋಷ್ಟಕಗಳು

ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ

ಪೀಠಿಕೆ

೧.೧ ಅಧ್ಯಯನದ ಉದ್ದೇಶಗಳು

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ವಿಧಾನ

೧.೪ ಪ್ರಬಂಧದ ಅಧ್ಯಾಯಗಳು

೧.೫ ಈವರೆಗಿನ ಅಧ್ಯಯನಗಳ ಸಮೀಕ್ಷೆ

೧.೬ ದೇವದಾಸಿ ಪದ ನಿಷ್ಪತ್ತಿ

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ

**ಪೀಠಿಕೆ**

ಸೃಷ್ಟಿಯ ನಿಯಮದಂತೆ ಗಂಡು ಹೆಣ್ಣು ಪರಸ್ಪರ ಕೂಡಿ ಹೊಂದಾಣಿಕೆಯಿಂದ ಬದುಕಬೇಕು. ಆದರೆ ಈ ಹೊಂದಾಣಿಕೆಯ ವಾತಾವರಣ ಮುಂದುವರಿಕೆಯಾಗದೇ ಒಬ್ಬರಿಗೊಬ್ಬರು, ನಾನು ಪ್ರಧಾನ, ನೀನು ಅಧೀನ ಎಂಬ ಪ್ರತಿಷ್ಠೆಯನ್ನು ಮುಂದು ಮಾಡಿಕೊಂಡು ಬದ್ಧ ದ್ವೇಷಿಗಳಂತೆ ವರ್ತಿಸುತ್ತಿರುವುದು ಮಾನವನ ದುರಂತದ ಆರಂಭವೆಂದು ಊಹಿಸಬಹುದಾಗಿದೆ.

ಸ್ತ್ರೀ ಪುರುಷರ ಮಧ್ಯ ಪರಸ್ಪರ ಅಗತ್ಯತೆ ಅನಿವಾರ್ಯತೆ, ಸಮಾನತೆಯ ಹಲವಾರು ಅಂಶಗಳಿದ್ದರೂ, ವಾಸ್ತವದಲ್ಲಿ ಮಹಿಳೆ ಪುರುಷರಿಗಿಂತ ಹೆಚ್ಚು ಶ್ರೇಷ್ಠತೆ ಹೊಂದಿರುವುದನ್ನು ಕಾಣುತ್ತಿದ್ದೇವೆ. ಮಹಿಳೆ ಹುಟ್ಟಿನಿಂದಲೇ ಕ್ರಿಯಾಶೀಲ ವ್ಯಕ್ತಿತ್ವ ಹೊಂದಿದ್ದಾಳೆ. ಸಮಾಜದಲ್ಲಿ ಪುರುಷರಿಗಿಂತ ಹೆಚ್ಚು ಘನತೆವೆತ್ತವಳಾಗಿ, ತ್ಯಾಗ, ಮೌಲ್ಯ, ವೇದನಾನುಭವ, ನಮ್ರತೆ, ನಂಬಿಕೆ, ಜ್ಞಾನಗಳಿಂದ ಹೆಚ್ಚಿನವಳಾಗಿದ್ದಾಳೆ. ಪುರುಷನನ್ನು ಪೋಷಿಸುವ ಪಾಲಿಸುವ, ಕ್ಷಮಿಸುವ, ಪ್ರೀತಿಸುವ ತಿದ್ದುವ, ಪ್ರೇಮಮಯಿ, ಭಾವಸಂಪತ್ತು, ಸಮೃದ್ಧವಾಗಿ ಹೊರಹೊಮ್ಮಿಸಿ, ಎಲ್ಲರನ್ನು ಹೊತ್ತು ಸಲಹುವ ಭೂಮಿಯ ಹೋಲಿಕೆಗೆ ಪಾತ್ರಳಾಗಿ, 'ಕ್ಷಮಯಾಧರಿತ್ರಿ' ಎಂದು ಕರೆಯಿಸಿಕೊಂಡಿದ್ದಾಳೆ. ಆಕೆ ತನ್ನೆಲ್ಲಾ ಆಕರ್ಷಕಶಕ್ತಿ, ಮೋಹಕ ಗುಣಗಳಿಂದ ಮತ್ತು ಜೀವನ ಸೌಂದರ್ಯಗಳಿಂದ ಕೂಡಿದ್ದರೂ, ಆಕೆಯ ಜೀವನವು ಒಂದು ಸಂಕೋಲೆಯೇ ಆಗಿದೆ.

ಇಲ್ಲದುದರ ಬಗ್ಗೆ ಒಳಗೊಳಗೆ ಕೊರಗಿ ಸೊರಗುತ್ತಿದ್ದರೂ ಹೊರಗೆ ನೆಮ್ಮದಿಯಿಂದ ಇದ್ದೇನೆಂದು ತೋರಿಸಲು ನಟಿಸುವುದೇ ಅವಳ ಜೀವನದ ರೀತಿಯಾಗಿದೆ, ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ತನ್ನ ಪ್ರಗತಿಗೆ ಪೂರಕವಾಗಿ ಬಳಸಿಕೊಂಡ ನಿದರ್ಶನಗಳು ಸಾಕಷ್ಟಿವೆ. ಕೆಲವೊಮ್ಮೆ ಅವುಗಳನ್ನು ಮುಕ್ತವಾಗಿ, ಹೇಳಿಕೊಂಡ ಸಂಗತಿಗಳು ನಮ್ಮಲ್ಲಿವೆ. ಆದರೆ ಸಾಧನೆಯ ಹೆಜ್ಜೆ ಗುರುತುಗಳನ್ನು ಮಾತ್ರ ಮೂಡಿಸಿ, ಚರಿತ್ರೆಯನ್ನು ಕಟ್ಟುವಲ್ಲಿ ಹೆಣ್ಣಿನ ಪಾತ್ರವನ್ನು ಗೌಣ ಮಾಡಿ, ಕತ್ತಲಲ್ಲಿರಿಸಿದ್ದಾನೆ. "ನೀತಿಸೂತ್ರಗಳನ್ನು ಆಕೆಯ ಮೇಲೆ ಪ್ರಯೋಗಿಸಿ, ಸಾಂಸ್ಕೃತಿಕ ಶ್ರೀಮಂತಿಕೆಯಿಂದ ಆಕೆಯನ್ನು ದೂರೀಕರಿಸಿ, ಆ ಮೂಲಕ, ಸ್ತ್ರೀಯ ಕರ್ತವ್ಯ ಪ್ರಜ್ಞೆ, ಕಾರ್ಯ ಶ್ರದ್ಧೆ, ಸಾಹಸದಂತಹ ಗುಣಗಳನ್ನು ಪುರುಷ ತನ್ನ ಸ್ವತ್ತಾಗಿ ಮಾಡಿಕೊಂಡು ಸ್ತ್ರೀಯ

ಗುಣಗಳನ್ನೆಲ್ಲಾ ತ್ಯಾಗದ ಮುಸುಕಿನಲ್ಲಿ ಮರೆಮಾಡಿದ್ದಾನೆ. ಜೊತೆಗೆ ಸ್ತ್ರೀ ಅಭಿವ್ಯಕ್ತಿಗೆ ತಡೆಯನ್ನು ನಿರ್ಮಿಸಿ, ಅವಳ ದುಡಿಮೆ, ಗಳಿಕೆ, ಬುದ್ಧಿ, ಚಾತುರ್ಯ, ಧೈರ್ಯ, ಸಾಹಸಗಳಲ್ಲಿ ಮಹಿಳೆ ಪಾಲ್ಗೊಳ್ಳುವ ಸಾಧ್ಯತೆಯನ್ನು ತನ್ನ ರಾಜಕಾರಣದಿಂದ ಅಲ್ಲಗಳೆಯುತ್ತಾ, ತಾಳ್ಮೆ, ಸಹನೆ, ತ್ಯಾಗ, ಕ್ಷಮೆ, ಭಯ, ಹಿಂಜರಿಕೆ, ಮೆಲುಮಾತು, ವಿಧೇಯತೆ, ನಾಚಿಕೆ, ಸೇವೆಯನ್ನು ಬಲವಂತವಾಗಿ ಆಕೆಯ ಮೇಲೆ ಹೇರುತ್ತಾ ತನ್ನ ಹುನ್ನಾರಗಳ ಮೂಲಕ ಸ್ತ್ರೀಯರ ಬದುಕನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಂಡು"[೧], ಅವಳ ವ್ಯಕ್ತಿತ್ವವನ್ನು ತನಗೆ ಹೇಗೆ ಬೇಕೋ ಹಾಗೆ ಮಣ್ಣಿನ ಮುದ್ದೆಯಂತೆ ಬಳಸಿಕೊಂಡಿದ್ದಾನೆ.

ಪುರುಷ, ಮಹಿಳೆಗಿಂತ ಭಿನ್ನವಾದ ರೀತಿಯಲ್ಲಿ ಕೌಟುಂಬಿಕ ಚೌಕಟ್ಟಿಗೆ ಒಳಪಡದೇ ಸಾಮಾಜಿಕ ವಿಶಾಲತೆಯಲ್ಲಿ ಬದುಕುವ ಆತನ ಹೃದಯ ಒರಟು, ಶರೀರ ಗಡಸು, ಬುದ್ಧಿ ಚುರುಕು, ವಿವೇಚನೆ ಸದಾ ಜಾಗೃತ, ಕಣ್ಣೀರು ಅವನಿಗೆ ಅಸಹಜ. ಹೀಗಾಗಿ ಆತ ಬಲಶಾಲಿ, ಹೀಗೆ ಅನೇಕ ಬಗೆಗಳಲ್ಲಿ ಶ್ರೇಷ್ಠತೆಯ ನೆಲೆಯಲ್ಲಿ ಗಟ್ಟಿಯಾಗಿ ನಿರ್ವಚಿಸಿಕೊಳ್ಳುತ್ತಲೇ ಸ್ತ್ರೀಯನ್ನು ತನ್ನ ಅಗತ್ಯಕ್ಕನುಗುಣವಾಗಿ ಚಿತ್ರಿಸುತ್ತಾ, ಈತನ ಗ್ರಹಿಕೆಗೆ ಹೊರತಾದ ಮನಸ್ಸು, ಬುದ್ಧಿ, ಶಕ್ತಿ, ವಿವೇಚನೆಗಳು ಆಕೆಯ ವ್ಯಕ್ತಿತ್ವಕ್ಕಿವೆ ಎಂದು ನಂಬಿಸಲಾಗಿದೆ.

ಭಾರತೀಯ ಸಮಾಜದಲ್ಲಿ ಸ್ತ್ರೀಯ ಬದುಕಿನುದ್ದಕ್ಕೂ ಧರ್ಮವು ಮಹತ್ತರವಾದ ಪಾತ್ರವನ್ನು ವಹಿಸಿದೆ. ಪುರೋಹಿತಶಾಹಿ ಕಾಲದಲ್ಲಿ ಸ್ತ್ರೀಯರ ಕರ್ತವ್ಯಗಳನ್ನು ನಿಗದಿಪಡಿಸಿ, ಬದ್ಧಗೊಳಿಸುವ ಮೂಲಕ ಪುರುಷಸತ್ತೆಯನ್ನು ಸ್ಥಾಪಿಸಿ, ಪೋಷಿಸಿ, ಬಲಪಡಿಸಿತು. ಅಂದಿನ ಪಿತೃಪ್ರಧಾನ ವ್ಯವಸ್ಥೆಯಿಂದ ಇಂದಿನ ಪುರುಷ ಪ್ರಧಾನ ವ್ಯವಸ್ಥೆಯವರೆಗೆ ಸ್ತ್ರೀ ಪುರುಷರ ಮಧ್ಯ ಅಂತರವನ್ನು ಸೃಷ್ಟಿಸಲಾಗಿದೆ. ಇದಕ್ಕೆ ಧರ್ಮ ಬೆನ್ನೆಲುಬಾಗಿರುವಂತೆ, ಪುರುಷರ ಸ್ವಾರ್ಥಕ್ಕೆ ಭದ್ರ ತಳಪಾಯವಾಗುವಂತೆ, ಪೂರಕವಾಗುವಂತೆ, ಸ್ತ್ರೀಯರನ್ನು ಧಾರ್ಮಿಕ ವ್ಯವಸ್ಥೆಯೊಳಗೆ ಆದರ್ಶೀಕೃತಳಾಗಿ ಮತ್ತು ಧರ್ಮ ಬಹಿಷ್ಕೃತಳಾಗಿಯೂ ಮಾಡಲಾಗಿದ್ದರೂ ಅಂತಹ ಧರ್ಮದ ಅಂಶಗಳನ್ನು ಪೋಷಿಸುವ, ಬೆಳೆಸಿಕೊಂಡು ಹೋಗುವ ಜವಾಬ್ದಾರಿ ಅವಳ ಮೇಲಿದ್ದು ಆ ಕೆಲಸವನ್ನು ಸೊಗಸಾಗಿ ನಿರ್ವಹಿಸಿಕೊಂಡು ಹೋಗುತ್ತಿರುವುದು ವಿಪರ್ಯಾಸವೇ ಸರಿ.

ಇಂದು ಮಾನವ ಪರ ಚಿಂತಕರ ಹೊಸ ಬಗೆಯ ಶೋಧನೆ ಮಹಿಳೆಯ ಪಾಲಿಗೆ ಆಶಾಕಿರಣವಾಗಿದೆ. ಯಾಂತ್ರೀಕರಣದ ಫಲವಾಗಿ ಹೆಣ್ಣು ದುಡಿಮೆಯ ಪ್ರತಿಫಲವನ್ನು ಅನುಭವಿಸುವುದು ಸ್ವಲ್ಪಮಟ್ಟಿಗೆ ಸಾಧ್ಯವಾಗಿದ್ದು ತನ್ನ ಬದುಕಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಶೀಲಿಸುವ, ಪ್ರಶ್ನಿಸುವ ಅವಕಾಶಗಳು ಲಭ್ಯವಾಗಿ, ಸಮಾನ ಸ್ಥಾನಮಾನಕ್ಕಾಗಿ, ಆಕೆಯ ಹೋರಾಟ ಸೈದ್ಧಾಂತಿಕ ರೂಪ ತಾಳಿದೆ. ಪುರುಷ ನಿರ್ಮಿತ ಒಳತಂತ್ರಗಳನ್ನು ಅರ್ಥಮಾಡಿಕೊಂಡು ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ತನ್ನ ಪಾತ್ರವನ್ನು ನಿರ್ವಹಿಸುವಲ್ಲಿ ಮುಂದಾಗಿದ್ದಾಳೆ.

ಹೆಣ್ಣು ಸಾರ್ವಜನಿಕವಾಗಿ ಕಾಣಿಸಿಕೊಳ್ಳುತ್ತಿರುವುದು ಪುರುಷರ ಮನಸ್ಸುಗಳಿಗೆ ತಳಮಳವನ್ನುಂಟು ಮಾಡಿದೆ. ಈ ದೃಷ್ಟಿಕೋನವನ್ನು ಬದಲಾಯಿಸುವ ಉದ್ದೇಶದಿಂದ ನಿಜ ಸಂಗತಿಗಳನ್ನು ಇಂದು ತಿಳಿ ಹೇಳುವ ಜವಬ್ದಾರಿಯನ್ನು ಸ್ತ್ರೀವಾದ ಹೊತ್ತುಕೊಳ್ಳಲು ಮುಂದಾಗಿದೆ. ಇದಕ್ಕೆ ಪೂರಕವಾದ ಅಧ್ಯಯನಗಳು ಸಹ ನಡೆಯುತ್ತಿರುವುದು ಹೆಣ್ಣಿನ ಸ್ಥಾನಮಾನಗಳು ಸುಧಾರಿಸಲು ಸಹಾಯಕವಾಗಿದೆ. ಪುರುಷನ ಕೈಸೇರಿರುವ ಎಲ್ಲಾ

ಉತ್ಪಾದನಾ ಮೂಲಗಳು ಇಂದು ಸಮಾನವಾಗಿ ಹೆಣ್ಣಿಗೆ ಹಂಚಿಕೆಯಾಗಬೇಕಾಗಿದೆ. ಆ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬೇಕಿದೆ.

## ೧.೧ ಅಧ್ಯಯನದ ಉದ್ದೇಶಗಳು

೧. ಧಾರ್ಮಿಕ ಶ್ರದ್ಧೆ ಮತ್ತು ಮಾತೃದೇವತಾರಾಧನೆಯ ಹಿನ್ನೆಲೆಯಲ್ಲಿ ಬೆಳೆದು ಬಂದ ದೇವದಾಸಿ ಸಂಪ್ರದಾಯವು ಇಂದು ಒಂದು ಸಾಮಾಜಿಕ ಪಿಡುಗಾಗಿರುವುದನ್ನು, ಅನಿಷ್ಟ ಸಂಪ್ರದಾಯವಾಗಿರುವುದನ್ನು ಅರ್ಥಮಾಡಿಕೊಳ್ಳುವುದು.

೨. ದೇವದಾಸಿ ಸಂಪ್ರದಾಯದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಯುವುದು.

೩. ಭಾರತೀಯ ಸಮಾಜ ಮತ್ತು ಸ್ತ್ರೀಯರು ಅದರಲ್ಲೂ ಬೇಡ ಬುಡಕಟ್ಟು ಸ್ತ್ರೀಯರ ಸ್ಥಿತಿಗತಿಗಳನ್ನು ತಿಳಿಯುವುದು.

೪. ಬಳ್ಳಾರಿ ಜಿಲ್ಲಾ ಬೇಡ ಬುಡಕಟ್ಟು ಸಮುದಾಯದ ದೇವದಾಸಿಯರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಚರ್ಚಿಸುವುದು.

೫. ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟು ಸಮುದಾಯದ ಸಾಮಾಜಿಕ, ಆರ್ಥಿಕ, ರಾಜಕೀಯ, ಸ್ಥಿತಿಗತಿಗಳನ್ನು ವಿಶ್ಲೇಷಿಸುವುದು.

೬. ಬುಡಕಟ್ಟು ದೇವದಾಸಿಯರ ಸಾಧಕ ಬಾದಕಗಳ ವಿಶ್ಲೇಷಣೆ, ಜೊತೆ ಸರ್ಕಾರದ ಅನೇಕ ಯೋಜನೆಗಳು ಪ್ರಕಟಗೊಂಡಿದ್ದರೂ ಅದರ ಪ್ರಯೋಜನವನ್ನು ಪಡೆಯಲು ಏಕೆ ಸಾಧ್ಯವಾಗುತ್ತಿಲ್ಲ, ಪರ್ಯಾಯ ಯೋಜನೆಗಳು ಅವರ ಬದುಕನ್ನು ಕಲ್ಪಿಸುವಲ್ಲಿ ವಿಫಲವಾಗಿವೆಯೆ? ಕುಟುಂಬಕ್ಕೆ ಉತ್ಪನ್ನವಾದ ಈ ವೃತ್ತಿಯನ್ನು ಕಳೆದುಕೊಂಡು ಬದುಕುವುದು ಹೇಗೆ? ಎನ್ನುವ ಪ್ರಶ್ನೆ ಕಾಡುತ್ತಿದೆಯೇ ಇವರನ್ನು ಈ ಸ್ಥಿತಿಗೆ ಬದ್ಧರಾಗುಂತೆ ಮಾಡಿದ ಅನಿವಾರ್ಯತೆಗಳೇನು? ಎಂಬುದನ್ನು ಚರ್ಚಿಸುವುದು ಅಧ್ಯಯಯನದ ಉದ್ದೇಶಗಳಾಗಿವೆ.

## ೧.೨ ಅಧ್ಯಯನದ ವ್ಯಾಪ್ತಿ

ಕೂಡ್ಲಿಗಿ ಪಟ್ಟಣದ ದೇವದಾಸಿಯರನ್ನು ಕುರಿತು ಪ್ರಸ್ತುತ ಅಧ್ಯಯನದಲ್ಲಿ ಕೂಲಂಕಷವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ. ಜೊತೆಗೆ ಸದರಿ ನಗರದ ದೇವದಾಸಿಯರ House hold survey ಮಾಡಲಾಗಿದೆ. ಮತ್ತು ಅವರನ್ನು ನಿರಂತರವಾಗಿ ನನ್ನ ಅಧ್ಯಯನದ ಸಲುವಾಗಿ ಅನೇಕ ಸಂದರ್ಶನಗಳನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ನಾನು ಕೊಟ್ಟಿರುವ ದೇವದಾಸಿ ಸಾಮಾಜಿಕಾರ್ಥಿಕ ಸ್ಥಿತಿಗತಿಗಳ ಅಂಕಿಸಂಖ್ಯೆಗಳನ್ನು ಕೂಡ್ಲಿಗಿ ನಗರದ ದೇವದಾಸಿಯರ House hold survey ಯಿಂದ ಪಡೆದು ಕೊಂಡವುಗಳಾಗಿವೆ. ಇದರ ಜೊತೆಯಲ್ಲಿ ಸಂಡೂರು, ಮರಿಯಮ್ಮನಹಳ್ಳಿ, ಹೊಸಪೇಟೆ ಮತ್ತು ಹಗರಿಬೊಮ್ಮನಹಳ್ಳಿಯಲ್ಲಿರುವ ದೇವದಾಸಿಯರನ್ನು ಪ್ರಸ್ತುತ ಅಧ್ಯಯನಕ್ಕಾಗಿ ಸಂದರ್ಶಿಸಲಾಗಿದೆ. ಈ ಮೇಲಿನ ಕೇಂದ್ರಗಳಲ್ಲಿನ ಸ್ವಯಂ ಸೇವಾ ಸಂಸ್ಥೆಗಳ ಜೊತೆ ಸಂಪರ್ಕವನ್ನಿಟ್ಟುಕೊಂಡು ಈ ಸಂಸ್ಥೆಗಳಲ್ಲಿ

ಲಭ್ಯವಿರುವ ಅನೇಕ ಮಾಹಿತಿಗಳನ್ನು ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲಾ ವ್ಯಾಪ್ತಿಗೆ ಒಳಪಟ್ಟಿದೆ.

ಪ್ರಸ್ತುತ ಅಧ್ಯಯನಕ್ಕೆ ಬಳ್ಳಾರಿಯನ್ನು ಆಯ್ಕೆ ಮಾಡಿಕೊಂಡಿದ್ದು, ಇದರ ನೆಲೆಗಳಾದ ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿ, ಕಮಲಾಪುರ, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ತಾಲೂಕಿಗೆ ಮಿತಿಗೊಳಿಸಲಾಗಿದ್ದು. ಕೂಡ್ಲಿಗಿಯನ್ನು ಅಧ್ಯಯನದ ಕೇಂದ್ರಬಿಂದುವಾಗಿ ಮಾಡಿಕೊಂಡು ಕ್ಷೇತ್ರಕಾರ್ಯಕ್ಕೆ ಅಥವಾ ಸಮೀಕ್ಷೆ ಮತ್ತು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕಾರಣ ಬಹುತೇಕವಾಗಿ ದೇವದಾಸಿ ಪದ್ಧತಿ ಅದರಲ್ಲೂ ಬುಡಕಟ್ಟು ಸಂಪ್ರದಾಯಕ್ಕೆ ಸಂಬಂಧಿಸಿದ ಮಹಿಳಾ ಸಮುದಾಯ ಇಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ, ಆದ್ದರಿಂದ ಕೂಡ್ಲಿಗಿ ಪ್ರದೇಶವನ್ನು ಪ್ರಾತಿನಿಧಿಕ ಕೇಂದ್ರವಾಗಿರಿಸಿಕೊಳ್ಳಲಾಗಿದೆ.

### ೧.೩ ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ನಿಗದಿತ ಕ್ಷೇತ್ರವನ್ನು ಆಯ್ದುಕೊಂಡು ಬೇಡ ಬುಡಕಟ್ಟು ದೇವದಾಸಿಯರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಅರಿಯುವ ಒಂದು ನಿದರ್ಶನಾತ್ಮಕ ಅಧ್ಯಯನವಾಗಿದ್ದು. ಇಲ್ಲಿನ ನಿದರ್ಶನಾತ್ಮಕ ವಿಶ್ಲೇಷಣೆಯಲ್ಲಿ ಅಗತ್ಯವಿರುವ ಮಾಹಿತಿಯನ್ನು ಸೈದ್ಧಾಂತಿಕ ಹಿನ್ನೆಲೆಯಲ್ಲಿ ಬಳಸಿಕೊಳ್ಳಲಾಗಿದ್ದು, ನನ್ನ ಅಧ್ಯಯನದ ಉದ್ದೇಶಕ್ಕನುಗುಣವಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಂಡು ಬೇಡಬುಡಕಟ್ಟು ದೇವದಾಸಿಯರನ್ನು ಯಾವ ಯೋಜನೆಗಳ ಮೂಲಕ ಬದಲಾವಣೆಗೆ ಒಳಪಡಿಸಿ ದೇವದಾಸಿ ಪದ್ಧತಿಗೆ ಅಂತ್ಯ ಹಾಡಬಹುದೆಂಬ ಬಗ್ಗೆ ಪ್ರಯತ್ನಿಸಲಾಗಿದ್ದು, ಇದನ್ನು ಮುಖ್ಯವಾದ ಸಂದರ್ಭದಲ್ಲಿ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧ್ಯಯನದ ನಿಖರತೆಯನ್ನು ಕಾಪಾಡಿಕೊಳ್ಳಲು ಶ್ರವ್ಯಮಾಧ್ಯಮದ ಮೂಲಕ ಹಾಗೂ ದೇವದಾಸಿಯರ ಕೆಲ ಧಾರ್ಮಿಕ ಆಚರಣೆಗಳನ್ನು ದೃಶ್ಯ ಮಾಧ್ಯಮವಾದ ಛಾಯಾಚಿತ್ರಗಳ ಮೂಲಕ ದಾಖಲೆ ಮಾಡಿಕೊಳಳಲು ಆಡಿಯೋ, ಟೇಪ್‌ರೆಕಾರ್ಡರ್‌ನ್ನು ಬಳಸಿಕೊಳ್ಳಲಾಗಿದೆ. ಈ ಬಗ್ಗೆ ಇದುವರೆಗೂ ನಡೆದಿರುವ ಕೆಲವು ಅಧ್ಯಯನಗಳನ್ನು ನೋಡಿ, ಅವುಗಳಿಂದ ವಿಷಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಹಾಗೆಯೇ ಅಧ್ಯಯನಕ್ಕೆ ಪೂರಕವಾದ ಅನ್ಯ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಮಾನವ ಶಾಸ್ತ್ರ, ಸಮಾಜ ಶಾಸ್ತ್ರ, ಸಾಂಸ್ಕೃತಿಕತೆ, ಧರ್ಮ, ಆಚರಣೆಗಳ ಹಿನ್ನೆಲೆ ಮತ್ತು ಸ್ತ್ರೀವಾದ ಚಿಂತನಾ ಕ್ರಮಗಳನ್ನು ಬಳಸಿಕೊಳ್ಳಲಾಗಿದೆ. ೧.ಐತಿಹಾಸಿಕ ವಿಧಾನ, ೨.ತೌಲನಿಕ ವಿಧಾನ, ೩.ಪ್ರಶ್ನಾವಳಿ ವಿಧಾನ, ೪.ವಿಷಯ ಅಧ್ಯಯನ, ೫.ಸಂದರ್ಶನ ವಿಧಾನ, ೬. ಸಂಖ್ಯಾಶಾಸ್ತ್ರೀಯ ವಿಧಾನ, ೭.ಅವಶ್ಯಕತೆ ಇರುವ ಇತರೆ ವಿಧಾನಗಳನ್ನು ಆಧರಿಸಿ ಅವರ ಜೀವನ ವಿಧಾನದ ದುಸ್ಥಿತಿಯನ್ನು ಕಂಡುಕೊಳ್ಳಬಹುದಾಗಿದೆ. ಇದರ ಮೂಲಕ ಸರ್ಕಾರಿ ಯೋಜನೆಗಳ ಅನುಷ್ಠಾನವನ್ನು ಗುರುತಿಸಬಹುದಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಈ ಕೆಳಕಂಡ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಅವುಗಳ ವಿವರಣೆ,

#### ೧. ಪ್ರಶ್ನಾವಳಿ ವಿಧಾನ

ಬೇಡ ಬುಡಕಟ್ಟು ದೇವದಾಸಿ ಅಧ್ಯಯನಕ್ಕೆ ಅಗತ್ಯವಿರುವ ಉದ್ದೇಶಿತ ಮಾಹಿತಿಗಳನ್ನು ಸಂಗ್ರಹಿಸಲು ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

೨. ಸಂದರ್ಶನ ವಿಧಾನ

ಈ ವಿಧಾನದಲ್ಲಿ ಬೇಡರಲ್ಲಿಯ ದೇವದಾಸಿ ಪದ್ಧತಿಯನ್ನು ಅಳವಡಿಸಿಕೊಂಡ ಆಯ್ದ ಕುಟುಂಬಗಳು ಮತ್ತು ದೇವದಾಸಿಯರ ಜೊತೆ, ಅವರ ವ್ಯಾಪ್ತಿಗೆ ಬರುವ ಇತರ ವ್ಯಕ್ತಿಗಳೊಂದಿಗೆ ಸಂದರ್ಶನ ನಡೆಸಿ ಮಾಹಿತಿ ಸಂಗ್ರಹಿಸಲಾಗಿದೆ. ಸಂಡೂರು, ಹಗರಿಬೊಮ್ಮನಹಳ್ಳಿ, ಮರಿಯಮ್ಮನಹಳ್ಳಿ, ಹೊಸಪೇಟೆ ಮತ್ತು ಕೂಡ್ಲಿಗಿ ನಗರಗಳಲ್ಲಿನ ದೇವದಾಸಿಯರನ್ನು ಸಂದರ್ಶಿಸಲಾಗಿದೆ.

೩. ಐತಿಹಾಸಿಕ ವಿಧಾನ

ಬೇಡ ಬುಡಕಟ್ಟಿನ ಸಂಪ್ರದಾಯಗಳಲ್ಲಿ ಒಂದಾದ ದೇವದಾಸಿ ಪದ್ಧತಿ, ಅದರ ಆಚರಣೆಯಲ್ಲಿನ, ವ್ಯತ್ಯಾಸಗಳು, ನಂಬಿಕೆಗಳು, ಇತ್ಯಾದಿಗಳ ಬಗ್ಗೆ ಆ ಸಮುದಾಯದ ಹಿರಿಯರು ಅವರ ಅನುಭವದ ಆಧಾರದ ಮೇರೆಗೆ ನೀಡಿರುವ ಮಾಹಿತಿಗಳು ಸಂಗ್ರಹಿಸಿ, ಅವರು ಸಂಸ್ಕಾರ ಕಾರ್ಯದಲ್ಲಿ ಪಾಲ್ಗೊಂಡ ಅನುಭವ ಅದರ ಸ್ವರೂಪ ಸಂಸ್ಕೃತಿಯ ಇತಿಹಾಸವನ್ನು ತಿಳಿಸಲಾಗಿದೆ.

೪. ಅಂಕಿ ಸಂಖ್ಯಾಶಾಸ್ತ್ರೀಯ ವಿಧಾನ

ಈ ವಿಧಾನದ ಮೂಲಕ ಸರ್ಕಾರ ಮತ್ತು ಸರಕಾರೇತರ ಸಂಸ್ಥೆಗಳು ಬೇಡ ಬುಡಕಟ್ಟು ದೇವದಾಸಿಯರ ಬಗ್ಗೆ ಈಗಾಗಲೇ ಸಂಗ್ರಹಿಸಿರುವ ಮಾಹಿತಿಗಳನ್ನು ವಿವಿಧ ಮೂಲಗಳಿಂದ ಪಡೆದು ಅದರ ನಿಖರತೆಯನ್ನು ಪರಿಶೀಲಿಸಲಾಗಿದೆ. ಮುಖ್ಯವಾಗಿ ಕೂಡ್ಲಿಗಿ ನಗರದ ದೇವದಾಸಿಯರ House hold survey ಯನ್ನು ಮಾಡಲಾಗಿದೆ.

೫. ತೌಲನಿಕ ವಿಧಾನ

ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ರೂಪಿಸಿರುವ ಯೋಜನೆಗಳು ಹಾಗೂ ಇವರು ಅನುಭವಿಸುತ್ತಿರುವ 'ದೇವದಾಸಿ ಪದ್ಧತಿ'ಯಂತಹ ಕ್ರೂರ ಆಚರಣೆ, ಇದರ ನಿವಾರಣೆಗಾಗಿ ಕೈಗೊಂಡ ವಿವಿಧ ಕ್ರಮಗಳು, ಕಾನೂನುಗಳು, ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಮಾಡಿದ ಸಾಧನೆಗಳ ಬಗ್ಗೆ ತುಲನಾತ್ಮಕವಾಗಿ ಅಧ್ಯಯಿಸಲು ಈ ವಿಧಾನ ಬಳಸಲಾಗಿದೆ.

೬. ಸಹಭಾಗಿತ್ವದ ವಿಧಾನ

ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ಕೈಗೊಂಡ ಕ್ರಮಗಳು, ಅವು ವಿಫಲತೆ ಹೊಂದಲು ಕಾರಣಗಳ ಬಗ್ಗೆ, ಅನುಷ್ಠಾನಗೊಳಿಸುತ್ತಿರುವ ಅನುಷ್ಠಾನ ಅಧಿಕಾರಿಗಳನ್ನು ಭೇಟಿ ಮಾಡಿ ಇದರ ನಿರ್ಮೂಲನೆಗಾಗಿರುವ ಅಡೆತಡೆಗಳ ಬಗ್ಗೆ ಹಾಗೂ ಅವುಗಳನ್ನು ಬಗೆಹರಿಸಲು ಅವರು ಸೂಚಿಸುವ ವಿಧಾನಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಈ ವಿಧಾನ ಬಳಸಲಾಗಿದೆ.

೭. ವಿಷಯ ಅಥವಾ ವ್ಯಕ್ತಿ ಅಧ್ಯಯನ ವಿಧಾನ

ಯಾವ ಕ್ಷೇತ್ರದಲ್ಲಿ ದೇವದಾಸಿ ಪದ್ಧತಿ ಹೆಚ್ಚಾಗಿ ಕಂಡು ಬರುವುದು. ಬೇರೆ ಕಡೆ ನಿರ್ಮೂಲನೆಯಾಗಿರುವುದನ್ನು ಅನುಸರಿಸಿದ ಮಾರ್ಗಗಳು ಯಾವುವು. ಇಲ್ಲಿ ಹೆಚ್ಚಾಗಿ ಕಂಡುಬರುವುದಕ್ಕೆ ಇರುವ ಕಾರಣಗಳನ್ನು ಅರಿಯಲು ಈ ವಿಧಾನ ಬಳಸಲಾಗಿದೆ.

## ೧.೪ ಪ್ರಬಂಧದ ಅಧ್ಯಾಯಗಳು

ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿಯೇ ಹೆಚ್ಚು ಸಂಖ್ಯೆಯಲ್ಲಿ ಬೇಡ ಬುಡಕಟ್ಟು ದೇವದಾಸಿಯರು ಕಂಡು ಬರುವುದರಿಂದ ಅದರಲ್ಲೂ ಕೂಡ್ಲಿಗಿ ತಾಲೂಕು ಮತ್ತು ಪಟ್ಟಣದಲಿ ಅತೀ ಹೆಚ್ಚು ಸಂಖ್ಯೆಯಲ್ಲಿ ಕಂಡು ಬರುತ್ತಿದ್ದು ಇದಕ್ಕೆ ಕಾರಣ, ಇವರ ಸ್ಥಿತಿಗತಿಗಳನ್ನು ಹೆಚ್ಚಾಗಿ ಸಾಮಾಜಿಕ ಮತ್ತು ಆರ್ಥಿಕ ಮಿತಿಯಲ್ಲಿಯೇ ಬಳ್ಳಾರಿ ಜಿಲ್ಲೆಯನ್ನು ಗಮನಿಸಬೇಕಾಗಿದೆ. ಇವರ ಸಂಸ್ಥೆಯು ವಿವಿಧ ಮುಖಗಳನ್ನು ಸಂಕ್ಷಿಪ್ತವಾಗಿ ವಿವರಿಸಿಕೊಳ್ಳಲಾಗಿದೆ. ಇವರ ಬಡತನದ ಕಾರಣವೇ ಈ ಪದ್ಧತಿ ಅನುಸರಿಸಿರಬೇಕೆಂಬುದು, ಹಾಗಾದರೆ, ಆರ್ಥಿಕವಾಗಿ ಹಿಂದುಳಿದ ಇತರ ವರ್ಗಗಳು ಇದನ್ನು ಅನುಸಿರಿಸಿಲ್ಲ ಏಕೆ? ಹಾಗಿದ್ದಲ್ಲಿ ಬುಡಕಟ್ಟು ಸಮುದಾಯಗಳಿಗೆ ಇದು ಒದಗಿ ಬಂದ ಸಂದರ್ಭವೆಂಥದ್ದು? ಇದು ಸಂಘರ್ಷದ ಮೂಲದ್ದೋ? ಸ್ವಹಿತಾಸಕ್ತಿ ಮೂಲದ್ದೋ? ದೈವಿಕ ಹಿನ್ನೆಲೆಯಲ್ಲಿ ಒಪ್ಪಿಕೊಂಡ ನಂಬಿಕೆಯ ಮೂಲದ್ದೋ? ಎನ್ನುವ ಪಶ್ನೆಗಳನ್ನು ಈ ಅಧ್ಯಯನದಲ್ಲಿ ಕೇಳಿಕೊಳ್ಳಲಾಗಿದೆ. ಸದರಿ ಪ್ರಬಂಧವು ಆರು ಮುಖ್ಯ ಅಧ್ಯಾಯಗಳನ್ನು ಮತ್ತು ಸಮಾರೋಪವನ್ನು ಹೊಂದಿದೆ. ಈ ಅಧ್ಯಾಯಗಳು ಕೆಳಗಿನಂತಿವೆ.

ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ ಮೊದಲ ಅಧ್ಯಯನದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಇವುಗಳ ವಿವರಣೆ ಇದ್ದು, ಅಧ್ಯಾಯ ೨ರಲ್ಲಿ ಬಳ್ಳಾರಿ ಜಿಲ್ಲಾ ಬೇಡ ಬುಡಕಟ್ಟಿನ ಪರಿಚಯ, ಬಳ್ಳಾರಿ ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ, ಜನಸಂಖ್ಯೆ, ಬೇಡ, ನಾಯಿಕ, ಮ್ಯಾಸ ಪದಗಳ ನಿಷ್ಪತ್ತಿ ಹಾಗೂ ಬೇಡ ಸಮುದಾಯದ ಸಾಮಾಜಿಕ ಆರ್ಥಿಕ ಶೈಕ್ಷಣಿಕ ರಾಜಕೀಯ ಧಾರ್ಮಿಕ ಸ್ಥಿತಿಗತಿಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ಅಧ್ಯಾಯ ೩ರಲ್ಲಿ ಪ್ರಾಚೀನ ಕಾಲದಿಂದಲೂ ಜಗತ್ತಿನ ವಿವಿಧ ದೇಶಗಳಲ್ಲಿ ಅಲ್ಲಿನ ಸಂಸ್ಕೃತಿಗೆ ಅನುಗುಣವಾಗಿ ಮಾತೃದೇವತಾರಾಧನೆ ಮತ್ತು ಪವಿತ್ರ ಧಾರ್ಮಿಕ ಹಿನ್ನೆಲೆಯಲ್ಲಿ ಅಸ್ತಿತ್ವದಲ್ಲಿದ್ದು ಜೊತೆಗೆ ~~ಭಾರತ ದೇಶದ~~ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯೂ ಸೇರಿದಂತೆ ದೇವದಾಸಿ ಸಂಪ್ರದಾಯವು ಆಚರಣೆಗೆ ಬಂದ ರೀತಿ, ಆದ ಬದಲಾವಣೆಗಳನ್ನು ಕುರಿತು ಅಧ್ಯಯನಿಸಲಾಗುವುದು.

ಅಧ್ಯಾಯ ೪ರಲ್ಲಿ ಲಿಂಗ ನೆಲೆಯಲ್ಲಿ ವರ್ಗ ಪಿತೂರಿಯ ಹಿನ್ನೆಲೆಯಲ್ಲಿ ತಳ ಸಮುದಾಯದ ಸ್ತ್ರೀಯರು ಅನುಭವಿಸಬೇಕಾಗಿ ಬಂದ ಸ್ತ್ರೀ ಸಂಬಂಧಿತ ಸಮಸ್ಯೆಗಳು ವಿಭಿನ್ನ ಕಾಲಗಳಿಗೆ ಸಂಬಂಧಿಸಿದಂತೆ ಸ್ತ್ರೀಯರ ಸ್ಥಾನಮಾನಗಳು ಇವುಗಳಿಗೆ ಕಾರಣವಾದ ಪುರುಷರ ಹುನ್ನಾರಗಳು ಹಾಗೂ ಅಸಮಾನತೆಯ ರಾಜಕಾರಣವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ೫ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಪಟ್ಟಣವನ್ನು ಬೇಡ ಬುಡಕಟ್ಟು ದೇವದಾಸಿಯರನ್ನು ಅಧ್ಯಯನ ಕೇಂದ್ರವಾಗಿಟ್ಟುಕೊಂಡು ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ದೇವದಾಸಿಯರಿರುವುದಕ್ಕೆ ಕಾರಣವಾದ ಐತಿಹಾಸಿಕ ಹಿನ್ನೆಲೆ, ಪರಿಸರ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಚರ್ಚಿಸಲಾಗಿದೆ.

೬ನೇ ಅಧ್ಯಾಯದಲಿ ಆಧುನಿಕ ಯುಗದಲ್ಲಿ ದೇವದಾಸಿಯರ ಬದಲಾದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ವಿಶ್ಲೇಷಣೆ, ಅಶ್ಲೀಲತೆಯ ಹಣೆಪಟ್ಟಿಹೊತ್ತ ಇವರ ಜೀವನದ ನಿದರ್ಶನಗಳನ್ನು ವಿವರಿಸಲಾಗಿದೆ. ಬಹುತೇಕ

ಬಳ್ಳಾರಿ ಜಿಲ್ಲೆಯ ಬುಡಕಟ್ಟು....../ ೭

ದೇವದಾಸಿಯರು ರಂಗಕಲಾವಿದೆಯರಾಗಿದ್ದು, ಜೀವನದಲ್ಲಿ ಎದುರಿಸಬೇಕಾಗಿ ಬಂದ ಸವಾಲುಗಳು ಸಾಮಾಜಿಕವಾಗಿ, ಕೌಟುಂಬಿಕವಾಗಿ ಅವಳು ಪಡಿದ ಸ್ಥಾನ, ಸಾಧನೆಗಳ ಜೊತೆಗೆ ಅನುಭವಿಸುತ್ತಿರುವ ಸಮಸ್ಯೆಗಳನ್ನು ಮುಂತಾದ ಅವರ ಆಲೋಚನೆ ಮತ್ತು ಸ್ಪಂದನೆಗಳನ್ನು ಚರ್ಚಿಸಲಾಗಿದೆ. ಅಂತಿಮ ಅಧ್ಯಯನದಲ್ಲಿ ದೇವದಾಸಿಯರ ಪುನರ್ ವಸತೀಕರಣಕ್ಕೆ ಸಂಬಂಧಿಸಿದಂತೆ ಜಾರಿಗೊಳಿಸಲಾದ ನಿಷೇಧ ಕಾಯ್ದೆಗಳಿಂದ ದೇವದಾಸಿ ಪದ್ಧತಿಗೆ ಕಡಿವಾಣ ಬಿದ್ದಂತಾಗಿದ್ದರೂ ಪೋಲಿಸರ ಮತ್ತು ಸರ್ಕಾರದ ಕಣ್ಣುತಪ್ಪಿಸಿ, ಕಳ್ಳತನದಲ್ಲಿ ಈ ಸಂಸ್ಕಾರಕ್ಕೆ ಒಳಪಡಿಸುತ್ತಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದ್ದು, ಕೆಲವು ಕಡೆ ಬಲವಾದ ರೀತಿಯಲ್ಲಿ ಉಳಿದುಕೊಂಡು ಬಂದಿದೆ. ಇದಕ್ಕೆ ಕಾರಣಗಳನ್ನು ಪರಿಶೀಲಿಸಿ ಎಲ್ಲಾ 'ದೇವದಾಸಿಯರು ವೇಶ್ಯೆಯರಲ್ಲ, ಹಾಗೂ ಎಲ್ಲಾ ವೇಶ್ಯೆಯರು ದೇವದಾಸಿಯರಲ್ಲ' ಎಂಬ ಸತ್ಯದೊಂದಿಗೆ, ಮನೆತನದ ಪದ್ಧತಿಯಂತೆ, ಆರ್ಥಿಕದುಸ್ಥಿತಿಯಂತೆ, ಕಾಣದ ಕೈಗಳ ಒತ್ತಡಕ್ಕೆ ಸಿಲುಕಿ, ಇದರ ಬಲೆಗೆ ಬಿದ್ದು, ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದು ಮೊದಲಾದ ಅಂಶಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅವರ ಮಟ್ಟಕ್ಕಿಳಿದು ಆತ್ಮೀಯತೆಯಿಂದ ಸಂವಾದಿಸಿದ ಫಲವಾಗಿ ತಿಳಿಯಲು ಸಾಧ್ಯವಾಗಿದ್ದು ಇವರ ಪುನರ್ ವಸತೀಕರಣಕ್ಕೆ ಸಂಬಂಧಿಸಿದಂತೆ, ಸ್ವಯಂ ಸೇವಾ ಸಂಘಗಳು, ಕಾನೂನು, ಪೋಲೀಸ್ ವ್ಯವಸ್ಥೆ, ಸರ್ಕಾರ, ಸಮಾಜಗಳು ವಹಿಸಬೇಕಾದ ಪಾತ್ರವನ್ನು ಇಲ್ಲಿ ಅಧ್ಯಯನದ ಫಲಿತಗಳ ಮೂಲಕ ಸಲಹೆಗಳನ್ನು ತಿಳಿಸಲಾಗಿದೆ.

### ೧.೫ ಈವರೆಗಿನ ಅಧ್ಯಯನಗಳ ಸಮೀಕ್ಷೆ

ಬುಡಕಟ್ಟು ಅಧ್ಯಯನಕ್ಕೆ ಸರಿ ಸುಮಾರು ನೂರು ವರ್ಷಗಳ ಇತಿಹಾಸವಿದೆ. ೧೯೦೦ರ ಆರಂಭದಲ್ಲಿಯೇ ಎಚ್.ವಿ.ನಂಜುಡಯ್ಯ ಈ ಕುರಿತು ಅಧ್ಯಯನಗಳನ್ನು ಕೈಗೊಂಡಿದ್ದರು. ಅನಂತರ ಮೈಸೂರು ಸಂಸ್ಥಾನದ ಒಡೆಯರ ಪ್ರೋತ್ಸಾಹದಿಂದ ಅನಂತಕೃಷ್ಣ ಅಯ್ಯರ್ ಅಧ್ಯಯನ ಮಾಡಿದರು. ಎಡ್ಗರ್ ಥರ್ಸ್ಟನ್‌ನು ಮಾಡಿದ Caste and Tribes of Southern India ಮಾಲಿಕೆ ಮೌಲಿಕವಾದದ್ದು, ಕಳೆದ ಶತಮಾನದಲ್ಲಿ ನಡೆದ ಅಧ್ಯಯನಗಳನ್ನು ಮೂರು ವಿಭಾಗಗಳಲ್ಲಿ ವಿಂಗಡಿಸಬಹುದು.

೧. ಸ್ವಾತಂತ್ರಪೂರ್ವ ಅಧ್ಯಯನ (ವಸಾಹತುಶಾಹಿ ಕಾಲಘಟ್ಟ)

೨. ಸ್ವಾತಂತ್ರ್ಯೋತ್ತರ ಅಧ್ಯಯನ (ವಸಾಹತೋತ್ತರ ಕಾಲಘಟ್ಟ)

೩. ಇತ್ತೀಚಿನ ಅಧ್ಯಯನಗಳು

ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನವನ್ನು ಅನೇಕ ವಿದ್ವಾಂಸರು, ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಜಾನಪದ ವಿದ್ವಾಂಸರು ಮೊದಲಾದವರು ಅಧ್ಯಯನ ಮಾಡುತ್ತಿದ್ದಾರೆ.

ವೆರಿಯರ್ ಎಲ್ವಿನ್‌ರ ಬುಡಕಟ್ಟು ಅಧ್ಯಯನ ರೀತಿ ವಿಸ್ಮಯಕಾರಕವಾದದ್ದು ಹಾಗೂ ಸರ್ ಹರ್ಬರ್ಟ್ ರಿಸ್ಲೆಯವರು ಭಾರತದ ಎಲ್ಲಾ ರಾಜ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಈ ರಾಜ್ಯಗಳ ಜಾತಿ ಹಾಗೂ ಬುಡಕಟ್ಟುಗಳ ಸಂಖ್ಯೆ, ಸ್ಥಳ, ಸಮುದಾಯ, ಆಚರಣೆ ಇತ್ಯಾದಿಗಳ ಅಧ್ಯಯನದ ಬೃಹತ್ ಸಂಪುಟಗಳ ಮೂಲಕ ಪ್ರಕಟಿಸಿದ್ದಾರೆ.

೧೯೬೩ ಎ.ಎ.ಡಿ.ಲೂಯಿಚ್ ರವರು ತಮ್ಮ ಟ್ರೈಬ್ಸ್ ಆಫ್ ಮೈಸೂರು ಎಂಬ ಕೃತಿಯಲ್ಲಿ ೨೭ ಬುಡಕಟ್ಟುಗಳನ್ನು ಕುರಿತು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೆ.ರಂಗಚಾರ್ ಅವರು ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ ಎಂಬ ಏಳು ಸಂಪುಟಗಳ ಗ್ರಂಥವನ್ನು ಪ್ರಕಟಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕುರಿತ ವಿವರಣೆ ನೀಡಿದ್ದಾರೆ.

ಎಲ್.ಜಿ.ಹಾವನೂರು ಅವರು ಸಿದ್ಧಪಡಿಸಿರುವ ಕರ್ನಾಟಕ ಬ್ಯಾಕ್‌ವರ್ಡ್ ಕ್ಲಾಸ್ ಕಮಿಷನ್ ರಿಪೋರ್ಟ್ ೧೯೭೩ ರ ವರದಿಯಲ್ಲಿ ಹಿಂದುಳಿದ ವರ್ಗಗಳು ಸಾಮಾಜಿಕವಾಗಿ, ರಾಜಕೀಯವಾಗಿ ಅಭಿವೃದ್ಧಿಯನ್ನು ಕೈಗೊಳ್ಳಲು ಸಲಹೆಗಳನ್ನು ನೀಡಿದ್ದಾರೆ. ಅವರಿಗೆ ಉತ್ತಮ ರೀತಿಯ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಕುರಿತು ವಿವರಿಸಿದ್ದಾರೆ. ಪ್ರೊ.ಹಿ.ಚಿ.ಬೋರಲಿಂಗಯ್ಯ ಅವರು "ಬುಡಕಟ್ಟುಗಳ ಲೋಕದೃಷ್ಟಿ" ಎಂಬ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಡಾ.ಕೃಷ್ಣಮೂರ್ತಿ ಹನೂರರ ಮ್ಯಾಸಬೇಡರ ಸಂಸ್ಕೃತಿ ಎ.ಎಸ್. ಪ್ರಭಾಕರ ಅವರ "ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು" ಹಾಗೆಯೇ ಕರ್ನಾಟಕ ಸಾಹಿತ್ಯ ಅಕಾಡೆಮಿಯು ಕನ್ನಡದಲ್ಲಿ ಉಪಸಂಸ್ಕೃತಿಗಳ ಅಧ್ಯಯನವನ್ನು ೧೯೯೩ರಲ್ಲಿ ಬುಡಕಟ್ಟುಗಳನ್ನು ಕುರಿತ ಅಧ್ಯಯನವನ್ನು ಕೈಗೊಂಡ ಸುಮಾರು ೩೬ ಕೃತಿಗಳನ್ನು ಹೊರತಂದಿದ್ದಾರೆ. ಬರಗೂರು ರಾಮಚಂದ್ರಪ್ಪನವರು ಸಾಹಿತ್ಯ ಅಕಾಡಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ 'ಉಪಸಂಸ್ಕೃತಿ ಮಾಲೆ'ಗಳನ್ನು ಹೊರತಂದರು. ಅವುಗಳಲ್ಲಿ ಮ್ಯಾಸಬೇಡರ ಸಂಸ್ಕೃತಿ, ಯರವರ ಸಂಸ್ಕೃತಿ, ಕಾಡುಕುರುಬರು ಮತ್ತು ಜೇನು ಕುರುಬರ ಸಂಸ್ಕೃತಿ, ಸಿದ್ದಿಯರ ಸಂಸ್ಕೃತಿ, ಹಸಲರ ಸಂಸ್ಕೃತಿ,ಗೊಂಡರ ಸಂಸ್ಕೃತಿ ಹೀಗೆ ಇನ್ನೂ ಮುಂತಾದ ಸುಮಾರು ೩೬ ಬುಡಕಟ್ಟು ಸಮುದಾಯಗಳನ್ನು ಕುರಿತು ಬುಡಕಟ್ಟುಗಳ 'ಉಪಸಂಸ್ಕೃತಿ ಮಾಲೆ'ಯಲ್ಲಿ ವಿವರಿಸಿದ್ದಾರೆ.

ಭಾರತ ಸರ್ಕಾರವು ಕರ್ನಾಟಕದಲ್ಲಿ ಸುಮಾರು ೫೦ ಬುಡಕಟ್ಟುಗಳಿವೆ ಎಂಬುದಾಗಿ ಸೂಚಿಸುತ್ತದೆ. ಈ ಪಟ್ಟಿಗೆ ಸೇರದಿರುವ ಕೆಲ ಬುಡಕಟ್ಟುಗಳನ್ನು 'ಅಲೆಮಾರಿ ಬುಡಕಟ್ಟು'ಗಳೆಂದು, ಇನ್ನೂ ಕೆಲವು ಬುಡಕಟ್ಟುಗಳನ್ನು 'ಅರೆ ಅಲೆಮಾರಿ ಬುಡಕಟ್ಟು'ಗಳೆಂದು ಇವುಗಳನ್ನು ಇತರೆ ಹಿಂದುಳಿದ ಬುಡಕಟ್ಟುಗಳೆಂದು ಪರಿಗಣಿಸಲಾಗಿದೆ.

ಹೀಗೆ ಅಕಾಡೆಮಿಗಳು, ಸಂಸ್ಕೃತಿ ಇಲಾಖೆ, ವಿಶ್ವವಿದ್ಯಾಲಯ ಮಟ್ಟದಲ್ಲಿ ಸಮಾಜಶಾಸ್ತ್ರ, ಬುಡಕಟ್ಟು ಅಧ್ಯಯನ, ಮಾನವಶಾಸ್ತ್ರ ಮತ್ತು ಜಾನಪದ ವಿಭಾಗಗಳು ಅಧ್ಯಯನಕ್ಕೆ ಮೀಸಲಾದ ವಿಭಾಗಗಳಾಗಿವೆ.

೧. ಈಗ ನಾವು ಆಧುನಿಕವೆಂದು ಕರೆಯುವ ಜೀವನ ವಿಧಾನಕ್ಕೆ ಬದಲಾಗಿ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡು ಕಾಡಲ್ಲೇ ಉಳಿದ ಅರಣ್ಯವಾಸಿಗಳು

೨. ಇತರರಿಗಿಂತ ಭಿನ್ನವಾಗಿ ಆಧುನಿಕ ಪ್ರವಾಹದ ಜೊತೆಗೆ ಈಜಿದ ನಗರವಾಸಿಗಳು ಮತ್ತು ಗ್ರಾಮವಾಸಿಗಳು.

ಪ್ರಸ್ತುತ ಅಧ್ಯಯನಕ್ಕೆ ಒಳಪಡುವ ಬೇಡ ಸಮುದಾಯ ಎರಡನೇ ವರ್ಗಕ್ಕೆ ಸೇರಿದವರಾಗಿದ್ದಾರೆ. ಈ ಬೇಡ ಬುಡಕಟ್ಟಿಗೆ ಸಂಬಂಧಿಸಿದಂತೆ ಲಭ್ಯವಿರುವ ಗ್ರಂಥಗಳಿಂದ ವಿಷಯ ಸಂಗ್ರಹಿಸಿಕೊಂಡು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಈ ಸಮುದಾಯದಲ್ಲಿನ ವಿಶೇಷ ಆಚರಣೆಯಲ್ಲಿ ಒಂದಾದ 'ದೇವದಾಸಿ ಪದ್ಧತಿಗೆ' ಸಾಮಾಜಿಕ, ಆರ್ಥಿಕ ಸಾಂಸ್ಕೃತಿಕ ಆಯಾಮಗಳಿರುವುದನ್ನು ವಿದ್ವಾಂಸರು ತಮ್ಮ ಅಧ್ಯಯನದ ಮೂಲಕ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅದರಲ್ಲೂ ಮುಖ್ಯವಾಗಿ ಮ್ಯಾಕ್ಸ್‌ವೇಬರನ ಧರ್ಮ ಸಮಾಜಶಾಸ್ತ್ರದ

ಕೃತಿಗಳು ಮೌಲಿಕವಾದವುಗಳಾಗಿವೆ. ಪ್ರಮುಖ ಸಮಾಜಶಾಸ್ತ್ರಜ್ಞರಾದ ಯಂಗರ್ ಮಿಲ್ಪನ್, ರೆಡ್‌ಫೀಲ್ಡ್, ಮಾನವ ಸಮಾಜ ಮತ್ತು ಆಚರಣೆಗಳ ಕುರಿತಾಗಿ ವೈಜ್ಞಾನಿಕ ಸಂಶೋಧನೆಗಳತ್ತ ಸಾಗಿರುವುದು ಈ ನಿಟ್ಟಿನಲ್ಲಾದ ಬಹುದೊಡ್ಡ ಪ್ರಯತ್ನವಾಗಿದೆ. ಧಾರ್ಮಿಕ ನಂಬಿಕೆ ಆಚರಣೆಗಳು ಅಧ್ಯಯನಕ್ಕೆ ಒಳಪಟ್ಟಿದ್ದು ಪಾಶ್ಚಾತ್ಯರ ಮೂಲಕ, ವೈಚಾರಿಕ ಕೃತಿಗಳ ಮೂಲಕ ಸಾಗುವ ಚಿಂತನೆಗಳೆಲ್ಲವೂ ಈ ಸಂಪ್ರದಾಯವನ್ನು ಭಯ ಮೂಲದಿಂದ ಬಿಡಿಸಿ, ಕುತೂಹಲಕ್ಕೆ ಅವಕಾಶಮಾಡಿಕೊಟ್ಟಿದೆ. ಇದು ಸಾಕಷ್ಟು ಸಾಮಗ್ರಿಗಳನ್ನು ಒದಗಿಸಿ ಕೊಡುವಲ್ಲಿ ನೆರವಾಗಿವೆ. ಫ್ರೇಜರ್, ಬ್ರಿಫಾಲ್ಟ್, ಬ್ಲೂಮ್, ಇವಾನ್ಸ್ , ಮ್ಯಾಲಿನೋವಸ್ಕಿ, ಎಂ.ಎನ್. ಶ್ರೀನಿವಾಸರ ಸಂಶೋಧನಾ ತಿಳಿವಳಿಕೆಗಳು ಈ ಕ್ಷೇತ್ರದ ಮೇಲೆ ಮಹತ್ತರ ಬೆಳಕನ್ನು ಚೆಲ್ಲಿವೆ.

ದೇವದಾಸಿ ಸಂಪ್ರದಾಯದ ಶಾಸ್ತ್ರೀಯ, ಚಾರಿತ್ರಿಕ ಅಧ್ಯಯನವನ್ನು ಸ್ವಾತಂತ್ರ್ಯಪೂರ್ವದಲ್ಲಿ ಪಾಶ್ಚಾತ್ಯ ವಿದ್ವಾಂಸರು, ಸ್ವಾತಂತ್ರ್ಯಾನಂತರ ಅವರನ್ನೇ ಬಹುತೇಕವಾಗಿ ಅನುಸರಿಸಿದ ದೇಶೀ ವಿದ್ವಾಂಸರು ಕಾಣಿಸುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ನಡೆದ ಪ್ರಮುಖ ಅಧ್ಯಯನಗಳೆಂದರೆ, ೧೮೬೯ರಲ್ಲಿ ಸರ್ ವಿಲಿಯಂ ಹಂಟರ್‌ನ ಮಾರ್ಗದರ್ಶನದಲ್ಲಿ ಪ್ರಕಟಗೊಂಡ 'ಇಂಪೀರಿಯಲ್ ಗೆಜಿಟಿಯರ್'ನ ೧೧೨ ಸಂಪುಟಗಳಲ್ಲಿ ೪ನೇ ಸಂಪುಟ ಹಿಂದೂ ಧರ್ಮದ ಬಗ್ಗೆ ಅಪಾರವಾದ ಮಾಹಿತಿಯನ್ನು ಒದಗಿಸುತ್ತದೆ.

ಪ್ರೊ.ಜೋಗನ್ ಶಂಕರ್‌ರವರು ತಮ್ಮ ಕೃತಿಯಾದ ದೇವದಾಸಿ ಸಂಪ್ರದಾಯದಲ್ಲಿ ಭಾರತದಲ್ಲಿ ನಡೆದ ಧಾರ್ಮಿಕ ಅಧ್ಯಯನಗಳನ್ನು ೫ ವಿಭಾಗಗಳಲ್ಲಿ ಗುರುತಿಸುತ್ತಾರೆ. ಆ ಎಲ್ಲಾ ಹಂತಗಳು ಮೇಲಿನ ವಿಷಯಕ್ಕೆ ಪ್ರಮುಖ ಆಕರ ಅಂಶಗಳಾಗಿವೆ.

ಸ್ವಾತಂತ್ರ್ಯದ ಅನಂತರದ ಕಾಲದಲ್ಲಿ ನಡೆದ ಸುಧಾರಣಾ ವಾದಗಳ ಪ್ರಭಾವದ ಹಿನ್ನೆಲೆಯಲ್ಲಿ ಕೆಳವರ್ಗದ ಜನರಲ್ಲಿ ರೂಢಿಯಲ್ಲಿದ್ದ ಅನಿಷ್ಟ ಸಂಪ್ರದಾಯವಾದ ದೇವದಾಸಿ ಪದ್ಧತಿಯನ್ನು ಕಾನೂನಿನ ಮೂಲಕ ತಡೆಹಿಡಿಯಲಾಯಿತು. ಅವುಗಳೆಲ್ಲವೂ ಅಪರಾಧಿಗಳ ಪಟ್ಟಿಯಲ್ಲಿ ಸೇರ್ಪಡೆಗೊಂಡರೂ, ಗುಪ್ತಗಾಮಿನಿಯಾಗಿ ಜನ ಮಾನಸದಲ್ಲಿ ಇಂದಿಗೂ ನೆಲೆಗೊಂಡಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

ವಿಷಯಕ್ಕೆ ಪ್ರಮುಖವಾಗಿ ಸ್ತ್ರೀವಾದಿ ಅಧ್ಯಯನಗಳು ಆಕರ ಸಾಮಗ್ರಿಗಳಾಗಿವೆ. ಲಿಂಗತಾರತಮ್ಯ ಮತ್ತು ಲೈಂಗಿಕ ಶೋಷಣೆಗಳನ್ನು ಪ್ರಧಾನ ಸಮಸ್ಯೆಯಾಗಿರಿಸಿಕೊಂಡು ಮಹಿಳಾ ಅಧ್ಯಯನಗಳು, 'ಸ್ತ್ರೀ ಮುಕ್ತಿ' ತ್ರೈಮಾಸಿಕ ಪತ್ರಿಕೆ, 'ಮಹಿಳಾ ವಿಜಯ' ಮಾಸಿಕ ಪತ್ರಿಕೆಗಳು. ಮಹಾ ಪ್ರಬಂಧಕ್ಕೆ ಪ್ರಮುಖ ದೃಷ್ಟಿಕೋನ ರೂಪಿಸುವಲ್ಲಿ ಕೆಲಸ ಮಾಡಿವೆ. ಸಾಂಕೃತ್ಯಾಯನರ 'ಓಲ್ಗಾ ಗಂಗಾ' ಕೃತಿಯಲ್ಲಿ ಮನುಕುಲದ ಚರಿತ್ರೆಯನ್ನು ತಿರುವುತ್ತ ಹೆಣ್ಣಿನ ಸಾಮಾಜಿಕ ಜೀವನದ ಅವನತಿ ಪುರುಷನ ಪೌರುಷದ ಆಟದಲ್ಲಿ ದಾಳವಾಗಿ ಪರಿಗಣಿಸಲ್ಪಟ್ಟಿದ್ದನ್ನು ಮತ್ತು ಹೆಣ್ಣಿನ ನಿರಾಯುಧತನವನ್ನು ಗುರುತಿಸಬಹುದಾಗಿದೆ.

ಎ.ಎಸ್.ಅಲ್ಟೇಕರ್‌ರವರು ತಮ್ಮ ಬರಹಗಳಲ್ಲಿ ಸಾಂಪ್ರದಾಯಿಕ ಹಿಂದೂ ಧರ್ಮವು (೧೯೭೩ : ೧೭೬) ಮಹಿಳೆಯರನ್ನು ಕುಟುಂಬ ಮತ್ತು ಗಂಡಂದಿರಿಗಷ್ಟೇ ಸೀಮಿತಗೊಳಿಸಿದ್ದರ ಬಗ್ಗೆ ನಿದರ್ಶನಗಳನ್ನು ನೀಡಿದ್ದಾರೆ ಆದರೆ ಆರ್.ಎನ್.ದಾಂಡೇಕರ್ ಹಾಗೂ ಹಲವು ಆಧುನಿಕ ಸಮಾಜಶಾಸ್ತ್ರಜ್ಞರು ಮಹಿಳೆಯರು ಮತ್ತು ಅವರ ಧಾರ್ಮಿಕ ಕಥನದ ಬಗ್ಗೆ ವಿರುದ್ಧವಾದ ಅಭಿಪ್ರಾಯಗಳನ್ನು ನೀಡುತ್ತಾರೆ. ವೈದಿಕ ಹಿಂದೂ ಆಚರಣೆಗಳಲ್ಲಿ

ಮಹಿಳೆಯರ ಭಾಗವಹಿಸುವಿಕೆ ಕುರಿತು ವ್ಯಾಡ್ಲೆ (೧೯೭೭) ವಿಶ್ಲೇಷಿಸಿದ್ದಾರೆ. ಇವರ ದೃಷ್ಟಿಕೋನವನ್ನು ಲಾಬ್ರ್ಯಾಕ್ಸ್ (೧೯೭೧) ಇನ್ನಷ್ಟು ಪುಷ್ಟಿಯನ್ನು ಪಡೆಯುತ್ತದೆ. ಮಹಿಳೆ ಮತ್ತು ಧರ್ಮಕ್ಕೆ ಸಂಬಂಧ ಪಟ್ಟಂತೆ ಪಂಥಗಳ ಅಧ್ಯಯನಕ್ಕೆ ಗೋಫ್, ಗ್ಲುಕ್‌ಮ್ಯಾಸ್, ಕೋಲೆಂಡ ಪಾಲಿನ್, ಮುಖರ್ಜಿ, ಬಾಂಗ್ ಎಡ್ವರ್ಡ್ ಓ ಹೆನ್ರಿ, ಪಾಂಡಿಯನ್, ಮಾರ್ಗಲಿನ್, ಹರ್ಷದ್ ಆರ್ ತ್ರಿವೇದಿ ಅವರುಗಳು ದಲಿತ ಮಹಿಳೆ ಮತ್ತು ಆಕೆಯ ಶೋಷಣೆಗೆ ಸಂಬಂಧಿಸಿದ ಚಿಂತನೆಗಳು ಬಹು ಮಹತ್ವದ ಕೃತಿಗಳಾಗಿವೆ.

ಶ್ರೀಪಾದ ಅಮೃತ ಡಾಂಗೆ ರವರ ಭಾರತದ ಸಂಘ ಜೀವನದಿಂದ ಗುಲಾಮಗಿರಿಯವರೆಗೆ ಫ್ರೆಡರಿಕ್ ಏಂಗಲ್ಸ್‌ರು, ಭಗವತ್ ಶರಣ ಉಪಾಧ್ಯಾಯ, ಎಂ.ಕೆ.ಇಂದಿರಾರವರ ಕೃತಿಗಳು ಪ್ರಾಚೀನ ಕಾಲದಿಂದ ಇಂದಿನವರೆಗೆ ಸ್ತ್ರೀ ನಡೆದು ಬಂದ ದಾರಿ, ಆಕೆ ಅನುಭವಿಸಬೇಕಾಗಿ ಬಂದ ಬದುಕಿನ ಏಳುಬೀಳುಗಳ ವಿವರಣೆಯನ್ನು ತಿಳಿಸುತ್ತವೆ.

ಭಾರತದಲ್ಲಿ ಮಹಿಳೆ ಮತ್ತು ಧರ್ಮ, ದೇವಸ್ಥಾನಗಳಿಗೆ ಸಂಬಂಧಿಸಿದಂತೆ ಇವರ ಅಭ್ಯಾಸ ಕ್ರಮಕ್ಕೆ ಭದ್ರ ಬುನಾದಿಯನ್ನು ಹಾಕಿದ ಕೀರ್ತಿ ರಾಂಚಿ ವಿಶ್ವವಿದ್ಯಾಲಯದ ದಿವಂಗತ ಪ್ರೊ.ಲಲಿತ ಪ್ರಸಾದ ವಿದ್ಯಾರ್ಥಿಯವರಿಗೆ ಸಲ್ಲುತ್ತದೆ. ಡಾ.ವಿದ್ಯಾರ್ಥಿಯವರು ಪ್ರಥಮವಾಗಿ ಬಿಹಾರದಲ್ಲಿನ 'ಗಯಾ'ದ ಪವಿತ್ರ ಕ್ಷೇತ್ರದ ಪೂಜಾರಿ ವರ್ಗವನ್ನು ಅಭ್ಯಾಸ ಮಾಡುವ ಮೂಲಕ ಪವಿತ್ರ ಸಂಕೀರ್ಣಗಳ ಅಭ್ಯಾಸಕ್ಕೆ ನಾಂದಿ ಹಾಡಿದರು. ಆ ಕಾಲಕ್ಕೆ ಜಗತ್ತಿನ ಇಡೀ ಮಾನವಶಾಸ್ತ್ರಜ್ಞರು ಗಮನ ನಾಗರಿಕತೆಗಳ ಅಭ್ಯಾಸಕ್ಕೆ ಮಹತ್ವಕೊಟ್ಟಿತ್ತು. ಈ ಸಂದರ್ಭದಲ್ಲಿ ರೆಡ್‌ಫೀಲ್ಡ್ (೧೯೫೩) ಸಿಂಗರ್ (೧೯೫೫) ಮಕ್ಕಿಂ ಮೇರಿಯಟ್ (೧೯೫೮), ಓಪ್ಲರ್ (೧೯೫೬), ಬೋಸ್ (೧೯೫೩), ಸುರಜಿತ್ ಸಿನ್ಹಾ ೧೯೭೮, ಸರಸ್ವತಿ ಮತ್ತಿತರ ಅಧ್ಯಯನಗಳು ಗಮನಾರ್ಹವಾದವುಗಳು.

ಡಾ.ವಿದ್ಯಾರ್ಥಿಯವರ ದೈವತಾಣದ ವಿಧಾನವನ್ನು ಬಳಸಿ, ಬೋಸ್ (೧೯೬೭), ಸರಸ್ವತಿ (೧೯೭೪, ೧೯೭೫), ಉಪಾಧ್ಯಾಯ (೧೯೭೪), ಚಕ್ರವರ್ತಿ (೧೯೭೪), ನಾರಾಯಣ (೧೯೭೨), ರುನಾ (೧೯೭೧), ಗೋಸ್ವಾಮಿ ಮತ್ತು ಮೊರಬ (೧೯೭೪) ತಾರಾಚಂದ (೧೯೮೭), ಗುರುಮೂರ್ತಿ (೧೯೮೯) ಮುಂತಾದ ಅನೇಕ ಮಾನವಶಾಸ್ತ್ರಜ್ಞರು ಗಯಾ, ಕಾಶಿ, ಮೈಸೂರು, ತಿರುಪತಿ, ಕಠಮಂಡು, ಜನಕಪುರಿ, ಸೌದತ್ತಿ, ಮುಂತಾದ ಪವಿತ್ರ ಕ್ಷೇತ್ರಗಳು ಅವು ದೇವತಾ ತಾಣಗಳಾಗಿರುವ ಜೊತೆಗೆ ಧಾರ್ಮಿಕ ಶೈಕ್ಷಣಿಕ ತಾಣಗಳೂ ಭಕ್ತರಿಗೆ ಮಾನಸಿಕ ಅವಶ್ಯಕತೆಗಳನ್ನು ಪೂರೈಸುವ ಕೇಂದ್ರಗಳೂ ಆಗಿರುತ್ತವೆ ಎಂಬುದನ್ನು ತಮ್ಮ ಗ್ರಂಥಗಳಲ್ಲಿ ವಿವರಿಸಿದ್ದಾರೆ.

ಕರ್ನಾಟಕದ ರಾಜ್ಯ ಗೆಜೆಟಿಯರ್ ಭಾಗ ೩, ಕರ್ನಾಟಕದ ಪರಂಪರೆ ಸಂಪುಟ ೨ (ಮೈಸೂರು ರಾಜ್ಯ ಸರ್ಕಾರದಿಂದ ಬಿಡುಗಡೆ)ರಲ್ಲಿ ದೇವದಾಸಿ ಪದ್ಧತಿಯ ಹುಟ್ಟು, ಕರ್ನಾಟಕದ ವಿವಿಧ ಭಾಗಗಳಲ್ಲಿ ಅದರ ಪ್ರಾಬಲ್ಯತೆ, ಕೈಗೊಂಡ ನಿವಾರಣಾ ಕ್ರಮಗಳ ಬಗ್ಗೆ ವಿವರಿಸಲಾಗಿದೆ.

ಡಾ.ಡಿ.ವೆಂಕಟಗಿರಿಯವರ ಕನ್ನಡ ರಂಗಭೂಮಿ ಮತ್ತು ಮಹಿಳೆಯಲ್ಲಿ ದೇವದಾಸಿಯರಿಗೆ ಪುರೋಹಿತವರ್ಗ ಮತ್ತು ರಾಜ್ಯಶಾಹಿಗಳ ಆಸಕ್ತಿಯ ಮೇರೆಗೆ ನಟುವರ ಹೆಣ್ಣುಗಳನ್ನು ಬಳಸಿಕೊಂಡ ಬಗೆ, ಈಗ ಅವರೇ ರಂಗಕಲಾವಿದೆಯರಾಗಿ, ಜೀವನ ನಿರ್ವಹಿಸುತ್ತಿದ್ದರ ಬಗ್ಗೆ ವಿವರಿಸಲಾಗಿದೆ, ಗೊ.ರು.ಚೆನ್ನಬಸಪ್ಪನವರು

ದೇವದಾಸಿ ಉಗಮದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಒದಗಿಸಿದ್ದಾರೆ. ಚೆನ್ನಣ್ಣ ವಾಲೀಕರ ಅವರ ಬೃಹತ್ ಗ್ರಂಥವು ಭಾರತ ಮತ್ತು ಕರ್ನಾಟಕದ ವಿವಿಧ ಭಾಗಗಳಲ್ಲಿನ ಪ್ರಚಲಿತವಿದ್ದ ದೇವದಾಸಿ ಪದ್ಧತಿಯ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಿದ್ದಾರೆ. ಡಾ.ಶೈಲಜಾ ಹಿರೇಮಠ ಅವರ 'ಸ್ತ್ರೀ ಕಥನ' ಮತ್ತು ಪಾತರದವರು ಎಂಬ ಕೃತಿಯಲ್ಲಿ ಸ್ತ್ರೀಯ ಬಗೆಗಿನ ವಿಭಿನ್ನ ಪಾತ್ರಗಳು. ಮಾತೃ ಪ್ರಧಾನತೆಯಿಂದ ಪಿತೃ ಪ್ರಧಾನತೆಯವರೆಗೆ ಮಹಿಳೆಯ ಸ್ಥಿತಿಗತಿಗಳು ಮತ್ತು ದೇಶಿಯ ಒಂದು ರೂಪವಾದ ಪಾತರದವರ ಬಗ್ಗೆ ಅಪಾರ ಮಾಹಿತಿಗಳನ್ನು ನೀಡಿದ್ದಾರೆ. ಡಾ.ಎಂ.ಚಿದಾನಂದ ಮೂರ್ತಿ, ಡಾ.ಚೆನ್ನಕ್ಕ ಎಲಿಗಾರ ಇವರು ದೇವದಾಸಿ ಮಹಿಳೆಗೆ ಸಂಬಂಧಿಸಿದಂತೆ, ಐತಿಹಾಸಿಕ ಶಾಸನ ಆಧಾರಾಂಶಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಈ ನಿಟ್ಟಿನಲ್ಲಿ ಕರುಣ ಮಂಗಳವಾಡೆ, ಕೆ.ಎಸ್.ಗೀತಾ, ದು.ನಿಂ. ಬೆಳಗಲಿ, ಡಾ.ಕಮಲಾ ಹೆಮ್ಮಿಗೆ ಮುಂತಾದವರು ದೇವದಾಸಿ ಸಂಪ್ರದಾಯಕ್ಕೆ ಸಂಬಂಧಿಸಿದಂತೆ, ಅತೀ ಮುಖ್ಯವಾದ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮಾಹಿತಿ ನೀಡಿ, ಇದರ ನಿವಾರಣೋಪಾಯಗಳಿಗೆ ಮಾರ್ಗಗಳನ್ನು ಸೂಚಿಸಿದ್ದಾರೆ. "Nitya Sumangali saskia kursentoom story, preface, 1897" ದೇವದಾಸಿಯ ಪದ್ಧತಿ ಕೆಳಜಾತಿಗಳಲ್ಲಿ ಹುಟ್ಟಲು ಕಾರಣವಾದ ಅಂಶಗಳು ದೇವದಾಸಿ ಪದ್ಧತಿಯ ಅರ್ಥವಿವರಣೆ, ಹಾಗೂ ವಿಜಯನಗರದ ಕಾಲದಲ್ಲಿ ದೇವದಾಸಿಯರ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ. 'Indian call Girl' ನಲ್ಲಿಯೂ ದೇವದಾಸಿಯರಿಗೆ ಸಂಬಂಧಿಸಿದಂತೆ, ಆಧುನಿಕ ದೃಷ್ಟಿಕೋನಕ್ಕೆ ಸಂಬಂಧಿಸಿದಂತೆ ಬದಲಾದ ಅಂಶಗಳ ವಿವರಣೆ ಇದೆ.

ವೇಶ್ಯಾ ಸಮಸ್ಯೆಯ ಬಗ್ಗೆ ಡಾ.ಶಿವರಾಮಕಾರಂತ, ಬಸವರಾಜಕಟ್ಟಿಮನಿ, ನಿರಂಜನ ಅ.ನ.ಕೃ. ಎಂ.ಕೆ. ಇಂದಿರಾ, ಗೀತಾ ನಾಗಭೂಷಣರು ವಿಭಿನ್ನ ದೃಷ್ಟಿಕೋನಗಳಿಂದ ಚಿಂತನೆ ನಡೆಸಿದ್ದಾರೆ. ಧಾರ್ಮಿಕ, ಸಾಮಾಜಿಕ, ಆರ್ಥಿಕ ನೆಲೆಯಲ್ಲಿ ನೋಡುವುದರ ಮೂಲಕ ಹಲವಾರು ಸಿದ್ಧಾಂತಗಳಿಗೂ ಬದ್ಧತೆಯನ್ನು ತೋರಿಸಿದ್ದಾರೆ. ದು.ನಿಂ. ಬೆಳಗಲಿಯವರು ತಮ್ಮ ದೇವದಾಸಿ ಕಾದಂಬರಿಯಲ್ಲಿ ಇದೊಂದು ಸಾಮಾಜಿಕ ಸಂಸ್ಥೆ, ಧಾರ್ಮಿಕ ಮುಸುಕಿನಲ್ಲಿ ಎಷ್ಟೊಂದು ವ್ಯವಸ್ಥಿತವಾಗಿ ಬೆಳೆಯುತ್ತಿದ್ದರ ಬಗ್ಗೆ ಹೇಳಿದ್ದಾರೆ.

### ೫.೭ ದೇವದಾಸಿ ಪದ ನಿಷ್ಪತ್ತಿ

"The term Basavi refers to fiminine form of Basava a bull, which roams the village at will without any restriction. Hence Basavi allude to the foot loose position of the woman. After Aryan invasion of the south sanskritised culture and Bhrahmanic ethos also diffused in all aspects of dravidian culture and religion. As a result Basavi of jogati system a Dravidian releigions, customs dedication to a diety. such as Yellamma originally a Dravidian Godess was super imposed by an Aryan system of devadasi"[೨]

ದ್ರಾವಿಡರಲ್ಲಿ ಕೇವಲ ಗುಡಿಯ ಕಸ ಗುಡಿಸಿ, ದೀಪಹಚ್ಚಿ, ಪೂಜೆ ಮಾಡುವವಳಿಗೆ ದೇವದಾಸಿ ಎಂದು ಹೆಸರು. ಆರ್ಯರು ಇಲ್ಲಿಗೆ ಬಂದ ಮೇಲೆ ಆಕೆ ಸಂಗೀತ, ನೃತ್ಯಗಳಲ್ಲಿ ಪ್ರವೀಣೆಯಾಗಿ ದೊಡ್ಡ ದೇವಾಲಯಗಳಲ್ಲಿ ಅಂಗಭೋಗ ರಂಗಭೋಗ ನೀಡುವವಳಾಗಿ, ಸಾಹಿತ್ಯ ಸಂಗೀತ ನೃತ್ಯಗಳ ಸಾಂಸ್ಕೃತಿಕ ಪ್ರತಿನಿಧಿಯಾದಳು. ಆದರೆ ಈಗಾಗಲೇ ಹೆಣ್ಣು ಪೂಜಾರಿಣಿಯ ಬದಲಿಗೆ ಹೆಣ್ಣು ಪೂಜಾರಿಗಳು ತಮ್ಮ ಸ್ವಾರ್ಥ ಸುಖಕ್ಕಾಗಿ, ಭೋಗ ಲಾಲಸೆಗಾಗಿ ತಾವು ಸುಖ ಪಡುವುದರ ಜೊತೆಗೆ ರಾಜ ಮಹಾರಾಜರು, ಸಾಮಂತ ಸರದಾರರು, ಶ್ರೀಮಂತರು ದೇವರ ಪ್ರತಿನಿಧಿಗಳೆಂದು ಹೇಳಿ ಅವರನ್ನು ಸೂಳೆಯರನ್ನಾಗಿ ಮಾಡುವುದರ ಮೂಲಕ ಈ ಪದ್ಧತಿಗೆ ಇದ್ದ ಗೌರವ, ಹಾಗೂ ಪಾವಿತ್ರ್ಯ ಭಾವನೆಯನ್ನು ಕಳಚಿ ಹಾಕಿದರು. ಈ ಪದದ ಅರ್ಥವ್ಯಾಪ್ತಿಯನ್ನು ಕುಂಠಿತಗೊಳಿಸಿದರು. ಕೆಸರಿನಲ್ಲಿ ಕಮಲ ಹುಟ್ಟಿದಂತೆ ಕೆಳಜಾತಿಯಲ್ಲಿ ಸಂಗೀತ, ಸಾಹಿತ್ಯ, ನೃತ್ಯದಲ್ಲಿ ಪ್ರವೀಣೆಯರಾದವರು ಹುಟ್ಟಿದರೂ ಧರ್ಮಶಾಹಿ, ರಾಜಶಾಹಿ, ಅಧಿಕಾರ ಶಾಹಿಗಳಿಗೆ ಸಿಕ್ಕು ಕೆಸರಿನಲ್ಲಿ ಕೆಸರಾಗಿ ಹೋದ ಕಮಲಗಳಾದರು. "ದೇವದಾಸಿ ಶಬ್ದ ಸಂಸ್ಕೃತ ಭಾಷೆಯಿಂದ ಬಂದದ್ದು, ಸ್ಥಳೀಯವಾಗಿ ಇವರನ್ನು ಸೂಳೆ, ಬಸವಿ, ಸಾನಿ, ಕಸಬಿ ಮತ್ತು ಕಟ್ಟಿಕೊಂಡವಳು ಹೀಗೆ ಅನೇಕ ಹೆಸರಿನಿಂದ ಕರೆಯಲಾಗಿದೆ."[೩]

'ದೇವದಾಸಿ' ಪದ ಸಂಸ್ಕೃತದ್ದು, ಹಾಗೆ 'ಜೋಗತಿ' ಸಂಸ್ಕೃತದ ಸಹಯೋಗದಿಂದ ಜೋಗವಾಗಿ ಅದುವೆ ಜೋಗತಿಯಾಗಿದೆ. ಆದರೆ ಬಸವಿ ಪದ ಶುದ್ಧ ದ್ರಾವಿಡರದ್ದು ಕನ್ನಡದ್ದು, ಆರ್ಯರು ಈ ದೇಶಕ್ಕೆ ಬರುವ ಪೂರ್ವದಲ್ಲಿ ಈ 'ಬಸವಿ' ಪದ್ಧತಿ ಇತ್ತು. ಆದರೆ ಇವತ್ತಿನ ರೂಪದಲ್ಲಿ ಅಲ್ಲ. ತಮ್ಮ ಮನೆಯನ್ನು ನೋಡಿಕೊಂಡು ಹೋಗಲು ಒಬ್ಬ ಹೆಣ್ಣುಮಗಳು ಇರುವಂತೆ ದೇವರನ್ನು ನೋಡಿಕೊಂಡು ಹೋಗಲು ಒಬ್ಬ ಹೆಣ್ಣುಮಗಳು ದೇವರ ಮನುಷ್ಯಳು ಇರಬೇಕೆಂಬ ಅವರ ಮುಗ್ಧಭಾವನೆ ಕಾಲಾಂತರದಲ್ಲಿ ಆರ್ಯರ ಸಂಪರ್ಕದಿಂದ ಬಸವಿಗೆ ಬಿಡುವ ಪದ್ಧತಿ ಬಂದಿತು. ದೇವರಿಗೆ ಹೋರಿ ಬಿಟ್ಟರೆ ಬಸವನೆನ್ನುವಂತೆ, ಪೂರ್ವದಲ್ಲಿ ದೇವಸ್ಥಾನಗಳನ್ನು ಗುಡಿಸಿ, ಸ್ವಚ್ಛವಾಗಿಟ್ಟುಕೊಳ್ಳಲು ಒಂದು ಹೆಣ್ಣನ್ನು ಮುಡಿಪಾಗಿಟ್ಟಿದ್ದು ಬಸವಿ ಪದ್ಧತಿಗೆ ಪೀಠಿಕೆಯಾಯಿತು. ದ್ರಾವಿಡ ಮಾತೃಪ್ರಧಾನ ವ್ಯವಸ್ಥೆಯಲ್ಲಿ ಇದು ಹುಟ್ಟಿದ್ದಾಗಿದೆ.

ಮಳೆ ಬೆಳೆ ಬರಲೆಂದು ದನಕರು, ಜನಗಳಿಗೆ ಬಂದ ರೋಗ ಹೋಗಲೆಂದು ದೇವರಿಗೆ ಪ್ರಾಣಿಗಳ ಕಾಣಿಕೆ ಕೊಟ್ಟಂತೆ ಮನುಷ್ಯನನ್ನು ಕಾಣಿಕೆ ಕೊಡುವುದಾಗಿದೆ. ದ್ರಾವಿಡ ಭಾಷೆಯಲ್ಲಿ ಸೀಮಿತಾರ್ಥ ಪಡೆದಿದ್ದ ಶುದ್ಧಾರ್ಥದಲ್ಲಿದ್ದ ಬಸವಿ ಆರ್ಯರಿಂದ ಸಂಸ್ಕೃತೀಕರಣಗೊಂಡು ದೇವದಾಸಿ ಆದಮೇಲೆ ಅದರ ಅರ್ಥವ್ಯಾಪ್ತಿ ಹೆಚ್ಚಾಯಿತೆನ್ನಬಹುದಾಗಿದೆ.

ಆರ್ಯರ ಕೃತಿಯಾದ ಋಗ್ವೇದಪದದಲ್ಲಿ 'ಕನ್ಯಾಕುವರ' ಕೌಟಿಲ್ಯ ಅರ್ಥಶಾಸ್ತ್ರದಲ್ಲಿ ಬರುವ 'ಗಣಿಕೆಯರು' ವಿಂಧ್ಯಾಪರ್ವತದ ಗುಹೆಯಲ್ಲಿ ಸಿಗುವ 'ಸಂತಾನಕಾ' 'ದಾಸಿ ಕುಮಾರಿ' ಮುಂತಾದ ಪ್ರಾಕೃತ ಶಬ್ದಗಳು ದೇವದಾಸಿಯ ಸಮಾನಾರ್ಥಕ ಶಬ್ದಗಳೇ ಆಗಿವೆ.

ಕನ್ನಡ-ಇಂಗ್ಲೀಷ್ ಡಿಕ್ಷನರಿ ಎಫ್.ಕಿಟಲ್

ದೇವದಾಸಿ= A courtezan, especially one employed as a dancer, etc in a temple.

ಬಸವಿ = ಬಸವಿ A prostitute (like a she guli) in temples of Math

ಸೂಳೆ = ಸೂಳೆ, ಶೂಲೆ, ಗಣ್ಯಾಂಗನೆ, A horlot, a prostiture, ರೂಪಜೀವೆ, ವೇಶ್ಯೆ, ಗಣಿಕೆ, ಕ್ಷುದ್ರೆ, ಕಾಮುಕಿ, ಭೋಗ,ಜೋಡೆ, ಅಜ್ಜುಕೆ, ವಾರಸ್ತ್ರಿ, ಚೂಳೆ, ಚೂಳ್ಳೆ ಎಂಬ ಪರ್ಯಾಯ ಶಬ್ದಗಳಿದ್ದು ಈ ಸೂಳೆ ಪದ ದ್ರಾವಿಡ ಪದವಾಗಿದ್ದು, ಬಸವಿ ಎಂಬ ಶಬ್ದಕ್ಕಿಂತ ಪ್ರಾಚೀನವಾದುದೆನ್ನಲಾಗಿದೆ.

ಕನ್ನಡ ನಿಘಂಟು ಸಂ.ಪ್ರೊ.ಜಿ.ವೆಂಕಟಸುಬ್ಬಯ್ಯ

ದೇವದಾಸಿ = ೧, ದೇವರ ಸೇವೆಗಾಗಿ ತನ್ನ ಜೀವಮಾನವನ್ನು ಮುಡುಪಾಗಿಟ್ಟು ಸೇವೆಸಲ್ಲಿಸುವ ಅವಿವಾಹಿತ ಮಹಿಳೆ. ೨.ದೇವಸ್ಥಾನದ ನರ್ತಕಿ, ೩.ನರ್ತನ ಮಾಡುವ ವೃತ್ತಿಯ ವೇಶ್ಯೆ.

ಬಸವಿ = ೧.ದೇವರ ಸೇವೆಯಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ, ಕೆಲವು ಕಡೆ ಇಂತವರನ್ನು ದೇವದಾಸಿಯರೆಂದೂ, ಜೋಗತಿಯರೆಂದೂ ಕರೆಯುತ್ತಾರೆ.

ಸೂಳೆ: ವ್ಯಭಿಚಾರವನ್ನು ಮಾಡುವವಳು, ಹಾದರಗಿತ್ತಿ

ಸಿರಿಗನ್ನಡ ಅರ್ಥಕೋಶ: ಡಾ.ಶಿವರಾಮ ಕಾರಂತ

ದೇವದಾಸಿ = ದೇವಾಲಯದ ಪರಿಚಾರಿಕೆ, ಸೂಳೆ, ವೇಶ್ಯೆ, ಪಾತರದವಳು, ಬಸವಿ

ಬಸವಿ = ವೇಶ್ಯೆ, ದೇವರಿಗೆ ಬಿಟ್ಟಾಕೆ, ಬಿಡು ದೇವರ ಹೆಸರಿನಲ್ಲಿ ಕನ್ಯೆಯನ್ನು ವಿವಾಹ ಮಾಡದೆ ಇರಿಸು

ಸೂಳೆ ಪಾತರದವಳು ಹಾದರಗಿತ್ತಿ, ವೇಶ್ಯೆ

ಡಿ.ಟಿ.ಬಸವರಾಜ್ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವೇಶ್ಯಾಜೀವನದಲ್ಲಿ "ದೇವದಾಸಿ ದೇವರ ಸೇವೆಗಾಗಿ ತನ್ನ ಜೀವನಮಾನವನ್ನು ಮುಡುಪಾಗಿಟ್ಟು ಸೇವೆ ಸಲ್ಲಿಸುವ ಅವಿವಾಹಿತ ಮಹಿಳೆ"[೪] ಎಂದಿದ್ದಾರೆ.

ಜೋಗನ್ ಶಂಕರ ಅವರು ತಮ್ಮ ಕೃತಿಯಲ್ಲಿ "The female dancers and singers attached to temple are generally refered to by the term Devadasi which literally means female servants of the deity, they are not allowed to marry any mortal man and their dedication to temple service is considered as constituting a marriage with the deity"[೫]

'ನಿತ್ಯ ಸುಮಂಗಲಿ' ಎಂಬ ತಮ್ಮ ಕೃತಿಯಲ್ಲಿ ಸಾಸ್ಕಿಯಾಸಿ,ಕೆರೆಸೆನ್ ಭೂಮಸ್ಟೋರಿ ಹೀಗೆ ಹೇಳಿದ್ದಾರೆ. "The phenomena of the devadasi (SK-Davadasi, ta tevataci lit slave of god) has suffered greatly from faulty culture bound evaluation....the multitude of do's and don't in the life of an orthodox Hindu and the cultural evaluation employed by them gave rise to the basic hypothesis for this work which can be summed up in a single definition the devadasi is a nitya sumangali" ie an ever auspicious woman"[೬]

'ಭಾರತ ಸಮಾಜ ಕಾರ್ಯ ವಿಶ್ವಕೋಶ' ಪುಟ ೪೬೪ ದೇವದಾಸಿಯ ಎಂದರೆ ದೇವರಿಗೆ ದಾಸಿಯಾದವಳು ಎಂದು ಅರ್ಥ, ದೇವರದಾಸಿ, ಸೇವಕಿ, ಕೈಯಾಳು, ಪವಿತ್ರದಾಸಿ, ಕನ್ಯೆ, ದೇವಾಲಯದ ಕನ್ಯೆ, ದೇವಾಲಯದ ನರ್ತಕಿ, ದೇವರ.... ನಾಯಕ ಸಾನಿ ಎಂಬ ಅರ್ಥಗಳಲ್ಲೂ ಇದನ್ನು ಬಳಸಲಾಗಿದೆ. ಧಾರ್ಮಿಕ ಸಂಪ್ರದಾಯಗಳು

ಮತ್ತು ಕೌಟುಂಬಿಕ ಪದ್ಧತಿಗಳು ಎಂಬ ಹೆಸರಿನಲ್ಲಿ ಆಚರಣೆಯಲ್ಲಿಟ್ಟುಕೊಂಡಿರುವ ಜಗತ್ತಿನ ಅತ್ಯಂತ ಪ್ರಾಚೀನ ಕಸಬು ಎನ್ನಲಾದ ವೇಶ್ಯಾವೃತ್ತಿಯನ್ನು ಅವಲಂಬಿಸಿರುವ ಹೆಂಗಸರ ಬಗ್ಗೆ ಸೌಮ್ಯೋಕ್ತಿಯಲ್ಲಿ ಹೇಳುವಾಗಲೂ ದೇವದಾಸಿ ಎಂಬ ಪದವನ್ನು ಬಳಸಲಾಗುತ್ತದೆ. ಹೀಗಾಗಿ ಧಾರ್ಮಿಕ ವೇಶ್ಯಾವೃತ್ತಿಯಲ್ಲಿ ದೇವದಾಸಿಯೂ, ತರುಣಿಯೂ, ಚೇತೋಹಾರಿಯೂ, ಸುಂದರ ಕನ್ಯೆಯೂ ಆದವಳಾಗಿದ್ದು ಬರುಬರುತ್ತಾ ದೇವರ ಸೇವೆಯ ನೆಪದಲ್ಲಿ ದೇವದಾಸಿಯನ್ನು ಭೋಗಿಸಲು ಅನುಕೂಲವಾಗುವಂತೆ ಸೇವಾನಿಯಮಗಳನ್ನು ರೂಪಿಸಲಾಯಿತು. ದೇವರ ಅನೇಕ ಸೇವೆಗಳಲ್ಲಿ ರಂಗಭೋಗ, ಅಂಗ ಭೋಗಗಳಲ್ಲಿ ಇವೆ. ರಂಗ ಭೋಗಕ್ಕೆ ತರಬೇತಿ ಪಡೆದ ಸುಂದರ ನೃತ್ಯಾಂಗನೆಯರನ್ನು ನೇಮಿಸಲಾಗುತ್ತಿತ್ತು. ದೇವರ ಪೂಜೆಯ ಸಂದರ್ಭದಲ್ಲಿ ಸಂಗೀತ ಸೇವೆಗಾಗಿ ನೇಮಿಸಿಕೊಳ್ಳಲಾಗುವ ವ್ಯವಸ್ಥೆ ಮಾಡಲಾಗಿದೆ. ಸಂಗೀತ ನೃತ್ಯಾದಿ ಕಲೆಗಳಲ್ಲಿ ಪರಿಣಿತಳಾಗಿದ್ದಳು. ಸಾರ್ವಜನಿಕರಲ್ಲಿ ಸಲುಗೆಯ ಸಂಬಂಧವನ್ನು ಹೊಂದಿರುತ್ತಿದ್ದಳು. ಸಂಗೀತಗಾರಳಾಗಿ, ನರ್ತಕಿಯಾಗಿ ಆಕೆ ಅತ್ಯುತ್ತಮ ಕಲಾ ಪ್ರತಿಪಾದಕಿಯಾಗಿಯೂ ಇರುತ್ತಿದ್ದಳು. ಅವಳು ಧನಿಕರಿಗೆ ರಂಜನೆಯನ್ನು ಭೌದ್ಧಿಕ ಸಹಚರ್ಯೆಯನ್ನು ಒದಗಿಸುತ್ತಿದ್ದಳು. ತನ್ನ ಹೀನ ಸ್ಥಿತಿಯಲ್ಲಿ ದೇವಸ್ಥಾನದಲ್ಲಿ ಗುಲಾಮಳಂತೆ ಚಾಕರಿ ಮಾಡುತ್ತಾ ಆ ಮೂಲಕ ಹಾದು ಹೋಗುವ ಅಪರಿಚಿತರನ್ನು ಕೂಡುತ್ತಾ ಕಾಲ ದೂಡುತ್ತಿದ್ದು,ತಾನೊಂದು ಮಹತ್ತರವಾದ ದೇವರ ಕಾರ್ಯವೊಂದನ್ನು ನಿರ್ವಹಿಸುತ್ತಿದ್ದೇನೆ ಎಂಬ ನಂಬಿಕೆಯಿಂದ ಜೀವಿಸುವವರಾಗಿದ್ದರು ಎನ್ನಬಹುದು.

ಒಟ್ಟಿನಲ್ಲಿ ಆರಂಭದ ದ್ರಾವಿಡ ಸಮಾಜದಲ್ಲಿ ಮಾತೃದೇವತೆಯ ಪೂಜಾರಿಣೀಯರಾಗಿದ್ದವರನ್ನು ಆರ್ಯರ ಪುರುಷ ಪ್ರಧಾನ ಸಮಾಜವು ಲೈಂಗಿಕ ಭೋಗವನ್ನು ಕಲ್ಪಿಸುವ ಮಧ್ಯವರ್ತಿಯನ್ನಾಗಿ ಮಾಡುವ ಹುನ್ನಾರದಲ್ಲಿ ದೇವದಾಸಿ ಎಂದು ಕರೆದು, ಧರ್ಮದ ಹೆಸರಿನಲ್ಲಿ ಸಮಾಜದ ಉಪಭೋಗದ ನೆಲೆಯಲ್ಲಿ ಬಳಸಪಡುವಂತಾಗಿ, ಸ್ತ್ರೀ ಸಂಬಂಧಿತ ಅನಿಷ್ಟ ಪದ್ಧತಿ ಬೆಳೆಯಲು ಕಾರಣವಾಯಿತು.

**ಅಡಿ ಟಿಪ್ಪಣಿಗಳು**

೦೧. ಡಾ. ವೆಂಕಟಗಿರಿ ದಳವಾಯಿ, ಕನ್ನಡ ರಂಗಭೂಮಿ ಮತ್ತು ಮಹಿಳೆ ಪು.೨,೩. ೧೯೯೯

೦೨. ಚನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೧೫೫, ೨೦೦೧

೦೩. ಡಾ.ಕೆ.ಜಿ.ಗುರುಮೂರ್ತಿ, ಧರ್ಮ ಮತ್ತು ರಾಜಕೀಯ, ಉಲ್ಲೇಖ: ಶೈಲಜ ಹಿರೇಮಠ, ಪಾತರದವರು, ಪು.೧೬, ೧೯೯೯

೦೪. ಡಿ.ಟಿ.ಬಸವರಾಜ್, ಕನ್ನಡ ಸಾಹಿತ್ಯದಲ್ಲಿ ವೇಶ್ಯಾ ಜೀವನ. ಪು. ೪೩, ೪೪

೦೫. Jogan Shankar, Devadasi cult, 1990, ಉಲ್ಲೇಖ: ಚನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೧೫೬, ೨೦೦೧

೦೬. ಕೆರೆಸೆನ್ ಭೂಮಸ್ಟೋರಿ, ನಿತ್ಯಸುಮಂಗಲಿ, ೧೯೮೬, ಉಲ್ಲೇಖ: ಚನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೧೫೬, ೨೦೦೧

ಅಧ್ಯಾಯ ೨

## ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನ ಪರಿಚಯ

ಪೀಠಿಕೆ

೨.೧ ಬಳ್ಳಾರಿ ಪದದ ನಿಷ್ಪತ್ತಿ

೨.೨ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಪರಿಸರ ಹಾಗೂ ಚಾರಿತ್ರಿಕ ಹಿನ್ನೆಲೆ

೨.೩ ಬುಡಕಟ್ಟು ಪದದ ಅರ್ಥ

೨.೪ ಜನಸಂಖ್ಯೆ

೨.೫ ಬೇಡ ಬುಡಕಟ್ಟಿನ ಪ್ರಮುಖ ಪಂಗಡಗಳು

೨.೬ ಸಾಮಾಜಿಕ ಸ್ಥಿತಿಗತಿ

೨.೭ ಆರ್ಥಿಕ ಸ್ಥಿತಿಗತಿ

೨.೮ ಶೈಕ್ಷಣಿಕ ಸ್ಥಿತಿಗತಿ

೨.೯ ಧಾರ್ಮಿಕ ಸ್ಥಿತಿಗತಿ

೨.೧೦ ರಾಜಕೀಯ ಸ್ಥಿತಿಗತಿ

## ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನ ಪರಿಚಯ

### ಪೀಠಿಕೆ

ಬಳ್ಳಾರಿ ಜಿಲ್ಲೆಯ ವಿಶೇಷತೆಯೆಂದರೆ, ಅತಿ ಹೆಚ್ಚಿನ ಸಂಖ್ಯೆಯಲ್ಲಿ ಬೇಡ ಸಮುದಾಯವನ್ನು ಕಾಣಬಹುದಾಗಿದೆ. ವಿಜಯನಗರ ಸಾಮ್ರಾಜ್ಯದಲ್ಲಿ ಕಾವಲುಗಾರರಾಗಿ, ಸೈನಿಕರಾಗಿ, ದಂಡನಾಯಕರಾಗಿ, ಪಾಳೆಯಗಾರರಾಗಿ, ಸಾಮಂತ ರಾಜರಾಗಿ ವಿವಿಧ ಸ್ಥಾನಮಾನಗಳನ್ನು ಹೊಂದಿದ್ದ ಬಗ್ಗೆ ಇತಿಹಾಸದ ಪುಟಗಳಲ್ಲಿ ದಾಖಲೆಗಳಿವೆ. ಪ್ರಸ್ತುತ ಬೇಡ ಬುಡಕಟ್ಟು ಸಮುದಾಯವು ಇಂದು ಸಾಮಾನ್ಯ ಬದುಕನ್ನು ಹೊಂದಿದ್ದು ಉನ್ನತ ಶಿಕ್ಷಣವನ್ನು ಪಡೆದ ಕೆಲವೇ ಕೆಲವರು ಉನ್ನತ ಹುದ್ದೆಗಳಲ್ಲಿದ್ದಾರೆ. ಆದರೆ ಹೆಚ್ಚಿನ ಸಂಖ್ಯೆಯ ಜನರು ಬಡತನದ ರೇಖೆಯಿಂದ ಕೆಳಗಿರುವುದು ಕಂಡು ಬಂದಿದೆ. ಬಹುಮುಖ್ಯವಾಗಿ ಈ ಸಮುದಾಯದ ಹೆಣ್ಣು ಮಕ್ಕಳಿಗೆ ಶಾಪವಾಗಿ ಕಾಡುತ್ತಿರುವ ದೇವದಾಸಿ ಪದ್ಧತಿಯು ಇಂದು ಇಡೀ ಸಮಾಜವನ್ನೇ ಆತಂಕಕ್ಕೀಡುಮಾಡಿದೆ. ಕರ್ನಾಟಕವು ರಾಷ್ಟ್ರದಲ್ಲೇ ಒಂದು ವಿಶಿಷ್ಟ ಸ್ಥಾನವನ್ನು ಹೊಂದಿರುವಂತೆ ಬಳ್ಳಾರಿ ಜಿಲ್ಲೆಯೂ ಪ್ರಾಚೀನ ಬೃಹತ್ ಶಿಲಾಯುಗದಿಂದ ಆರಂಭಗೊಂಡು ಆಧುನಿಕ ಯುಗವೆನಿಸಿದ ಇಂದಿನವರೆಗೂ ರಾಷ್ಟ್ರದಲ್ಲೇ ಏಕೆ ವಿಶ್ವದಲ್ಲೇ ಖ್ಯಾತಿಯನ್ನು ಪಡೆದಿರುವುದು ವಾಸ್ತವ ಸಂಗತಿಯಾಗಿದೆ.

### ೨.೧ ಬಳ್ಳಾರಿ ಪದದ ನಿಷ್ಪತ್ತಿ

'ಬಳ್ಳಾರಿ' ಎಂಬುದು, 'ಬಳರಿ', 'ಬಲ್ಲಹರಿ', 'ಬಳಾರಿ', ಇತ್ಯಾದಿಯಾಗಿ ಅನೇಕ ಕಡೆ ಬಳಕೆಗೊಂಡಿದೆ. ಇಲ್ಲಿಯ 'ಬಳರಿ' ಎಂಬುದು ಕಾಳಿಯ ಮತ್ತೊಂದು ಹೆಸರು 'ಬನದ ಬಳಾರಿ' 'ಬನದ ಬಳರಿ' ಎಂದು ಕರೆಯಿಸಿಕೊಳ್ಳುವುದರಿಂದ ಇದು ಬನದಲ್ಲೇ ಅಂದರೆ, ಅಡವಿಯಲ್ಲಿ ಸ್ಥಾಪಿಸಲ್ಪಟ್ಟಿದ್ದ 'ಸ್ತ್ರೀ' ದೇವತೆಯಾಗಿರಬಹುದೆಂದು ಡಾ.ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.

'ಬಳ್ಳಾರಿ'ಯೇ ಬಳ್ಳಾರಿಯ ಪ್ರಸಿದ್ಧ 'ದುರ್ಗಮ್ಮ' ದೇವಿ ಆಗಿರಬಹುದು. ಈ ಮಾಕಾಳಿ ಅಥವಾ ಬಳರಿ ಇಲ್ಲಿರುವುದರಿಂದ 'ಬಳ್ಳಾರಿ' ಎಂಬ ಹೆಸರು ಈ ಜಿಲ್ಲೆಗೆ ಅನ್ವರ್ಥವಾಗಿ ಬಂದಿರಬಹುದೆಂಬ ಅಭಿಪ್ರಾಯ ವಿದ್ವಾಂಸರದು. ಇದಕ್ಕೆ ಪೂರಕ ಎನ್ನುವಂತೆ, ಡಾ.ಎಂ.ಎಂ.ಕಲಬುರ್ಗಿಯವರು ಕೋಲಾರದಲ್ಲಿ 'ಕೋಲಾರಮ್ಮ' ಎಂಬ ಹೆಸರಿನ ದೇವತೆ ಇರುವುದರಿಂದ 'ಕೋಲಾರ' ಎಂಬ ಹೆಸರು ಬಂದಂತೆ. ಬಳ್ಳಾರಿಯಲ್ಲಿ 'ಬಳಾರಿಯಮ್ಮನ'

ಗುಡಿ ಇರುವುದರಿಂದ 'ಬಳ್ಳಾರಿ' ಎಂಬ ಹೆಸರು ಬಂದಿರಬಹುದು ಎಂದು ಅಭಿಪ್ರಾಯಪಡುತ್ತಾರೆ."[೧]

ಬಳ್ಳಾರಿಗೆ ಈ ಹೆಸರು ಬಂದಿರುವ ಬಗ್ಗೆ ಎರಡು ದಂತಕಥೆಗಳನ್ನು ಹೇಳುತ್ತಾರೆ. ಒಂದು 'ಬಲ' ಎನ್ನುವ ರಾಕ್ಷಸ ದೇವಕನ್ನಿಕೆಯರನ್ನು ಪೀಡಿಸುತ್ತಿದ್ದ, ಸಮಯದಲ್ಲಿ ದುರ್ಗಮ್ಮ ಪ್ರತ್ಯಕ್ಷಳಾಗಿ 'ಬಲ' ಎಂಬ ಆ ರಾಕ್ಷಸನನ್ನು ಸಂಹರಿಸಿ ದೇವ ಕನ್ನಿಕೆಯರನ್ನು ಕಾಪಾಡಿದಳಂತೆ. ಆ ರಾಕ್ಷಸನನ್ನು ಕೊಂದ ಸ್ಥಳವೇ ಬಲ+ಹರಿ= ಬಲ್ಲಾರಿ, ಬಳ್ಳಾರಿ ಎಂದಾಗಿದೆ. ಇದರ ಮತ್ತೊಂದು ವಿವರಣೆ ಈ ರೀತಿ ಇದೆ. ಬಳ್ಳಾರಿಯಲ್ಲಿದ್ದ 'ಮಲ್ಲಯ್ಯ'ನೆಂಬ ಶಿವಭಕ್ತ ಎಲ್ಲಿಯೇ ಇರಲಿ ಶಿವಪೂಜೆ ಮಾಡದೆ ಆಹಾರ ಸೇವಿಸುತ್ತಿರಲಿಲ್ಲ. ಒಮ್ಮೆ ವ್ಯಾಪಾರ ಮಾಡುತ್ತಾ ಊರೂರು ಅಲೆಯುತ್ತಿರುವಾಗ ಆತನಿಗೆ ಕಣ್ಣು ಬೇನೆಯಿಂದ ಕಣ್ಣು ಕಾಣದಂತಾಗಲು ಲಿಂಗ ಪೂಜೆ ನಿಂತಿತು. ಇದನ್ನರಿತ ಆತನ ಭಾವ ಮೈದುನು "ಜೀವಮಂ ತ್ಯಜಿಸುನಂಗಡ ಭಾವ" ಎಂದು ಕಟಕಿಯಾಡಿ ಒಂದು ಹುಲ್ಲು ಮಂಟಪವನ್ನು ಕಟ್ಟಿ ಅದರಲ್ಲಿ ಅಳೆಯುವ 'ಬಳ್ಳ' (ಸೇರು) ತಂದಿರಿಸಿ, ಶಿವ ಮಂದಿರವಿಲ್ಲಿದೆ ಬನ್ನಿ ಎಂದು ಕರೆತರಲು ಮಲ್ಲಯ್ಯ ಭಕ್ತಿಯಿಂದ "ನಮಃಶಿವಾಯ" ಎಂದು ಲಿಂಗ (ಬಳ್ಳ) ವ ಪೂಜಿಸಿ ಪ್ರಸಾದ ಸೇವಿಸಿದ. ಆಗ ಆತನ ಭಾವ ಮೈದುನ ಮಲ್ಲಭಾವ ಲಿಂಗವೆಂದು ಬಳ್ಳವನ್ನು ಪೂಜಿಸಿ ಹೊಟ್ಟೆಯಲ್ಲಿರಿಯುವಂತೆ, ಉಂಡ, ಹುಲ್ಲು ಗುಡಿಸಲಲ್ಲಿಯ ಬಳ್ಳತನ್ನಿರೋ, ಅಳೆಯಲಿಕ್ಕೆ, ಹಸಿವಿಗೆ, ಆಪತ್ತಿಗೆ ಅದುವೇ ದೈವ ಎಂದು ಅಪಹಾಸ್ಯ ಮಾಡಿದನಂತೆ. ಅದನ್ನು ಕೇಳಿ ಎಲವೋ ಅದು ಬಳ್ಳವಲ್ಲ. ಸಾಕ್ಷಾತ್ ಶಿವಲಿಂಗ ನಡಿಯಿರಿ ತೋರಿಸುವೆ ಎಂದು ಮಲ್ಲಯ್ಯ ಅವರೊಂದಿಗೆ ಅಲ್ಲಿಗೆ ಬಂದನು. ಹುಲ್ಲುಮಂಟಪ ದಿವ್ಯ ಮಂದಿರವಾಗಿತ್ತು. ಬಳ್ಳ ಲಿಂಗವಾಗಿತ್ತು. ಆ ಲಿಂಗವೇ 'ಬಳ್ಳೇಶ್ವರ ಲಿಂಗ' ಎಂದು ಹೆಸರು ಪಡೆಯಿತು. ಈ ಪವಾಡ ನಡೆದ (ಬಳ್ಳ+ಅರೆಯಾದ) ಸ್ಥಳವೇ ಬಳ್ಳಾರಿಯಾಗಿದೆ ಎನ್ನುತ್ತಾರೆ. ಹೀಗೆ ಈ ಪವಾಡ ನಡೆದ ಸ್ಥಳಕ್ಕೆ (ಬಳ್ಳ+ಅರೆ) (ಬಳ್ಳವಿದ್ದ ಕಲ್ಲು ಬಂಡಿ) ಬಳ್ಳಾರಿ ಎಂಬ ಹೆಸರಾಯಿತೆಂದು ಸ್ಥಳ ಪುರಾಣವಿದೆ.

"ಇತಿಹಾಸಕಾರರ ಸಂಶೋಧನೆಯಲ್ಲಿ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ತೆಕ್ಕಲಕೋಟೆ, ನಿಟ್ಟೂರು, ಗಾದಿಗನೂರು, ಹಲಗುಂದಿ ಮತ್ತು ಬಳ್ಳಾರಿ ಸ್ಥಳಗಳಲ್ಲಿ ಶಿಲಾಯುಗದ ಮಾನವನು ಬಳಸುತ್ತಿದ್ದ ಕೈಕೊಡಲಿ, ವಾಸಿಸುತ್ತಿದ್ದ ಗವಿ, ಕಣವಿಗಳು ಪತ್ತೆಯಾಗಿದೆ. ಇದರಿಂದಾಗಿ ಈ ಪ್ರಾಂತ್ಯವು ಅತ್ಯಂತ ಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಪ್ರದೇಶವಾಗಿದೆ ಎನ್ನುವುದು ಸ್ಪಷ್ಟ. ಹಾಗೇ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಹಾಗೂ ಶಾಸನಗಳಲ್ಲಿ ಈ ಬಳ್ಳಾರಿ ದೇವತೆಯ ಉಲ್ಲೇಖವಿದೆ. ಇವುಗಳಲ್ಲಿ ಬನದ ಬಳ್ಳಾರಿ ಎಂದು ಕರೆಯಲ್ಪಟ್ಟಿದ್ದು, ಊರ ಹೊರಗೆ ಅಡವಿಯಲ್ಲಿ ಇರುತ್ತಿದ್ದರಿಂದ ಈ ದೇವತೆಯನ್ನು ಈ ರೀತಿ ಕರೆಯಲಾಗುತ್ತಿತ್ತು. ಬಳ್ಳಾರಿಯಲ್ಲಿ ಪ್ರಸಿದ್ಧ ದೇವತೆಯೆಂದರೆ, ದುರುಗಮ್ಮ ಈ ದೇವಾಲಯವು ಪ್ರಾಚೀನವಾಗಿದ್ದು ಇದು ಬಳ್ಳಾರಿ ದುರುಗಮ್ಮ ಎಂದೇ ಪ್ರಸಿದ್ದಿಯಾಗಿದೆ "[೨].

### ೨.೨ ಬಳ್ಳಾರಿ ಜಿಲ್ಲೆಯ ಭೌಗೋಳಿಕ ಪರಿಸರ ಹಾಗೂ ಚಾರಿತ್ರಿಕ ಹಿನ್ನೆಲೆ

ಜನಸಾಮಾನ್ಯರಲ್ಲದೆ ಭಾರತೀಯ ಸಾಹಿತ್ಯದಲ್ಲಿಯೂ, ಮಹಾಕಾವ್ಯಗಳೆಂದು ಪರಿಗಣಿಸಲ್ಪಟ್ಟ ರಾಮಾಯಣ ಮತ್ತು ಮಹಾಭಾರತದಲ್ಲಿಯೂ ಬಳ್ಳಾರಿ ಪ್ರಾಂತ್ಯದ ಉಲ್ಲೇಖವಿದೆ. ಅಷ್ಟೇ ಅಲ್ಲ ಪೌರಾತ್ಯ ರಾಷ್ಟ್ರಗಳ

ಸಂಸ್ಕೃತಿಗೂ ಇಲ್ಲಿಯ ಸಂಸ್ಕೃತಿಗೂ ಹೋಲಿಕೆಯುಂಟೆಂದು, ಇಲ್ಲಿ ಲಭ್ಯವಾದ ಶಿಲಾಯುಗದ ವಸ್ತುವಿನ್ಯಾಸಗಳ ಆಧಾರದಿಂದ ಹೇಳಲಾಗಿದೆ. ಅಲ್ಲದೇ ಇಲ್ಲಿಯ ಜನರಿಗೆ ಲೋಹದ ಬಳಕೆಯೂ ಗೊತ್ತಿದ್ದಿತ್ತೆಂದು ತಿಳಿದು ಬರುತ್ತದೆ. ಈ ಜಿಲ್ಲೆಯಲ್ಲಿ ಅನೇಕ ಅರಸು ಮನೆತನಗಳು ಆಳ್ವಿಕೆ ನಡೆಸಿರುವುದು, ಅನಂತರ ಪಾಳೆಗಾರಿಕೆ ಪದ್ಧತಿ ಬ್ರಿಟಿಷರ ಆಡಳಿತದ ಮಾದರಿಯ ಸರ್ಕಾರದ ಆಡಳಿತ ಹೀಗೆ ಹಂತ ಹಂತವಾಗಿ ಆಡಳಿತವು ಬದಲಾವಣೆಯಾಗಿರುವುದು ಕಂಡು ಬರುತ್ತದೆ. ರಾಜಮನೆತನಗಳಲ್ಲಿ ಶಾತವಾಹನರು, ಅನಂತರ ಮೌರ್ಯರಿಂದ ಬಳ್ಳಾರಿ ಜಿಲ್ಲೆಯ ಇತಿಹಾಸ ಪ್ರಾರಂಭವಾಗುತ್ತದೆ. ತೆಕ್ಕಲಕೋಟೆಯ ಬಳಿಯ ನಿಟ್ಟೂರಿನಲ್ಲಿ ಇತ್ತೀಚೆಗೆ ಅಶೋಕನ ಎರಡು ಶಾಸನಗಳು ಬೆಳಕಿಗೆ ಬಂದಿವೆ. ಶಾತವಾಹನರು ಮೂಲತಃ ಬಳ್ಳಾರಿ ಜಿಲ್ಲೆಗೆ ಸೇರಿದವರೆಂದು ಕೆಲವು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಬನವಾಸಿಯ ಕದಂಬರು, ಈ ಜಿಲ್ಲೆಗಳನ್ನು ಆಳಿದರು. ಮುಂದೆ ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಅವರ ಸಾಮಂತರಾಗಿದ್ದ ನೊಳಂಬರು ಮತ್ತು ಗಂಗರ ಅಧೀನದಲ್ಲಿ ಈ ಜಿಲ್ಲೆಯ ಕೆಲವು ಭಾಗಗಳಿದ್ದವು. ಚಾಲುಕ್ಯರ ಕಾಲದಲ್ಲಿ ಈ ಜಿಲ್ಲೆಯ ಕಂಪ್ಲಿ ಕೆಲಕಾಲ ಪ್ರಾಂತೀಯ ರಾಜಧಾನಿಯಾಗಿತ್ತು. ಇದು ಮಹಮದ್ ಬಿನ್ ತೊಗಲಕ್‌ನ ಕಾಲದಲ್ಲಿ ಅಂತಿಮವಾಗಿ ಪತನವಾಯಿತು. ಮುಂದೆ ಸುಮಾರು ಮುನ್ನೂರು ವರ್ಷಗಳ ಕಾಲ ಇದೇ ದಕ್ಷಿಣ ಭಾರತವನ್ನೊಳಗೊಂಡು ಆಳಿದ ವಿಜಯನಗರ ಸಾಮ್ರಾಜ್ಯದ ರಾಜಧಾನಿ ನೆಲೆಗೊಂಡಿದ್ದು ಈ ಜಿಲ್ಲೆಯ ಹಂಪಿಯಲ್ಲಿ, ೧೫೬೫ರ ರಕ್ಕಸತಂಗಡಿ ಕದನದಲ್ಲಿ ವಿಜಯನಗರದ ಅರಸರು ಸೋತ ಮೇಲೆ ವಿಜಯನಗರ ಹಾಳು ಹಂಪೆಯಾಯಿತು. ಅನಂತರ ಈ ಜಿಲ್ಲೆ ಆದಿಲ್‌ಶಾಹಿ ಸುಲ್ತಾನರ ಹಲವು ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿತ್ತು. ತರುವಾಯ ಮರಾಠರು ಮತ್ತು ಮೊಗಲರು ಇಲ್ಲಿ ಅಧಿಪತ್ಯ ನಡೆಸಿದರು.

೧೭೯೨ ಶ್ರೀರಂಗಪಟ್ಟಣದ ಯುದ್ಧದ ಅನಂತರದ ಒಪ್ಪಂದದಂತೆ, ಬಳ್ಳಾರಿ ಜಿಲ್ಲೆ ಹೈದರಾಬಾದ್ ನಿಜಾಮರ ವಶಕ್ಕೆ ಹೋದರೂ ೧೮೦೦ರಲ್ಲಿ ಮತ್ತೊಂದು ಒಪ್ಪಂದವಾಗಿ ಬಳ್ಳಾರಿ ಜಿಲ್ಲೆ ಈಸ್ಟ್ ಇಂಡಿಯಾ ಕಂಪನಿಯ ವಶಕ್ಕೆ ಬಂದಿತು. ಕಂಪನಿಯು ಸರ್ ಥಾಮಸ್ ಮನ್ರೋರವರನ್ನು ಕಲೆಕ್ಟರ್ ಆಗಿಯೂ ಮತ್ತು ಕ್ಯಾಂಪ್ ಬೆಲ್‌ರವರನ್ನು ಬಳ್ಳಾರಿಯಲ್ಲಿ ಬ್ರಿಟಿಷ್ ಸೈನ್ಯಕ್ಕೆ ಸೈನ್ಯಾಧಿಕಾರಿಯನ್ನಾಗಿಯೂ ನೇಮಿಸಿತು. ೧೮೦೦ರಲ್ಲಿ ಮನ್ರೊ ಅಧಿಕಾರವಹಿಸಿಕೊಂಡ ಮೇಲೆ ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಕಡೆ ಪಾಳೇಗಾರರ ದಂಗೆಯೂ ತಲೆದೋರಿತ್ತು. ಇದರಲ್ಲಿ ಅನೇಕ ಪಾಳೇಗಾರರು ಸೈನಿಕ ಸೇವೆಯ ಶರತ್ತಿಗೆ ಒಳಪಟ್ಟು, ನಿಜಾಮ ಅಥವಾ ಹೈದರಾಲಿಗೆ ನೀಡುತ್ತಿದ್ದ ಕಪ್ಪಕ್ಕಿಂತ ಅತ್ಯಂತ ಹೆಚ್ಚಿನ ಕಪ್ಪವನ್ನು ನೀಡಬೇಕೆಂದು ಮನ್ರೋ ಆದೇಶಿಸಿದ್ದನು. ೧೮೦೧ರಲ್ಲಿ ಬಳ್ಳಾರಿಯಲ್ಲಿ ಸೈನಿಕ ಶಾಲೆಯನ್ನು ಸ್ಥಾಪಿಸಿ, ೧೮೫೮ರಲ್ಲಿ ಬಳ್ಳಾರಿಯಲ್ಲಿ ನಡೆದ ಸ್ವಾತಂತ್ರ್ಯ ಹೋರಾಟವನ್ನು ಬ್ರಿಟಿಷರು ಹತ್ತಿಕ್ಕಿದರು. ೧೮೮೫ರಲ್ಲಿ 'ಭಾರತೀಯ ರಾಷ್ಟ್ರೀಯ ಕಾಂಗ್ರೆಸ್' ಸ್ಥಾಪನೆಯಾಗಿ ಅದರ ಪ್ರಭಾವ ಬಳ್ಳಾರಿ ಜಿಲ್ಲೆಯಲ್ಲಿಯೂ ತಲೆದೋರಿತ್ತು. ಬಳ್ಳಾರಿಜಿಲ್ಲೆ ಬ್ರಿಟಿಷರ ಆಡಳಿತದಲ್ಲಿ ಮದ್ರಾಸ್ ಪ್ರಾಂತ್ಯಕ್ಕೆ ಸೇರಿತ್ತು. ೧೯೫೩ ರಲ್ಲಿ ಆಂಧ್ರಪ್ರದೇಶ ರಾಜ್ಯ ಸ್ಥಾಪನೆಯಾದಾಗ ಅಂದಿನ ಬಳ್ಳಾರಿ ಜಿಲ್ಲೆ ಮೈಸೂರು ಸಂಸ್ಥಾನಕ್ಕೆ ಸೇರಿತ್ತು. ಆ ಭಾಗವೇ ಇಂದು ಕರ್ನಾಟಕ ರಾಜ್ಯದಲ್ಲಿರುವ ಬಳ್ಳಾರಿ ಜಿಲ್ಲೆ, ಅಂದರೆ ಸ್ವಾತಂತ್ರ್ಯದ ಅನಂತರ ಭಾಷಾವಾರು ಪ್ರಾಂತ ರಚನೆ ಪ್ರಾರಂಭವಾಯಿತು. 'ವಾಂಛೂ' ಸಮಿತಿಯು ಬಳ್ಳಾರಿ ಜಿಲ್ಲೆಯ

ಆಲೂರು, ಆದವಾನಿ, ಹಾಗೂ ರಾಯದುರ್ಗ ತಾಲ್ಲೂಕುಗಳು ಆಂಧ್ರಕ್ಕೆ ವರ್ಗಾವಣೆಯಾಗಬೇಕೆಂದು ಶಿಫಾರಸ್ಸು ಮಾಡಿತು. ವಾಂಛೂ ಸಮಿತಿಯ ವರದಿಯನ್ನು ಆಧರಿಸಿ ಬಳ್ಳಾರಿ ಜಿಲ್ಲೆಯ ವಿಭಜನೆಯನ್ನು ಮಾರ್ಚ್ ೨೫, ೧೯೫೩ ರಂದು ಲೋಕಸಭೆಯಲ್ಲಿ ಘೋಷಿಸಲಾಯಿತು. ಈ ಸಮಿತಿಯು ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕುಗಳಾದ ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ, ಹೂವಿನಹಡಗಲಿ, ಸಂಡೂರು, ಹಾಗೂ ಪೂರ್ವಭಾಗದ ಶಿರಗುಪ್ಪ ತಾಲ್ಲೂಕು ಮತ್ತು ಮಲ್ಲಪುರ ಉಪತಾಲೂಕು ಇವುಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸಲು ಶಿಫಾರಸ್ಸು ಮಾಡಿತ್ತು. ಇದರಿಂದ ಉಂಟಾದ ಕೆಲ ಆಂತರಿಕ ಸಮಸ್ಯೆಗಳನ್ನು ಗಮನಿಸಿ ಭಾರತದ ರಾಷ್ಟ್ರಪತಿಗಳು ಹೈದರಾಬಾದ್ ಉಚ್ಛ ನ್ಯಾಯಾಲಯದ ನ್ಯಾಯಾಧೀಶರಾಗಿದ್ದ ಎಲ್.ಮಿಶ್ರಾರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿ, ಬಳ್ಳಾರಿ ಜಿಲ್ಲೆಯ ತಾಲೂಕಿನ ಪ್ರಶ್ನೆಯನ್ನು ಬಗೆಹರಿಸಲು ಕೇಳಿಕೊಂಡರು. ಚಾರಿತ್ರಿಕ ಹಾಗೂ ಆಡಳಿತಾತ್ಮಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮಿಶ್ರಾರವರು "ಬಳ್ಳಾರಿ ತಾಲ್ಲೂಕು ಸಂಪೂರ್ಣವಾಗಿ ಮೈಸೂರು ರಾಜ್ಯಕ್ಕೆ ಸೇರಬೇಕೆಂದು ಶಿಫಾರಸ್ಸು ಮಾಡಿದರು. ಅದರಂತೆ ಅನೇಕ ಸಮಸ್ಯೆಗಳ ನಡುವೆ ಅಕ್ಟೋಬರ್ ೦೧, ೧೯೫೩ ರಂದು ಬಳ್ಳಾರಿಯ ಏಳು ತಾಲ್ಲೂಕುಗಳು, ಅಂದರೆ ಬಳ್ಳಾರಿ, ಶಿರಗುಪ್ಪ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ, ಹೂವಿನಹಡಗಲಿ, ಮಲ್ಲಪುರ ತಾಲ್ಲೂಕುಗಳು ಮೈಸೂರು ರಾಜ್ಯದೊಂದಿಗೆ ವಿಲೀನಗೊಂಡ ಆ ಭಾಗವೇ ಇಂದು ಕರ್ನಾಟಕ ರಾಜ್ಯದಲ್ಲಿರುವ ಬಳ್ಳಾರಿ ಜಿಲ್ಲೆ"[೩]

ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಮಧ್ಯದಲ್ಲಿದ್ದು. ಪೂರ್ವಭಾಗದ ಮಧ್ಯದಲ್ಲಿ ದಕ್ಷಿಣೋತ್ತರದ ವರೆಗೆ ಹಬ್ಬಿದೆ. ಜಿಲ್ಲೆಯ ಉತ್ತರದಲ್ಲಿ ರಾಯಚೂರು, ಮತ್ತು ಕೊಪ್ಪಳ ಜಿಲ್ಲೆಗಳು. ಪಶ್ಚಿಮಕ್ಕೆ ಗದಗ, ಹಾವೇರಿ ಜಿಲ್ಲೆಗಳು, ದಕ್ಷಿಣದಲ್ಲಿ ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳು ಹಾಗೂ ಪೂರ್ವದಲ್ಲಿ ಆಂಧ್ರ ಪ್ರದೇಶದ ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ.

ಈ ಜಿಲ್ಲೆಯೂ ಪೂರ್ವ ಪಶ್ಚಿಮವಾಗಿ ೧೬೧ ಕಿ.ಮಿ. ಉದ್ದವಾಗಿಯೂ, ಉತ್ತರ ದಕ್ಷಿಣವಾಗಿ ೮೩.೭ ಕಿ.ಮಿ. ಅಗಲವಾಗಿಯೂ ಇದೆ. ನೈರುತ್ಯ ಈಶಾನ್ಯವಾಗಿ ಇದರ ಉದ್ದ ೧೮೭ ಕಿ.ಮಿ. ಜಿಲ್ಲೆ ಉತ್ತರ ಅಕ್ಷಾಂಶ ೧೪°-೩೦° ಹಾಗೂ ಪೂರ್ವ ರೇಖಾಂಶ ೭೫°-೪೦° ಮತ್ತು ೭೭°-೧೧° ಇವುಗಳ ನಡುವೆ ಇದೆ.

ಜಿಲ್ಲೆಯ ಪಶ್ಚಿಮ ವಾಯುವ್ಯ ಉತ್ತರ ಮತ್ತು ಈಶಾನ್ಯದಲ್ಲಿ ಗಡಿಯಾಗಿ ಹರಿಯುವ ತುಂಗಭದ್ರ ನದಿ ಈ ಜಿಲ್ಲೆಯನ್ನು ಪಶ್ಚಿಮದಲ್ಲಿ ಗದಗ ಹಾವೇರಿ ಜಿಲ್ಲೆಗಳಿಂದಲೂ, ಉತ್ತರದಲ್ಲಿ ರಾಯಚೂರು, ಕೊಪ್ಪಳ ಜಿಲ್ಲೆಗಳಿಂದಲೂ ಬೇರ್ಪಡಿಸುತ್ತದೆ. ಈ ಜಿಲ್ಲೆಯ ಹೆಚ್ಚು ಭಾಗ ತುಂಗಭದ್ರ ನದಿಯ ಕಡೆಗೆ ಉತ್ತರಕ್ಕೆ ಇಳಿಜಾರಾಗಿದೆ. ಜಿಲ್ಲೆಯ ವಾಯುವ್ಯದಿಂದ ಆಗ್ನೇಯದವರೆಗೂ ಹಬ್ಬಿರುವ ಸಂಡೂರು, ಬೆಟ್ಟಗಳು ಜಿಲ್ಲೆಯನ್ನು ಪೂರ್ವ ಪಶ್ಚಿಮವಾಗಿ ಎರಡು ಮುಖ್ಯ ಭೌಗೋಳಿಕ ವಿಭಾಗಗಳನ್ನಾಗಿ ವಿಂಗಡಿಸಿದೆ. ಪೂರ್ವಭಾಗ ಬಳ್ಳಾರಿ ಮತ್ತು ಸಿರುಗುಪ್ಪ ತಾಲೂಕುಗಳನ್ನು ಒಳಗೊಂಡಿದೆ. ಈ ಪ್ರದೇಶ ಸಮತಟ್ಟಾಗಿದ್ದು ಬಹುತೇಕ ಮರ ಗಿಡಗಳಿಲ್ಲದೇ ಹತ್ತಿ ಬೆಳೆಯಲು ಸೂಕ್ತವಾಗಿರುವ ಕಪ್ಪು ಮಣ್ಣನ್ನು ಹೊಂದಿರುವ ಪ್ರದೇಶಗಳಾಗಿವೆ. ಜಿಲ್ಲೆಯಲ್ಲಿನ ಮಣ್ಣಿನ ನಮೂನೆಗಳಿಗೆ ಬಂದಾಗ ಬಳ್ಳಾರಿ ತಾಲ್ಲೂಕಿನಲ್ಲಿ ಮಾತ್ರ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿದೆ. ಕಪ್ಪುಮಣ್ಣು ಮೂಲದಲ್ಲಿ ಫಲವತ್ತಾಗಿದ್ದು. ಹೆಚ್ಚಿನ ನೀರಿನ ಅಂಶವನ್ನು ಹಿಡಿದುಕೊಳ್ಳುವ

ಗುಣವನ್ನು ಹೊಂದಿದೆ. ಹೊಸಪೇಟೆ, ಹೂವಿನಹಡಗಲಿ, ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕುಗಳಲ್ಲಿ ಉಸುಕು ಮಿಶ್ರಿತ ಕೆಂಪು ಮಣ್ಣು ಮತ್ತು ಜಿಗುಟು ಮಣ್ಣುಗಳು ದೊರೆಯುತ್ತವೆ. ತುಂಗಭದ್ರ ಜಲಾಶಯದಲ್ಲಿನ ಕಪ್ಪು ಮಣ್ಣಿನಲ್ಲಿ ೨ ರಿಂದ ೪ ಅಡಿಗಳ ವರೆಗೆ ಶೇ ೪೫ ರಿಂದ ೫೫ ರಷ್ಟು ಜಿಗುಟು ಮಣ್ಣಿನಿಂದ ಕೂಡಿರುತ್ತದೆ. ಅಲ್ಲಲ್ಲಿ ಕಲ್ಲು ಬೆಟ್ಟಗಳು ಕಂಡು ಬರುತ್ತವೆ. ಈ ಜಿಲ್ಲೆಯಲ್ಲಿ ಹೆಚ್ಚು ಮಳೆ ಬೀಳದಿರುವ ಪ್ರಯುಕ್ತ ದಟ್ಟ ಅರಣ್ಯಗಳಲ್ಲಿ ಸಂಡೂರು ತಾಲ್ಲೂಕಿನ ಪ್ರದೇಶವನ್ನು ಬಿಟ್ಟರೆ ಉಳಿದ ಪ್ರದೇಶಗಳಲ್ಲಿ ಗಿಡ ಮರಗಳು ವಿರಳವೆಂದೇ ಹೇಳಬಹುದು. ಜಿಲ್ಲೆಯ ಒಟ್ಟು ಅರಣ್ಯ ಪ್ರದೇಶದ ವಿಸ್ತೀರ್ಣ ೯೭,೦೧೭ ಚ.ಕಿ.ಮೀ. ಗಳಿದ್ದು ಇದು ಜಿಲ್ಲೆಯ ಒಟ್ಟು ವಿಸ್ತೀರ್ಣದ ಶೇ.೧೬ರಷ್ಟಿದೆ. ಇಲ್ಲಿಯ ಅರಣ್ಯಗಳಲ್ಲಿ ಜೇನು, ದಿಂಡಿಗದ ಅಂಟು ದೊರೆಯುವುದಲ್ಲದೆ. ಕರಡಿ, ಚಿರತೆ, ಕಿರುಬ, ತೋಳ ಮೊದಲಾದ ಪ್ರಾಣಿಗಳು ಕಂಡು ಬರುತ್ತವೆ. ಸಂಡೂರಿನ ದರೋಜಿಯ ಹತ್ತಿರ ಕರಡಿ ಧಾಮವಿದೆ.

ಈ ಜಿಲ್ಲೆಯಲ್ಲಿ ಕಬ್ಬಿಣ, ಮ್ಯಾಂಗನೀಸ್, ತಾಮ್ರ, ಸೀಸದ ಅದಿರುಗಳು, ಜಿಪ್ಸಮ್, ಮ್ಯಾಗ್ನಸೈಟ್, ಗ್ರಾನೈಟ್ ಮತ್ತು ಬೆಣಚು ಕಲ್ಲು ಮೊದಲಾದ ಭೂಗರ್ಭ ಸಂಪನ್ಮೂಲಗಳಿವೆ. ಜಿಲ್ಲೆಯ ಹವಮಾನವು ವರ್ಷದಲ್ಲಿ ಹೆಚ್ಚಿನ ಭಾಗ ಶುಷ್ಕವಾಗಿದ್ದು, ಬೇಸಿಗೆಯ ಉಷ್ಣಾಂಶಗಳಿಂದ ಕೂಡಿರುತ್ತದೆ. ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ವಾತಾವರಣ ತಂಪಾಗಿರುತ್ತದೆ. ಚಳಿಗಾಲದಲ್ಲಿ ಕನಿಷ್ಠ ಉಷ್ಣಾಂಶವು ೯ ರಿಂದ ೧೦ ಸೆಂ. ಇದ್ದು. ಗರಿಷ್ಠ ಉಷ್ಣಾಂಶವು ೪೫ರವರೆಗೆ ಇರುತ್ತದೆ. ಬೇಸಿಗೆ ಕಾಲವು ಮಾರ್ಚ್‌ನಿಂದ ಮೇ ವರೆಗೆ ಇದ್ದು. ರಾಜ್ಯದಲ್ಲಿಯೇ ಹೆಚ್ಚು ಉಷ್ಣಾಂಶದಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಕನಿಷ್ಠ ೧೫ ಸೆಂ. ನಿಂದ ಗರಿಷ್ಠ ೪೫ ಸೆಂ. ವರೆಗೆ ಉಷ್ಣಾಂಶ ಇರುತ್ತದೆ. ಈ ಜಿಲ್ಲೆಯಲ್ಲಿ ವಾರ್ಷಿಕ ಸರಾಸರಿ ಮಳೆ ೨೮೦೮, ೨ ಮಿ.ಮೀ. ಇದ್ದು ಮಳೆ ಸಮ ಪ್ರಮಾಣದಲ್ಲಿ ಬೀಳುವುದಿಲ್ಲ. ಈ ಜಿಲ್ಲೆಯ ಮಳೆಯ ಪ್ರಮಾಣವನ್ನು ಈ ಕೆಳಗಿನ ಕೋಷ್ಟಕದಂತೆ ವಿವರಿಸಲಾಗಿದೆ.

**ಕೋಷ್ಟಕ ೧**

**ಬಳ್ಳಾರಿ ಜಿಲ್ಲೆಯ ವಾಡಿಕೆ ಮಳೆ, ವಾಸ್ತವಿಕ ಮತ್ತು ಮಳೆಯ ದಿನಗಳ ವಿವರ -೨೦೦೨ -೦೩**

| ಕ್ರ.ಸಂ. | ತಾಲ್ಲೂಕು | ವಾಡಿಕೆ ಮಳೆ ಮಿ.ಮೀ.ಗಳಲ್ಲಿ | ವಾಸ್ತವಿಕ ಮಳೆ ಮಿ.ಮಿ.ಗಳಲ್ಲಿ | ಮಳೆಯಾದ ದಿನಗಳು ಸರಾಸರಿ |
|---|---|---|---|---|
| ೧. | ಬಳ್ಳಾರಿ | ೫೨೫.೪ | ೩೮೬.೫ | ೩೦ |
| ೨. | ಹಗರಿಬೊಮ್ಮನಹಳ್ಳಿ | ೫೫೪.೫ | ೩೨೭.೯ | ೨೪ |
| ೩. | ಹಡಗಲಿ | ೬೧೫.೫ | ೩೫೨.೧ | ೨೯ |
| ೪. | ಹೊಸಪೇಟೆ | ೬೫೮.೩ | ೩೯೮.೬ | ೩೧ |
| ೫. | ಕೂಡ್ಲಿಗಿ | ೬೨೫.೩ | ೩೦೨.೫ | ೨೯ |
| ೬. | ಸಂಡೂರು | ೮೦೬.೮ | ೭೩೩.೩ | ೩೮ |
| ೭. | ಸಿರುಗುಪ್ಪ | ೬೪೫.೦ | ೩೦೭.೩ | ೨೬ |
| | ಒಟ್ಟು | ೪೪೩೩.೮ | ೨೮೦೮.೨ | ೨೦೭ |

(ಕೃಪೆ: ಬಳ್ಳಾರಿ ಜಿಲ್ಲೆಯ ಅಂಕಿ ಅಂಶಗಳ ನೋಟ. ೨೦೦೨-೦೩)

ಹೀಗೆ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಗೆ ಮಳೆ ಸಮ ಪ್ರಮಾಣದಲ್ಲಿ ಬೀಳುವುದಿಲ್ಲ. ಜಿಲ್ಲೆಯ ಒಟ್ಟು ವಿಸ್ತೀರ್ಣದ ಅರ್ಧ ಭಾಗದಷ್ಟು ಭೂಮಿಯನ್ನು ವ್ಯವಸಾಯಕ್ಕೆ ರೂಢಿಸಿಕೊಳ್ಳಲಾಗಿದೆ. ಇದರಲ್ಲಿ ಆಹಾರೇತರ ಬೆಳೆಗಳ ಪ್ರದೇಶವು ೨೪೦, ೬೨೮, ಹೆಕ್ಟೇರುಗಳು ಇಂದು ನೀರಾವರಿ ಸೌಕರ್ಯ ಪಡೆದಿರುವ ರಾಜ್ಯದ ಜಿಲ್ಲೆಗಳಲ್ಲಿ ಇದೂ ಒಂದಾಗಿದ್ದು, ತುಂಗಭದ್ರ ಜಲಾಶಯ ಯೋಜನೆಯಿಂದ ಹಸಿರು ಕ್ರಾಂತಿ ಪ್ರಾರಂಭವಾಯಿತು ಮೀನುಗಾರಿಕೆಗೂ ಅವಕಾಶ ದೊರೆತಿದೆ. ಇದರಲ್ಲಿ ಭತ್ತ, ಜೋಳ, ರಾಗಿ, ಸಜ್ಜೆ, ದ್ವಿದಳ ಧಾನ್ಯಗಳು ಕಬ್ಬು, ತೆಂಗು, ಕಡಲೆಕಾಯಿ ಮತ್ತು ಹತ್ತಿ, ಮುಂತಾದವನ್ನು ಬೆಳೆಯುತ್ತಾರೆ. ಹೀಗೆ ಬಳ್ಳಾರಿ ಜಿಲ್ಲೆ ವ್ಯವಸಾಯ ಪ್ರಧಾನವಾದರೂ ಕೈಗಾರಿಕಾ ಕ್ಷೇತ್ರದಲ್ಲೂ ಮುಂಚೂಣಿಯಲ್ಲಿದೆ. ಜಿಲ್ಲೆಯಲ್ಲಿ ೨೪೨ ವಿವಿಧ ಕಾರ್ಖಾನೆಗಳಿದ್ದು ೧೬೧೩೦ ಉದ್ಯೋಗಿಗಳಿರುತ್ತಾರೆ. ಸಂಡೂರು ತಾಲ್ಲೂಕಿನ ತೋರಣಗಲ್ಲಿನಲ್ಲಿ ಕೇಂದ್ರ ಸರ್ಕಾರದಿಂದ ಯೋಜಿತವಾಗಿರುವ ಖಾಸಗಿ ಸಂಸ್ಥೆಯ ಮಾಲಿಕತ್ವದಲ್ಲಿ ವಿಜಯನಗರ ಉಕ್ಕಿನ ಕಾರ್ಖಾನೆ ಜಿಲ್ಲೆಯ ಭಾರಿ ಉದ್ಯಮವಾಗಿದ್ದು. ಅದರ ಹೆಸರನ್ನು ಜಿಂದಾಲ್ ಸ್ಟೀಲ್ ವರ್ಕ್ಸ್ ಎಂದು ಕರೆಯಲಾಗುತ್ತಿದೆ.

ಬಳ್ಳಾರಿ ಜಿಲ್ಲೆಯು ೮,೪೨೦ ಚದರ ಕಿ.ಮಿ. ವಿಸ್ತೀರ್ಣವಿದ್ದು, ರಾಜ್ಯದ ಶೇಕಡ ೬ ರಷ್ಟು ವಿಸ್ತೀರ್ಣವನ್ನು ಹೊಂದಿ ೧೧ನೇ ಸ್ಥಾನದಲ್ಲಿದೆ. ಬಳ್ಳಾರಿಯಲ್ಲಿ ೭ ತಾಲ್ಲೂಕುಗಳಿದ್ದು, ೨ ನಗರ ಸಭೆ, ೧ ಪುರಸಭೆ, ೭ ಪಟ್ಟಣ ಪಂಚಾಯಿತಿಗಳು ೨೭ ಹೋಬಳಿಗಳು, ೧೮೯ ಗ್ರಾಮಪಂಚಾಯಿತಿಗಳು, ೫೨೪ ಜನವಸತಿ ಗ್ರಾಮಗಳು, ೩೦ ಜನವಸತಿ ಇಲ್ಲದ ಗ್ರಾಮಗಳನ್ನು ಹೊಂದಿದೆ. ಇವುಗಳ ವಿವರಗಳನ್ನು ಕೋಷ್ಠಕ ೪.೨ ರಲ್ಲಿ ವಿವರಿಸಲಾಗಿದೆ. ಹಾಗೂ ೭ ತಾಲ್ಲೂಕುಗಳನ್ನೊಳಗೊಂಡ ಬಳ್ಳಾರಿ ಜಿಲ್ಲೆಯ ಭೂಪಟವನ್ನು ೪.೨ ರಲ್ಲಿ ತೋರಿಸಲಾಗಿದೆ.

**ಕೋಷ್ಠಕ ೨**

**ಬಳ್ಳಾರಿ ಜಿಲ್ಲೆಯ ಸಾಮಾನ್ಯ ವಿವರಗಳು**

| ಕ್ರ.ಸಂ | ತಾಲ್ಲೂಕುಗಳ ಹೆಸರು | ಹೋಬಳಿ | ಜನರಿರುವ ಗ್ರಾಮಗಳು | ಜನರಿಲ್ಲದ ಗ್ರಾಮಗಳು | ನಗರಸಭೆ | ಪುರಸಭೆ ಘೋಷಿತ | ಪಟ್ಟಣ ಪಂಚಾಯಿತಿ | ಗ್ರಾಮ ಪಂಚಾಯಿತಿ |
|---|---|---|---|---|---|---|---|---|
| ೦೧ | ಬಳ್ಳಾರಿ | ೫ | ೧೦೦ | ೪ | ೧ | ೦ | ೦ | ೪೦ |
| ೦೨ | ಹೆಚ್.ಬಿ.ಹಳ್ಳಿ | ೪ | ೫೪ | ೪ | ೦ | ೦ | ೦ | ೨೨ |
| ೦೩ | ಹಡಗಲಿ | ೩ | ೫೪ | ೧ | ೦ | ೦ | ೧ | ೨೪ |
| ೦೪ | ಹೊಸಪೇಟೆ | ೪ | ೭೧ | ೪೧೧ | ೧ | ೧ | ೧ | ೨೩ |
| ೦೫ | ಕೂಡ್ಲಿಗಿ | ೪ | ೮೪ | ೨ | ೦ | ೦ | ೨ | ೩೩ |
| ೦೬ | ಸಂಡೂರು | ೩ | ೭೭ | ೧೨ | ೦ | ೦ | ೧ | ೨೧ |
| ೦೭ | ಸಿರುಗುಪ್ಪ | ೪ | ೮೪ | ೩ | ೦ | ೦ | ೨ | ೨೬ |
| | ಒಟ್ಟು | ೨೭ | ೫೨೪ | ೩೦ | ೨ | ೧ | ೭ | ೧೮೯ |

(ಕೃಪೆ: ಬಳ್ಳಾರಿ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೨-೦೩)

೨೦೧೧ರ ಜನಗಣತಿ ಪ್ರಕಾರ ರಾಜ್ಯದಲ್ಲಿ ಒಟ್ಟು ೨೪,೬೩,೯೮೬ ಪರಿಶಿಷ್ಟ ವರ್ಗದವರಿದ್ದು ರಾಜ್ಯದ ಒಟ್ಟು ಜನಸಂಖ್ಯೆಯ ಶೇಕಡ ೬.೫೫ ರಷ್ಟಾಗುವರು. ೧೯೯೧ರ ನಂತರ ನಾಯ್ಕ, ಬೇಡ, ವಾಲ್ಮೀಕಿ ಪಂಗಡಗಳ ಸೇರ್ಪಡೆಯಿಂದ ಬುಡಕಟ್ಟು ಜನರ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿರುವುದು ಕಂಡು ಬಂದಿದೆ.

**೨.೩ ಬುಡಕಟ್ಟು ಪದದ ಅರ್ಥ**

ಭೂಮಿಯಲ್ಲಿ 'ಜೀವಿ' ಪ್ರಥಮವಾಗಿ ಕಾಣಿಸಿಕೊಂಡಿದ್ದು ೩ ಮಿಲಿಯನ್ ವರ್ಷಗಳ ಹಿಂದೆ ಹಾಗೂ ಮೊಟ್ಟಮೊದಲ ಪ್ರಾಣಿಗಳು ಕಾಣಿಸಿಕೊಂಡಿದ್ದು. ೪೦೦ ದಶಲಕ್ಷ ವರ್ಷಗಳ ಹಿಂದೆ ಅಷ್ಟೇ, ಕ್ರಿ.ಪೂ. ೧೦ ಸಾವಿರ ವರ್ಷಗಳ ಹಿಂದೆ ಮಾನವ ಪೀಳಿಗೆಗಳು ಗುಂಪುಗಳ ರೂಪದಲ್ಲಿದ್ದವು ಎಂಬುದನ್ನು ಮಾನವಶಾಸ್ತ್ರೀಯ ಅಧ್ಯಯನಗಳು ನಿರೂಪಿಸುವುದರಿಂದ ಅವಕ್ಕೂ ಹಿಂದೆಯೇ ಮಾನವ ಜೀವಿಯ ಅಸ್ತಿತ್ವ ಇತ್ತು ಎಂಬುವುದು ಖಚಿತವಾಗುತ್ತದೆ. ಅನಂತರ ಗುಂಪು, ಗುಂಪಾಗಿ, ಪಂಗಡಗಳಾಗಿ, ಬುಡಕಟ್ಟುಗಳಾಗಿ, ಬೆಳೆದುಬಂದ ಬಗೆ ನಿಜಕ್ಕೂ ಕುತೂಹಲಕಾರಿಯಾಗಿದೆ. ಇವರುಗಳನ್ನು ಆಯಾ 'ದೇಶದ ಮೂಲ ನಿವಾಸಿಗಳು' ಎಂದು ಕರೆಯುವರು. ಭಾರತದಲ್ಲಿ 'ಯುರೋಪಿಯನ್ನರು' ಕಾಲಿಡುವ ಮೊದಲು 'ಆರ್ಯರು' ಅವರಿಗಿಂತ ಮೊದಲು ದ್ರಾವಿಡರೂ ಇದ್ದರಷ್ಟೇ. ದ್ರಾವಿಡರನ್ನು ಭಾರತದ ಆದಿವಾಸಿಗಳೆನ್ನಬಹುದು. ಅನಂತರ ವಲಸೆ ಬಂದ ಆರ್ಯರು ಆದಿವಾಸಿಗಳೊಡನೆ ಸೆಣಸಿ, ಅವರಲ್ಲಿ ಅನೇಕರನ್ನು ನಿರ್ನಾಮ ಮಾಡಿದರು. ಅಳಿದುಳಿದ ಆದಿವಾಸಿಗಳು ಕಾಡು ಮೇಡು ಸೇರಿದರು. 'ಬಲವಿದ್ದವನು ಮಾತ್ರ ಬದುಕಬಲ್ಲ' ಎಂಬ ನೀತಿಯಂತೆ ಅಸಮಾನತೆ, ಅನ್ಯಾಯ, ಅಧರ್ಮ ಎಲ್ಲಾ ಸಮಾಜಗಳಲ್ಲೂ ಪ್ರಮುಖವಾಗಿ ಕಂಡುಬರುವ ಮಾನವ ಜೀವನದ ಮೂಲಭೂತವಾದ ವಾಸ್ತವ ಸಂಗತಿಯಾಗಿವೆ. ಅರಿಸ್ಟಾಟಲ್ ಹೇಳುವಂತೆ "ಪ್ರಾಕೃತಿಕವಾಗಿಯೂ ಮಾನವ ಸಮಾಜದಲ್ಲಿ 'ಒಡೆಯ-ಗುಲಾಮ' ಎಂಬ ಅಸಮಾನತೆ ಇದೆ" ಎಂಬುದು ಇದಕ್ಕೆ ಪೂರಕವಾಗಿದ್ದು ಆದಿವಾಸಿಗಳು ಕಾಡನ್ನು ಸೇರಿ ಗಿರಿಜನರು ಎಂದು ಕರೆಯಿಸಿಕೊಂಡರು.

ಇಂದು 'ಬುಡಕಟ್ಟು' ಎಂಬ ಪದವನ್ನು ಪ್ರಪಂಚದ ವಿವಿಧ ಭಾಗಗಳಲ್ಲಿ ವಾಸಿಸುತ್ತಿರುವ ವಿಭಿನ್ನ ರೀತಿಯ ಜನರ ಸಮೂಹಕ್ಕೆ ಉಪಯೋಗಿಸಲಾಗುತ್ತಿದೆ. ಅದರ ಬದಲು ಬುಡಕಟ್ಟು ಎಂಬ ಪದಕ್ಕೆ ಪರ್ಯಾಯವಾಗಿ 'ಆದಿವಾಸಿ' ಎಂಬ ಪದವನ್ನು ಬಳಸುವುದು ಸೂಕ್ತವಾದುದೆಂದು ಹಲವಾರು ಮಾನವಶಾಸ್ತ್ರದ ಅಧ್ಯಯನಕಾರರು ವಿವರಿಸಿದ್ದಾರೆ"[೪].

"ಯಾವ ಜನಾಂಗ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸಹಜವಾಗಿ ಬದುಕಲು ಬಯಸುವುದೋ, ಪ್ರಕೃತಿ ಜನ್ಯ ಉತ್ಪನ್ನಗಳನ್ನೇ ಭಕ್ಷಿಸಲು ಯತ್ನಿಸುವುದೋ, ತನ್ನದೇ ಆದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲಿಯೇ ಜೀವನ ನಡೆಸುವುದೋ, ಆ ಸಮುದಾಯಕ್ಕೆ ಆದಿವಾಸಿ ಅಥವಾ ಬಡಕಟ್ಟು ಎಂದು ಕರೆಯಬಹುದು".

ಡಬ್ಲ್ಯೂ.ಜೆ.ಫೆರ್ರಿಯವರ ಪ್ರಕಾರ 'ಒಂದು ಸ್ಥಳದಲ್ಲಿ ನೆಲೆಸಿಕೊಂಡು ಒಂದೇ ಭಾಷೆಯನ್ನು ಮಾತನಾಡುವ ಜನಗಳ ಗುಂಪಿಗೆ ಆದಿವಾಸಿಗಳೆಂದು' ಕರೆಯಬಹುದೆಂದು ಹೇಳಿದ್ದಾರೆ. ಮಾನವಶಾಸ್ತ್ರದ ನಿಘಂಟಿನ ಪ್ರಕಾರ

‘ಒಂದು ಸಾಮಾಜಿಕ ಸಮೂಹವು ನಿರ್ದಿಷ್ಟ ನೆಲೆ, ಭಾಷೆ, ಸಾಂಸ್ಕೃತಿಕ ಸಾಮ್ಯತೆ ಮತ್ತು ಸಂಘಟನಾ ಸ್ವರೂಪವನ್ನು ಹೊಂದಿದ್ದರೆ ಅಂತಹ ಸಮೂಹವು ಬುಡಕಟ್ಟು ಎನ್ನಿಸಿಕೊಳ್ಳುತ್ತದೆ’.

ಭಾರತದ ಇಂಪೀರಿಯಲ್ ಗೆಜಟಿಯರ್‌ನಲ್ಲಿ ನಮೂದಿಸಿರುವ ಪ್ರಕಾರ, “ಒಂದೇ ವಾಸ ಪ್ರದೇಶವನ್ನು ಹೊಂದಿ ಏಕರೂಪ ಪದ್ಧತಿಗಳನ್ನು ಅನುಸರಿಸುತ್ತಾ ನಾಡಿನ ಸಮಾಜದ ಭಾಗವಾಗದೇ ಪ್ರತ್ಯೇಕವಾಗಿರುವ ಜನರ ಯಾವುದೆ ಗುಂಪಿಗೆ ‘ಬುಡಕಟ್ಟು’ ಎಂಬ ಪದವನ್ನು ಅನ್ವಯಿಸಬಹುದೆನ್ನಲಾಗಿದೆ”.

ಆದಿವಾಸಿ ಸಮುದಾಯಗಳ ಬಗ್ಗೆ ಆಳವಾದ ಸಂಶೋಧನೆಯನ್ನು ನಡೆಸಿ, ಬುಡಕಟ್ಟು ಜನರ ಬಗ್ಗೆ ಮಾಹಿತಿಯನ್ನು ಹೊರಗಿನ ಪ್ರಪಂಚಕ್ಕೆ ಚೆಲ್ಲಿದ ಕೀರ್ತಿ ವಿದ್ವಾಂಸರಾದ ಥರ್ಸ್ಟನ್, ವೆರಿಯರ್ ಎಲ್ವಿನ್, ಮಿಲ್ಸ್, ಸ್ಮಿತ್, ಎ.ಎ.ಡಿ.ಲೂಯಿಸ್, ಕೆ.ರಂಗಾಚಾರಿ, ಎಲ್.ಕೆ.ಅಯ್ಯರ್, ಡಿ.ಎಂ.ಮುಜುಂದಾರ್ ಮತ್ತು ಎಚ್.ವಿ. ನಂಜುಂಡಯ್ಯನವರಿಗೆ ಸಲ್ಲುತ್ತದೆ. ೧೯೦೯ರಲ್ಲಿ ಎಡ್ವರ್ಡ್ ಥರಸ್ಟನ್ ಮತ್ತು ಕೆ.ರಂಗಾಚಾರಿ ಇವರಿಂದ ಬಿಡುಗಡೆಯಾದ ‘Cast and tribes of southern India’ ಎಂಬ ೭ ಸಂಪುಟಗಳ ಕೃತಿಗಳು ದಕ್ಷಿಣ ಭಾರತದ ಅನೇಕ ಬುಡಕಟ್ಟುಗಳ ಬಗ್ಗೆ ಮಾಹಿತಿಯನ್ನು ಒಳಗೊಂಡ ಉತ್ತಮ ಕೃತಿಯಾಗಿದೆ.

ಭಾರತದ ಸಂವಿಧಾನವು ೧೯೫೦ರಲ್ಲಿ ಜಾರಿಗೆ ಬಂದಿದ್ದು, ಅಂದಿನಿಂದ ಆಡಳಿತದ ಎಲ್ಲಾ ವಿಷಯಗಳನ್ನು ರಾಜ್ಯ, ಕೇಂದ್ರ ಹಾಗೂ ಸಮವರ್ತಿ ಪಟ್ಟಿಯಲ್ಲಿ ಸೇರಿಸಿರುವುದು ಸರಿಯಷ್ಟೇ ಆದರೆ ಬುಡಕಟ್ಟು ಅಭಿವೃದ್ಧಿ ಅಥವಾ ಬುಡಕಟ್ಟು ನಿರ್ವಹಣೆಯ ವಿಷಯ ಯಾವುದೇ ಪಟ್ಟಿಯಲ್ಲಿ ಸೇರದೆ ಇರುವುದು ಆಶ್ಚರ್ಯಕರ ಸಂಗತಿಯಾಗಿದೆ. ಆದರೆ ಬುಡಕಟ್ಟು ಜನರು ಇರುವ ಪ್ರದೇಶವನ್ನು ೫ ಮತ್ತು ೬ನೇ ಅನುಸೂಚನೆಯ ಅಡಿಯಲ್ಲಿ ಸೇರಿಸಲಾಗಿದೆ.

ಭಾರತದ ಸಂವಿಧಾನದ ಯಾವುದೇ ಭಾಗದಲ್ಲಿ ‘ಬುಡಕಟ್ಟು’ ಎಂಬ ಪದವನ್ನು ವಿವರಿಸುವುದಿಲ್ಲ. ಆದರೆ ಭಾರತ ಸಂವಿಧಾನದ ೩೪೨ರ ಅನುಚ್ಛೇದದಲ್ಲಿ ಅನುಸೂಚಿತ ಪಂಗಡದವರು ಬುಡಕಟ್ಟು ಸಮುದಾಯದ ಬುಡಕಟ್ಟು ಜನಾಂಗವೆಂದು ವಿವರಿಸಲಾಗಿದೆ.

ಮನುಕುಲಶಾಸ್ತ್ರಜ್ಞರು ಬಳಸುವಂತೆ, ಆದಿವಾಸಿ ಎಂಬುದು ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಗುರುತಿಸಬಹುದಾದ ಸಮುದಾಯವನ್ನು ನಿರ್ದೇಶಿಸುತ್ತದೆ. ಭಾರತದ ಬುಡಕಟ್ಟುಗಳಲ್ಲಿ ಬಹುಪಾಲು ಶತಮಾನಗಳಿಂದಲೂ ಹಿಂದೂ ಸಂಸ್ಕೃತಿಯೊಂದಿಗೆ, ಸಂಪರ್ಕ ಹೊಂದಿದ್ದು ಅವುಗಳಿಂದ ಪ್ರಭಾವಿತವಾಗಿವೆ. ಆಡಳಿತದ ಉದ್ದೇಶಗಳಿಗಾಗಿ, ಪ್ರತ್ಯೇಕತೆ ಮತ್ತು ಆರ್ಥಿಕ ಹಿಂದುಳಿಕೆಗಳ ಆಧಾರದಿಂದ ಕೆಲ ಹಿಂದೂ ಸಮುದಾಯಗಳನ್ನು ಆದಿವಾಸಿ ಬುಡಕಟ್ಟು ಎಂದು ವರ್ಗೀಕರಿಸಿರುವ ಹಲವು ಉದಾಹರಣೆಗಳೂ ಇವೆ.

ಬಯಲು ನಗರ ಮತ್ತು ಭಾರತದ ಇತರ ಭಾಗಗಳ ಜನರಲ್ಲಿ ಕಾಣದ ಅನೇಕ ಗುಣಗಳನ್ನು ನಾವು ಆದಿವಾಸಿಗಳಲ್ಲಿ ಕಂಡಿದ್ದೇವೆ ಎಂದು ಜವಹರಲಾಲ್ ನೆಹರೂರವರು ಹೇಳಿರುವ ಮಾತು ಸತ್ಯವಾಗಿದ್ದು, ಶಿಷ್ಟ ಜನರು ಭಾರತದ ಸಂಸ್ಕೃತಿಯನ್ನು ವಿಚಾರ ಮಾಡುವಾಗ ಜಾತಿಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಬುಡಕಟ್ಟು ಸಂಸ್ಕೃತಿಯನ್ನು ಕಡೆಗಣಿಸಿರುವುದು ಕಂಡುಬರುತ್ತದೆ. ಕಾರಣ ನಗರ ಮತ್ತು ಗ್ರಾಮಗಳಿಗಿಂತ ಭಿನ್ನ

ಸಂಸ್ಕೃತಿಗಳನ್ನು ಹೊಂದಿದ್ದು, ವೆರಿಯರ್ ಎಲ್ವಿನ್ ಅವರು ಗಿರಿಜನ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದು ಮಾತ್ರವಲ್ಲದೇ ಅದನ್ನು ಬೆಳೆಸಿಕೊಂಡು ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡೇ ಭಾರತದ ಪ್ರಜೆಯಾಗಿ ಬದುಕಲು ಸರ್ಕಾರ ಮತ್ತು ಜನ ಅವಕಾಶ ಮಾಡಿಕೊಡಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಇವರು ಕಾಡಿನಲ್ಲಿ ಸ್ವೇಚ್ಛೆಯಾಗಿ ಅಲೆದಾಡುತ್ತಾ, ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸುತ್ತಾ, ಸಾಧ್ಯವಾದಲ್ಲಿ ಕುಮರಿ ಬೇಸಾಯ ಅಥವಾ ಒಂದಿಷ್ಟು ಬೆಳೆಯನ್ನು ಮಾಡುತ್ತಾ ತಮ್ಮ ಪಾಡಿಗೆ ತಾವು ಅರಣ್ಯದಲ್ಲಿ ಇದ್ದವರು.

ಬ್ರಿಟಿಷರು ಈ ದೇಶಕ್ಕೆ ಬಂದಾಗ, ಇಲ್ಲಿನ ಭೂಮಿಯನ್ನು ಅಳೆದು ಎಲ್ಲೆಲ್ಲಿ ಏನೇನಿವೆ, ಇಲ್ಲಿನ ಜನ ಯಾರ್ಯಾರು? ಅವರ ಸಾಮಾಜಿಕ ನಡೆವಳಿ, ಧಾರ್ಮಿಕ ಆಚರಣೆಗಳು, ಇಷ್ಟಾನಿಷ್ಟಗಳು, ಯಾವುವು ಇತ್ಯಾದಿಗಳ ಮೇಲೆ ವ್ಯವಸ್ಥಿತ ದಾಖಲಾತಿ ಮಾಡಿದರಷ್ಟೆ. ಇದನ್ನು ಯುರೋಪಿಯನ್ನರ ಜ್ಞಾನದಾಹವೆಂದೂ, ನಮ್ಮ ಭಾಷೆ, ಸಂಸ್ಕೃತಿಗಳ ಮೇಲೆ ನಮಗೆ ಇಲ್ಲದ ಆಸಕ್ತಿಯನ್ನು ವಿದೇಶಿಗರು ತೋರಿಸಿದರು ಎಂದು ಅಮಾಯಕವಾಗಿ ಹೇಳುವವರು ಉಂಟು. ಆದರೆ ವಾಸ್ತವವಾಗಿ ಬ್ರಿಟಿಷರ ಈ ಅಧ್ಯಯನಗಳು, ಭಾರತವನ್ನು ವಶಪಡಿಸಿಕೊಂಡು ರಾಜಕೀಯವಾಗಿ ಆಳಲು ಮತ್ತು ಆರ್ಥಿಕವಾಗಿ ಲೂಟಿ ಮಾಡಲು ಅಗತ್ಯವಾದ ತಿಳಿವಳಿಕೆಗಾಗಿ ಮಾಡಿದಂತಹವುಗಳಾಗಿದ್ದು, ಇವರು ಆಯುಧ ಬಳಸುವ ಜನರ ಕಲೆಗಳನ್ನು ವೃತ್ತಿಗಳನ್ನು ನಿರ್ಬಂಧಿಸಿದರು. ಉದಾಹರಣೆಗೆ ಹಲಗಲಿಯ ಬೇಡರನ್ನು ನಿರಾಯುಧರಾಗಿಸುವ ಕಾನೂನನ್ನು ತರುವ ಮೂಲಕ ಆ ಬುಡಕಟ್ಟಿನವರ ಕಲೆಗಳನ್ನು ವೃತ್ತಿಗಳನ್ನು ನಿಷೇಧಿಸಿದರು ಎಂಬುದನ್ನು ನೆನೆಯಬಹುದಾಗಿದೆ. ಬ್ರಿಟಿಷರ ತಂತ್ರದಿಂದಾಗಿ, ಭೂಮಾಲಿಕರ, ಪಟ್ಟಭದ್ರರ ಹಿಡಿತದಲ್ಲಿ ಸಿಲುಕಿಕೊಂಡು, ಕಾಡುಗಳು ಕ್ರಮೇಣ ಕಾಫಿ, ಏಲಕ್ಕಿ, ಎಸ್ಟೇಟುಗಳಾಗಿ, ಅಡಿಕೆ, ತೋಟಗಳಾಗಿ, ಬತ್ತ ಮತ್ತು ಕಬ್ಬಿನ ಗದ್ದೆಗಳಾಗಿ, ಬದಲಾಗತೊಡಗಿದವು. ಕಾಡಿನ ಉತ್ಪನ್ನಗಳಿಂದ ವಂಚಿತರಾಗಿ, ಮೇಲ್ವರ್ಗದ ದೌರ್ಜನ್ಯಕ್ಕೆ ಒಳಗಾಗಿ, ಅತಂತ್ರರಾದರು. ನಾಡಿನ ವ್ಯವಸ್ಥೆ ಗಿರಿಜನರನ್ನು ಎರಡು ಅಂಶಗಳಿಂದ ನಿಯಂತ್ರಿಸಿದೆ. ೧. ಗಿರಿಜನರ ಆತ್ಮಸ್ಥೈರ್ಯದ ನಾಶ. ೨. ನಿಸರ್ಗದ ನೇರ ನಾಶ. ಇವುಗಳ ಮೂಲಕ ಅರಣ್ಯ ಇಲಾಖೆಯು ಭೂಮಾಲಿಕರ ತೋಟಗಳ ವಿಸ್ತರಣೆಗಾಗಿ, ಇವರ ಗುಡಿಸಲುಗಳನ್ನು ಹಿಂದಕ್ಕೆ ಸರಿಸುತ್ತಾ, ಒಕ್ಕಲೆಬ್ಬಿಸಿದರು. ಅವರ ಪ್ರಿಯವಾದ ಆಹಾರ, ಬೇಟೆಯಾಡುವುದನ್ನು ನಮ್ಮ ವ್ಯವಸ್ಥೆ ಕಿತ್ತುಕೊಂಡಿತು.

ಬ್ರಿಟಿಷರ ಏಕ ರೀತಿಯ ಆಳ್ವಿಕೆ, ಕೈಗಾರಿಕಾ ಕ್ರಾಂತಿ, ರೈಲ್ವೆ ಸಂಪರ್ಕ, ರಸ್ತೆಗಳನ್ನು ಮಾಡಲು ಕಾಡನ್ನು ಕಡಿದು ಸಂಪರ್ಕ ಸಾಧನಗಳನ್ನು ಹೆಚ್ಚಿಸಿ, ಪರ್ವತಾರಣ್ಯಗಳಲ್ಲಿದ್ದೂ ಬುಡಕಟ್ಟುಗಳ ಜನ ಅನಿವಾರ್ಯವಾಗಿ ಇತರ ಜನಗಳ ಸಂಪರ್ಕಕ್ಕೆ ಬರಬೇಕಾಯಿತು. ಅವರಿಗೆ ಸೇರಿದ್ದ ಅರಣ್ಯ ಪ್ರದೇಶಗಳನ್ನು ಅವರಿಂದ ಕಿತ್ತುಕೊಂಡ ಪರಿಣಾಮ ಬೇಸಾಯ ಭೂಮಿ ಇಲ್ಲದಂತಾಗಿ, ಈ ಸಂದರ್ಭದಲ್ಲಿ ಬ್ರಿಟಿಷ್‌ರು ಚಹಾ ತೋಟಗಳ ಒಡೆಯರಾದರು. ಗಣಿ ಮಾಲಿಕರಾದರು. ಇವುಗಳಲ್ಲಿ ಕೆಲಸ ಮಾಡಲು ಕೆಲಸಗಾರರು ಬೇಕಾಯಿತು. ಆ ವೇಳೆಗಾಗಲೇ ಭೂಮಿಯನ್ನು ಕಳೆದು ಕೊಂಡಿದ್ದ ಬುಡಕಟ್ಟಿನ ಜನ ಚಹಾ ತೋಟಗಳಲ್ಲಿ, ಗಣಿಗಳಲ್ಲಿ ಕೆಲಸಗಾರರಾಗಿ ಸೇರಿದರು. ಇದರಿಂದಾಗಿ ದಿನ ನಿತ್ಯ ಇತರ ಜನರ ಸಂಪರ್ಕಕ್ಕೆ ಬಂದು, ಬುಡಕಟ್ಟಿನ ಜನ ತಮ್ಮ ಸಂಸ್ಕೃತಿಯ ಮೂಲ ಸ್ವರೂಪವನ್ನೇ ಕಳೆದುಕೊಳ್ಳುತ್ತಾ ಇತರ ಹಿಂದೂ ಜಾತಿಗಳ ಸಂಪ್ರದಾಯಗಳನ್ನು

ಅನುಸರಿಸತೊಡಗಿದರು. ನಿರ್ದಿಷ್ಟ ಕೆಲಸಗಳಿಲ್ಲದೇ ಬಹುಪಾಲು ಬುಡಕಟ್ಟು ಜನರು ಕೂಲಿಗಳಾಗಿ ದುಡಿಯತೊಡಗಿ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದರು. ವ್ಯಾಪಾರಿ ಮತ್ತು ಬಂಡವಾಳಶಾಹಿಗಳ ಬಳಿ ಸಾಲ ಮಾಡಿ ತಮ್ಮಲ್ಲಿದ್ದ ಅಲ್ಪಸ್ವಲ್ಪ ಪದಾರ್ಥಗಳನ್ನು ಕಳೆದುಕೊಂಡು, ಕಡು ಬಡತನ ಅನುಭವಿಸಬೇಕಾಯಿತು. ಇವರಿಗೆ ಮೊದಲಿದ್ದ ಸುಖ, ಶಾಂತಿ, ಆತ್ಮಸ್ಥೈರ್ಯ, ಆತ್ಮಾಭಿಮಾನಗಳು ಇಲ್ಲದಂತಾಗಿ, ತಮ್ಮ ಆಸ್ತಿಯಾಗಿದ್ದ ಭೂಮಿ ಮತ್ತು ಸಂಸ್ಕೃತಿಯನ್ನು ಕಳೆದುಕೊಂಡು ಅನಾಥರಾದರು. ಆದರೆ ದಟ್ಟವಾದ ಪರ್ವತ ಪ್ರದೇಶದಲ್ಲಿದ್ದವರು ಮಾತ್ರ ತಮ್ಮ ಮೂಲ ಸಂಸ್ಕೃತಿ ಉಳಿಸಿಕೊಂಡು ಹಿಂದೂ ಧರ್ಮದ ಪ್ರಭಾವದಿಂದ ತಪ್ಪಿಸಿಕೊಂಡಿದ್ದರಿಂದಲೇ ಇಂದಿಗೂ ವಿಶಿಷ್ಟ ಸಂಸ್ಕೃತಿಯನ್ನು ರೂಪಿಸಿಕೊಂಡಿವೆ. ಬೇರೆಯವರು ನಾಡಿನ ಜನರೊಂದಿಗೆ ಬೆರೆತು ಹಿಂದೂಗಳಾಗಿ ಪರಿವರ್ತಿತರಾಗಿದ್ದಾರೆ. ಜಾತಿ ವ್ಯವಸ್ಥೆಗೆ ಸೇರ್ಪಡೆಗೊಂಡಿದ್ದು. ಇದು ಸಾಮಾಜಿಕ ಶೋಷಣೆಯ ಸಾಧನವಾಗಿ ಪರಿಣಮಿಸಿ, ಹುಟ್ಟು, ಮದುವೆ, ಸಾವು, ಈ ಮೂರು ಸಂದರ್ಭಗಳಲ್ಲಿ ಬ್ರಾಹ್ಮಣರ ಪೌರೋಹಿತಕ್ಕೆ ಅವಕಾಶ ಮಾಡಿಕೊಟ್ಟು, ತಮ್ಮ ಮೂಲ ಸ್ವರೂಪ, ಹಾಗೂ ಸ್ವಾತಂತ್ರ್ಯ ಕಳೆದುಕೊಂಡಿದ್ದಾರೆ.

ಯಾವುದೇ ಸಮೂಹವನ್ನು ಬುಡಕಟ್ಟು ಪಂಗಡಕ್ಕೆ ಸೇರಿಸುವ ಅಧಿಕಾರ ರಾಷ್ಟ್ರಾಧ್ಯಕ್ಷರಿಗಿದ್ದು, ಭಾರತ ಸಂವಿಧಾನದ ಅನುಚ್ಛೇದದ ೩೪೧ (೧)ರಲ್ಲಿ ನೀಡಿದ್ದು, ಅವರು ಕಾಲ ಕಾಲಕ್ಕೆ ಸಾರ್ವಜನಿಕರಿಗೆ ಅಧಿಸೂಚನೆಯನ್ನು ಹೊರಡಿಸುವುದರ ಮೂಲಕ ಕ್ರಮ ಕೈಗೊಳ್ಳಲಾಗುತ್ತದೆ. ಅದೇ ರೀತಿ ಅನುಚ್ಛೇದ ೩೪೨ (೨) ರಲ್ಲಿ ಭಾರತದ ಸಂಸತ್ತಿಗೆ ಹೆಚ್ಚಿನ ಅಧಿಕಾರ ನೀಡಿ ಯಾವುದೇ ಜನ ಸಮೂಹವನ್ನು ಬುಡಕಟ್ಟು ಪಂಗಡದಿಂದ ತೆಗೆಯುವ ಅಥವಾ ಸೇರಿಸುವ ಅಧಿಕಾವಿದೆ. ರಾಜ್ಯ ಸರ್ಕಾರಗಳು ಬುಡಕಟ್ಟು ಜನಾಂಗದವರಿಗೆ ಆಗುತ್ತಿರುವ ಸಾಮಾಜಿಕ ಅನ್ಯಾಯ ಹಾಗೂ ಎಲ್ಲಾ ರೀತಿಯ ಶೋಷಣೆಗಳನ್ನು ನಿಲ್ಲಿಸಿ ಅವರನ್ನು ಸಂರಕ್ಷಿಸಬೇಕಾಗಿವೆ. ಅದಕ್ಕಾಗಿ ಅನುಚ್ಛೇಧ ೨೪೪ ರಲ್ಲಿ ಭಾರತದ ರಾಷ್ಟ್ರಪತಿಗಳಿಗೆ ಬುಡಕಟ್ಟು ಸಾಂದ್ರವಾಗಿರುವ ಪ್ರದೇಶಗಳನ್ನು ಅನುಸೂಚಿತ ಪ್ರದೇಶಗಳೆಂದು ಘೋಷಿಸಿ ವಿಶೇಷ ಸೌಲಭ್ಯಗಳನ್ನು ಒದಗಿಸುವ ಅಧಿಕಾರವಿದೆ.

ಭಾರತ ಸಂವಿಧಾನದ ೫ನೇ ಅನುಸೂಚಿಯಲ್ಲಿ ಅನುಸೂಚಿತ ಪ್ರದೇಶದಲ್ಲಿ ವಾಸಿಸುವ ಬುಡಕಟ್ಟು ಜನರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಸುಧಾರಿಸಲು ಕೆಲವು ನಿಯಮಾವಳಿಯನ್ನು ರಚಿಸಲು ರಾಜ್ಯದ ರಾಜ್ಯಪಾಲರುಗಳಿಗೆ ಅನಿರ್ದಿಷ್ಟ ಅಧಿಕಾರಗಳನ್ನು ನೀಡಲಾಗಿದೆ. ೫ನೇ ಅನುಸೂಚಿಯಡಿಯಲ್ಲಿ ರಾಜ್ಯ ಸರ್ಕಾರದ ರಾಜ್ಯಪಾಲರ ಅನುಮತಿ ಮೇರೆಗೆ 'ಬುಡಕಟ್ಟು ಸಲಹಾ ಸಮಿತಿ' ರಚಿಸಲು ಅವಕಾಶವನ್ನು ಮಾಡಲಾಗಿದೆ.

ಧೀರೇಂದ್ರನಾಥ ಮುಜುಂದಾರ್ ಭಾರತದಲ್ಲಿ ಪರಿವರ್ತನೆಗೆ ಒಳಗಾಗಿರುವ ಬುಡಕಟ್ಟುಗಳೆಲ್ಲಿ ೩ ಹಂತಗಳನ್ನು ಗುರುತಿಸಿದ್ದಾರೆ.

೧. ಜಾತಿಗಳಾಗಿ ಸಂಪೂರ್ಣ ಪರಿವರ್ತಿತವಾಗಿರುವ ಬುಡಕಟ್ಟುಗಳು.

೨. ಹಿಂದೂಗಳೊಡನೆ ಭಾಗವಹಿಸಿಯೂ ತಮ್ಮ ಸಂಪ್ರದಾಯಗಳನ್ನು ನಂಬಿಕೆಗಳನ್ನು ಉಳಿಸಿಕೊಂಡಿರುವ ಬುಡಕಟ್ಟುಗಳು.

೩. ಹಿಂದೂ ಧರ್ಮದ ಪ್ರಭಾವಕ್ಕೆ ಒಳಗಾಗದೇ ಆ ಧರ್ಮದ ದಬ್ಬಾಳಿಕೆಯನ್ನು ಸಹಿಸದೆ ತಮ್ಮ ಸ್ವಾತಂತ್ರ್ಯಕ್ಕಾಗಿ ಪ್ರತ್ಯೇಕವಾಗಿ ಹೋರಾಡುತ್ತಿರುವ ಬುಡಕಟ್ಟುಗಳು.

ಮೇಲ್ಕಾಣಿಸಿದ ಈ ಎರಡನೆಯ ಹಂತಕ್ಕೆ ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನವರು ಸೇರಿದ್ದಾರೆ.

**೨.೪ ಜನಸಂಖ್ಯೆ**

೨೦೦೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ೨೭ ಜಿಲ್ಲೆಗಳು ೧೭೫ ತಾಲ್ಲೂಕುಗಳು ೨೭೦೨೪ ಗ್ರಾಮಗಳನ್ನು ಹೊಂದಿದ್ದು, ೫,೨೮,೫೦,೫೬೨ ಜನಸಂಖ್ಯೆಯನ್ನು ಹೊಂದಿದೆ. ಅವುಗಳಲ್ಲಿ ಪ್ರತಿ ಜಿಲ್ಲೆಯಲ್ಲಿರುವ ಪರಿಶಿಷ್ಟ ವರ್ಗಗಳ ಜನಸಂಖ್ಯೆಯ ವಿವರವನ್ನು ಅನುಬಂಧ ೨.೧ರಲ್ಲಿ ವಿವರಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆ ೨೦,೨೭,೧೪೦, ಕರ್ನಾಟಕ ರಾಜ್ಯದಲ್ಲಿ ಕಂಡು ಬರುವ ಒಟ್ಟು ೨೪,೬೩,೯೦೬, ಇದರಲ್ಲಿ ಬಳ್ಳಾರಿ ಜಿಲ್ಲೆಯೂ ೩,೬೪,೬೩೮ ಅತಿಹೆಚ್ಚು ಬುಡಕಟ್ಟು ಜನರನ್ನು ಹೊಂದಿದೆ. ಇದು ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇಕಡ ೧೮ ರಷ್ಟಾಗುತ್ತದೆ. ಬುಡಕಟ್ಟು ಜನರು ವಾಸವಾಗಿರುವುದು ಹಾಗೂ ರಾಜ್ಯದಲ್ಲಿಯೇ ಅತ್ಯಂತ ಹೆಚ್ಚಿನ ಬುಡಕಟ್ಟು ಜನರನ್ನು ಹೊಂದಿರುವ ಜಿಲ್ಲೆ ಬಳ್ಳಾರಿ ಜಿಲ್ಲೆ ಎಂಬುದು ೨೦೦೧ರ ಜನಗಣತಿಯ ವರದಿಯಲ್ಲಿ ದಾಖಲಾಗಿದೆ.

ಹಿಂದೆ ಬಹು ಸಂಖ್ಯಾತ ಬುಡಕಟ್ಟುಗಳು ಆಹಾರಕ್ಕಾಗಿ ಬೇಟೆಯನ್ನು ಅವಲಂಬಿಸಿದ್ದವು. ಈ ಮೂಲ ಬುಡಕಟ್ಟುಗಳು ಮೂಲತಃ ಅಲೆಮಾರಿ ಬುಡಕಟ್ಟುಗಳಾಗಿದ್ದವು. ಬೇಟೆ ತಡೆಯ ಕಾನೂನುಗಳು, ಕರ್ನಾಟಕ ಪ್ರಾಣಿಬಲಿ ತಡೆ ಅಧಿನಿಯಮ, ಮರಗಳ ಸಂರಕ್ಷಣಾ ಅಧಿನಿಯಮ, ೧೯೮೭ರ ಭಾರತ ಮೀನುಗಾರಿಕೆ ಅಧಿನಿಯಮಗಳು ಅರಣ್ಯ ಮತ್ತು ವನ್ಯಜೀವಿಗಳ ರಕ್ಷಣೆಗೆ ಅವಕಾಶವನ್ನು ಕಲ್ಪಿಸಿ ಬೇಟೆಯನ್ನು ನಿಷೇಧಿಸಲಾಗಿದೆ. ಬೇಟೆಯನ್ನು ನಂಬಿದ ಬುಡಕಟ್ಟುಗಳ ಬದುಕು ಅತಂತ್ರವಾಯಿತಲ್ಲದೆ, ಅನಿವಾರ್ಯವಾಗಿ ಪರ್ಯಾಯ ಮಾರ್ಗಗಳನ್ನು ಕಂಡು ಕೊಳ್ಳಬೇಕಾಯಿತು.

ಅಭಿವೃದ್ಧಿಯ ಹೆಸರಿನಲ್ಲಿ ಅಭಯಾರಣ್ಯಗಳ ರಕ್ಷಣೆ, ಉದ್ಯಾನವನ, ಗಿರಿಧಾಮ, ಪಕ್ಷಿಧಾಮ, ಕೈಗಾರಿಕಾ ಘಟಕಗಳು ಮತ್ತು ಆಣೆಕಟ್ಟೆಗಳ ನಿರ್ಮಾಣ ಕಾರ್ಯಗಳು ಬುಡಕಟ್ಟು ಜನರು ವಾಸಿಸುತ್ತಿದ್ದ ಪ್ರದೇಶದಲ್ಲಿ ರೂಪಗೊಳ್ಳುತ್ತಿವೆ. ಇದಲ್ಲದೇ ಕೆರೆಕಟ್ಟೆಗಳಲ್ಲಿ ಹೂಳು ಹೆಚ್ಚಾಗಿ, ಕೆರೆಗಳ ಮೂಲ ಉದ್ದೇಶ ನಾಶವಾಗಿದ್ದು, ಇಂದು ಪಶುಪಾಲನೆ ಕುಂಠಿತವಾಗಿದೆ. ಹೀಗಾಗಿ ಪಶುಪಾಲನೆಯನ್ನು ನಂಬಿದ್ದ ಕೆಲವು ಬುಡಕಟ್ಟುಗಳು ಅನಿವಾರ್ಯವಾಗಿ ಬೇರೆ ವೃತ್ತಿಗಳನ್ನು ಅವಲಂಬಿಸಿದ ಕಾರಣ ಪಶುಪಾಲನೆಯನ್ನು ಒಂದು ಕಸಬಾಗಿ ಉಳಿದಿಲ್ಲ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ ೨೭.೧ ರಷ್ಟು ಬುಡಕಟ್ಟುಗಳಿವೆ. ಅತಿ ಹೆಚ್ಚು ಬುಡಕಟ್ಟುಗಳ ಜನಸಂಖ್ಯೆಯನ್ನು ಹೊಂದಿರುವ ತಾಲ್ಲೂಕು ಇದಾಗಿದೆ. ಹೂವಿನಹಡಗಲಿ ತಾಲ್ಲೂಕಿನಲ್ಲಿ ಕೇವಲ ಶೇ ೭.೮ ರಷ್ಟು ಅತಿ ಕಡಿಮೆ ಬುಡಕಟ್ಟು ಜನಸಂಖ್ಯೆಯಿದೆ. ಅವುಗಳ ಪೂರ್ಣ ವಿವರವನ್ನು ಕೆಳಕಂಡ ಕೋಷ್ಟಕ ೦೩ ರಲ್ಲಿ ವಿವರಿಸಲಾಗಿದೆ.

### ಕೋಷ್ಟಕ ೩

ಬಳ್ಳಾರಿ ಜಿಲ್ಲೆಯ ತಾಲ್ಲೂಕುವಾರು ಮತ್ತು ಲಿಂಗವಾರು ಬುಡಕಟ್ಟು ಜನಸಂಖ್ಯೆಯ ವಿವರ ೨೦೦೧

| ಕ್ರ.ಸಂ. | ತಾಲ್ಲೂಕು | ಜನಸಂಖ್ಯೆ | | | ಪರಿಶಿಷ್ಟ ಪಂಗಡ ಜನಸಂಖ್ಯೆ | | | ಬುಡಕಟ್ಟು |
|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಜನಸಂಖ್ಯೆ |
| ೧ | ಬಳ್ಳಾರಿ | ೩೧೯೦೦೮ | ೩೦೬೪೮೬ | ೬೨೫೪೯೪ | ೫೧೬೧೯ | ೫೦೩೪೨ | ೧೦೧೯೬೧ | ೧೬.೩% |
| ೨ | ಹೆಚ್.ಬಿ.ಹಳ್ಳಿ | ೮೦೭೭೦ | ೭೯೧೧೬ | ೧೫೯೮೮೬ | ೧೦೯೨೪ | ೧೦೭೯೨ | ೨೧೭೧೬ | ೧೩.೬% |
| ೩ | ಹಡಗಲಿ | ೮೫೦೫೧ | ೮೩೦೬೭ | ೧೬೮೧೧೮ | ೬೬೦೫ | ೬೪೬೯ | ೧೩೦೭೪ | ೭.೮% |
| ೪ | ಹೊಸಪೇಟೆ | ೧೮೯೬೭೪ | ೧೮೫೨೭೫ | ೩೭೪೯೪೯ | ೨೯೯೫೨ | ೩೦೫೩೯ | ೬೦೪೯೧ | ೧೬.೧% |
| ೫ | ಕೂಡ್ಲಿಗಿ | ೧೩೯೨೦೨ | ೧೩೨೯೮೧ | ೨೭೨೧೮೩ | ೩೭೨೯೮ | ೩೬೩೫೨ | ೭೩೬೫೦ | ೨೭.೧% |
| ೬ | ಸಿರುಗುಪ್ಪ | ೧೧೭೭೩೧ | ೧೧೭೬೧೩ | ೨೩೫೩೪೪ | ೨೦೯೫೦ | ೨೧೦೫೯ | ೪೨೦೦೯ | ೧೭.೯% |
| ೭ | ಸಂಡೂರು | ೯೮೨೭೮ | ೯೨೮೮೮ | ೧೯೧೧೬೬ | ೨೬೩೧೪ | ೨೫೪೨೩ | ೫೧೭೩೭ | ೨೪.೧% |

(ಕೃಪೆ: ೨೦೦೧ರ ಜನಗಣತಿ)

ಬಳ್ಳಾರಿ ಜಿಲ್ಲೆಯಾದ್ಯಂತ ವಾಸಮಾಡುತ್ತಿರುವ ಬುಡಕಟ್ಟುಗಳನ್ನು ೧೯೯೧ರ ಜನಗಣತಿಯಲ್ಲಿ ೩೧ ಬುಡಕಟ್ಟುಗಳನ್ನು ದಾಖಲು ಮಾಡಲಾಗಿದೆ. ಈ ೩೧ ಬುಡಕಟ್ಟು ಪಂಗಡಗಳಲ್ಲಿ ಇಡೀ ಜಿಲ್ಲೆಯ ಬುಡಕಟ್ಟು ಪಂಗಡಗಳ ಜನಸಂಖ್ಯೆಯಲ್ಲಿ ಶೇ.೯೭ ರಷ್ಟು ವಾಲ್ಮೀಕಿ, ನಾಯಕ, ಬೇಡ ಪಂಗಡಕ್ಕೆ ಸೇರಿದ್ದು. ಉಳಿದ ಶೇಕಡ ೩ರಷ್ಟು ಇತರೆ ೩೦ ಬುಡಕಟ್ಟುಗಳಿಗೆ ಸೇರಿದೆ. ಅವುಗಳೆಂದರೆ ೧. ಅಡಿಯನ್, ೨. ಬಾರ್ಡಾ, ೩. ಭಿಲ್, ಭಿಲ್‌ಗರಾಸಿಯ, ಧೋಳಿ ಭಿಲ್, ಡುಂಗ್ರಿಗರಾಸಿಯ, ಮೇವಾಸಿ ಭಿಲ್, ರಾವಲ್‌ಭಿಲ್, ತಾಡ್ವಿಭಿಲ್, ಭಾಗಾಲಿಯ, ಭಿಲಾಲ, ಪಾವರಾ, ವಾಸವಾ, ವಾಸವೆ, ೪. ಚೆಂಚು, ಚೆಂಚವಾರ್, ೫. ಡಬ್ಲ, ತಲವಿಯ, ಹಲ್ಪತಿ, ೬. ಗೊಂಡ್, ನಾಯ್ಕ್ ಪೋಡ್, ರಾಜ ಗೊಂಡ್, ೭. ಗೌಡಲು, ೮. ಹಕ್ಕಿಪಿಕ್ಕಿ, ೯. ಹಸಲರು, ೧೦. ಇರುಳರ್, ೧೧. ಇರುಳಿಗ, ೧೨. ಜೇನು ಕುರುಬ, ೧೩. ಕಾಡು ಕುರುಬ, ೧೪. ಕಥೋಡಿ, ಕಟಕಾರಿ, ಢೋರ್ ಕಥೋಡಿ, ಢೋರ್ ಕಟಕಾರಿ, ಸೋನ್ ಕಥೋಡಿ, ಸೋನ್ ಕಟಕಾರಿ, ೧೫. ಕೋಳಿ ಧೋರ್, ಟೋಕ್ರೆ ಕೋಳಿ, ಕೋಲ್ಚಾ, ಕೊಲ್ಗ, ೧೬. ಕೊಂಡ ಕಾಪುಸ್, ೧೭. ಕೊರಗ, ೧೮. ಕೋಯ, ಭಿನೆ ಕೋಯ, ರಾಜಕೋಯ, ೧೯. ಕುರುಮನ್ಸ್, ೨೦. ಮಹಾಮಲಸರ್, ೨೧. ಮಲೈ ಕುಡಿ, ೨೨. ಮಲಸರ್, ೨೩. ಮಲಯೆ ಕಂಡಿ,೨೪. ಮಲೆರು, ೨೫. ಮೇದ, ಮೇದಾರಿ, ಬುರುಡ, ಗೌರಿಗ, ೨೬. ಪಳ್ಳಿಯಾನ್, ೨೭. ಪಾರ್ದಿ, ಅಡ್ವಿಚಂಚೇರ್, ಫಾನ್ಸಪಾರ್ಧಿ, ಹರಣಶಿಕಾರಿ, ೨೮. ರಾತ್ವಾ, ೨೯. ವಿಟೋಲಿಯ, ಕೋತ್ವಾಲಿಯ ಬರೋಡಿ, ೩೦.ಯೆರವ.

ಈ ಮೂವತ್ತು ಪರಿಶಿಷ್ಟ ಪಂಗಡಗಳ ಜೊತೆಯಲ್ಲಿ (೩೧) ನಾಯಕ, ಬೇಡ, ಬೇಡರ್, ವಾಲ್ಮೀಕಿ, ಎಂದಿದ್ದು, ಇವರನ್ನು ಬೇಡರು, ತಳವಾರ, ಬೇಡ, ನಾಯಕ ಮಕ್ಕಳು, ನಾಯಕವಾಡು, ರಾಮೋಶಿ, ವಾಲ್ಮೀಕಿ ಮಕ್ಕಳು, ಬೋಯರೆಂದು ಹಲವಾರು ಹೆಸರುಗಳಿಂದ ಕರೆಯುತ್ತಾರೆ. ಇವರು ತಾವು ವಾಲ್ಮೀಕಿ ಮಹಾಋಷಿಯ ವಂಶದವರೆಂದು ಹೇಳಿಕೊಳ್ಳುತ್ತಾರೆ. ಉತ್ತರ ಕರ್ನಾಟಕದ ಎಲ್ಲಾ ಭಾಗಗಳಲ್ಲಿಯೂ ಇವರು ಹೆಚ್ಚಾಗಿ

ಕಂಡುಬರುತ್ತಾರೆ. ಇವರು ಕನ್ನಡ, ತೆಲುಗು ಮಿಶ್ರಿತ ಕನ್ನಡ, ಮಾತನಾಡುತ್ತಾರೆ.

**೨.೫ ಬೇಡ ಬುಡಕಟ್ಟಿನ ಪ್ರಮುಖ ಪಂಗಡಗಳು**

**೧. ಊರ ನಾಯಕ, ಅಥವಾ ಊರ ಬೇಡ:** ಹೆಸರೇ ಸೂಚಿಸುವಂತೆ ಊರುಗಳಲ್ಲಿ ವಾಸ ಮಾಡುವ ಬೇಡರನ್ನು ಊರ ಬೇಡರೆನ್ನುವರು. ಇವರು ತಮ್ಮ ಕಸುಬಾದ ಪಶುಪಾಲನೆ, ಬೇಟೆಗಾರಿಕೆ, ಪಾಳೇಗಾರಿಕೆಗಳು ಕ್ರಮೇಣ ಕಡಿಮೆಯಾಗಿರುವುದರಿಂದ ಇಂದು ನಾಗರಿಕತೆಯ ಬದುಕಿಗೆ ಹತ್ತಿರವಾಗಿ ನಾನಾ ಉದ್ಯೋಗಗಳನ್ನು ಕೈಗೊಂಡು ಬದುಕುತ್ತಿದ್ದಾರೆ.

**೨. ಮ್ಯಾಸ ನಾಯಕರು ಅಥವಾ ಮ್ಯಾಸಬೇಡ:** "ಊರಿನ ಹೊರಗೆ ಅಥವಾ ಅರಣ್ಯಗಳಲ್ಲಿ ಅಥವಾ ಕಾಡುಗಳಲ್ಲಿ ವಾಸ ಮಾಡುವ ಬೇಡರನ್ನು ಮ್ಯಾಸಬೇಡ ಅಥವಾ ಅಡವಿ ಬೇಡರೆಂದು ಕರೆಯುತ್ತಾರೆ"[೫]. 'ಮ್ಯಾಸರು' ಅಂದರೆ ಮೇಯಿಸುವವರು ಎನ್ನುವ ಅರ್ಥವಿದೆ.

ಬಹು ಸಂಸ್ಕೃತಿಗಳ ನಾಡಾದ ಕರ್ನಾಟಕದಲ್ಲಿ ಹಲವು ವೈವಿಧ್ಯಮಯವಾದ ಬುಡಕಟ್ಟುಗಳು ನೆಲೆನಿಂತಿವೆ. ಸಂಸ್ಕೃತಿ, ಜನಸಂಖ್ಯಾ ಪ್ರಮಾಣ ತುಂಬ ಹೆಚ್ಚಾಗಿರುವ ಹಲವು ಬುಡಕಟ್ಟುಗಳಲ್ಲಿ ಮ್ಯಾಸ ಬೇಡ ನಾಯಕರು ಕೂಡ ತುಂಬಾ ಮುಖ್ಯವಾದವರು. ತಜ್ಞರ ಪ್ರಕಾರ ಇದು ಪ್ರಾಚೀನ ಬುಡಕಟ್ಟಾಗಿದೆ. ರಾಮಾಯಣ ಮತ್ತು ಮಹಾಭಾರತದ ಕಾಲದಲ್ಲೇ ಭದ್ರವಾದ ಅಸ್ತಿತ್ವವನ್ನು ಪಡೆದಿತ್ತು ಎಂಬುದಕ್ಕೆ ಸಂಸ್ಕೃತಿ ಮತ್ತು ಸಾಹಿತ್ಯದೊಳಗೆ ಹಲವು ಆಧಾರಗಳಿವೆ. ಅತ್ಯಂತ ವಿಶಿಷ್ಟವಾದ ಬುಡಕಟ್ಟಾದ ಇದಕ್ಕೆ ಪುಳಿಂದ, ಭಿಲ್ಲ, ಕಿರಾತ, ವ್ಯಾದ, ಶಿಬಿರ, ನಿಷಾದ, ಎಂಬಿತ್ಯಾದಿ ಹೆಸರುಗಳು ಚಾಲ್ತಿಯಲ್ಲಿದ್ದವು. ಈಗ ಬೇಡರು, ನಾಯಕರು, ಮ್ಯಾಸ ನಾಯಕರು, ಮ್ಯಾಸ ಬೇಡರು, ತಳವಾರ, ವಾಲ್ಮೀಕಿ, ಪಾಳೇಗಾರ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿದೆ. ತನ್ನ ಒಡಲಲ್ಲಿ ಅನೇಕ ನಿಗೂಢವಾದ ಸತ್ಯ ಘಟನೆಗಳನ್ನು ಅಳವಡಿಸಿಕೊಂಡ ಈ ಬುಡಕಟ್ಟು ಸಹಜವಾಗಿ ಅಧ್ಯಯನಕಾರರ ಗಮನವನ್ನು ತನ್ನೆಡೆಗೆ ಸೆಳೆದುಕೊಂಡಿದೆ. ಇದರ ಸೆಳೆತಕ್ಕೆ ಸಿಕ್ಕು ಅಧ್ಯಯನ ಮಾಡಿದ ವಿವರಗಳು ಮುಂದಿನಂತಿವೆ. ಎಡ್ಗರ್ ಥರ್ಸ್ಟನ್, ರಂಗಾಚಾರಿ, ಹೆಚ್.ವಿ.ನಂಜುಡಯ್ಯ ಮುಂತಾದವರ ಜೊತೆಗೆ ಎಂ. ರಂಗಪ್ಪನವರ ನುಂಕಿಮಲೆ ಪರಮಾರ್ಥ, ಎಂ.ಜಿ.ಈಶ್ವರಪ್ಪ ಅವರ ಮ್ಯಾಸಬೇಡರು ಆರ್.ರಾಜಣ್ಣ ನಾಯಕ ಜನಾಂಗದ ಇತಿಹಾಸ, ಕರಿಶೆಟ್ಟಿ ರುದ್ರಪ್ಪ ಮಾಸನಾಯಕರು ಒಂದು ಅಧ್ಯಯನ ಕೃಷ್ಣಮೂರ್ತಿ ಹನೂರು 'ಮ್ಯಾಸಬೇಡರ ಸಂಸ್ಕೃತಿ' ಟಿ.ನರಸಿಂಹರಾಜರ 'ಮ್ಯಾಸಬೇಡರ ಸಾಂಸ್ಕೃತಿಕ ವೀರರು' ಈಗಾಗಲೇ ನಡೆದಿರುವ ಅಧ್ಯಯನಗಳು. ಇನ್ನೂ ನಡೆಯುತ್ತಿರುವ ಅಧ್ಯಯನಗಳು ಬಿ.ಪಿ.ವಿರೇಂದ್ರ ಕುಮಾರ್ ಅವರ ಕಂಪಳದೇವರ ಹಟ್ಟಿಯ ಸಂಪ್ರದಾಯ ಮತ್ತು ಆಚರಣೆಗಳು, ಜಿ.ಎಸ್.ತಿಪ್ಪೇಸ್ವಾಮಿಯವರ 'ಮ್ಯಾಸ ನಾಯಕರು ಮತ್ತು ಮಾದಿಗರು', ಸಾಂಸ್ಕೃತಿಕ, ತೌಲನಿಕ ಅಧ್ಯಯನಗಳು ಪ್ರಮುಖವಾದವುಗಳು.

ಈವರೆಗೆ ನಡೆದ ಅಧ್ಯಯನಗಳು ಮ್ಯಾಸಬೇಡರು, ನಾಯಕರು, ಎಂಬ ಪದಗಳ ನಿಷ್ಪತ್ತಿಯ ಬಗ್ಗೆ ಅಂತಿಮ ಎನ್ನಬಹುದಾದ ತೀರ್ಮಾನಕ್ಕೆ ಬಂದಂತೆ ಕಾಣುವುದಿಲ್ಲ. ಆದ್ದರಿಂದ ಇನ್ನೂ ನಡೆಯುತ್ತಿರುವ ಬಿ.ಪಿ.ವಿರೇಂದ್ರ ಕುಮಾರ್ ಹಾಗೂ ಜಿ.ಎಸ್.ತಿಪ್ಪೇಸ್ವಾಮಿಯವರ ಅಧ್ಯಯನಗಳಿಂದ ತುಂಬಾ ನಿರೀಕ್ಷಿಸುವಂತಾಗಿದೆ. ಕೃಷ್ಣಮೂರ್ತಿ ಹನೂರು ಅವರು ಉಲ್ಲೇಖಿಸಿರುವಂತೆ ಬೇಡನಾಯಕರಲ್ಲಿ ಎರಡು ಪಂಗಡಗಳಲ್ಲಿ ಊರು ನಾಯಕರು

ಈಗಾಗಲೇ ಗ್ರಾಮಾಂತರ ಪ್ರದೇಶ, ಪಟ್ಟಣಗಳನ್ನೂ ಸೇರಿ ವಿದ್ಯೆ, ಉದ್ಯೋಗ ಗಳಿಸಿದ್ದಾರೆ. ಮ್ಯಾಸಬೇಡರು ಇನ್ನು ತಕ್ಕಮಟ್ಟಿಗೆ ಪ್ರತ್ಯೇಕವಾಗಿಯೇ ಊರಾಚೆ ಹಟ್ಟಿಕಟ್ಟಿಕಂಡು ವಾಸಿಸುತ್ತಿರುವ ದೃಶ್ಯ ಕೆಲಕಡೆಗಿದ್ದರೂ, ಬಳ್ಳಾರಿ ಜಿಲ್ಲೆಯಲ್ಲಿ ಇವರುಗಳು ತಮ್ಮ ಮನೆಗಳನ್ನು ಊರುಗಳಲ್ಲಿಯೇ ತಮಗೆ ಬೇಕಾದ ವಿನ್ಯಾಸದಲ್ಲಿ ಕಟ್ಟಿಕೊಂಡು ವಾಸಿಸುತ್ತಿದ್ದಾರೆ ಎಂದಿದ್ದಾರೆ.

ಕೆಲವು ಐತಿಹಾಸಿಕ ಆಧಾರಗಳ ಪ್ರಕಾರ ಬೇಡರು ಪಶುಪಾಲನೆ ಮಾಡುತ್ತಿದ್ದರು. "ಆಂಧ್ರದ ಶ್ರೀಶೈಲದ ಕಡೆಯಿಂದ ಪಶುಗಳನ್ನು ಮೇಯಿಸುತ್ತಾ, ಕರ್ನಾಟಕದ ಕಡೆಗೆ ಬಂದರೆಂದು ಧೃಢಪಟ್ಟಿದೆ. ದನಗಳ ಹಿಂಡನ್ನು ಮೇಯಿಸಿಕೊಂಡು ಬರುವಾಗ ಮುಂದೆ ಒಬ್ಬ, ಹಿಂದೆ ಒಬ್ಬ ಪಾಲಕರು ಬರುತ್ತಿದ್ದರು. ಮುಂದೆ ಬರುತ್ತಿದ್ದವನನ್ನು ಊರ ಬೇಡ, ಹಿಂದೆ ಬರುತ್ತಿದ್ದವನನ್ನು ಮ್ಯಾಸ ಬೇಡ ಎಂತಲೂ, ಮೇಯಿಸುವವರು ಮೇಸುವವರು ಮ್ಯಾಸರು ಆಗಿದ್ದಾರೆ. ಊರು ನಾಯಕರು ಮತ್ತು ಮ್ಯಾಸನಾಯಕರ ನಡುವೆ ವೈವಾಹಿಕ ಸಂಬಂಧವಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಇದು ನಡೆಯುತ್ತಿದೆ. ಹಾಗೆಯೇ ಹಲವಾರು ಸಾಂಪ್ರದಾಯಿಕ ಆಚಾರ ವಿಚಾರಗಳಲ್ಲಿ ಈ ಇಬ್ಬರ ಮಧ್ಯ ವ್ಯತ್ಯಾಸವಿದೆ "[೬].

ಮೂಲತಃ ಬೇಡ ಅಥವಾ ತಳವಾರರು ಸಾಂಪ್ರದಾಯಿಕವಾಗಿ ಸೈನಿಕ ಹಾಗೂ ಗ್ರಾಮಸೇವಕರಾಗಿ ದುಡಿಯುತ್ತಿದ್ದರು. ಹೆಚ್ಚಿನ ಜನರು ಕೃಷಿಯನ್ನು ಅವಲಂಬಿಸಿ ದುಡಿಯುತ್ತಿದ್ದಾರೆ. ಜೊತೆಗೆ ಕೆಲವೇ ಜನ ಸರ್ಕಾರಿ ಹಾಗೂ ಖಾಸಗಿ ಸೇವೆಗಳಲ್ಲಿ ಉದ್ಯೋಗಿಗಳಾಗಿದ್ದಾರೆ. ಪರಂಪರೆಯಿಂದ ಬೇಡರು ಬೇಟೆಯಾಡುತ್ತಿದ್ದರು. ಬಿಲ್ಲು ಮತ್ತು ಭರ್ಚಿಗಳನ್ನು ಬಳಸುವುದರಲ್ಲಿ ನಿಪುಣರಾಗಿದ್ದರು. ಈಗ ಬೇಟೆ ನಿಷಿದ್ಧವಾಗಿರುವುದರಿಂದ ತಮ್ಮ ಕಸಬುಗಳನ್ನು ಬದಲಾಯಿಸಿಕೊಂಡಿದ್ದಾರೆ. ಆದರೂ ಹೊಸ ವರ್ಷದ ಯುಗಾದಿ ಹಬ್ಬದ ದಿನದಲ್ಲಿ ಸಾಂಪ್ರದಾಯಿಕವಾಗಿ ಬೇಟೆಯಾಡುತ್ತಾರೆ. ಇವರ ದೈವಗಳು ಬೋರ ದೇವರು, ಗಾದ್ರಿಪಾಲಯ್ಯ, ದುರ್ಗಮ್ಮ, ಮಾರಮ್ಮ, ಊರಮ್ಮ, ಸೊಲ್ಲಮ್ಮ ಇತ್ಯಾದಿಗಳನ್ನು ಪೂಜಿಸುತ್ತಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಸುಧಾರಣೆಯಾಗುತ್ತಿದ್ದಾರೆ. ಈ ಬುಡಕಟ್ಟು ೧೯೯೧ರ ಅನಂತರ ಸರ್ಕಾರಿ ಆದೇಶ ಸಂಖ್ಯೆ ನಂ. Notification No.LaW 26, LCA 91, Bangalore, dated 9th December 1991ರಲ್ಲಿ ಪರಿಶಿಷ್ಟ ವರ್ಗ ೧ ರಿಂದ ತೆಗೆದು ಬುಡಕಟ್ಟು ಪಂಗಡಗಳಲ್ಲಿ ಸೇರಿಸಲಾಗಿದೆ. ಈ ಸಂಬಂಧ ಸರ್ಕಾರಿ ಆದೇಶವನ್ನು ಅನುಬಂಧ ೩.೧೨ರಲ್ಲಿ ತೋರಿಸಲಾಗಿದೆ.

**೨ :೫ :೧ ಬೇಡ, ನಾಯಕ, ತಳವಾರ, ಪಾಳೇಗಾರ, ಮ್ಯಾಸ, ಪರಿವಾರ, ಪದಗಳ ವಿವರಣೆ**

೧. ಬೇಡ : ಮೇಲಿನ ಪದಗಳಿಗೆ ದೀರ್ಘವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳಿವೆ. ಇವುಗಳಲ್ಲಿ 'ಬೇಡರು' ಪದ ತುಂಬಾ ಪ್ರಾಚೀನವಾದುದು. ಈ ಬುಡಕಟ್ಟು ಮೂಲತಃ ಕಾಡಿನಲ್ಲಿ ವಾಸಿಸುತ್ತಿದ್ದು, ತಮ್ಮ ಆಹಾರಕ್ಕಾಗಿ ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಇದಕ್ಕೆ ಬೇಡ ನಾಯಕ ಸಮುದಾಯದ ಸಾಂಸ್ಕೃತಿಕ ನಾಯಕರೆಂದು ಒಪ್ಪಿಕೊಂಡಿರುವ ಏಕಲವ್ಯ, ವಾಲ್ಮೀಕಿ, ಮೂಲತಃ ಬೇಟೆಗಾರಿಕೆಯನ್ನು ಅನುಸರಿಸುತ್ತಿದ್ದವರೇ ಎಂಬುದಕ್ಕೆ ಇತಿಹಾಸದಿಂದ ಆಧಾರಗಳು ದೊರೆಯುತ್ತವೆ. ಪ್ರಾಚೀನ ಶಾಸನ, ಸಾಹಿತ್ಯಗಳಲ್ಲಿ ಬೇಡ ಬೇಡತಿ, ಎನ್ನುವ ಉಲ್ಲೇಖಗಳಿರುವುದನ್ನು ಇಲ್ಲಿ ಸ್ಮರಿಸಬಹುದು. ಈ ನಂಬಿಕೆಗೆ ವಿರುದ್ಧವಾದ ಅಂಶಗಳನೊಳಗೊಂಡ

ವಿಷಯವನ್ನು ಒಬ್ಬ ವಕ್ತೃ ಪ್ರಸ್ತಾಪಿಸಿದ್ದನ್ನು ಉಲ್ಲೇಖಿಸಬಹುದು. ಇವರ ಪ್ರಕಾರ ಬೇಡರು ಎನ್ನುವ ಪದ ಬೇಟೆಗಾರ ಎನ್ನುವ ಪದದಿಂದ ಬಂದಿದ್ದಲ್ಲ. ನಮ್ಮ ಸಾಂಸ್ಕೃತಿಕ ವೀರ ಕಣ್ಣಪ್ಪನನ್ನು ಶಿವ ಏನು ಬೇಕು ಕೇಳು ಎಂದನಂತೆ, ಅದಕ್ಕೆ ಕಣ್ಣಪ್ಪ ನನಗೇನು ಬೇಡ, 'ತಿನ್ನಲು ಸೊಪ್ಪು, ಊಟದ ತಟ್ಟೆಯ ಸುತ್ತ ಮಕ್ಕಳನ್ನು ಕೊಡು ಸಾಕು' ಎಂದನಂತೆ ಅಂದಿನಿಂದ ಏನನ್ನು ಬೇಡದ ಕಣ್ಣಪ್ಪ, 'ಬೇಡದ ಕಣ್ಣಪ್ಪ' ಬೇಡರ ಕಣ್ಣಪ್ಪ ಆಗಿದ್ದಾನೆ. ಆ ಬೇಡರ ಪದ ಇವತ್ತು ಇಡೀ ಈ ಸಮೂಹಕ್ಕೆ ಹರಡಿದೆ. ಹಾಗೆ ಅವರು ಆ ಸಂದರ್ಭದಲ್ಲಿ ಬೇಡರ ಮೂಲವನ್ನು ಹೇಳುತ್ತಾ 'ಬೇಡರ ಮೂಲ ಪಶ್ಚಿಮ ದಿಕ್ಕು ಕ್ರೌಂಚ ಕಾಡು' ಬೇಡರ ಮೂಲ ಸ್ಥಳ ಎಂದರು. ಬೇಡ ಪದ ನಿಷ್ಪತ್ತಿಯ ವಿಚಾರದಲ್ಲಿ ಶ್ರೀಯುತರ ಅಭಿಪ್ರಾಯ ಸತ್ಯಕ್ಕೆ ಹತ್ತಿರವಿಲ್ಲದುದು. ಆದರೆ ಮೂಲದ ಬಗ್ಗೆ ಅವರು ಹೇಳಿದ ಮಾತು ತುಂಬಾ ಗಂಭೀರವಾಗಿ ಯೋಚಿಸಬೇಕಾದುದು ಎನ್ನುವುದು ಗಮನಾರ್ಹ ಸಂಗತಿ.

'ಬೇಡ' ಪದ ನಿಷ್ಪತ್ತಿಯ ವಿಚಾರದಲ್ಲಿ ವಿದ್ವಾಂಸರ ಮತ್ತೊಂದು ವಾದವಿದೆ. ಗೊಲ್ಲರು ಬೇಡರು ಮೂಲತಃ ಒಂದೇ ಬುಡಕಟ್ಟಿನ ಜನರಾಗಿದ್ದರು. ಇವರಲ್ಲಿ ಗೊಲ್ಲರು ತುಂಬಾ ಮಡಿವಂತರು. ಗೋಮಾಂಸ ನಿಷೇಧ, ಋತುಸ್ರಾವಕ್ಕೆ ಹೆಣ್ಣನ್ನು ದೂರವಿಡುವುದು ಮುಂತಾದ ಪಾವಿತ್ರ್ಯತೆಯ ಮೌಲ್ಯಗಳನ್ನೊತ್ತವರು. ಈ ಮೌಲ್ಯಗಳನ್ನು ಇವರಲ್ಲೇ ಇದ್ದ ಒಂದು ಗುಂಪು ಮುರಿಯಲಾರಂಭಿಸಿತು. ಇದರಿಂದ ರೊಚ್ಚಿಗೆದ್ದ ಗೊಲ್ಲರ ಗುಂಪು ನಿಯಮಪಾಲನೆ ಮಾಡದ ಗುಂಪನ್ನು ಸಮೂಹದಿಂದ ಹೊರಹಾಕಿದರು. ಅಂದಿನಿಂದ ಅವರಿಗೆ ಬೇಡವಾದವರು ಬೇಡರಾದರು. ಈ ಬೇಡವಾದರಿಂದರೇ 'ಬೇಡ' ಪದಕ್ಕೆ ಮೂಲವಾಯಿತು ಬ್ಯಾಡವಾದವರು. ಬ್ಯಾಡರು, ಬ್ಯಾಡರ, ಬೇಡರು ಆಗಿರುವ ಸಾಧ್ಯತೆಯಿದೆ. ಈ ಮೇಲಿನ ಎರಡು ವಾದಗಳಿಗಿಂತ 'ಬೇಟೆಗಾರನಿಂದ ಬೇಡ ಪದ' ಬಂದಿದೆ ಎಂಬುದೇ ಸತ್ಯಕ್ಕೆ ಹತ್ತಿರವಾದಂತೆ ಕಾಣುತ್ತದೆ.

'ಬೇಡ' ಈ ಶಬ್ದ ಮೂಲ ಸಂಸ್ಕೃತದ ವ್ಯಾಧ ಎಂಬ ಶಬ್ದದಿಂದ ಬಂದುದಾಗಿದೆ. ವ್ಯಾಧ ಎಂಬ ಈ ಶಬ್ಧ ಉಚ್ಛಾರ ಅಪಭ್ರಂಶವಾಗುತ್ತಾ ಅನೇಕ ಹೆಸರುಗಳಲ್ಲಿ ಕರೆಯಲ್ಪಟ್ಟಿದೆ. ವ್ಯಾಧ, ವೇಡ, ವೇಡನ್, ವೆಡ್ಡ, ಪೆದ್ದ, ಬೇಡ, ಬ್ಯಾಡ, ಬ್ಯಾಡರು, ಬೆಂಡೇರ, ಬೇರಡ, ಮೊಂಡ ಬೇಡರು, ಬೀಯದ, ಬೋಯಾ, ಬೋಯಾಳು ಎಂಬುದಾಗಿ ಅನೇಕ ಕಡೆಗಳಲ್ಲಿ ಈಗಲೂ ಕರೆಯುತ್ತಾರೆ.

**೨. ನಾಯಕ:** ನಾಯನಿ, ನಾಯಕಾ ಈ ಶಬ್ದಗಳು ಮೂಲ ಸಂಸ್ಕೃತದ 'ನಾಯಕ' ಪದದಿಂದ ಬಂದಿವೆ. ಈ ಜನಾಂಗದ ಹೆಣ್ಣು ಮಕ್ಕಳಿಗೆ ನಾಗತಿಯರೆಂದೂ ಕರೆಯುತ್ತಾರೆ. ನಾಯಕ ಎಂದರೆ ಸಂರಕ್ಷಿಸುವವ, ಮುಂದಾಳು, ದಂಡನಾಯಕ ಎಂದು ಅರ್ಥವಾಗುತ್ತದೆ. ಈಗ ಇವರಿಗೆ ಕರ್ನಾಟಕದಲ್ಲಿ ನಾಯಕರು, ನಾಯಕ ಮಕ್ಕಳು, ನಾಯಕವಾಡಿ ಇಲ್ಲವೇ ನಾಯ್ಕೋಡಿ ಎಂದೂ ಕರೆಯುತ್ತಾರೆ. ವಿಜಯನಗರದ ಆಡಳಿತದ ಕಾಲದಲ್ಲಿ ಅನೇಕ ನಾಯಕರು, ನಾಯಕ ಜನಾಂಗದವರು ಇದ್ದರು. ಆಗ ಇವರ ೭೭ ಪಾಳೆಯ ಪಟ್ಟುಗಳು ಇದ್ದವು. ನಾಯಕ ಪದ್ಧತಿ ಹೆಚ್ಚಿಗೆ ಬಳಕೆಗೆ ಬಂದುದು, ಈ ಕಾಲದಲ್ಲಿಯೇ 'ನಾಯಕ' ನಾದವನಿಗೆ ವಿಜಯನಗರ ಸರಕಾರವು 'ಇನಾಂ' ಜಮೀನು ಕೊಡುತ್ತಿತ್ತು. ರಾಜನ ಕರೆ ಬಂದಾಗ ನಾಯಕನು ಸೈನಿಕನಾಗಿ ಹೋಗಿ ಕಾರ್ಯ ನಿರ್ವಹಿಸುತ್ತಿದ್ದನು.

**೩.ತಳವಾರಿಕೆ:** 'ತಳವಾರಿಕೆ' ಅಂದರೆ ಸೇವಾವರ್ಗ ಸೂಚಿಸುವ ಪದವಾಗಿದ್ದು, ತಳವಾರ ಎಂಬುದು

ಮೂಲತಃ 'ತಲಕಾರ' ಎಂಬುದರಿಂದ ಬಂದಿದ್ದು, 'ಆರಕ್ಷಕರು' ಎಂಬ ಅರ್ಥದಲಿ ಬಳಕೆಯಾಗಿದೆ. ತಳಾರ ಎಂಬ ಅಧಿಕಾರಿಗಳಿಗೆ ನಾಯಕ ಎಂಬ ಉಪನಾಮವು ಕೊಡಲ್ಪಟ್ಟಿದೆ. ತಳಾರ ಬೊಬ್ಬಿನಾಯಕ (೧೧೩೮ A.D.), ತಳಾರ ಮಲ್ಲೆಯ ನಾಯಕ (೧೧೭೮ A.D.)ತಳಾರ ಬೆಣ್ಣೆಯ ನಾಯಕ (೧೨೧೬ A.D.) ಮುಂತಾದ ತಳವಾರ ನಾಯಕರನ್ನು ಕರ್ನಾಟಕದಲ್ಲಿ ಕಾಣುತ್ತೇವೆ. ತಳಾರ, ತಳವಾರ, ಬೇಡರ ಅಥವಾ ಬೇಡರ ಇನ್ನೊಂದು ಹೆಸರೇ ನಾಯಕ ಅಥವಾ ನಾಯಕರು, ಎಂದು ಹೇಳಬಹುದು. ನಾಯಕ ಎಂಬ ಗೌರವದ, ಅಧಿಕಾರದ, ಮುಂದಾಳುತನದ ಈ ಸೂಚಕ ಪದವು, ಬೇಡರ ನಿರಂತರ ಕಾರ್ಯದ, ಕಾರ್ಯಗಳಿಂದ ಅವರ ಪಾಲಿಗೆ ಜಾತಿ ಸೂಚಕ ಪದವಾಗಿದೆ. ಅಂತೆಯೇ ಈ ಸಮುದಾಯವನ್ನು ಕರ್ನಾಟಕದೊಳಗಿನ ಎಲ್ಲ ಜಿಲ್ಲೆಗಳ ಗೆಜೆಟಿಯರ್‌ಗಳಲ್ಲಿ ನಾಯಕ ಜಾತಿ ಎಂದು ಗುರುತಿಸಿದ್ದಾರೆ.

೪. **ಪಾಳೇಗಾರರು:** ನಾಯಕರಿಗೆ ಹಳೆಯ ಮೈಸೂರಿನಲ್ಲಿ ಹೆಚ್ಚಾಗಿ ಪಾಳೆಯಗಾರರು ಎಂದೂ ಕರೆಯುತ್ತಾರೆ. ಇವರು ಮೂಲತಃ ಸಾಹಸಿಗಳು, ಧೈರ್ಯವಂತರು, ಗುಡ್ಡ ಬೆಟ್ಟಗಳಲ್ಲಿ ಧೈರ್ಯವಾಗಿ ಸಂಚರಿಸುವವರು, ಆಯುಧಧಾರಿಗಳು, ಶಸ್ತ್ರವಿದ್ಯೆಗಳಲ್ಲಿ ನಿಪುಣರು, ಯುದ್ಧಗಳಲ್ಲಿ ಅಪಾರ ಪ್ರಾವಿಣ್ಯತೆಯನ್ನು ಹೊಂದಿದವರು ಇಂಥಹ ಶೂರರಿಗೆ ದೊರೆಗಳು ಮೆಚ್ಚಿ, ತಮ್ಮ ಸಾಮ್ರಾಜ್ಯದ ಕೆಲವೊಂದು ಭಾಗಗಳನ್ನು ಆಡಳಿತ ನಡೆಸಲು, ಪಾಳೇಗಾರರೆಂದು ನಿಯಮಿಸುತ್ತಿದ್ದರು. ಈ ಪಾಳೆಯಗಾರರು 'ಪಾಳೆಯ' ಅಥವಾ 'ಕಂದಾಯ' ವಸೂಲು ಮಾಡಿ ದೊರೆಗಳಿಗೆ ಕೊಡುತ್ತಿದ್ದವರು. ಹಾಗೂ ತಮ್ಮ ಪ್ರದೇಶಗಳಲ್ಲಿ ಕೋಟೆ, ಕೊತ್ತಲಗಳನ್ನು ನಿರ್ಮಿಸಿ, ಅಲ್ಲಿ ಬಿಗಿಯಾದ ಕಾನೂನುಗಳನ್ನು ಜಾರಿಗೆ ತಂದು, ಜನರ ಹಾಗೂ ಕೋಟೆಗಳ ಸಂರಕ್ಷಣೆ ಮಾಡುತ್ತಿದ್ದರು.

ಈ ಪಾಳೆಗಾರರು ಜನೋಪಯೋಗಿ ಕಾರ್ಯಗಳನ್ನೂ ಮಾಡುತ್ತಿದ್ದರು. ಪ್ರವಾಸಿಗರಿಗೆ ಊಟ, ತಂಗುದಾಣ, ನೀರು, ಔಷಧಿ ವ್ಯವಸ್ಥೆ ಮಾಡಲು ಭೂಮಿಗಳನ್ನು ಅನೇಕರಿಗೆ ದಾನ ಮಾಡುತ್ತಿದ್ದರು. ಇವರು ಅನೇಕ ಗುಡಿ-ಗುಂಡಾರಗಳನ್ನು ಕೆರೆ-ಕಾಲುವೆಗಳನ್ನು ನಿರ್ಮಿಸುತ್ತಿದ್ದುದೂ ಕಂಡು ಬಂದಿದೆ.

ಡಾ.ರಂಗರಾಜ ವನದುರ್ಗ ಅವರು ಹೇಳುವಂತೆ "೯ನೇ ಶತಮಾನಕ್ಕಿಂತ ಹಿಂದೆ ನಾಯಕ ಪದವು ಪಾಳೇ ಪಟ್ಟಿನ ಮುಂದಾಳು, ಶೂರ, ಸೇನಾಪತಿ, ಸೇನಾಮುಖ್ಯಸ್ಥ, ದಳಪತಿ, ಎಂಬರ್ಥಗಳು ಮಾತ್ರ ಇವೆಯೇ ಹೊರತು ವ್ಯಕ್ತಿ ನಾಮಗಳಾಗಿ ದೊರಕುವುದಿಲ್ಲ. ಅಂದರೆ ಬೇಡರಿಗೆ ೯ನೇ ಶತಮಾನಕ್ಕೂ ಹಿಂದಿನಿಂದಲೂ ನಾಯಕ ಎಂಬುದಾಗಿ ಕರೆಯುತ್ತಿರಬಹುದು. ಇತ್ತೀಚೆಗೆ ಕನ್ನಡ ವಿಶ್ವವಿದ್ಯಾಲಯ ಹಂಪಿ ಪ್ರಕಟಿಸಿದ 'ಕರ್ನಾಟಕ ಚರಿತ್ರೆ ಭಾಗ-೪' ರಲ್ಲಿ ಕೆ.ಎಸ್.ಶಿವಣ್ಣ ಅವರು 'ವಿಜಯ ನಗರದ ಕಾಲದಲ್ಲಿ ಅಮರ ನಾಯಕರ ಆಡಳಿತ' ಎನ್ನುವ ಲೇಖನದಲ್ಲಿ ಪಾಳೇಗಾರಿಕೆಯನ್ನು ನಡೆಸಿದ್ದವರು ಹೇಗೆ ನಾಯಕರಾದರು ಎಂಬುದನ್ನು ವಿವರಿಸುತ್ತಾರೆ. ಅವರು ಹೇಳುವಂತೆ ವಿಜಯ ನಗರದ ಆಡಳಿತಕ್ಕೆ ಸೈನ್ಯ ಮತ್ತು ಆರ್ಥಿಕ ಸಹಾಯಗಳು ಅವಶ್ಯಕವಾಗಿದ್ದರಿಂದ ಅಂದಿನ ರಾಜರು ಅಧಿಕಾರವನ್ನು ಪಾಳೆಗಾರರಿಗೆ ಮತ್ತು ರೈತರಿಗೆ ಹಂಚುವ ಅಧಿಕಾರ ವಿಕೇಂದ್ರೀಕರಣ ನೀತಿಯನ್ನು ರೂಪಿಸಿಕೊಂಡರು. ಆ ಮೂಲಕ ಪಾಳೇಗಾರರಿಂದ ಸೈನಿಕ ಸಹಾಯವನ್ನು, ರೈತರಿಂದ ಧನ ಸಹಾಯವನ್ನು ಪಡೆಯುವುದು ಇವರ ಮೂಲ ಉದ್ದೇಶವಾಗಿತ್ತು. ಈ ಸಂದರ್ಭದಲ್ಲಿ ಪಾಳೇಗಾರರಾಗಿದ್ದವರಿಗೆ

ಅಧಿಕಾರವನ್ನು ಕೊಟ್ಟು (ಸಾಮಂತನಾಯಕರನ್ನಾಗಿಸಿಕೊಂಡರು) ಅವರನ್ನು 'ನಾಯಕ' ಎಂದು ಕರೆದರು. ಡಾ.ರಂಗರಾಜ ವನದುರ್ಗ ಮತ್ತು ಕೆ.ಎಸ್. ಶಿವಣ್ಣನವರ ಮಾತುಗಳ ಆಧಾರದ ಮೇಲೆ ಹೇಳುವುದಾದರೆ, ೧೫, ೧೬ನೇ ಶತಮಾನದವರೆಗೂ ನಾಯಕ ಪದವು ಸೇನಾಪತಿ, ಮುಖಂಡ, ಎನ್ನುವ ಅರ್ಥದೊಳಗೆ ಬಳಕೆಯಾಗಿ, ಕಾಲ ಉರುಳಿದಂತೆ, ಜಾತಿ ಸೂಚಕ ಪದವಾಗಿದೆ. ಮತ್ತೊಂದು ಅಂಶವೆಂದರೆ, ಬೇಡರಿಗೆ 'ನಾಯಕ' ಪದ ಅನ್ವಯವಾಗಿರುವುದು ವಿಜಯನಗರದ ಆಳ್ವಿಕೆಯ ಕಾಲಕ್ಕೆ ಮಾತ್ರ ಇರಬಹುದು. ಮೇಲಿನ ಮಾತುಗಳ ಆಧಾರದ ಮೇಲೆ ಬೇಡರು ನಾಯಕರಾದ ರೀತಿಯನ್ನು ಹೀಗೆ ಸಮೀಕರಿಸಿ ಹೇಳಬಹುದಾಗಿದೆ. ಕ್ಷತ್ರಿಯ, ಬೇಡ, ತಳವಾರ, ಪಾಳೇಗಾರ, ನಾಯಕ .... ಈ ಬೆಳವಣಿಗೆ ಬರಿ ಪದ ಬದಲಾವಣೆ, ಬೆಳವಣಿಗೆಯಲ್ಲ. ಬದಲಿಗೆ ಸಾಮಾಜಿಕ ಸ್ಥಾನಮಾನಗಳ ಬೆಳವಣಿಗೆಯೂ ಕೂಡ. ಕ್ಷತ್ರಿಯರಾದ ಹಲವು ಕಾರಣಗಳಿಂದಾಗಿ, ಕಾಡು ನಿವಾಸಿಗಳಾಗಿ, ಬೇಡರಾದವರು ತಮ್ಮ ಶಕ್ತಿ, ಶೌರ್ಯ, ಚಾತುರ್ಯಗಳಿಂದ ಊರಿನ ತಳವಾರಿಕೆಯನ್ನು ಪಡೆದಿರಬಹುದು. ತಳವಾರಿಕೆಯ ವೃತ್ತಿಯಲ್ಲಿ ವಿಶಿಷ್ಟವಾಗಿ ಬೆಳೆದು ತಮ್ಮದೇ ಪಾಳೇಪಟ್ಟುಗಳನ್ನು ಕಟ್ಟಿಕೊಂಡು ಆಳ್ವಿಕೆ ನಡೆಸಲಾರಂಭಿಸಿರಬಹುದು. ಪಾಳೇಗಾರಿಕೆಯನ್ನು ನಡೆಸಿದ್ದ ಈ ಜನರಿಗೆ ವಿಜಯನಗರ ರಾಜರಿಂದ ಹೆಚ್ಚಿನ ಅಧಿಕಾರ ಪ್ರಾಪ್ತವಾಗಿ ನಾಯಕರೆನಿಸಿಕೊಂಡಿರುವ ಸಾಧ್ಯತೆ ಇದೆ. ಈ ನಾಯಕ ಸ್ಥಾನಮಾನಗಳು ಕೆಲವು ಪಾಳೇಪಟ್ಟಿನ ಪಾಳೇಗಾರರಿಗೆ ಲಭಿಸಿದ್ದರಿಂದ ಇಂದಿಗೂ ಕೂಡ ಕೆಲವರು 'ನಾಯಕ'ರೆನಿಸಿಕೊಂಡರೆ ಇನ್ನು ಕೆಲವರು 'ಬೇಡ'ರೆಂದಷ್ಟೇ ಕರೆಯಿಸಿಕೊಳ್ಳುತ್ತಾರೆ. ಈ ಬಗ್ಗೆ ಇನ್ನಷ್ಟು ಆಳವಾದ ಸಂಶೋಧನೆಯ ಅಗತ್ಯವಿದೆ. ಬೇಡ ನಾಯಕನಾದ ಸ್ಥಿತಿಗತಿಗಳನ್ನು ಮೇಲಿನ ಸಾಹಿತ್ಯಿಕ ಮೂಲದಿಂದ ತಿಳಿಯಲಾಯಿತು. 'ಮ್ಯಾಸ' ಪದದ ಮೂಲ ಅರ್ಥ ಏನು ಎಂದು ತಿಳಿಯುವ ಅಗತ್ಯವಿದೆ. ಮ್ಯಾಸ ಪದದ ಮೂಲ ನಿಷ್ಪತ್ತಿ ತುಂಬಾ ನಿಗೂಢ ಹಾಗೂ ಅಸ್ಪಷ್ಟತೆ ಗೊಂದಲವಾಗಿ ಬಿಟ್ಟಿದೆ. ಬೇಡರ ಬುಡಕಟ್ಟನ್ನು ಕುರಿತು ಅಧ್ಯಯನ ಮಾಡಿದ ಬಹುತೇಕ ವಿದ್ವಾಂಸರು ಒಂದು ರೀತಿಯಾಗಿ ಮ್ಯಾಸ ಪದದ ಅರ್ಥದ ಬಗೆಗೆ ಚರ್ಚಿಸಿದ್ದಾರೆ. ಮೊದಲು ಆ ಚರ್ಚೆಗಳ ಮುಖ್ಯಾಂಶಗಳನ್ನು ಪಟ್ಟಿಮಾಡಿಕೊಳ್ಳಬಹುದು.

೧. ಮೇಯಿಸುವವರು' ಪದದಿಂದ ಮ್ಯಾಸ ಪದ ಉದ್ಭವವಾಗಿದೆ. ದ್ರಾವಿಡ ಮೂಲಕ್ಕೆ ಸೇರಿದ ಬೇಡರು ಮೂಲತಃ ಪಶುಪಾಲಕರಲ್ಲದಿದ್ದರೂ ಕೆಲವು ಸಮಯಗಳಲ್ಲಿ ಕೃಷಿ ಮತ್ತು ಪಶುಪಾಲನೆಯನ್ನು ಅನುಸರಿಸಿದ ಸಮುದಾಯ, ಪಶುಪಾಲನೆಯಂತಹ ಕ್ರಿಯೆಯೊಳಗೆ ಮೇಯಿಸುವ ಕ್ರಿಯೆ ತುಂಬಾ ಮುಖ್ಯ. ಈ ಮೇಯಿಸುವ ಕಾರ್ಯ ಮಾಡುವವರು ಮೇಯಿಸುವವರಾಗಿದ್ದಾರೆ. ಈ ಮೇಯಿಸುವವರು 'ಮ್ಯಾಸ' ಪದಕ್ಕೆ ಮೂಲ ಎನ್ನುತ್ತಾರೆ.

೨. "ಮ್ಯಾಸ ಪದಕ್ಕೆ ಸಂಸ್ಕೃತದ 'ಮೀವರ' ತಮಿಳಿನ 'ಮೀಚರನ್' ಕನ್ನಡದ 'ಮೀಸರು' ಪದಗಳು ಮೂಲ 'ಮೀಸರು' ಎನ್ನುವ ಪದ ಕುಮಾರರಾಮನ ಕಾವ್ಯದಲ್ಲಿ ಉಲ್ಲೇಖವಾಗುತ್ತದೆ. ಮೀಸರು ಎಂದರೆ 'ಶೂರರು' ಪರಾಕ್ರಮಿಗಳು ಕಾಡಿನಲ್ಲಿ ಗೆಡ್ಡೆಗೆಣಸು, ಮಾಂಸದಂತಹ ಸತ್ವಯುತ ಆಹಾರ ಸೇವಿಸಿ ದೇಹದ ಶಕ್ತಿಯನ್ನು ವೃದ್ಧಿಸಿಕೊಂಡ ಜನ"[೭] ಬೇಡರು. ಆದಕಾರಣ 'ಮೀಸರು ಬೇಡರು' 'ಮ್ಯಾಸಬೇಡರು' ಆಗಿರಲು ಸಾಧ್ಯ ಎಂಬುದು ಕೃಷ್ಣಮೂರ್ತಿ ಹನೂರು ಅವರ ಅಭಿಪ್ರಾಯವಾಗಿದೆ.

೩. ವಾಗ್ಮಿಗಳ ಮಾಹಿತಿಯನ್ನಾಧರಿಸಿ ಮ್ಯಾಸ ಎನ್ನುವುದು 'ನ್ಯಾಸ' ಎಂಬ ಪದದಿಂದ ಬಂದಿದೆ. 'ನ್ಯಾಸ' ಎಂದರೆ 'ಜ್ಞಾನ' ಎಂದರ್ಥ ಅತೀಜ್ಞಾನ ಉಳ್ಳಜನರು ಬೇಡರಾದ್ದರಿಂದ ನ್ಯಾಸರು ಮ್ಯಾಸರು ಎಂಬುದು ಮ್ಯಾಸ ಆಗಿದೆ ಎಂದು ಕರಿಶೆಟ್ಟಿರುದ್ರಪ್ಪ ಅವರು ಅಭಿಪ್ರಾಯ ಪಡುತ್ತಾರೆ.

೪. ವಿಜಯನಗರ ಸಂಸ್ಥಾನದ ಸಾಮಂತ ರಾಜರಂತಿದ್ದ ನಾಯಕರ ಪಾಳೇಪಟ್ಟುಗಳಲ್ಲಿ ತಮ್ಮ ದೊರೆಯ ರಕ್ಷಣೆಗೆ ಸದಾ ತಯಾರಾಗಿರಬೇಕಿದ್ದು ಮೀಸಲು ಸೈನಿಕ ಪಡೆಗಳು ಇದ್ದವು. ಈ ಮೀಸಲು ಪದದಿಂದ ಮ್ಯಾಸ ಎಂಬ ಪದ ಬಂದಿರಬಹುದೆಂದು ಡಾ.ರಂಗರಾಜ ವನದುರ್ಗರವರು ಅಭಿಪ್ರಾಯಪಡುತ್ತಾರೆ.
ಕೆಲವು ವಾಗ್ಮಿಗಳು ತಮ್ಮ ಮೂಲಗಳನ್ನು 'ವ್ಯಾಸ'ನಲ್ಲಿ ಗುರುತಿಸಿಕೊಂಡು ನಮ್ಮದು 'ವ್ಯಾಸಕುಲ' ಎಂದು ಹೇಳುತ್ತಾರೆ. ಈ ವ್ಯಾಸ ಪದವೇ ಮ್ಯಾಸ ಪದಕ್ಕೆ ಮೂಲ ಎಂದು ಕೆಲವು ತಜ್ಞರು ಹೇಳುತ್ತಾರೆ.
ಈ ಎಲ್ಲಾ ಊಹೆಗಳ ಮಧ್ಯೆ 'ಮ್ಯಾಸ' ಪದದ ಉದ್ಭವ ಆಚಾರ ವಿಚಾರಗಳು ಗೊಂದಲಮಯವಾಗಿರುವುದಂತೂ ನಿಜ. ಮೇಲಿನ ವಾದ ಸರಣಿಯಲ್ಲಿ ಕರಿಶೆಟ್ಟಿರುದ್ರಪ್ಪನವರ ವಾದವನ್ನು ಹೊರತುಪಡಿಸಿ ಉಳಿದ ಎಲ್ಲಾ ವಾದಗಳು ಸತ್ಯಕ್ಕೆ ಹತ್ತಿರವಾಗಿವೆ.ಮ್ಯಾಸ ಬೇಡರು ಮೇಯುಸುವವರು. ಮೀಸಲು ಪಡೆ, ಪರಾಕ್ರಮಿ, ಶೂರ, ಧೀರರು, ವ್ಯಾಸ ಕುಲದವರು ಆಗಿರುವುದು ನಿಜ. ಆದರೆ ಮಹಾನ್ ಜ್ಞಾನಿಗಳು ಆಗಿದ್ದರು. ಎಂಬುದನ್ನು ಒಪ್ಪಿಕೊಳ್ಳಲು ಕೆಲವು ಸಮಸ್ಯೆಗಳಿವೆ. ಅರ್ಥಗಳಲ್ಲಿ ಸತ್ಯಕ್ಕೆ ಹತ್ತಿರವಾಗಿರುವ ಈ ಆಧಾರ ವಾದಗಳಲ್ಲಿ ಪದ ಬೆಳವಣಿಗೆಯ ಇತಿಹಾಸದ ದೃಷ್ಟಿಯಿಂದ ಯಾವುದು ಸತ್ಯ ಎನ್ನುವ ಅಂಶ ಇಂದು ನಮ್ಮ ಅಧ್ಯಯನಕಾರರ, ವಿದ್ವಾಂಸರ,ಸಂಶೋಧಕರ ಮುಂದಿನ ಬಹುದೊಡ್ಡ ಸವಾಲಾಗಿದೆ. ಈ ಸವಾಲನ್ನು ಭಾಷಾವಿಜ್ಞಾನ ಪಂಡಿತರ ಸಹಾಯ ಪಡೆದು ಬಗೆಹರಿಸಿಕೊಳ್ಳಲು ಸಾಧ್ಯವಿದೆ. ಈ ದಿಕ್ಕಿನಲ್ಲಿ ಇನ್ನು ಪ್ರಯತ್ನಗಳು ನಡೆಯಬೇಕಿವೆ. ಇವುಗಳ ಜೊತೆಗೆ ಇತರೆ ಹೆಸರುಗಳು ರೂಢಿಯಲ್ಲಿವೆ. ಅವುಗಳು ಕೆಳಗಿನಂತಿವೆ.

೫. 'ಪರಿವಾರ' ಪಾಳೇಗಾರರ ಆಸ್ಥಾನದಲ್ಲಿ ಒಳಾಡಳಿತದ ವ್ಯವಹಾರಗಳನ್ನು ನೋಡಿಕೊಳ್ಳುವಂತಹ ಸೇವೆಸಲ್ಲಿಸುವವರನ್ನು ಪರಿವಾರ ಎಂದು ಕರೆಯಲಾಗಿದೆ.

೬. 'ಬೇರದ್ ವೇದನ್' ಇದರ ಮೂಲರ್ಥ ಬಹುಶಃ ಬೇಟೆಯಾಡುವುದು. ಪೂರ್ವಿಕರಿಂದ ಬೇಟೆ ವೃತ್ತಿಯನ್ನು ಅನುಸರಿಸಿಕೊಂಡು ಬಂದ ಸಮೂಹ ಇದಾಗಿರುತ್ತದೆ.

೭. 'ಭೋಯ' ಅಥವಾ ಭೋವ ಎಂದರೆ, ಮೇಣಿ, 'ಭಾರವನ್ನು ಹೋರುವ ಸಮೂಹ' ಎಂತರ್ಥ ಕೊಡುವುದಾಗಿದ್ದು. ಇದನ್ನು ಕಾಯಕವಾಗಿ ಹೊಂದಿ ಜೀವನ ನಿರ್ವಹಿಸುವವರಾಗಿದ್ದಾರೆ.

೮. 'ರಾಮೋಶಿ' ಇಂದು ಸಾಂಸ್ಕೃತಿಕ ಸ್ತರ ಸೂಚಿಸುವ ಪದವಾಗಿದೆ. ಶ್ರೀವಾಲ್ಮೀಕಿ ಕವಿ ವಿರಚಿತ ರಾಮಾಯಣದ ಕಥಾನಾಯಕರಾದ ರಾಮನೇ ತಮ್ಮ ಮೂಲ ಪುರುಷ ಎಂದು ಭಾವಿಸುವ ವರ್ಗಕ್ಕೆ ರಾಮೋಶಿ ಎಂದು ಕರೆಯಲಾಗಿದೆ.

ಹೀಗೆ ವಿಭಿನ್ನ ವಿಶೇಷತೆಗಳಿಗನುಗುಣವಾಗಿ, ವಿಭಿನ್ನ ಹೆಸರುಗಳಿಂದ ಈ ಬುಡಕಟ್ಟು ಸಮುದಾಯವನ್ನು ಕರೆಯಲಾಗುತ್ತಿದೆ.

ಈ ಸಮುದಾಯದಲ್ಲಿ ಕುಮಾರ ರಾಮು, ಮದಕರಿ ನಾಯಕ, ಸುರಪುರದ ವೆಂಕಟಪ್ಪನಾಯಕ, ಹಾಗಲವಾಡಿಯ ಯರಿ ಮಾದನಾಯಕ, ಸಿಂಧೂರ ಲಕ್ಷ್ಮಣ ಉಮಾಜಿ ರಾಜೇನಾಯಕ, ಹಲಗಲಿಯ ಜಡಗ, ಬಾಲರು, ಹರಪನಹಳ್ಳಿ ದಾದಾನಾಯಕ. ಚಿಕ್ಕಾಲ ದಿನ್ನಿಯ ದೊಡ್ಡಪ್ಪನಾಯಕ ಮುಂತಾದವರು ಶೌರ್ಯ, ಸಾಹಸ, ಹೋರಾಟಗಳಿಗೆ ಹೆಸರು ಪಡೆದವರು ಈ ಜನಾಂಗದ ಸುರಪುರದ ರಾಣಿ ಈಶ್ವರಮ್ಮ, ಬಾಗುಳಿ ರಾಣಿ ಹರಿಯಮ್ಮಾಜಿ ನಾಗತಿ ಹಲಗಲಿಯ ತರುಣಿ ರಾಮಿ ತಮ್ಮ ಸಾಹಸ, ಶೌರ್ಯ ಆಡಳಿತ ಸಾಮರ್ಥ್ಯ ಬಲಿದಾನಗಳಿಗಾಗಿ ಇತಿಹಾಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದ್ದಾರೆ. ರಾಮಾಯಣದ ಶಬರಿಯಂತೂ, ಆತಿಥ್ಯಕ್ಕೆ ನಾಮಾಂಕಿತಳಾಗಿದ್ದಾಳೆ. ಮಹರ್ಷಿ ಆದಿಕವಿ ವಾಲ್ಮೀಕಿ, ಧರ್ಮವ್ಯಾಧ, ಚಕ್ರವರ್ತಿ ನಳ, ಏಕಲವ್ಯ, ಬೇಡರ ಕಣ್ಣಪ್ಪ, ಮೂಗನಾಯಕರು ಮಹಾನ್ ಸಾಂಸ್ಕೃತಿಕ ವ್ಯಕ್ತಿಗಳಾಗಿದ್ದಾರೆ. ಈಗಿನ ಕಾಲದಲ್ಲಿ ತಮಿಳು ನಾಡಿನ ದಿ.ರಾಮಸ್ವಾಮಿ ಪೆರಿಯಾರರು, ಜಗತ್ತಿನ ಶ್ರೇಷ್ಠ ಚಿಎಂತಕ ಹಾಗೂ ಸಮಾಜ ಸುಧಾರಕರಲಿ ಒಬ್ಬರು. ಹಾಗೆಯೇ ಎಲ್.ಜಿ. ಹಾವನೂರರು ಬೇಡ ಸಮುದಾಯಕ್ಕೆ ರಾಜಕೀಯ ಸ್ಫೂರ್ತಿಯಾಗಿದ್ದಾರೆ.

ಕನ್ನಡ ನಾಡಿನ ಚರಿತ್ರೆಯಲ್ಲಿ ಸಮುದಾಯದ ಅನೇಕ ಶಿವಶರಣರು ಕಂಡುಬಂದಿದ್ದಾರೆ. ಆಂಧ್ರ ಪ್ರದೇಶದ ಲಿಂಗಂಪಲ್ಲಿಯ ತೆಲುಗೇಶ್ವರ ಮಸಣಯ್ಯ, ತೆಲಗು ಜೊಮ್ಮಯ, ತಳವಾರ ಕಾಮಿದೇವ ಹಾಗೂ ಢಕ್ಕೆಯ ಬೊಮ್ಮಣ್ಣರು ಈ ಸಮುದಾಯದ ಶಿವಶರಣರು ಆಗಿ ಹೋಗಿದ್ದಾರೆ. ತಮಿಳುನಾಡಿನ ಭಕ್ತಿ ಪಂಥದ ಪರಿಪಾಲಕರು ಈ ಸಮುದಾಯದವರೇ ಆಗಿದ್ದರು. ಈ ಸಮುದಾಯದ ಭವಿಷ್ಯದ ಬಗೆಗಿನ ಚಿಂತನೆ ಹಾಗೂ ಕಾರ್ಯಕ್ರಮ ಜಾರಿಗೊಳಿಸುವ ಅವಶ್ಯಕತೆ ಇದೆ.

**೨:೫:೨ ಬೇಡ ಅಥವಾ ವಾಲ್ಮೀಕಿ ವಂಶಜರು**

**ವಂಶಗಳು, ಗೋತ್ರಗಳು, ಬೆಡಗುಗಳು**

"ವಾಲ್ಮೀಕಿ ವಂಶಜರ ವಂಶಗಳು, ಗೋತ್ರಗಳು ಹಾಗೂ ಬೆಡಗುಗಳು" ಎಂಬ ಪುಸ್ತಕದಲ್ಲಿ ಶ್ರೀ ಆರ್.ಬಿ.ಕಿತ್ತೂರು ಇವರು ಈ ಕೆಳಗಿನಂತೆ ಮಾಹಿತಿ ನೀಡಿದ್ದಾರೆ. ಹಿಂದೂಧರ್ಮದ ವಾಲ್ಮೀಕಿ ಮತದ ಬೇಡ ಪಂಗಡವು ಅತ್ಯಂತ ಪೂರ್ವಕಾಲದ ಪುರಾತನ ಪಂಗಡವು. ಈ ಪಂಗಡದ ಎಲ್ಲ ಬೆಡಗುಗಳನ್ನು ಮುಖ್ಯವಾಗಿ ಎರಡು ವರ್ಗಗಳನ್ನಾಗಿ ವಿಂಗಡಿಸಿದೆ. ಈ ಎರಡು ವರ್ಗಗಳಲ್ಲಿ ಬರತಕ್ಕ ಬೆಡಗುಗಳನ್ನು ಬಿಟ್ಟರೆ, ಇನ್ನೂ ಅನೇಕ ಬೆಡಗುಗಳು ಇರುತ್ತವೆ. ಅದಕ್ಕೆ ಒಂದು ಹೊಸ ವರ್ಗದ ಹೆಸರನ್ನು ಕೊಡವದು ಅವಶ್ಯವಿದೆ. ಕಾರಣ ಮೂರನೆಯ ವರ್ಗಕ್ಕೆ ಆಧುನಿಕ ರೀತಿಯಲ್ಲಿ ಯೋಚಿಸಿ ಅದಕ್ಕೂ ಒಂದು ಹೆಸರು ಕೊಡಲಾಗಿದೆ. ಈ ಮೂರು ವರ್ಗಗಳನ್ನು ಮುಖ್ಯವಾಗಿ ಕೆಳಗಿನಂತೆ ಮೂರು ವಂಶಗಳಲ್ಲಿ ವಿಂಗಡಿಸಲಾಗಿದೆ.

೧. ಸೂರ್ಯವಂಶ, ೨.ಚಂದ್ರವಂಶ, ೩. ನಕ್ಷತ್ರವಂಶ.

ಪ್ರತಿಯೊಂದು ವಂಶದಲ್ಲಿ ಗೋತ್ರಗಳು ಇರುತ್ತವೆ. ಇವುಗಳು ವರ್ಗದ ಸಂಕೇತಗಳಾಗಿರುತ್ತವೆ. ಗೋತ್ರಗಳೆಂದರೆ ಪೂರ್ವಜರನ್ನು ಆದರಿಸಿದ ಆಪ್ತತ್ವದ ಕ್ರಮ. ಬೆಡಗುಗಳೆಂದರೆ ಪ್ರತಿಯೊಂದು ಕುಟುಂಬಸ್ಥರು ಗುರುತಿಸಿಕೊಂಡಿರುವ ವಿಶಿಷ್ಟ ಸಂಕೇತ ಇನ್ನು ವಾಲ್ಮೀಕಿ ಮತ ಎಂದರೆ ದೈವಿಕವಾದ ವಿಷಯಗಳಲ್ಲಿ ಈ ಜನರು ಅನುಸರಿಸುವ ವಿವಿಧ ನಂಬಿಕೆಗಳು, ಭಾವನೆಗಳು, ಪೂಜಾ ವಿಧಿಗಳು, ಸಂಪ್ರದಾಯಗಳು ಮುಂತಾದವುಗಳನ್ನು ಈ ಮತ ಒಳಗೊಳ್ಳುತ್ತದೆ.

**ಬೆಡಗುಗಳ ಇತಿಹಾಸ**

ವಾಲ್ಮೀಕಿ ಸಮುದಾಯದ ಈ ಬೆಡಗುಗಳು ಹೇಗೆ ಉಂಟಾದವು ಎಂಬ ಬಗ್ಗೆ ಅನಂತಕೃಷ್ಣ ಅಯ್ಯರ್ ಹಾಗೂ ಎಚ್.ವಿ.ನಂಜುಂಡಯ್ಯನವರು ತಮ್ಮ ಮೈಸೂರು ಪ್ರಾಂತದ ಗಿರಿಜನಾಂಗಗಳು ಹಾಗೂ ಜಾತಿಗಳು ಎಂಬ ಪುಸ್ತಕದಲ್ಲಿ ಈ ಕೆಳಗಿನಂತೆ ಕಾಣಿಸಿದ್ದಾರೆ.

ವಾಲ್ಮೀಕಿಗೆ ಹನ್ನೆರಡು ಜನ ಮಕ್ಕಳಿದ್ದರು. ಈಗಿನವರು ಅವರ ವಂಶಜರಾಗಿದ್ದಾರೆ. ಈ ಜನಾಂಗ ಅನೇಕ ಕುಲ ಪಂಗಡಗಳಲ್ಲಿ ಹಂಚಲ್ಪಟ್ಟಿದೆ. ಇವು ಒಂದೇ ಮೂಲದಿಂದ ಬಂದವುಗಳಾಗಿವೆ. ಈ ಜಾತಿಯ ಜನರು ಸ್ವ-ಬೆಡಗುಗಳಲ್ಲಿ ವಿವಾಹವಾಗುವುದಿಲ್ಲ. ತಮ್ಮ ಜಾತಿಯ ಹೊರ ಬೆಡಗಿನವರೊಡನೆ ಮಾತ್ರ ವಿವಾಹವಾಗುತ್ತಾರೆ. ಈ ಎಲ್ಲ ಬೆಡಗುಗಳ ಮೂಲ ಈ ಕೆಳಗಿನಂತೆ ಇರುತ್ತದೆ.

ವಾಲ್ಮೀಕಿಯ ಹನ್ನೆರಡು ಮಕ್ಕಳು ಒಂದು ಸಲ ತಮ್ಮ ತಮ್ಮೊಳಗೆ ಜಗಳವಾಡಿ ಹೊರಬಿದ್ದರು. ಈ ಜಗಳದಲ್ಲಿ ಕೆಲವರು ಸಾವನ್ನಪ್ಪಿದರು. ವಾಲ್ಮೀಕಿಯ ಹಿರಿಯ ಮಗ 'ಮಂದಲ ಮನಿಬೆಟ್ಟು ರಾಜು' ಎಂಬಾತನು, ಈ ಭೀಕರ ಬಡಿದಾಟ ಹಾಗೂ ಸಂಹಾರವನ್ನು ಕೇಳಿ, ಉಳಿದವರಿಗೆ ಶಿಕ್ಷೆ ವಿಧಿಸಲು, ಜಗಳವಾಡಿದ ಸ್ಥಳಕ್ಕೆ ಬಂದನು. ಜಗಳವಾಡಿದ ಸಹೋದರರು ಅವನಿಗೆ ಹೆದರಿ, ಅನೇಕ ಸ್ಥಳಗಳಲ್ಲಿ ಅಡಗಿಕೊಂಡರು. ಇವರನ್ನು ಹುಡುಕುತ್ತಾ ಹೊರಟಾಗ ಕೆಲವರು ಹುತ್ತದಲ್ಲಿ (ವಲ್ಮೀಕ), ಗುಡ್ಡಗಳಲ್ಲಿ, ಮರೆಗಳಲ್ಲಿ ಅಡಗಿದ್ದುದು ತಿಳಿದು ಬಂದಿತು. ಆಗ 'ಮನಿಬೆಟ್ಟು ರಾಜು' ಇವರನ್ನು ಅಡಗಿದ ಸ್ಥಳಗಳ ಹೆಸರಿನಿಂದ ಪಂಗಡದ ವಿಂಗಡನೆ ಮಾಡಿದನು. ಈ ವಿಂಗಡಣೆಗಳೇ ಮುಂದೆ ಬೆಡಗುಗಳಾದವು. ಈತನು ಮಂದಲವರ ಗುಂಪಿಗೆ ಮುಖ್ಯಸ್ಥನಾದನು. ಈಗಲೂ ಕೂಡಾ ಕೆಲವು ಕಡೆಗಳಲ್ಲಿ, ಲಗ್ನ ಸಮಾರಂಭಗಳ ವೇಳೆಯಲ್ಲಿ, ಮೊದಲನೆಯ ವೀಳ್ಯವನ್ನು ಅವನ ಹೆಸರಿನಲ್ಲಿ ಇಡುತ್ತಾರೆ. ಇಲವೇ ಅವನ ಊಳಿಗದಾಳುಗಳಾದ 'ಅಂಕಿಲಾ' ಬೆಡಗಿನವರಿಗೆ ವೀಳ್ಯೆದೆಲೆ ಕೊಡುತ್ತಾರೆ. 'ಅಂಕಿಲಾ' ಬೆಡಗೂ ಕೂಡಾ ವಾಲ್ಮೀಕಿ ಪಂಗಡದಲ್ಲಿಯೇ ಇದೆ. ಈ ರೀತಿಯಾಗಿ ವಾಲ್ಮೀಕಿಯ ಮಕ್ಕಳು ಅಡಗಿದ್ದ ಸ್ಥಳಗಳ ಮೇಲಿಂದ ಬೆಡಗುಗಳುಂಟಾದವು ಎಂದು ಹೇಳುತ್ತಾರೆ.

ಈ ಬೆಡಗುಗಳಿಗೆ ಬಳಕೆಯಲ್ಲಿ ಕುಲಗಳೆಂದೂ, ಬಳಿಗಳೆಂದೂ ಇಲ್ಲವೇ ಗೋತ್ರಗಳೆಂದೂ ಕರೆಯುತ್ತಾರೆ. ಒಂದೊಂದು ಬೆಡಗಿನ ಹುಟ್ಟಿಗೆ ಒಂದೊಂದು ಹೆಸರಿದೆ. ಈ ಬೆಡಗುಗಳಿಗೆ ಪ್ರಕೃತಿಯಲ್ಲಿಯ ವಸ್ತು, ಪ್ರಾಣಿ, ಗಿಡ, ಮರ, ಸ್ಥಳ, ವೃತ್ತಿ ಹಾಗೂ ಹೂಗಳ ಹೆಸರುಗಳನ್ನು ಕೊಡಲಾಗಿದೆ. ಪ್ರಕೃತಿಯ ವಸ್ತುಗಳೊಡನೆ, ಕುಲಮೂಲವನ್ನು ಸಮೀಕರಿಸುವ ಈ ಕ್ರಮ ಬಹುತೇಕ ಬುಡಕಟ್ಟು ಜನಾಂಗಗಳಲ್ಲಿ ಕಂಡು ಬರುತ್ತದೆ. ಬೇಡರು ಆಂಧ್ರದ ಮೂಲದಿಂದ ಬಂದಿರುವುದರಿಂದ ಇವರ ಅನೇಕ ಬೆಡಗುಗಳು ತೆಲುಗುಮಯವಾಗಿವೆ. ಈ ಸಮುದಾಯದವರು ಪರಸ್ಪರರಲ್ಲಿ ನೆಂಟಸ್ತಿಕೆ ಬೆಳೆಸಬೇಕಾದರೆ, ನೆಂಟಸ್ತನ ಬೆಳೆಸುವವರ ಬೆಡಗು, ನೆಂಟಸ್ತನ ಬಯಸುವವರ ಬೆಡಗು ಒಂದೇ ಆಗಿರಬಾರದೆಂಬುದು ಮುಖ್ಯ ನಿಯಮ. ಇಬ್ಬರ ಬೆಡಗು ಒಂದೇ ಆದರೆ ಅವರು ಅಣ್ಣ-ತಮ್ಮಂದಿರು ಆಗುತ್ತಾರೆ. ಕಾರಣ ಅವರ ನಡುವೆ ಮದುವೆ ಸಂಬಂಧ ಏರ್ಪಡುವುದಿಲ್ಲ. ಬೇರೆ ಜಾತಿ ಪುರುಷನು ಈ ಜಾತಿಗೆ ಸೇರಿದರೆ ಅವನಿಗೆ 'ಮಲ್ಲನವರ' ಹೆಸರಿನ ಬೆಡಗನ್ನು ದಾಖಲಿಸುತ್ತಾರೆ. ಬೇರೆ ಜಾತಿಯ ಸ್ತ್ರೀ ಈ ಜಾತಿಯ ಪುರುಷನನ್ನು ಲಗ್ನವಾದರೆ ಅವಳಿಗೆ 'ಗುಜ್ಜಲವರ' ಹೆಸರಿನಿಂದ ಬೆಡಗನ್ನು ದಾಖಲಿಸುತ್ತಾರೆ.

ಇತ್ತೀಚೆಗೆ ಸಂಶೋಧಕರಾದ ಡಾ. ಕೃಷ್ಣಮೂರ್ತಿ ಹನೂರು ಅವರು ತಮ್ಮ 'ಮ್ಯಾಸ ಬೇಡರ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಮಲ್ಲಿನಾಯಕರ ಗುಂಪಿನಲ್ಲಿ ಅನೇಕ ಬೆಡಗುಗಳು ಹಾಗೂ ಚಂದ್ರವಂಶದ ಮಂದಲವರ ಗುಂಪಿನಲ್ಲಿ ಅನೇಕ ಬೆಡಗುಗಳು ಇರುತ್ತವೆ. ಈ ಎಲ್ಲರ ಬೆಡಗುಗಳು ಬೇರೆ ಬೇರೆಯಾದರೂ, ಇವರೆಲ್ಲರೂ ಅಣ್ಣ-ತಮ್ಮಂದಿರು. ಇವರಲ್ಲಿ ಹೆಣ್ಣು ಕೊಡು-ಕೊಳ್ಳುವುದು ನಿಷೇಧವಿದೆ ಉದಾ. ವಡೇಲೋರು ಬೆಡಗಿನ ಖಾಸ ಅಣ್ಣ-ತಮ್ಮಂದಿರ ಬೆಡಗು ವಂಶಪಾರಂಪರವಾಗಿ ವಡೇಲೋರು ಎಂದೇ ಪೀಳಿಗೆಯಿಂದ ಪೀಳಿಗೆಗೆ ಸಾಗುತ್ತದೆ. ಇದೇ ಗುಂಪಿನ 'ಬಂಗಾರನೋರು' ಬೆಡಗಿನವರ ಬೆಡಗು ಬಂಗಾರನೋರು ಎಂದೇ ಮುಂದುವರಿಯುತ್ತದೆ. ಆದರೆ ವಡೇಲೋರು ಹಾಗೂ ಬಂಗಾರನೋರು ಅಣ್ಣ ತಮ್ಮಂದಿರು ಆಗುವುದಿಲ್ಲ. ಕಾರಣ ಈ ಜನರ ನಡುವೆ ವಿವಾಹ ಸಂಪರ್ಕ ಏರ್ಪಡಿಸಬಹುದು.

ಮಿನಿ ವಸಿಷ್ಠರ ಪ್ರಕಾರ ಒಂದೇ ಬೆಡಗಿನವರು ಏಳನೇ ತಲೆಮಾರುಗಳವರೆಗೆ ಮಾತ್ರ ವಿವಾಹವಾಗಬಾರದು ಎಂದಿದ್ದಾರೆ. ಆದರೆ ಎಂಟನೇ ತಲೆಮಾರಿಗೆ ಅನುವಂಶಿಕ ರಕ್ತ ಸಾಮ್ಯವು ಶತಾಂಶಕ್ಕಿಂತಲೂ ಕಡಿಮೆಯಾಗುತ್ತದೆಂದು ಹೇಳಿದ್ದಾರೆ. ಎಂಟನೇ ತಲೆಮಾರಿನವರಿಗೆ ರಕ್ತ ಸಂಬಂಧವು ಗುರುತಿಸಲಾರದಷ್ಟು ಬೇರೆಯಾಗಿರುತ್ತದೆಂದು ಹೇಳಲಾಗಿದೆ.

| ೧ | ೨ | ೩ | ೪ | ೫ | ೬ | ೭ | ೮ |
|---|---|---|---|---|---|---|---|
| ೧ | ೧/೨ | ೧/೪ | ೧/೮ | ೧/೧೬ | ೧/೩೨ | ೧/೬೪ | ೧/೧೨೮ |

ಎಂಟನೇ ತಲೆಮಾರಿನವರಿಗೆ ರಕ್ತ ಸಾಮ್ಯವು ಶತಾಂಶಕ್ಕಿಂತಲೂ ಕಡಿಮೆಯಾಗುವುದನ್ನು ಮೇಲಿನ ಉದಾಹರಣೆಯಲ್ಲಿ ಕಾಣಬಹುದು. ಆದರೂ ವಾಲ್ಮೀಕಿ-ನಾಯಕರು ತಮ್ಮ ಕುಲದ ಬೇರೆ ಬೇರೆ ಬೆಡಗಿನವರೊಡನೆ ಮಾತ್ರ ವಿವಾಹವಾಗುತ್ತಾರೆ ಹೊರತು ಒಂದೇ ಬೆಡಗಿನವರೊಡನೆ ವಿವಾಹ ಮಾಡಿಕೊಳ್ಳುವದಿಲ್ಲ. ಆದರೆ ಒಂದೇ ಹೆಸರಿನ ಬೆಡಗಿನವರು ಎಂಟನೇ ತಲೆಮಾರಿನ ನಂತರ ವಿವಾಹವಾಗಬಹುದು ಎನ್ನಲಾಗಿದೆ.

ಬೆಳಗಾಂವ ಹಾಗೂ ಗುಲಬುರ್ಗಾ ವಿಭಾಗದ ಮತ್ತು ಮಹಾರಾಷ್ಟ್ರದಲ್ಲಿರುವ ಬೇಡರು, ಬೇರಡರು, ವಾಲ್ಮೀಕರು, ನಾಯಕರು ಈಗಲೂ ಒಂದು ಬೆಡಗಿನವರು, ಅದೇ ಬೆಡಗಿನ ಕುಟುಂಬದವರೊಡನೆ ವಿವಾಹ ಏರ್ಪಡಿಸುವುದಿಲ್ಲ, ತಮ್ಮ ಕುಲದ ಬೇರೆ ಬೆಡಗಿನ ಕುಟುಂಬದವರೊಡನೆ ವಿವಾಹ ಏರ್ಪಡಿಸುತ್ತಾರೆ. ಈ ಅಂಶಗಳ ಹೆಚ್ಚಿನ ಮಾಹಿತಿಗಾಗಿ ಅನುಬಂಧದಲ್ಲಿ ವೀಕ್ಷಿಸುವುದು.

**೨.೬ ಸಾಮಾಜಿಕ ಸ್ಥಿತಿಗತಿ**

'Might is right' ಎಂಬ ಕಾಲದಲ್ಲಿ ಅಶಕ್ತ ಜೀವಿಗಳಿಗೆ ಉಳಿಗಾಲವಿರಲಿಲ್ಲ. ಬಲಿಷ್ಠವಾದವು ಬದುಕುತ್ತಿದ್ದವು. ಒಂದು ಇನ್ನೊಂದನ್ನು ತಿಂದು ಬದುಕುವುದು ಸಹಜವಾಗಿತ್ತು. ಅದು ಭಯಾನಕವಾದಾಗ ಮನುಷ್ಯ ತನ್ನ ಹಾಗೂ ಸಮುದಾಯದ ಉಳಿಯುವಿಕೆಗಾಗಿ ನೀತಿ ನಿಯಮಗಳನ್ನು ರೂಪಿಸಿಕೊಂಡು, ತಾನು ಬದುಕಿ ಇತರರಿಗೂ ಬದುಕುಳಿಯುವ ವ್ಯವಸ್ಥೆಯನ್ನು ರೂಪಿಸಿದ, ಪರಿಣಾಮ ಸಮಾಜ ಸೃಷ್ಠಿಯಾಯಿತು. ಮಾನವ ಸಾಮಾಜಿಕ ಜೀವಿಯಾದ ಇತರ ಪ್ರಾಣಿಗಳಿಂದ ಪ್ರತ್ಯೇಕಿತನಾಗಿ ಶ್ರೇಷ್ಠನೆನಿಸಿಕೊಂಡನು.

ವ್ಯಕ್ತಿ ಸಾಮಾಜಿಕ ಜೀವಿಯಾಗಲು ಕಾರಣ, ತನ್ನ ರಕ್ಷಣೆಗಾಗಿ, ಅಗತ್ಯಗಳ ಪೂರೈಕೆಗಾಗಿ, ಜ್ಞಾನಾರ್ಜನೆಗಾಗಿ,

ಅನಿವಾರ್ಯವಾಗಿ ಗುಂಪುಜೀವನ ನಡೆಸುವಂತೆ ಮಾಡಿದೆ. ಇಂತಹ ಪ್ರತಿ ಸಮಾಜಗಳು ತಮ್ಮದೇ ಆದ ಆಚಾರ-ವಿಚಾರ, ರೀತಿ-ನೀತಿ ಸಂಪ್ರದಾಯ, ಮದುವೆ, ಹಬ್ಬ, ಹರಿದಿನ, ಶವಸಂಸ್ಕಾರ, ಇತ್ಯಾದಿ ಕಾರ್ಯಗಳನ್ನು ಅವರವರ ಪರಿಸರಕ್ಕನುಗುಣವಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ.

"ಪ್ರತಿಯೊಬ್ಬ ವ್ಯಕ್ತಿಯು ಆಯಾ ಸಮುದಾಯದ ಸಂಪ್ರದಾಯದಿಂದ ರೂಪಿತನಾದವನು. ನಡೆ, ನುಡಿ, ಆದರ್ಶಗಳ ನೈತಿಕ ಮೌಲ್ಯಗಳು, ಕಟ್ಟುಪಾಡುಗಳನ್ನು ಒದಗಿಸಿ, ವ್ಯಕ್ತಿಯನ್ನು ರೂಪಿಸುತ್ತದೆ"[೬].

ಸಮಾಜದಲ್ಲಿ ಇವರ ಸ್ಥಾನಮಾನಗಳನ್ನು ವಿಶ್ಲೇಷಿಸಿದಾಗ, ಮೇಲ್ಜಾತಿ, ಮೇಲ್ವರ್ಗದವರು ಇವರನ್ನು ತಮ್ಮ ಭೋಗಕ್ಕೆ, ಅನುಕೂಲವಾಗುವಂತೆ, ಅವರ ಸೇವಾಕಾರ್ಯಗಳಲ್ಲಿ ಬಲವಂತವಾಗಿಯಾದರೂ ತೊಡಗಿಸಿಕೊಂಡಿರುವುದನ್ನು ವೈದಿಕರು ಸೃಷ್ಟಿಸಿದ ಸಮಾಜಶ್ರೇಣಿಕರಣದ ಕೊನೆಯಸ್ಥಾನದಲ್ಲಿ ಇವರನ್ನು ಇಟ್ಟು ಮೇಲ್ಜಾತಿಗಳ ಸೇವೆಗಾಗಿಯೇ ಸೃಷ್ಟಿಕರ್ತನಾದ ಬ್ರಹ್ಮನು ತಮ್ಮನ್ನು ಸೃಷ್ಟಿಸಿದ್ದಾನೆಂಬ ನಂಬಿಕೆ ಇನ್ನು ಕೆಲವರಲ್ಲಿರುವುದನ್ನು ಗುರುತಿಸಬಹುದಾಗಿದೆ. ಹೀಗಾಗಿ. ಇವರ ಸ್ಥಾನ ಸಮಾಜದಲ್ಲಿ ನಿಕೃಷ್ಟವಾಗಿದೆ. ಇನ್ನೂ ಬುಡಕಟ್ಟು ಮಹಿಳೆಯರನ್ನು ತೆಗೆದುಕೊಂಡಾಗ ಅವಳ ದೈಹಿಕ ಶ್ರಮದ ದುರ್ಬಳಕೆಯಾಗುತ್ತಿರುವುದು ಮಾತ್ರವಲ್ಲದೇ ಆಕೆಯ ದೇಹವೂ ದುರ್ಬಳಕೆಗೆ ಒಳಗಾಗಿರುವುದನ್ನು ಗಮನಿಸಬಹುದಾಗಿದೆ. ಮೇಲ್ಜಾತಿಗಳ ಹುನ್ನಾರಗಳಿಗೆ ಸಿಲುಕಿ, ಅತ್ಯಂತ ಅಮಾನವೀಯವಾದ ಸಾಂಪ್ರದಾಯಿಕ, ಧರ್ಮ, ಕರ್ಮದ ಹೆಸರಿನಲ್ಲಿ ಮಾನಸಿಕ ಮತ್ತು ದೈಹಿಕ ದೌರ್ಜನ್ಯಕ್ಕೆ ಒಳಪಡಿಸಿರುವುದು ಕಂಡು ಬರುತ್ತಿದೆ. ಬೇಡ ಬುಡಕಟ್ಟಿನವರಲ್ಲಿ ಬಹುತೇಕ ಜನರು ದಟ್ಟದಾರಿದ್ರ್ಯವನ್ನು ಅನುಭವಿಸುತ್ತಿದ್ದು, ಅಪಮಾನಗಳಿಂದ, ನೊಂದು, ಆತ್ಮಗೌರವಕ್ಕೆ ಚ್ಯುತಿಬರುವ ಹಾಗಿದ್ದರೂ, ಅಸಹಾಯಕತೆಯಿಂದ ಅನುಭವಿಸುತ್ತಿಗುವುದು ನಿಜಕ್ಕೂ ಶೋಚನೀಯವಾಗಿದೆ.

ಆದರೂ ಸಮುದಾಯಗಳಲ್ಲಿ ಪರಿವರ್ತನೆಯೆಂಬುದು ನಿಧಾನಗತಿಯಲ್ಲಿ ಸಾಗುತ್ತಿದೆ. ಇತ್ತೀಗೆ ಶಿಕ್ಷಣ, ಹಾಗೂ ಆಧುನಿಕತೆಯ ಪ್ರಭಾವದಿಂದಾಗಿ, ತಮ್ಮ ಮೂಲ ಲಕ್ಷಣಗಳಲ್ಲಿ ಬದಲಾವಣೆಗಳಾಗಿರುವುದು ಕಂಡುಬರುತ್ತಿದೆ. ಇದರಿಂದಾಗಿ ಈ ಸಮುದಾಯದ ಕೆಲವು ಪಾರಂಪರಿಕ ಜ್ಞಾನ, ಆಚಾರ-ವಿಚಾರ, ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಬುಡಕಟ್ಟಿನ ಯುವಕರು ಅನುಸರಿಸುತ್ತಿಲ್ಲ. ಮೂಲತಃ ವ್ಯವಸಾಯ ವೃತ್ತಿಯಲ್ಲದೇ ಇತರ ವೃತ್ತಿಗಳಲ್ಲಿ ಕುಶಲತೆ ಇಲ್ಲದೇ ಇರುವುದರಿಂದ ಕೂಲಿ ಕೆಲಸಕ್ಕೆ ಅಡ್ಡಿಗಳಿದ್ದು, ದೈಹಿಕ ಶ್ರಮದ ಮೇಲೆ ದೊರೆಯುವ ಕೂಲಿಯಿಂದ ಅವರ ಕುಟುಂಬವನ್ನು ಸಾಗಿಸಲು ಸಾಕಾಗುತ್ತಿಲ್ಲ. ಇದರಿಂದ ಬಹುಜನರು ಹಸಿವಿನಿಂದ, ಅನಾರೋಗ್ಯದಿಂದ, ಅಕಾಲ ಮರಣಕ್ಕೂ ತುತ್ತಾಗುತ್ತಿದ್ದಾರೆ. ಈ ಸಮುದಾಯದವರು ಕುಟುಂಬ ಯೋಜನೆಯನ್ನು ವ್ಯಾಪಕವಾಗಿ ಅಳವಡಿಸಿಕೊಳ್ಳದ ಕಾರಣ, ತಮ್ಮ ಸಮುದಾಯದ ಬೇಡರ ಕಣ್ಣಪ್ಪ ದೇವರಲ್ಲಿ ಮನೆತುಂಬಾ ಮಕ್ಕಳನ್ನು ಬೇಡಿಕೊಂಡನಂತೆ ಎನ್ನುತ್ತಾ ಹೆಚ್ಚು ಮಕ್ಕಳಿಗೆ ಜನ್ಮ ಕೊಡುವುದು ಬಡತನಕ್ಕೆ ಆಹ್ವಾನ ನೀಡಿದಂತಾಗಿದೆ.

**೨.೬.೧ ಕೌಟುಂಬಿಕ ವ್ಯವಸ್ಥೆ**

ಸಮಾಜದ ಅತ್ಯಂತ ಚಿಕ್ಕ ಘಟಕ ಮತ್ತು ಆಧಾರಸ್ಥಂಭ ಕುಟುಂಬವೇ ಆಗಿದೆ. ಮೂ.ಭ.ಪರ್ಲರವರು "ಮನುಷ್ಯನ ಜೀವನದಲ್ಲಿ ಕುಟುಂಬವೇ ಸಮಾಜದ ಮೂಲ ಹಾಗೂ ಮುಖ್ಯ ಘಟಕ" ಎಂಬುದಾಗಿ ಪುನಃ

ಕುಟುಂಬ ವ್ಯವಸ್ಥೆಯು ಮಾನವನ ಇತಿಹಾಸದಲ್ಲಿ ಮಾನವನ ಸಮಾಜದ ಉನ್ನತಿಯಲ್ಲಿ ಬಲುದೊಡ್ಡ ಸಾಧನೆ ಪ್ರಾಚೀನ ಕಾಲದಿಂದಲೂ ಯಶಸ್ವಿಯಾಗಿ ಸಾಗಿ ಬಂದಿರುವ ಸಾರ್ವದೇಶಿತ, ಸಾರ್ವಕಾಲಿಕ ಉಪಯೋಗಿಯಾಗಿರುವ ಉತ್ತಮ ಸಂಸ್ಥೆ ಕುಟುಂಬ''[೮] ಎಂದು ಹೇಳಿದ್ದಾರೆ. ನಿಸರ್ಗದ ವ್ಯಾಪಾರದಿಂದ ಕಾಣಿಸಿಕೊಳ್ಳುವ ಹಸುಳೆಗಳು ಹೊಸ ವ್ಯಕ್ತಿಗಳಾಗಿಯೂ, ದಂಪತಿಗಳ ಮಕ್ಕಳಾಗಿ ಒಂದೇ ಕುಟುಂಬದಲ್ಲಿ ಸೇರಿ ನಿಲ್ಲುವುದು ಸ್ವಾರಸ್ಯಕರವಾದ ಸಂಗತಿಯಾಗಿದ್ದು, ಇಲ್ಲಿನ ಸಂಬಂಧಗಳೇ ಕುಟುಂಬದ ಜೀವಾಳ. ಇವರುಗಳ ಕುಟುಂಬದಲ್ಲಿ ವ್ಯಕ್ತಿ ಸಂಬಂಧಗಳನ್ನು ಬಹು ಆಳವಾಗಿ ಅವಲಂಬಿಸಿರುತ್ತಾನೆ. ಹಾಗೆ, ವ್ಯಕ್ತಿಗಳನ್ನು ಸಂಬಂಧಗಳು ಅವಲಂಬಿಸಿದ್ದು, ಇಲ್ಲಿ ವ್ಯಕ್ತಿಯ ವ್ಯವಹಾರಗಳು, ಪ್ರವೃತ್ತಿಗಳು, ಪ್ರಕ್ರಿಯೆಗಳು, ಕಲ್ಪನೆಗಳು ಇವರ ಸಮಾಜದ ನೆಲೆಯಲ್ಲಿ ಮೂಡಿಬಂದ ಸಂಬಂಧಗಳನ್ನು ಅವಲಂಬಿಸಿರುತ್ತವೆ. ಇವರುಗಳು ಮಾಡುವ ಒಂದೊಂದು ಕೆಲಸದಲ್ಲಿಯೂ ಹತ್ತಾರು, ನೂರಾರು, ಸಾವಿರಾರು ಸಂಬಂಧಗಳು ಸಮುದ್ರದ ಅಲೆಗಳಂತೆ ಮತ್ತೆ ಮತ್ತೆ ಮೇಲೇರಿ ಬರುತ್ತಿರುತ್ತವೆ. ಕುಟುಂಬವೆನ್ನುವುದು ಈ ಅಲೆಗಳ ಏರಿಳಿತವೇ ಆಗಿರುತ್ತದೆ.

ಇಂತಹ ಕುಟುಂಬಗಳ ವ್ಯವಸ್ಥೆ ಹೊಂದಿದ ಬೇಡ ಸಮುದಾಯದವರು ಹೆಚ್ಚಾಗಿ ಅವಿಭಕ್ತ ಕುಟುಂಬಗಳಿಗೆ ಆದ್ಯತೆ ನೀಡುತ್ತಿದ್ದರು. ಈಗಲೂ ಗ್ರಾಮಾಂತರ ಪ್ರದೇಶಗಳಲ್ಲಿ ಬೇಡರ ಅವಿಭಕ್ತ ಕುಟುಂಬಗಳು ವ್ಯಾಪಕವಾಗಿ ಕಂಡುಬರುತ್ತಿವೆ. ಆದರೆ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಶಿಕ್ಷಣ, ಕೈಗಾರಿಕೀಕರಣ, ನಗರೀಕರಣ, ಆಧುನೀಕರಣ ಮೊದಲಾದ ಕಾರಣಗಳಿಂದಾಗಿ, ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ, ಅಥವಾ ಅವಲಂಬಿತ ಕೇಂದ್ರ ಕುಟುಂಬಗಳಾಗಿ ಮಾರ್ಪಡುತ್ತಿರುವುದು ಕಂಡುಬರುತ್ತದೆ. ಹೀಗೆ ಪರಿವರ್ತನೆಯ ಹಾದಿಯಲ್ಲಿ ಬೇಡರು ತಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡಿದ್ದಾರೆ. ಆದರೆ ತನ್ನ ಸದಸ್ಯರ ಭದ್ರತೆ, ಪೋಷಣೆ, ಕೆಲ ಬೇಡಿಕೆಗಳ ಈಡೇರಿಕೆ ಮಾಡುತ್ತಿದ್ದರೂ ಸಂಬಂಧಗಳಲ್ಲಿ ಸಡಿಲತೆ ಉಂಟಾಗಿದೆ.

ಈ ಸಮುದಾಯ ಕೌಟುಂಬಿಕ ವ್ಯವಸ್ಥೆಯನ್ನು ಎರಡು ಪ್ರಕಾರಗಳಲ್ಲಿ ಕಾಣಬಹುದಾಗಿದೆ. ೧.ಪಿತೃ ಪ್ರಧಾನ ವ್ಯವಸ್ಥೆ, ೨.ಮಾತೃಪ್ರಧಾನ ವ್ಯವಸ್ಥೆ. ಬಹುತೇಕ ಕುಟುಂಬಗಳು ಪುರುಷ ಪ್ರಧಾನ ವ್ಯವಸ್ಥೆಯ ಸೂಚಕವಾದ 'ಪಿತೃ ಪ್ರಧಾನ' ವ್ಯವಸ್ಥೆಯ ಕುಟುಂಬವನ್ನೇ ಹೊಂದಿವೆ. ತಂದೆಯೇ ಮನೆಯ ಯಜಮಾನನಾಗಿದ್ದು ಆತನ ಹೆಸರಿನಲ್ಲಿಯೇ ಅಧಿಕಾರ ಚಲಾವಣೆ, ಆಸ್ತಿ ಪಾಸ್ತಿಯ ಮಹಿವಾಟು ನಡೆಯುತ್ತದೆ. ಕುಟುಂಬದ ನಿರ್ವಹಣಾ ಜವಬ್ದಾರಿಯನ್ನು ಪುರುಷನೇ ತೆಗೆದುಕೊಂಡಿರುತ್ತಾನೆ. ಆದರೆ ಇತ್ತೀಚೆಗೆ ಕೆಲವು ಕುಟುಂಬಗಳಲ್ಲಿ ಪುರುಷರು ದುಶ್ಚಟಗಳಿಗೆ ಬಲಿಯಾಗಿ, ಕೇವಲ ನಾಮಮಾತ್ರಕ್ಕೆ ಕುಟುಂಬದ ಯಜಮಾನನಾಗಿರುವ ಪರಿಸ್ಥಿತಿಯೂ ಇದೆ. ಕಾರಣ ಜೂಜು, ಕುಡಿತ, ಇತ್ಯಾದಿ ಚಟಗಳಿಗೆ ಸಿಲುಕಿ, ತನ್ನ ಕುಟುಂಬದ ಏಳಿಗೆಗಾಗಿ ದುಡಿಯದೇ ಕೇವಲ ತನ್ನ ದುಶ್ಚಟಗಳನ್ನು ಈಡೇರಿಸಿಕೊಳ್ಳಲು ಸಾಲ ಮಾಡುವ ಪರಿಸ್ಥಿತಿಯಾಗಿದೆ. ಈ ಸಮಸ್ಯೆಯಿಂದಾಗಿ ಇಂತಹ ಕುಟುಂಬಗಳಲ್ಲಿ ಹೆಂಗಸು ಮತ್ತು ಮಕ್ಕಳು ದುಡಿದು ತಂದು ಮನೆಯ ಯಜಮಾನನನ್ನು ಸಾಕುವುದು ಅನಿವಾರ್ಯವಾಗಿದೆ.

**ಮಾತೃ ಪ್ರಧಾನ ಕುಟುಂಬ:** ಬುಡಕಟ್ಟಿನಲ್ಲಿ ಆರಂಭದ ಹಂತದ ಕುಟುಂಬದ ವ್ಯವಸ್ಥೆ ಎಂದರೆ. ಮಾತೃಪ್ರಧಾನ

ಕುಟುಂಬವಾಗಿದೆ. ಮನೆಯ ಎಲ್ಲಾ ನಿರ್ವಹಣಾ ಜವಬ್ದಾರಿಯನ್ನು ತಾಯಿಯೇ ಹೊತ್ತು, ಆಕೆಯ ಹೆಸರಿನಲ್ಲಿಯೂ ಆಸ್ತಿಪಾಸ್ತಿ ವಹಿವಾಟು ಇತರೆ ಕೊಡುವ ತೆಗೆದುಕೊಳ್ಳುವ ಎಲ್ಲಾ ವ್ಯವಹಾರ ನಡೆಯುವುದಾಗಿದೆ. ಇಂತಹ ಕುಟುಂಬಗಳು ಈಗಲೂ ಈ ಸಮಾಜಗಳಲ್ಲಿ ಕೆಲವೊಂದನ್ನು ಗುರುತಿಸಬಹುದಾಗಿದ್ದು, ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾತೃ ಪ್ರಧಾನ ಕುಟುಂಬದ ಲಕ್ಷಣಹೊಂದಿದ ಕುಟುಂಬಗಳು ಕಂಡುಬಂದಿವೆ. ಇಂತಹ ಮನೆಗಳು ಸಾಮಾನ್ಯವಾಗಿ 'ದೇವದಾಸಿ ಸಂಪ್ರದಾಯ' ಅಳವಡಿಸಿಕೊಂಡ ಕುಟುಂಬಗಳೇ ಆಗಿವೆ. ಇಲ್ಲಿ ಸ್ತ್ರೀಯು ಕುಟುಂಬದ ಸಂಪೂರ್ಣ ಜವಬ್ದಾರಿ ಹೊತ್ತು ತಂದೆ ತಾಯಿ ಮತ್ತು ಕುಟುಂಬದ ಎಲ್ಲಾ ಸದಸ್ಯರ ಬೇಡಿಕೆ ಈಡೇರಿಸುತ್ತಾಳೆ. ತಂದೆಯ ಆಸ್ತಿಯಲ್ಲಿ ತನ್ನ ಸಹೋದರರಂತೆ, ಸಮಪಾಲು ಪಡೆಯುತ್ತಾಳೆ. ಸಹೋದರರಲ್ಲಿ ಕೆಲವರು ಸ್ವಇಚ್ಛೆಯಿಂದ ಹೊರ ಬಂದು ಸ್ವಾತಂತ್ರ್ಯ ಜೀವನ ನಡೆಸುತ್ತಾರೆ.

**೨.೬.೨ ಬಂಧುತ್ವ**

ಈ ಬಂಧುತ್ವವು ರಕ್ತಸಂಬಂಧ ಮತ್ತು ವೈವಾಹಿಕ ಸಂಬಂಧಗಳ ಮೂಲಕ ಏರ್ಪಡುವುದು. ಬೇಡ ಬುಡಕಟ್ಟುಗಳಲ್ಲಿ ಈ ಬಂಧುತ್ವಕ್ಕೆ ಹಿಂದೆ ಬಹು ಮಹತ್ವದ ಸ್ಥಾನವಿತ್ತು. ಈಗ ಈ ಸಮಾಜವನ್ನು ಅವಲೋಕಿಸಿದಾಗ, ಬಂಧುತ್ವದ ಅಂಶಗಳಲ್ಲಿ ಸಡಿಲತೆ ಕಂಡುಬರುತ್ತದೆ. ಈ ಸಂಬಂಧಗಳು ಮೊದಲಿನಷ್ಟು ಆತ್ಮೀಯ ಸಂಬಂಧಗಳಾಗಿ ಉಳಿದಿಲ್ಲ. ಪೂರ್ವಿಕರ ಬಗ್ಗೆ ಗೌರವವೂ ಕಡಿಮೆಯಾಗುತ್ತಿದ್ದು, ಕುಟುಂಬದ ಸದಸ್ಯರಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳು ಹೆಚ್ಚಾಗಿವೆ. ಬಹುತೇಕ ಯುವಕರು ದುಶ್ಚಟಗಳಿಗೆ ದಾಸರಾಗಿ, ತಮ್ಮ ಕುಟುಂಬದ ಇತರ ಸದಸ್ಯರೊಂದಿಗೆ ದುರ್ವರ್ತನೆಯಿಂದ ನಡೆದುಕೊಳ್ಳುವ ದೃಶ್ಯಗಳು ಕಾಣಸಿಗುತ್ತವೆ. ವೃದ್ಧರನ್ನು ಸಾಕುವಲ್ಲಿ ಬೇಜವಾಬ್ದಾರಿ ತೋರುವ ಮನೋಭಾವವುಳ್ಳವರಾಗಿ ಯುವಕರು ವರ್ತಿಸುತ್ತಾರೆ. ಹಿಂದೆ ಕುಟುಂಬಕ್ಕೋಸ್ಕರ ಬಲಿದಾನ ಮಾಡುವಂತಹ ಮನೋಸ್ಥೈರ್ಯದವರಿದ್ದರು. ಈಗ ಕುಟುಂಬದ ಆಗುಹೋಗುಗಳ ಬಗ್ಗೆ ಎಷ್ಟೋ ಜನ ಸಂಬಂಧವಿಲ್ಲದವರಂತೆ ನಟಿಸುತ್ತಿದ್ದಾರೆ. ನಿಕಟತೆಯ ಅಭಾವದಿಂದ ಕೂಡಿದ ಸಂಬಂಧಗಳನ್ನು ಈ ಸಮುದಾಯದಲ್ಲಿ ಇಂದು ಹೆಚ್ಚಾಗಿ ಕಾಣಬಹುದಾಗಿದೆ.

**೨.೬.೩ ಜಾತಿ ಪಂಚಾಯಿತಿ**

ಬೇಡ ಸಮುದಾಯವು ತನ್ನ ಪ್ರತಿ ಪಟ್ಟಣ ಮತ್ತು ಗ್ರಾಮಗಳಲ್ಲಿ ತನ್ನದೇ ಆದ ಒಳಾಡಳಿತ ವ್ಯವಸ್ಥೆ, ಅಥವಾ ಜಾತಿ ಪಂಚಾಯಿತಿ ಹೊಂದಿರುವುದು ವಿಶೇಷವಾಗಿ ಕಂಡುಬರುತ್ತದೆ. ದೈವಸ್ಥರು ಎಂಬ ಹೆಸರಿನಲ್ಲಿ ಪ್ರತಿ ಕೇರಿಯಲ್ಲಿನ ಸಮುದಾಯದ ಬಾಂಧವರೆಲ್ಲ ಸೇರಿ, ತಮಗೆ ಸಂಬಂಧಿಸಿದ ಒಳ ಜಗಳಗಳು, ವ್ಯಾಜ್ಯ, ವಿವಾಹ, ಆಸ್ತಿ ಮುಂತಾದ ಸಣ್ಣ ಪುಟ್ಟ ಸಮಸ್ಯೆಗಳನ್ನು ಬಗೆಹರಿಸುವ ಮೂಲಕ ಸಮುದಾಯದ ಸಂಘಟನಾ ಕಾರ್ಯ ಮಾಡಿ, ತಪ್ಪು ಮಾಡಿದವರಿಗೆ ದಂಡ ವಿಧಿಸುವರು. ಬಂದ ಹಣವನ್ನು ಸಮುದಾಯದ ಸದಸ್ಯರ ತುರ್ತು ಸಂದರ್ಭಗಳಿಗೆ ಸಾಲದ ರೂಪದಲ್ಲಿ ನೀಡುವುದುಂಟು. ಸಮುದಾಯದ ಒಳಾಡಳಿತ ವ್ಯವಸ್ಥೆಯ ನಡುವೆಯು ಕೆಲವರು ಅದನ್ನು ಮೀರಿ ನ್ಯಾಯಲಯಕ್ಕೆ ಮೊರೆ ಹೋಗುವುದು ಕಂಡುಬರುತ್ತದೆ.

ಪ್ರಸ್ತುತ ಕಟ್ಟೆ ಪಂಚಾಯಿತಿಗಳನ್ನು ಮನೆಗಳನ್ನು ದೈವದ ಮನೆಗಳೆಂದು ಕರೆಯುತ್ತಾರೆ. ಇವು ವಿವಾಹ, ಹಬ್ಬ, ಜಾತ್ರೆ ಇಂತಹ ಸಂದರ್ಭದಲ್ಲಿ ಇದು ಪ್ರಮುಖ ಪಾತ್ರ ವಹಿಸುತ್ತದೆ. ವಿವಾಹದ ಸಂದರ್ಭದಲ್ಲಿ ವಿಶೇಷ

ರೀತಿಯಲ್ಲಿ ಕಾರ್ಯ ನಿರ್ವಹಿಸುವುದನ್ನು ನೋಡಬಹುದಾಗಿದೆ. (ಅನುಬಂಧ ಒಂದರಲ್ಲಿ ಬೇಡ ಸಮುದಾಯದ ಬೆಡಗುಗಳ ಪಟ್ಟಿಯನ್ನು ಗಮನಿಸಬಹುದಾಗಿದೆ)

**೨.೭ ಆರ್ಥಿಕ ಸ್ಥಿತಿಗತಿ**

ಇವರ ಆರ್ಥಿಕ ಸ್ಥಿತಿಯು ತುಂಬಾ ಹೀನಾಯವಾಗಿದೆ. ಬಹುಸಂಖ್ಯಾತರು ಕೃಷಿಯನ್ನು ಪ್ರಧಾನ ಕಸುಬಾಗಿ ಹೊಂದಿ ಜೀವನ ನಡೆಸುತ್ತಿದ್ದಾರೆ. ಕೆಲವರು ಪಶುಪಾಲನೆಯನ್ನು ತಮ್ಮ ವೃತ್ತಿಯನ್ನಾಗಿ ಮುಂದುವರೆಸಿದ್ದಾರೆ. ಇತ್ತೀಚಿನ ಅರಣ್ಯ ಕಾಯ್ದೆಗಳಿಂದ ಬೇಟೆಯು ನಿಂತು ಹೋಗಿದೆ. ಇವರು ಉತ್ಪಾದಕರೂ ಹಾಗೂ ಉಪಭೋಗಕರಾಗಿದ್ದು, ಶೇ ೮೦ ರಷ್ಟು ಜನರು ಕೃಷಿಯನ್ನೇ ಪ್ರಧಾನ ಕಸುಬನ್ನಾಗಿ ಅವಲಂಬಿಸಿದ್ದಾರೆ. ಇವರ ಆರ್ಥಿಕ ಪರಿಸ್ಥಿತಿಯನ್ನು ತಿಳಿಯಲು ಅವರಲ್ಲಿರುವ ಹಸು, ಕರು, ಕುರಿ, ಎಮ್ಮೆ ಇತ್ಯಾದಿ ಸಾಕುಪ್ರಾಣಿಗಳನ್ನು ಸಹ ಗಣನೆಗೆ ತೆಗೆದುಕೊಳ್ಳಲಾಗುತ್ತದೆ. ಕೃಷಿ, ಕೃಷಿಕೂಲಿ, ಪಶುಪಾಲನೆ, ಮತ್ತು ಅವರ ಕಸುಬುಗಳು ಆರ್ಥಿಕತೆಯ ಮೂಲಾಧಾರಗಳಾಗಿವೆ.

ಹಿಂದೆ ಇಲ್ಲಿ ನೆಲೆಸಿದ್ದ ಬೇಡರ ಮನೆಗಳು ಬಹುತೇಕ ಗುಡಿಸಲು ಮನೆಗಳಾಗಿದ್ದವು. ಇವರ ಮನೆ ಹಾಗೂ ವೇಷಭೂಷಣಗಳನ್ನು ನೋಡಿದಾಕ್ಷಣ ಅವರ ಆರ್ಥಿಕ ವ್ಯವಸ್ಥೆ ಹೇಗಿದೆ ಎಂದು ಊಹಿಸಿಕೊಳ್ಳಬಹುದಾಗಿತ್ತು. ಇತ್ತೀಚಿನ ದಿನಗಳಲ್ಲಿ ಇದು ಹುಸಿಯಾದಂತಾಗಿದೆ. ಈ ಹಿಂದೆ ಬೇಡರು ಬೇಟೆ, ಪಶುಪಾಲನೆ, ಸೈನಿಕ ವೃತ್ತಿಯನ್ನು ಕೈಗೊಂಡಿದ್ದರು. ಆದರೆ ಇಂದು ಕೃಷಿಕರಾಗಿ ಪರಿವರ್ತಿತರಾಗಿದ್ದಾರೆ.

ಈಗ ಪರಿಸ್ಥಿತಿ ಬದಲಾಗಿದ್ದು ವಿದ್ಯಾವಂತರಾದ ಬೇಡ ಸಮುದಾಯ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇದರಿಂದ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ ಬದಲಾಗಿದೆ. ಇತರರಂತೆ ಉತ್ತಮ ಜೀವನ ನಡೆಸುವುದನ್ನು ಕಾಣಬಹುದಾಗಿದೆ. ರಾಜಕೀಯ ಕ್ಷೇತ್ರದಲ್ಲಿಯೂ ಅವಕಾಶಗಳನ್ನು ಪಡೆದು ಉನ್ನತ ಸ್ಥಾನಗಳನ್ನು ಪಡೆದಿರುವುದು ಸಮುದಾಯದ ಉತ್ತಮ ಬೆಳವಣಿಗೆಗೆ ಕಾರಣವಾಗಿದೆ. ಆದಾಗ್ಯೂ ಇವೆಲ್ಲ ಕೇವಲ ಬೆರಳೆಣಿಕೆಯಷ್ಟು ಜನರಿಗೆ ದಕ್ಕುವಂತಹ ಅವಕಾಶಗಳಾಗಿವೆ. ಸಮುದಾಯದ ಹೆಚ್ಚಿನ ಜನರು ಇಂದಿಗೂ ಕನಿಷ್ಟ ಬದುಕನ್ನು ಬದುಕುವ ದೃಶ್ಯ ಸಾಮಾನ್ಯವಾಗಿದೆ.

**೨.೭.೧ ಪಶುಪಾಲನೆ**

ಬೇಟೆಯ ಹಂತದ ಮುಂದುವರೆದ ಹಂತವೇ ಪಶುಪಾಲನ ಹಂತ. "ಇಲ್ಲಿಯವರೆಗೂ ಮ್ಯಾಸಬೇಡರನ್ನು ಬೇಟೆಸಂಸ್ಕೃತಿಗೆ ಸೇರಿದವರೆಂದು ನಂಬಲಾಗಿತ್ತು. ಹಾಗೆಂದೇ ವ್ಯಾಖ್ಯಾನಿಸಲಾಗುತ್ತಿತ್ತು. ಆದರೆ ಇತ್ತೀಚಿಗಿನ ಶೋಧನೆ ನಂತರ ಈ ಅನಿಸಿಕೆ ಹುಸಿಯಾಗಿದೆ"[೯]. ಹಿಂದಿನಿಂದಲೂ ಬೇಡರಿಗೆ ಪಶುಪಾಲನೆ ವೃತ್ತಿ ಇತ್ತು. ದನ, ಕರು, ಎತ್ತು, ಜೊತೆಗೆ ಕುರಿ, ಮೇಕೆ, ಎಮ್ಮೆ, ಇತ್ಯಾದಿ ಸಾಕುಪ್ರಾಣಿಗಳನ್ನು ಸಾಕುತ್ತಿದ್ದರು. ಅಂದಿನ ದಿನಗಳಲ್ಲಿ ಬಹುಸಂಖ್ಯೆ ಕುಟುಂಬಗಳು ಹೈನುಗಾರಿಕೆಯಿಂದ ಜೀವನ ಸಾಗಿಸುತ್ತಿದ್ದರು. ಇವುಗಳಿಗಾಗಿಯೇ ಪ್ರತ್ಯೇಕ ಕೊಟ್ಟಿಗೆಗಳು ಇರುತ್ತಿದ್ದವು. ಇಂದಿಗೂ ಕೆಲವು ಕುಟುಂಬಗಳು ಪಶುಪಾಲನೆಯನ್ನೇ ಅವಲಂಬಿಸಿವೆ. ಇವರು ಕೃಷಿಗೆ ಹೆಚ್ಚಾಗಿ ಮಳೆಯನ್ನೇ ಅವಲಂಬಿಸಿದ್ದಾರೆ. ಆದರೆ ಬರಗಾಲದಿಂದಾಗಿ ಊರಲ್ಲಿರುವ ದನ ಕರುಗಳ ಸಂಖ್ಯೆ ಕ್ಷೀಣಿಸುತ್ತ ಬಂದಿದೆ. ಇದನ್ನೇ ನಂಬಿದ್ದ ಅವರ ಜೀವನ ದುಸ್ತರವಾಗಿದೆ. ಅನಂತರದಲ್ಲಿ ಕೆಲವರು ನೀರಾವರಿ

## ಕೋಷ್ಟಕ ೪

### ಬಳ್ಳಾರಿ ಜಿಲ್ಲೆಯ ತಾಲ್ಲೂಕುವಾರು ವಸತಿ ರಹಿತ ಮತ್ತು ನಿವೇಶನ ರಹಿತ ಪರಿಶಿಷ್ಟರ ಕುಟುಂಬಗಳ ಪಟ್ಟಿ

| ಕ್ರ.ಸಂ. | ತಾಲ್ಲೂಕುಗಳು | ಗ್ರಾಮ ಪಂಚಾಯಿತಿ | ಮನೆ ಇಲ್ಲದವರು | | | | ನಿವೇಶನ ಇಲ್ಲದವರು | | | | ಒಟ್ಟು ಮನೆ ಮತ್ತು ವಸತಿ ರಹಿತರು | | | |
|---|---|---|---|---|---|---|---|---|---|---|---|---|---|---|
| | | | ಪ.ಜಾ | ಪ.ಪಂ. | ಇತರೆ | ಒಟ್ಟು | ಪ.ಜಾ. | ಪ.ಪಂ | ಇತರೆ | ಒಟ್ಟು | ಪ.ಜಾ | ಪ.ಪಂ. | ಇತರೆ | ಒಟ್ಟು |
| ೧ | ಬಳ್ಳಾರಿ | ೪೦ | ೨೭೧೪ | ೨೮೦೫ | ೫೦೬೫ | ೧೦೫೮೪ | ೨೨೭೭ | ೨೧೬೨ | ೩೬೧೪ | ೮೦೫೩ | ೪೯೯೧ | ೪೯೬೭ | ೮೬೭೯ | ೧೮೬೩೭ |
| ೨ | ಹಡಗಲಿ | ೨೭ | ೧೨೫೩ | ೩೪೫ | ೨೬೦೦ | ೪೧೯೮ | ೧೪೧೩ | ೩೮೨ | ೨೩೦೫ | ೪೧೦೦ | ೨೬೬೬ | ೭೨೭ | ೮೯೦೫ | ೮೨೯೮ |
| ೩ | ಹಗರಿಬೊಮ್ಮನಹಳ್ಳಿ | ೨೨ | ೧೨೮೩ | ೧೧೩೯ | ೨೯೬೭ | ೫೪೮೯ | ೯೨೭ | ೭೩೩ | ೩೦೨೨ | ೪೬೮೨ | ೨೩೧೦ | ೧೮೭೨ | ೫೯೮೯ | ೧೦೧೭೧ |
| ೪ | ಹೊಸಪೇಟೆ | ೨೩ | ೧೮೨೩ | ೧೫೧೨ | ೨೯೪೧ | ೬೨೭೬ | ೧೦೩೬ | ೮೪೯ | ೧೯೬೮ | ೩೮೫೩ | ೨೮೫೯ | ೨೩೬೧ | ೪೯೦೯ | ೧೦೧೨೯ |
| ೫ | ಕೂಡ್ಲಿಗಿ | ೩೩ | ೨೨೧೮ | ೨೮೦೮ | ೩೧೨೩ | ೮೧೪೯ | ೧೧೦೮ | ೧೩೧೨ | ೧೩೮೫ | ೩೮೦೫ | ೩೩೨೬ | ೪೧೨೦ | ೪೫೦೮ | ೧೧೯೫೪ |
| ೬ | ಸಂಡೂರು | ೨೧ | ೧೨೯೩ | ೨೪೧೩ | ೩೦೩೪ | ೯೭೪೦ | ೭೬೭ | ೧೮೨೧ | ೨೪೪೪ | ೫೦೩೨ | ೨೦೬೦ | ೪೨೩೪ | ೫೪೭೮ | ೧೧೭೭೨ |
| ೭ | ಸಿರುಗುಪ್ಪ | ೨೬ | ೧೫೫೧ | ೧೬೮೩ | ೩೨೨೦ | ೬೪೫೪ | ೯೬೯ | ೭೦೪ | ೧೬೦೮ | ೩೨೮೧ | ೨೫೨೦ | ೨೩೮೭ | ೪೮೨೮ | ೯೭೩೫ |
| | ಒಟ್ಟು | ೧೮೬ | ೧೨೨೩೫ | ೧೨೭೦೫ | ೨೨೯೫೦ | ೪೭೮೯೦ | ೮೪೯೭ | ೭೯೬೩ | ೧೬೩೪೬ | ೩೨೮೦೬ | ೨೦೭೩೨ | ೨೦೬೬೮ | ೩೯೨೯೬ | ೮೦೬೯೬ |

ಜಿಲ್ಲಾ ಪಂಚಾಯ್ತಿ ಬಳ್ಳಾರಿ ವರದಿ ೨೦೦೨ - ೦೩

ಸೌಕರ್ಯವನ್ನು ಪಡೆದು ಸ್ವಲ್ಪಮಟ್ಟಿಗೆ ಸುಧಾರಿಸಿ ಪಶುಪಾಲನೆಗೆ ಸೌಕರ್ಯವನ್ನು ಪುನಃ ಕಲ್ಪಿಸಿಕೊಂಡಿದ್ದಾರೆ. ಹಾಲು, ಮೊಸರು, ಮಜ್ಜಿಗೆ, ಬೆಣ್ಣೆಯಂತಹ ಉತ್ಪನ್ನಗಳನ್ನು ಮಾರುವುದರ ಮೂಲಕ ಆರ್ಥಿಕ ಸ್ವಾವಲಂಬನೆಯ ಕಡೆಗೆ ಸಾಗಿದ್ದಾರೆ ಕೆಲವರು ಕುರಿ ಸಾಕಾಣಿಕೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಅನೇಕರು ಹೋರಿ, ಹಸು, ಎಮ್ಮೆ ಮತ್ತು ಕುರಿಗಳನ್ನು ಸಾಕಿ ಅವುಗಳನ್ನು ಮಾರಾಟ ಮಾಡುವುದರಿಂದ ಉತ್ತಮ ಆದಾಯ ಗಳಿಸುವುದೂ ಉಂಟು.

೨.೭.೨ ಕೃಷಿ

ಈ ಸಮುದಾಯವು ಪಶುಪಾಲನೆಯ ಜೊತೆಗೆ ಕೃಷಿಯನ್ನು ಪ್ರಮುಖ ಜೀವನಾಧಾರ ವೃತ್ತಿಯನ್ನಾಗಿ ಹೊಂದಿರುವುದನ್ನು ನೋಡುತ್ತೇವೆ. ಪ್ರಸ್ತುತ ದಿನಗಳಲ್ಲಿ ಕೃಷಿಗೆ ಹೆಚ್ಚು ಮಹತ್ವವನ್ನು ನೀಡಿದ್ದಾರೆ. ಹಿಂದಿನ ದಿನಗಳಲ್ಲಿ ಇವರ ವ್ಯವಸಾಯಕ್ಕೆ ಮಳೆಯನ್ನೇ ನಂಬಿ, ಮಳೆಯೊಡನಾಡುವ ಜೂಜಾಟವಾಗಿದೆ. ಆದರೆ ಈಗಿನ ಸರ್ಕಾರದ ಸೌಲಭ್ಯದಿಂದ ಕೆಲವರು ನೀರಾವರಿ ಸೌಕರ್ಯ ಪಡೆದು ಕೃಷಿಯಲ್ಲಿ ಸುಧಾರಿತ ಕ್ರಮಗಳನ್ನು ಅನುಸರಿಸಿ, ಬೆಳೆದ ದವಸ ಧಾನ್ಯಗಳನ್ನು ತಮಗೆ ಬೇಕಾದಷ್ಟು ಉಳಿಸಿ, ಮಿಕ್ಕಿದ್ದನ್ನು ಮಾರಾಟ ಮಾಡುವ ಪದ್ಧತಿ ಇತ್ತು. ಆದರೂ ಬಹುಸಂಖ್ಯಾತ ರೈತರು ತುಂಡು ಭೂಮಿಯನ್ನು ಹೊಂದಿದ್ದು. ಅದರಿಂದ ಬರುವ ಆಹಾರ ಧಾನ್ಯಗಳು ಅವರಿಗೆ ಸಾಕಾಗುವುದಿಲ್ಲ. ಇದರ ಜೊತೆಗೆ ಬೇರೆ ಉಪಕಸಬುಗಳನ್ನು ಮಾಡಬೇಕಾದ ಅನಿವಾರ್ಯತೆ ಉಂಟಾಗಿದೆ. ಈ ಸಮುದಾಯದಲ್ಲಿ ಈಗಲೂ ಇವರು ಕೃಷಿಗೆ ನೇಗಿಲು, ಎತ್ತಿನಬಂಡಿ ಇತ್ಯಾದಿಗಳ ಹಳೆಮಾದರಿಯ ಬೇಸಾಯ ಪದ್ಧತಿಯನ್ನು ೪೦% ಜನ ಅನುಸರಿಸುತ್ತಿದ್ದಾರೆ. ಕೆಲವರು ಹೆಚ್ಚು ಭೂಹಿಡುವಳಿದಾರರು ಮಾತ್ರ ಟ್ರಾಕ್ಟರ್, ಪಂಪ್‌ಸೆಟ್‌ಗಳ ಬಳಕೆ ಇದೆ, ಇತ್ಯಾದಿ ಕೃಷಿ ಸಂಬಂಧಿತ ತಾಂತ್ರಿಕ ಉಪಕರಣಗಳ ಬಳಕೆ ಮಾಡುತ್ತಿದ್ದಾರೆ. ಕೊಟ್ಟಿಗೆ ಗೊಬ್ಬರದ ಬಳಕೆಯು ಜೊತೆಗೆ ರಾಸಾಯನಿಕ ಗೊಬ್ಬರಗಳ ಬಳಕೆ ಮಾಡುತ್ತಿದ್ದಾರೆ. ಸುಧಾರಿತ ತಳಿ ಬೀಜಗಳು ಹಾಗೂ ಕ್ರಿಮಿನಾಶಕಗಳ ಬಳಕೆ ಸಾಮಾನ್ಯರಿಗೂ ಇದೆ. ಇತ್ತೀಚೆಗೆ ಹೆಚ್ಚಾಗಿ ವಾಣಿಜ್ಯ ಬೆಳೆ ಬೆಳೆಯುವುದನ್ನು ರೂಢಿಸಿಕೊಳ್ಳುತ್ತಿದ್ದಾರೆ. ಒಟ್ಟಾರೆ ಈ ಸಮುದಾಯದಲ್ಲಿ ಆಂರಷ್ಟು ಜನ ಕೃಷಿಯನ್ನೇ ತಮ್ಮ ಜೀವನದ ಪ್ರಧಾನ ವೃತ್ತಿಯನ್ನಾಗಿ ಹೊಂದಿದ್ದರೂ, ಇವರಲ್ಲಿ ಶೇ.೬೦ ರಷ್ಟು ಜನ ಮಳೆಯನ್ನಾಧಾರಿತ ವ್ಯವಸಾಯದಿಂದ ಯಾವ ಲಾಭವಿಲ್ಲ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ಹೀಗಾಗಿ ಇವರಲ್ಲಿ ಕೆಲವರು ವ್ಯಾಪಾರವನ್ನು ಇನ್ನೂ ಕೆಲವರು ಕೂಲಿಗೆ ಹೋಗುವ ಪದ್ಧತಿಯೂ ಇದೆ. ಗಣಿಗಾರಿಕೆ ಕೆಲಸಕ್ಕೆ ಹೋಗುವುದು, ಮನೆ ಕಟ್ಟುವ ಕೆಲಸ, ಹುಣಸೆಮರ ಗುತ್ತಿಗೆ ಹಿಡಿಯುವುದು, ವ್ಯಾಪಾರ ಮಾಡುವುದು, ಮರಗೆಲಸಗಳಲ್ಲಿ ಭಾಗಿಗಳಾಗುವ ಜೊತೆಗೆ ಇವರಲ್ಲಿ ಕೆಲ ಜನರು ಕೂಲಿಗಾಗಿ ಕಾಫಿ ಎಸ್ಟೇಟ್‌ಗಳಿಗೆ ವಲಸೆಹೋಗಿರುವುದೂ ಇದೆ. ತಮ್ಮ ಹೆಂಡತಿ ಮಕ್ಕಳು ಸಮೇತ ಹೋಗುವುದರಿಂದ. ಕೆಲ ದಿನಗಳ ಮಟ್ಟಿಗೆ ಇವರ ಮನೆಗಳಿಗೆ ಬೀಗ ಹಾಕಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

೨.೭.೩ ಸರ್ಕಾರಿ ಹುದ್ದೆಗಳು

ಬೇಡ ಸಮುದಾಯದ ವಿದ್ಯಾವಂತ ಯುವಕರು ಸರಕಾರಿ ಮತ್ತು ಖಾಸಗಿ ವಲಯಗಳಲ್ಲಿ ಇತ್ತೀಚಿಗೆ ನೌಕರಿ ಪಡೆಯಲು ಯಶಸ್ವಿಯಾಗಿದ್ದಾರೆ. ಬ್ಯಾಂಕ್, ಶಾಲೆ, ಕಾಲೇಜು, ಸೇನೆ, ಆರೋಗ್ಯ ಇಲಾಖೆ, ಇತ್ಯಾದಿ ಸರ್ಕಾರಿ ಕಛೇರಿಗಳಲ್ಲಿ, ಜೊತೆಗೆ ಸರ್ಕಾರೇತರ ಸಂಘಸಂಸ್ಥೆಗಳಲ್ಲಿ ಸಹ ವಿವಿಧ ಹುದ್ದೆಗಳನ್ನು ಪಡೆದುಕೊಂಡಿದ್ದಾರೆ.

ಆದರೆ ಬಹುಸಂಖ್ಯಾತರು ಬಡತನದ ಬವಣೆಯಿಂದ ಬಳಲುತ್ತಿದ್ದು, ತಮ್ಮ ಮಕ್ಕಳನ್ನು ಶಾಲೆ ಬಿಡಿಸಿ ವಿವಿಧ ಕೆಲಸಗಳಿಗೆ ಕಳುಹಿಸಿ ಬಾಲಕಾರ್ಮಿಕರ ಸೃಷ್ಟಿಗೂ ಕಾರಣರಾಗಿದ್ದಾರೆ. ಇವರ ಜೊತೆಗೆ ಉನ್ನತ ಶಿಕ್ಷಣ ಪಡೆದ ಹಲವು ನಿರುದ್ಯೋಗಿ ಯುವಕರೂ ಇದ್ದಾರೆ.

**೨.೭.೪ ಸ್ವಸಹಾಯ ಗುಂಪುಗಳು**

ಆಧುನಿಕ ಸಮಾಜದಲ್ಲಿ ಮಹಿಳೆ ವಿವಿಧ ಕ್ಷೇತ್ರದಲ್ಲಿ ಉನ್ನತಿ ಸಾಧಿಸುತ್ತಿದ್ದಾಳೆ. ಹಾಗೆ ಬೇಡ ಬುಡಕಟ್ಟು ಮಹಿಳೆಯರು ಸಹ ಈ ನಿಟ್ಟಿನಲ್ಲಿ ಸರ್ಕಾರ, ಸಂಘಸಂಸ್ಥೆಗಳು, ಸ್ತ್ರೀವಾದಿ ಚಿಂತಕರು, ಅನೇಕ ಯೋಜನೆಗಳನ್ನು ರೂಪಿಸಿಕೊಂಡು. ಸರ್ಕಾರದ ಯೋಜನೆ, ಸೌಲಭ್ಯಗಳ ಸದುಪಯೋಗ ಪಡಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಈ ನಿಟ್ಟಿನಲ್ಲಿ ಸ್ವಸಹಾಯ ಗುಂಪುಗಳ ಪ್ರವೇಶ ಭಾರತದ ಬಡತನ ರೇಖೆಯ ಕೆಳಗಿರುವ ಗ್ರಾಮೀಣ ಮಹಿಳೆಯರಿಗೆ ನವಚೈತನ್ಯದ ಜಗತ್ತೊಂದನ್ನು ಪರಿಚಯ ಮಾಡಿಕೊಟ್ಟಂತಾಗಿದೆ.

ಇಂತಹ ಸ್ವಸಹಾಯ ಗುಂಪುಗಳು ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿ ಉತ್ತಮಪಡಿಸಿಕೊಳ್ಳಲು ಸಹಕಾರಿಯಾಗಿದೆ. ಸ್ವಯಂಸೇವಾ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬರುವ ಸ್ವ ಸಹಾಯ ಗುಂಪುಗಳು ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಸ್ವರ್ಣಜಯಂತಿ ಶಹರಿ ರೋಜಗಾರ್ ಯೋಜನೆಯ ಅಡಿಯಲ್ಲಿ ಸ್ಥಾಪಿತವಾದ ಸ್ವಸಹಾಯ ಗುಂಪುಗಳಲ್ಲಿ ಈ ಸಮುದಾಯದ ಮಹಿಳೆಯರು ಕಾರ್ಯ ನಿರ್ವಹಿಸುವುದನ್ನು ನೋಡಬಹುದಾಗಿದೆ.

ಈ ಎಲ್ಲಾ ಯೋಜನೆಗಳು ಸ್ತ್ರೀಯರು ಸ್ವಾವಲಂಬಿಗಳಾಗಿ ಜೀವಿಸಲು ಮಾರ್ಗದರ್ಶನ ತರಬೇತಿ, ಸಾಲದ ಹಣ ಮತ್ತು ಮಾರುಕಟ್ಟೆ ಸೌಲಭ್ಯವನ್ನು ಒದಗಿಸಿಕೊಟ್ಟಿವೆ. ಒಂದು ಕಾಲದಲ್ಲಿ ಕೇವಲ ನಾಲ್ಕು ಗೋಡೆಗಳ ಮಧ್ಯೆ ಬದುಕಿದ್ದ ಮಹಿಳೆ ಇಂದು ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವಂತಹ ಸಾಮರ್ಥ್ಯ ಹೊಂದಿ, ಸ್ವಾವಲಂಬನೆ ಸಾಧಿಸಿ, ಕುಟುಂಬ, ಸಂಘಗಳ ಜೊತೆಗೆ ಕಾರ್ಯ ನಿರ್ವಹಿಸುವ ಮಟ್ಟಿಗೆ ಬೆಳೆದಿದ್ದಾಳೆ.

**೨.೮ ಶೈಕ್ಷಣಿಕ ಸ್ಥಿತಿಗತಿ**

ಶಿಕ್ಷಣ, ವ್ಯಕ್ತಿಯನ್ನು ಅಜ್ಞಾನದಿಂದ ಸುಜ್ಞಾನದ ಕಡೆಗೆ ಕೊಂಡೊಯ್ಯುವ ಸಾಧನ ಜೀವನದ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಸಿದ್ಧೌಷಧಿ. ಇಂತಹ ಶಿಕ್ಷಣದಿಂದಾಗಿ ಆಗುವ ಪರಿವರ್ತನೆ ಬಹಳ ಪರಿಣಾಮಕಾರಿಯಾದುದು, "ಶಿಕ್ಷಣ ಮಟ್ಟವು ಎಲ್ಲಿ ಉತ್ತಮವಾಗಿದೆಯೋ ಆ ಸಮುದಾಯದಲ್ಲಿ ಸಮಾಜವು ಎಲ್ಲಾ ವಿಧದಲ್ಲಿಯೂ ಮುಂದುವರಿಯುವ ಅವಕಾಶವಿದೆ"[೧೦] ಎಂದು ಹೇಳುತ್ತಾರೆ. ಈ ಹಿಂದೆ ಬೇಡರು ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡುತ್ತಿರಲಿಲ್ಲ. ಇವರುಗಳ ಸಮುದಾಯಗಳಲ್ಲಿ ಅಲ್ಲಲ್ಲಿ ಬೆರಳೆಣಿಕೆಯಷ್ಟು ಜನಮಾತ್ರ ಶಿಕ್ಷಣ ಪಡೆಯುತ್ತಿದ್ದರು. ಇವರಿಗೆ ಶಿಕ್ಷಣ ನೀಡಲು ಅನೇಕ ಆಶ್ರಮ ಶಾಲೆಗಳಿದ್ದರೂ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿಲ್ಲ. ಒಂದು ವೇಳೆ ಪ್ರಾರಂಭದಲ್ಲಿ ಕಳುಹಿಸಿದರೂ, ಅರ್ಧಕ್ಕೇ ಶಾಲೆ ಬಿಡಿಸಿ ದುಡಿಯಲು ಹಚ್ಚುವುದು ಕಂಡು ಬರುತ್ತದೆ. ಹೀಗೆ ದುಡಿಯುವ ಮಕ್ಕಳು ಅಪ್ರಾಪ್ತ ವಯಸ್ಸಿನಲ್ಲಿಯೇ ಅನೇಕ ದುಶ್ಚಟಗಳಿಗೆ ಬಲಿಯಾಗುತ್ತಿದ್ದಾರೆ. ಇವರ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸುವ ಬಗ್ಗೆ ಉದಾಸೀನತೆ ಹೊಂದಿದ್ದು, ಇತ್ತೀಚೆಗೆ ಹೆಚ್ಚು ಸಂಖ್ಯೆಯಲ್ಲಿ ಕಳುಹಿಸುತ್ತಿದ್ದರೂ, ಋತುಮತಿಯಾದ ತಕ್ಷಣ ಶಾಲೆ ಬಿಡಿಸಿ ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡುವುದು ಸಾಮಾನ್ಯವಾಗಿದೆ. ಹೆಣ್ಣು ಮಕ್ಕಳನ್ನು ಬೇಗನೇ ಮನೆಯಿಂದ ಸಾಗಹಾಕಿದರೆ ತಮಗೆ

ನೆಮ್ಮದಿ ಎಂಬ ಭಾವನೆ ಕೆಲವರಿಗಿದ್ದರೆ, ಕೆಲವರು ದೇವದಾಸಿ ಸಂಪ್ರದಾಯವನ್ನು ತಮ್ಮ ಹೆಣ್ಣುಮಕ್ಕಳು ಒಪ್ಪಿಕೊಳ್ಳುವಂತೆ ಒತ್ತಾಯಿಸುವುದು ಕಂಡುಬರುತ್ತದೆ. ಇದರಿಂದಾಗಿ ಶಿಕ್ಷಣ ಪಡೆದ ತಮ್ಮ ಅಸ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಬಹುತೇಕರು ವಿಫಲರಾಗಿದ್ದಾರೆ. ಆದರೂ ಬಳ್ಳಾರಿ ಜಿಲ್ಲೆಯ ಗಿರಿಜನ ಯೋಜನೆಯ ಅಡಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಪ್ರಗತಿಯಾಗಿರುವುದು ಬುಡಕಟ್ಟು ಮಕ್ಕಳು ಶಾಲೆಗಳಲ್ಲಿ ದಾಖಲಾಗಿರುವ ಸಂಖ್ಯೆಗಳಿಂದ ದೃಢಪಟ್ಟಿದೆ. (ಕೋಷ್ಟಕ ಮುಂದಿನ ಪುಟದಲ್ಲಿದೆ)

**೨.೯ ಧಾರ್ಮಿಕ ಸ್ಥಿತಿಗತಿ**

ಆದಿಮಾನವ ಜೀವನ ಆರಂಭಿಸಿದಾಗಿನಿಂದಲೂ ಪ್ರಕೃತಿಗೆ ತನ್ನದೇ ಆದ ಮಹತ್ವವಿದೆ. ಅವರು ಪ್ರಕೃತಿಯ ಮಡಿಲಿನಲ್ಲಿಯೇ ಹಗಲಿರುಳೂ ದುಡಿಯುತ್ತಾ ಬಂದಿದ್ದಾನೆ. ತಾವು ಪ್ರಕೃತಿ ಮಾತೆಯ ಔದಾರ್ಯದಿಂದಲೇ ಬದುಕಿದ್ದೇವೆಂದು ಭಾವಿಸಿದ್ದಾರೆ. ಅತಿವೃಷ್ಟಿ, ಅನಾವೃಷ್ಟಿ, ಕ್ಷಾಮ, ಬರಗಾಲ, ಪ್ರಾಣಿಗಳ ಉಪಟಳ ಮತ್ತು ಕ್ರಿಮಿಕೀಟಗಳ ಕಾಟ ಇವೇ ಮೊದಲಾದವುಗಳ ಹಿಂದೆ ಪ್ರಕೃತಿದೇವಿಯ ಕೈವಾಡವಿದೆ ಎಂದು ನಂಬಿ, ಆಕೆಯ ಕೃಪೆಗಾಗಿ ಹಬ್ಬಹರಿದಿನ, ಜಾತ್ರೆ, ಉತ್ಸವಗಳನ್ನು ಮಾಡುತ್ತಾ ಬಂದಿದ್ದಾನೆ. ನೈಸರ್ಗಿಕ ವಿಕೋಪಗಳಿಂದಾಗಿ ಭಯಭೀತಿಯಿಂದ ಹುಟ್ಟಿಕೊಂಡಿರುವ ಅವರ ಹಲವಾರು ಆಚರಣೆಗಳು ಮೌಢ್ಯ, ಅಜ್ಞಾನ, ಅನಕ್ಷರತೆಯ ನೇರ ಕೊಡುಗೆಗಳಾಗಿವೆ. ತಮ್ಮ ಜೀವನದ ಅತ್ಯಂತ ಮುಖ್ಯ ಅಂಶಗಳಾಗಿ ಉಳಿದುಕೊಂಡ ಗಾಳಿಯನ್ನು ನೀಡುವ ಮರಗಳು, ನೆಲೆಗೆ ರಕ್ಷಣೆ ನೀಡುವ ಕಲ್ಲು, ಜೀವದ್ರವ್ಯವಾದ ನೀರು, ಹೀಗೆ ಹಲವಾರು ವಸ್ತುಗಳು ದೈವದ ಸ್ಥಾನವನ್ನು ಪಡೆದುಕೊಂಡಿವೆ. ಜೊತೆಗೆ ಭೂತ, ದೆವ್ವಗಳ ಕಲ್ಪನೆಯಿಂದ ಭೂತಾರಾಧನೆ ಮಂತ್ರ ತಂತ್ರಗಳು ಮುಂತಾದ ಆಚರಣೆಗಳು ರೂಢಿಗೆ ಬಂದಿವೆ.

ತಾವು ವಾಸಿಸುವ ನಾಗರಿಕ ಸಮಾಜದಿಂದ ಪ್ರಾದೇಶಿಕ ಪ್ರದೇಶಗಳಲ್ಲಿನ ದೈವಗಳನ್ನು ಪೂಜಿಸುವರು. ಸಮುದಾಯದಲ್ಲಿ ತಮ್ಮ ಕುಲದೈವಗಳನ್ನು ಹೊಂದಿದ್ದು ಪ್ರತಿ ಬೇಡ ಸಮೂಹವು ತನ್ನ ಕುಲದೈವಗಳು ನೆಲೆಗೊಂಡಿರುವ ಸ್ಥಳವನ್ನು ಧಾರ್ಮಿಕ ಕೇಂದ್ರಗಳೆಂದು ಪರಿಗಣಿಸಿ ಪೂಜೆ ಸಲ್ಲಿಸಿಕೊಂಡು ಬರುತ್ತಾರೆ. ಇಲ್ಲಿನ ಬಹುಜನ ಬೇಡರ ಕುಲದೇವರು ಆಂಜನೇಯ. ಇನ್ನು ಕೆಲವರದು ಹುಲಿಗೆಮ್ಮ, ದುರುಗಮ್ಮ, ಸೊಲ್ಲಮ್ಮ, ಊರಮ್ಮ, ಓಬಳದಯ್ಯ, ಬತ್ರಿ ವೀರಣ್ಣ, ವೆಂಕಟೇಶ್ವರ, ಇತ್ಯಾದಿಗಳಿದ್ದರೆ, ಕೆಲವರಿಗೆ ತಮ್ಮ ಮನೆದೇವರು ಯಾವುದು? ಅದು ಎಲ್ಲಿದೆ? ಎನ್ನುವುದು ಸಹ ತಿಳಿದಿಲ್ಲ. ಇಲ್ಲಿ ಬರುವ ಎಲ್ಲಾ ಹಬ್ಬ, ಜಾತ್ರೆ, ಉತ್ಸವಗಳನ್ನು ಎಲ್ಲರೂ ಸಾಮೂಹಿಕವಾಗಿ ಒಂದೆಡೆ ಸೇರಿ ಆಚರಿಸುತ್ತಾರೆ.

ಅವರ ಪೂರ್ವಿಕರ ಬಗ್ಗೆ ಹೆಚ್ಚು ಪೂಜ್ಯನೀಯ ಭಾವನೆ ಹೊಂದಿ ತಮ್ಮ ಮಕ್ಕಳು ಅವರ ಪೂರ್ವಿಕರು ಪುನರ್ ಜನ್ಮ ಪಡೆದು ಹುಟ್ಟಿದ್ದಾರೆಂದು ಭಾವಿಸಿ ಅವರುಗಳ ಹೆಸರನ್ನು ಇಡುವಲ್ಲಿ ಉತ್ಸುಕರಾಗಿರುತ್ತಾರೆ. ಆದರೆ ಇದು ಇತ್ತೀಚೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಮಾತ್ರ ಕಂಡು ಬರುತ್ತದೆ. ಯುಗಾದಿ, ದಸರಾ, ಪಂಚಮಿ, ಇಂತಹ ಹಬ್ಬಗಳನ್ನು ಇವರು ತಮ್ಮದೇ ಆದ ಬಗೆಯಲ್ಲಿ ಆಚರಿಸುತ್ತಾರೆ. ಮನೆದೇವರುಗಳಿಗೆ ಹೆಚ್ಚಾಗಿ ನಡೆದುಕೊಳ್ಳುವ ಜೊತೆಗೆ ಸಾಧ್ಯವಾದರೆ ವರ್ಷಕ್ಕೊಮ್ಮೆಯಾದರೂ ಧರ್ಮಸ್ಥಳ, ಮಂತ್ರಾಲಯ, ತಿರುಪತಿಗೆ ಹೋಗಿ ದೇವರ ದರ್ಶನ ಪಡೆದು ಬರುತ್ತಾರೆ. ಇಂದು ಬೇಡರಲ್ಲಿ ಶಬರಿಮಲೈ ಸ್ವಾಮಿ ಅಯ್ಯಪ್ಪ ಸಹ ಆರಾಧನೆಗೆ

## ಕೋಷ್ಟಕ ೫

## ಬಳ್ಳಾರಿ ಜಿಲ್ಲೆಯ ಬುಡಕಟ್ಟು ಮಕ್ಕಳ ಶಾಲಾ ದಾಖಲಾತಿ ವಿವರ

### ಪರಿಶಿಷ್ಟ ವರ್ಗ

| | ದಾಖಲಾತಿ | | | | | | | | ಹಾಜರಾತಿ | | | | | | | |
|---|---|---|---|---|---|---|---|---|---|---|---|---|---|---|---|---|
| | ಗಂಡು | | | | ಹೆಣ್ಣು | | | | ಗಂಡು | | | | ಹೆಣ್ಣು | | | |
| ತರಗತಿ | ಸ | ಅ | ಅ.ರ | ಒಟ್ಟು | ಸ | ಅ | ಅ.ರ | ಒಟ್ಟು | ಸ | ಅ | ಅ.ರ | ಒಟ್ಟು | ಸ | ಅ | ಅ.ರ | ಒಟ್ಟು |
| ೦೧ | ೯೫೧೫ | ೫೩೨ | ೪೩೮ | ೧೦೪೮೫ | ೪೫೭೫ | ೨೫೮ | ೧೬೪ | ೪೯೯೭ | ೮೫೦೦ | ೪೬೩ | ೩೬೯ | ೯೩೩೨ | ೧೨೯ | ೨೪೪ | ೧೪೩ | ೪೫೧೬ |
| ೦೨ | ೧೦೭೦೧ | ೫೦೨ | ೪೬೪ | ೧೧೬೬೭ | ೫೦೪೪ | ೨೨೮ | ೧೭೧ | ೫೪೪೩ | ೯೬೯೬ | ೪೨೭ | ೪೦೩ | ೧೦೫೨೬ | ೪೬೨೬ | ೨೦೦ | ೧೫೬ | ೪೯೮೨ |
| ೦೩ | ೯೯೫೪ | ೪೯೮ | ೩೮೨ | ೧೦೮೩೪ | ೪೭೬೩ | ೨೦೦ | ೧೬೨ | ೫೧೫೫ | ೮೮೬೭ | ೪೨೨ | ೩೩೬ | ೯೬೨೫ | ೪೨೮೮ | ೧೯೬ | ೧೪೮ | ೪೬೩೨ |
| ೦೪ | ೯೩೫೬ | ೫೨೦ | ೩೫೧ | ೧೦೨೨೭ | ೪೨೩೯ | ೨೪೪ | ೧೪೨ | ೪೬೨೫ | ೮೨೬೧ | ೫೪೫ | ೨೯೨ | ೯೦೦೭ | ೩೦೮೧ | ೨೧೦ | ೧೨೨ | ೩೪೧೩ |
| ೦೫ | ೮೮೩೨ | ೧೬೪ | ೨೧೫ | ೯೫೮೯ | ೩೯೭೧ | ೨೨೫ | ೧೪೭ | ೪೩೪೩ | ೭೯೮೪ | ೪೦೮ | ೨೬೨ | ೮೬೬೪ | ೩೬೩೭ | ೧೮೭ | ೧೩೦ | ೩೯೫೪ |
| ಒಟ್ಟು | ೪೮೩೫೮ | ೨೫೧೬ | ೧೯೨೮ | ೫೨೮೦೨ | ೨೨೫೯೨ | ೧೧೮೫ | ೭೮೬ | ೨೪೫೬೩ | ೪೩೩೧೮ | ೨೧೭೪ | ೧೬೬೨ | ೪೭೧೫೪ | ೧೯೭೬ | ೧೧೦೩೭ | ೬೯೯ | ೨೧೪೯೭ |
| ೦೬ | ೬೧೫೭ | ೪೩೬ | ೨೭೭ | ೬೮೭೦ | ೨೬೧೩ | ೧೯೮ | ೧೦೬ | ೨೯೧೭ | ೫೪೩೫ | ೩೫೮ | ೨೫೫ | ೬೦೪೮ | ೨೩೧೯ | ೧೭೪ | ೧೦೦ | ೨೫೯೩ |
| ೦೭ | ೪೨೮೮ | ೩೫೪ | ೨೨೫ | ೪೮೬೭ | ೧೮೩೧ | ೧೪೬ | ೧೦೨ | ೨೦೭೯ | ೩೯೪೨ | ೨೯೯ | ೨೦೮ | ೪೪೪೯ | ೧೬೬೪ | ೧೧೦ | ೯೭ | ೧೮೭೧ |
| ಒಟ್ಟು | ೧೦೪೪೫ | ೭೯೦ | ೫೦೨ | ೧೧೭೩೭ | ೪೪೪೪ | ೩೪೪ | ೨೦೮ | ೪೯೯೬ | ೯೩೭೭ | ೬೫೭ | ೪೬೩ | ೧೦೪೯೭ | ೩೯೮೩ | ೮೮೪ | ೧೯೭ | ೪೪೬೪ |
| ಒಟ್ಟು | ೫೮೮೦೩ | ೩೦೦೬ | ೨೪೩೦ | ೬೪೫೩೯ | ೨೭೦೩೬ | ೧೫೨೯ | ೯೯೪ | ೨೯೫೫೯ | ೫೨೬೯೫ | ೨೮೩೧ | ೨೧೨೫ | ೫೭೬೫೧ | ೨೩೭೪ | ೪೧೩೨೧ | ೮೯೬ | ೨೫೯೬೧ |
| ೮ | ೧೬೫೧ | ೧೨೮೬ | ೩೦೧ | ೩೨೩೮ | ೪೯೭ | ೪೧೮ | ೧೧೦ | ೧೦೨೫ | ೧೪೬೮ | ೧೨೧೪ | ೨೭೭ | ೨೯೫೯ | ೪೧೩ | ೩೮೯ | ೧೧೮ | ೯೨೦ |
| ೯ | ೧೫೦೫ | ೧೦೮೭ | ೨೬೯ | ೨೮೬೧ | ೫೩೧ | ೩೯೩ | ೧೭೮ | ೧೧೦೨ | ೧೩೯೮ | ೧೦೦೧ | ೨೫೪ | ೨೬೫೩ | ೪೫೦ | ೩೫೭ | ೧೦೬ | ೯೧೩ |
| ೧೦ | ೧೧೫೬ | ೮೪೬ | ೨೨೧ | ೨೨೨೩ | ೩೮೮ | ೨೭೭ | ೧೨೫ | ೭೯೦ | ೧೦೯೧ | ೮೧೨ | ೨೪೨ | ೨೧೪೫ | ೩೪೪ | ೨೫೦ | ೧೦೪ | ೬೯೮ |
| ಒಟ್ಟು | ೪೩೧೨ | ೩೨೧೯ | ೪೮೧ | ೮೩೭೨ | ೧೪೧೬ | ೧೦೮೮ | ೪೧೩ | ೨೯೧೭ | ೩೯೫೭ | ೩೦೨೭ | ೭೭೩ | ೭೭೫೭ | ೧೨೦೭ | ೯೯೬ | ೩೨೮ | ೨೫೩೧ |

ಸ : ಸರಕಾರಿ ಶಾಲೆ

ಅ : ಅನುದಾನ ಪಡೆದ ಶಾಲೆ

ಅ ರ : ಅನುದಾನ ರಹಿತ ಶಾಲೆ

ಜಿಲ್ಲಾ ಪಂಚಾಯ್ತಿ ಬಳ್ಳಾರಿ ವರದಿ ೨೦೦೨ - ೦೩

ಒಳಪಟ್ಟಿರುವುದನ್ನು ಗಮನಿಸಬಹುದಾಗಿದೆ. ವರ್ಷಕ್ಕೊಮ್ಮೆ ಬಹುಜನ ಬೇಡರು ಶಬರಿಮಲೈಸ್ವಾಮಿಗೂ ಮಾಲೆ ಧರಿಸಿ 'ಇರುಮುಡಿ' ಹೊತ್ತು ಶಬರಿಮಲೈಗೆ ಹೋಗಿ ಬರುತ್ತಾರೆ. ತಮ್ಮ ಮಕ್ಕಳಿಗೆ ಜವಳ ತೆಗೆಸುವ (ಕೂದಲು ಕೊಡುವ) ರೂಢಿ ಇದೆ. ಧರ್ಮಸ್ಥಳ, ತಿರುಪತಿ, ಹುಲಿಗಿ ಅಥವಾ ಇತರ ಪುಣ್ಯಕ್ಷೇತ್ರಗಳಿಗೆ ಹೋಗಿ ಅಲ್ಲಿ ಜವಳ ತೆಗೆಸುವ ಶಾಸ್ತ್ರ ಮಾಡುತ್ತಾರೆ. ಇಂದು ಎಷ್ಟೋ ಜನ ಬೇಡರು ಸಂಸ್ಕೃತಾನುಕರಣದಿಂದಾಗಿ, ಮೀನು, ಮಾಂಸದ ಊಟವನ್ನು ತ್ಯಜಿಸಿದ್ದಾರೆ. ಮನೆಯಲ್ಲಿ ಆಕಳು ಪೂಜೆ, ಕೃಷಿ ಸಂಬಂಧಿತ ಕೆಲ ಧಾರ್ಮಿಕ ಆಚಾರಗಳು ಮಾಯವಾಗುತ್ತಿವೆ.

ಬುಡಕಟ್ಟುಗಳ ಧಾರ್ಮಿಕ ಪರಂಪರೆ, ಸಂಸ್ಕೃತಿಗೆ ಪ್ರಭಾವಿತರಾಗಿ ಮತ್ತು ಪ್ರೇರಿತರಾಗಿ ತಾವು ನೆಲೆಗೊಂಡಿರುವ ಆಯಾ ಪ್ರದೇಶದ ಧರ್ಮ ಮತ್ತು ದೇವರು ದೇವತೆಗಳನ್ನು ತಮ್ಮದನ್ನಾಗಿ ಮಾಡುಕೊಂಡು ಪೂಜಿಸುತ್ತಾರೆ. ಅಲ್ಲದೇ ಪ್ರಾದೇಶಿಕ ಆಚಾರ ವಿಚಾರಗಳನ್ನು ಪಾಲಿಸಿಕೊಂಡು ಬಂದಿರುತ್ತಾರೆ. ಪರಂಪರೆಯಿಂದ ಬಂದ ಧಾರ್ಮಿಕ ಆಚರಣೆಯೇ ಅವರ ಬಾಳಿನ ಆಧಾರ. ಜೀವನದಲ್ಲಿಯ ಕಷ್ಟ ನಷ್ಟಗಳಿಗೆ, ಸುಖದುಃಖಗಳಿಗೆ, ಒಳಿತು ಕೆಡಕುಗಳಿಗೆ ಮೂಲಭೂತವಾದ ಅಗೋಚರ ಶಕ್ತಿಯೊಂದಿದೆ ಎಂದು ನಂಬಿ ತಮ್ಮ ಸುತ್ತಲಿನ ಪ್ರಕೃತಿಯಲ್ಲಿಯೇ ದೇವರುಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಈ ಸಮುದಾಯದಲ್ಲಿ, ವೈಷ್ಣವ ಹಾಗು ಶೈವ ಸಂಪ್ರದಾಯದ ದೈವರಾಧಕರಿದ್ದಾರೆಂದು ತಿಳಿಯುತ್ತದೆ.

ವಾರಗಳಿಗೆ ಅನುಗುಣವಾಗಿ ವಿವಿಧ ದೇವರುಗಳನ್ನು ಪೂಜಿಸುತ್ತಾರೆ. ಸೋಮವಾರ, ವೀರಣ್ಣ, ಬಸವಣ್ಣ ಈಶ್ವರ, ಭೈರವೇಶ್ವರ, ಮಂಜುನಾಥ ಸ್ವಾಮಿಯನ್ನು ಪೂಜಿಸುತ್ತಾರೆ. ಸೋಮವಾರ ಶೈವ ಪಂಥದ ಪ್ರಭಾವಕ್ಕೊಳಗಾದವರು ಶ್ರೇಷ್ಠವೆಂದು ಭಾವಿಸುತ್ತಾರೆ. ಮಂಗಳವಾರ ಹಾಗೂ ಶುಕ್ರವಾರ, ಶಕ್ತಿದೇವತೆಗಳಾದ ಕಾಳಮ್ಮ, ದುರುಗಮ್ಮ, ತಾಯವ್ವ, ಸೊಲ್ಲಮ್ಮ, ಊರಮ್ಮ, ಹುಲಿಗೆಮ್ಮ, ಮಾರೆಮ್ಮ, ಗೋಳೇಲಕ್ಕಮ್ಮ, ಬಂಡೆ ಚೌಡಮ್ಮ, ಈ ದೇವತೆಗಳನ್ನು ಆರಾಧಿಸುತ್ತಾರೆ. ಬುಧುವಾರ ಪಂಡರೀಪುರದ ವಿಠಲದೇವರಿಗೆ ನಡೆದುಕೊಳ್ಳುವರು. ಗುರುವಾರ ಮಂತ್ರಾಲಯ ರಾಘವೇಂದ್ರ ಸ್ವಾಮಿಗೆ ನಡೆದುಕೊಳ್ಳುವ, ಶನಿವಾರ ಆಂಜನೇಯಸ್ವಾಮಿ, ವೆಂಕಟೇಶ್ವರ, ಶನೀಶ್ವರ, ದೇವರುಗಳನ್ನು ಆರಾಧಿಸುವ ಮತ್ತು ವೈಷ್ಣವ ಪಂಥದ ಪ್ರಭಾವಕ್ಕೊಳಗಾದವರು ಈ ದಿನವನ್ನು ಶ್ರೇಷ್ಠವೆಂದು ಭಾವಿಸುತ್ತಾರೆ.

ಈ ಸಮುದಾಯಕ್ಕೆ ಆಂತರಿಕವಾಗಿ ಅಥವಾ ಬಾಹ್ಯವಾಗಿ ಅಥವಾ ವೈಯಕ್ತಿಕವಾಗಿ ತೊಂದರೆ ಸಮಸ್ಯೆಗಳು ದುಃಖ ದುಮ್ಮಾನಗಳು, ನೋವುಗಳು ಬೆಳೆಗೆ ಸಂಬಂಧಿಸಿದಂತೆ, ದನಿಕರುಗಳಿಗೆ ರೋಗ ಕಾಣೆಯಾದಾಗ, ಅನಾರೋಗ್ಯಕ್ಕೆ ತುತ್ತಾದಾಗ ಭೂತಪ್ರೇತಗಳ ಹಾವಳಿ ಉಂಟಾದ ಸಂದರ್ಭದಲ್ಲಿ ಅದರ ನಿವಾರಣೆಗಾಗಿ ಮನೆ ದೇವರುಗಳಲ್ಲಿ ಹರಿಕೆ ಮಾಡಿ ಕೊಳ್ಳುವುದು ಸಾಮಾನ್ಯವಾಗಿದೆ. ನೈವೇದ್ಯ ಪೂಜೆ, ಅಭಿಷೇಕ, ಎಲೆಪೂಜೆ, ಕಾಣಿಕೆಗಳು ವಸ್ತುರೂಪದಲ್ಲಿ ಅಥವಾ ಹಣದ ರೂಪದಲ್ಲಿ ಹಾಗೆ ಪ್ರಾಣಿ ಬಲಿ ಅರ್ಪಿಸುವುದು, ಬೆತ್ತಲೆ ಸೇವೆ ಮಾಡುವ ಉಟಿಗೆ ಉಡಿಸುವುದು, ದೇವರಿಗೆ ಸ್ತ್ರೀಯನ್ನು ಬಿಡುವುದು, ಅಥವಾ ಮನೆಯ ಆಕಳು, ಕೋಣವನ್ನು ದೇವರಿಗೆ ಬಿಡುವುದು ಸಾಮಾನ್ಯವಾಗಿ ಕಂಡು ಬರುತ್ತದೆ.

## ೨.೧೦ ರಾಜಕೀಯ ಸ್ಥಿತಿಗತಿ

ನಮ್ಮ ಸಮಾಜದ ರಾಜಕೀಯ ಕ್ಷೇತ್ರದಲ್ಲಿ ಜಾತಿ, ಮತ, ಪಂಥ, ಲಿಂಗ ಹಾಗೂ ಪಂಗಡಗಳ ಆಧಾರದ ಮೇಲೆ ಪ್ರಜಾಪ್ರಭುತ್ವದ ಆಡಳಿತದಲ್ಲಿ ಕೇಂದ್ರ ಹಾಗೂ ರಾಜ್ಯಸರ್ಕಾರದ ಮಟ್ಟದಿಂದ ಹಿಡಿದು ಜಿಲ್ಲಾ, ತಾಲ್ಲೂಕು, ಹಾಗೂ ಗ್ರಾಮಗಳ ಮಟ್ಟದವರೆಗೂ ಚುನಾವಣೆಗಳಲ್ಲಿ ಅಭ್ಯರ್ಥಿಗಳ ಆಯ್ಕೆ, ಮತದಾನ, ಮತಯಾಚನೆ, ಮಂತ್ರಿಮಂಡಲದಲ್ಲಿ ಪ್ರಾತಿನಿಧ್ಯ ಇತ್ಯಾದಿಗಳನ್ನು ಗುರುತಿಸಬಹುದಾಗಿದೆ.

ಜಾತಿ ಮತ್ತು ರಾಜಕೀಯ ಸಂಬಂಧವನ್ನು ವಿಶ್ಲೇಷಿಸುವಾಗ ಭಾರತದಲ್ಲಿ ಪ್ರಜಾಪ್ರಭುತ್ವ ಮತ್ತು ಜಾತಿ ಇವೆರೆಡು ತದ್ವಿರುದ್ಧ ವ್ಯವಸ್ಥೆಯಾಗಿರುವುದು ವಿಪರ್ಯಾಸ. ಚುನಾವಣೆಗಳು ಪ್ರಜಾಪ್ರಭುತ್ವದಲ್ಲಿ ಮುಕ್ತ ಮತ್ತು ಜಾತ್ಯಾತೀತವಾಗಿ ನಡೆಯಬೇಕು. ಆದರೆ ಸಾರ್ವತ್ರಿಕ ಚುನಾವಣೆಗಳು ಬಹುಶಃ ಜಾತಿಯ ಪ್ರಭಾವದಿಂದ ಹೊರಬರಲು ಸಾಧ್ಯವಿಲ್ಲದಂತಹ ಪರಿಸ್ಥಿತಿ ಉಂಟಾಗಿದೆ. ಚುನಾವಣೆಗಳಲ್ಲಿ ಅನೇಕ ಅಂಶಗಳು ಬೌದ್ಧಿಕ ಪೌಢಿಮೆ, ರಾಜಕೀಯ ಜ್ಞಾನ, ಪ್ರಜ್ಞೆ, ರಾಜಕೀಯ ಪಕ್ಷಗಳ ಕಾರ್ಯತಂತ್ರ, ರಾಜಕೀಯ ಚಟುವಟಿಕೆಗಳಲ್ಲಿ ಜಾತಿಯು ಬೀರುವ ಪ್ರಭಾವ, ಜಾತಿಯ ಸಕ್ರಿಯ ಪಾಲ್ಗೋಳ್ಳುವಿಕೆ, ಜಾತಿಯ ಆಧಾರದ ಮೇಲೆ ಗಣ್ಯರ ಅಸ್ತಿತ್ವ, ಜಾತಿ ಮತ್ತು ಮತ ಚಲಾಯಿಸುವ ಮನೋಭಾವ, ಜಾತಿಯ ಸಂಘಟನೆಗಳ ಮೂಲಕ ಪಾಲ್ಗೊಳ್ಳುವಿಕೆ, ನಾಯಕತ್ವ ಹಾಗೂ ಪ್ರಭಾವಿ ಸಮೂಹಗಳು, ಹಣ, ಹೆಂಡ, ಹಾಗೂ ಧರ್ಮ ಇತ್ಯಾದಿಗಳ ಪ್ರಭಾವಕ್ಕಿಂತ ಜಾತಿಯ ಪ್ರಭಾವ ಪ್ರಬಲವಾಗಿದೆ. ಪ್ರಸ್ತುತ ಇಂತಹ ಪರಿಸ್ಥಿತಿಯಲ್ಲಿ ಬೇಡ ಸಮಾಜವು ಜಾತಿಯ ಸಂಕೇತದ ಮೂಲಕ ಪ್ರಚಾರಕ್ಕೆ ತೊಡಗುವುದು ಸರ್ವೆಸಾಮಾನ್ಯವಾಗಿದ್ದು, ಪ್ರತಿಯೊಂದು ಪಕ್ಷಗಳು ಕೂಡ ಜಾತಿಯನ್ನೇ ಪ್ರಮುಖ ಅಸ್ತ್ರದಂತೆ ಬಳಸುತ್ತಿರುವುದನ್ನು ನೋಡಿದರೆ ಹಾಗೂ ಜಾತಿರಾಜಕಾರಣ ಅನಿವಾರ್ಯ ಎನ್ನುವಷ್ಟರ ಮಟ್ಟಿಗೆ ಪರಿಸ್ಥಿತಿ ಇದ್ದರೂ ಈ ಸಮುದಾಯವು ಸರ್ಕಾರಕ್ಕೆ ಎಷ್ಟು ಮುಖ್ಯ ಎನ್ನುವುದನ್ನು ತೋರಿಸಬೇಕೆನ್ನುವ ಕಾತರ ಕೆಲವರಲ್ಲಿದೆ. ಇಲ್ಲಿನವರೆಲ್ಲ ರಾಜಕೀಯದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿಲ್ಲ. ಯಾವುದೇ ಒಂದು ಪಕ್ಷಕ್ಕೆ ಜೋತುಬಿದ್ದರೆ ಮುಗಿಯಿತು. ಸಾಮಾನ್ಯವಾಗಿ ಹಿಂದಿನಿಂದಲೂ ಈ ಸಮುದಾಯ ಕಾಂಗ್ರೆಸ್ ಪಕ್ಷವನ್ನೇ ನಂಬಿ ನಿಷ್ಠೆಯಿಂದ ಪ್ರತಿನಿಧಿಗಳನ್ನು ಆಯ್ಕೆ ಮಾಡಿ ಕಳುಹಿಸಿದರೆ, ಇವರನ್ನು "ಲೆಕ್ಕಕ್ಕುಂಟು ಆಟಕ್ಕಿಲ್ಲ" ಎನ್ನುವಂತೆ ರಾಜಕೀಯ ನಾಯಕರು ಇವರನ್ನು ಬಳಸಿಕೊಂಡಿದ್ದಾರೆ. ಪಟ್ಟಭದ್ರ ಹಿತಾಸಕ್ತಿಗಳ ಕೈವಾಡದಿಂದ ಕ್ಷೇತ್ರ ಮರುವಿಂಗಡಣೆಯನ್ನು ಮುಂದೂಡಿ ರಾಜಕೀಯವಾಗಿ ದೊರೆಯುವ ಅದೆಷ್ಟೋ ಆಧ್ಯತೆಗಳು ಇಲ್ಲವಾಗಿವೆ. ಈ ಒಳ ಮರ್ಮಗಳನ್ನು ಅರ್ಥ ಮಾಡಿಕೊಳ್ಳಲಾರದಂತಹ ಮೂಢರಾಗಿದ್ದು, ಮತ್ತೊಬ್ಬರಿಗಾಗಿ ಜೈಕಾರ ಕೂಗುತ್ತಾ ಇಷ್ಟು ದಿನಗಳ ಕಾಲ ಬದುಕಿದ್ದಾರೆ ರಾಜಕೀಯ ಮೆರವಣಿಗೆಗಳಲ್ಲಿ ಕುಡಿದು ಕುಣಿಯುತ್ತಾ, ಬೇರೆಯವರನ್ನು ಗೆಲ್ಲಿಸುವಲ್ಲಿ ಸಂತೋಷ ಪಡುವುದು ಅಂದರೆ ಬೇರೊಬ್ಬರು ಮೇಲೇರಲು ಇವರು ಮೆಟ್ಟಿಲಾಗಿದ್ದಾರೆ.

ಸಮಾಜದ ರಾಜಕೀಯ ಪ್ರೇರಿತ ದುಷ್ಟಶಕ್ತಿಗಳು ಇಂದು ಈ ಜಿಲ್ಲೆಯ ಸಾವಿರಾರು ಹೆಣ್ಣುಮಕ್ಕಳನ್ನು ವಿವಾಹ ಸಂಸ್ಕಾರದಿಂದ ದೂರವಿಟ್ಟು ದಾಂಪತ್ಯ ಸುಖ ಅನುಭವದಿಂದ ವಂಚಿತರಾಗುವಂತೆ ಮಾಡಿ ಪತ್ನಿ, ಪಾತಿವ್ರತ್ಯ, ಮುತ್ತೈದೆ, ಮಾತೃತ್ವ, ಮುಂತಾದ ಮೌಲ್ಯಗಳಿಂದ ಈ ಸ್ತ್ರೀಯರನ್ನು ಹೊರಗಿಟ್ಟು ಲೈಂಗಿಕ

ಶೋಷಣೆಗೆ ಒಳಪಡಿಸಿ, ಇವರುಗಳಿಗೆ ಹುಟ್ಟಿದ ಮಕ್ಕಳ 'ತಂದೆ ಇಲ್ಲದೇ ಹುಟ್ಟಿದ ಪವಾಡಪುರುಷರು' ಎಂಬ ಕಳಂಕದೊಂದಿಗೆ ಅಪಮಾನದಿಂದ ನಗೆಪಾಟಲಿಗೆ ಗುರಿಯಾಗಿ, ಮಾನಸಿಕವಾಗಿ ಕುಗ್ಗಲು ಕಾರಣರಾಗಿದ್ದಾರೆ. ಕೆಲ ರಾಜಕೀಯ ಪುಡಾರಿಗಳು ಈ ಸಮುದಾಯದ ಸ್ವಾಭಿಮಾನವನ್ನು ನಾಶಪಡಿಸಲು ಹೊರಟಿದ್ದಾರೆ.

ಜಿಲ್ಲೆಯಲ್ಲಿ ಬಹುಸಂಖ್ಯೆಯುಳ್ಳ ನಾಯಕ ಸಮುದಾಯವು ಸಂಖ್ಯಾದೃಷ್ಟಿಯಿಂದ ಬಲಿಷ್ಠರು. ಆದರೆ, ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ತೀರಾ ಹಿಂದುಳಿದ ಜಿಲ್ಲೆಯಲ್ಲಿ ಇದುವರೆಗೂ ಒಬ್ಬ ದಕ್ಷ ನಾಯಕನನ್ನು ಬೆಳೆಸಲಾಗಿಲ್ಲ. ಇದಕ್ಕೆ ಕಾರಣ ಈ ಸಮುದಾಯದ ಹಲವು ಹಿರಿಯರ ಹೇಳಿಕೆಯಂತೆ ಈ ಸಮುದಾಯದವರ ಅಜ್ಞಾನ, ಅನಕ್ಷರತೆ, ದ್ವೇಷ, ಅಸೂಯೆ, ಮೂಲ ಕಾರಣಗಳಾಗಿವೆ. ಇಂತಹ ಕುಟಿಲ ಬುದ್ಧಿ ತೊರೆದು ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ದುಡಿಯಬೇಕಾಗಿರುವುದು ನಮ್ಮೆಲ್ಲರ ಆದ್ಯಕರ್ತವ್ಯವಾಗಿದೆ ಎಂಬ ಮಾತುಗಳನ್ನಾಡುತ್ತಾರೆ. ಈ ಸಮುದಾಯದ ಅಭಿವೃದ್ಧಿಯು 'ಮೀಸಲಾತಿ' ಮೂಲಕ ಮಾತ್ರ ಸಾಧ್ಯ. ಅದಕ್ಕಾಗಿ ರಾಜಕೀಯ ಕ್ಷೇತ್ರದಲ್ಲಿ ಸರ್ಕಾರ ಮೀಸಲಾತಿಯನ್ನು ಜಾರಿಗೆ ತರಲಾಗಿದೆ. ಈ ಮೀಸಲಾತಿಯು ಭಾಷೆಯಲ್ಲಿ ಅದು ನೊಂದವರ ಹಕ್ಕು, ಈ ದೇಶದಲ್ಲಿ ಎಲ್ಲಿಯವರೆಗೆ ಸಾಮಾಜಿಕ, ಆರ್ಥಿಕ ವಿಷಮತೆ ಜೀವಂತವಿರುತ್ತದೋ ಅಲ್ಲಿಯವರೆಗೆ ಮೀಸಲಾತಿ ದನಿ ಇಲ್ಲದ ಸಮಾಜಗಳ ಹಕ್ಕಾಗಿಯೇ ಮುಂದುವರೆಯಬೇಕು ಎನ್ನುವ ಪರಿಕಲ್ಪನೆ ಈ ಸಮುದಾಯಕ್ಕಿಲ್ಲ.

ಈ ಮೀಸಲಾತಿ ಸೌಲಭ್ಯದಿಂದ ರಾಜಕೀಯ ಕ್ಷೇತ್ರದಲ್ಲಿ ಅಧಿಕಾರ ಪಡೆದ ಅವಕಾಶ ಲಭ್ಯವಾಗಿ, ಪರಿಣಾಮ ಈ ಸಮುದಾಯದ ಮಹಿಳೆಯರು ಮತ್ತು ಪುರುಷರು ರಾಜಕೀಯ ರಂಗವನ್ನು ಪ್ರವೇಶಿಸಿದ್ದರೂ, ಅಲ್ಲಿ ತಾವುಗಳು ನಿರ್ವಹಿಸಬೇಕಾದ ಕರ್ತವ್ಯಗಳ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಇಲ್ಲದೇ, ಬಲಿಷ್ಠರ ಕೈಗೊಂಬೆಗಳಾಗಿ ವರ್ತಿಸಿ, ತಮ್ಮ ಸಮುದಾಯದ ಹಿತದೃಷ್ಟಿಯನ್ನು ಮರೆತು ವರ್ತಿಸಿದ್ದರ ಪರಿಣಾಮವಾಗಿ ಈ ಪ್ರದೇಶದ ಬೇಡ ಸಮುದಾಯ ಇಲ್ಲಿಯವರೆಗೆ ಹಿಂದುಳಿಯಲು ಕಾರಣವಾಗಿದೆ ಎಂದು ಕ್ಷೇತ್ರಕಾರ್ಯದ ಸಂದರ್ಭದ ಮಾಹಿತಿಯಿಂದ ತಿಳಿದು ಬಂದಿದೆ. ಜೊತೆಗೆ ಕೆಲವರು ರಾಜಕೀಯ ನಾಯಕರು ಸಮುದಾಯದ ಮಹಿಳೆಯರನ್ನು ಅನೈತಿಕ ಸಂಬಂಧಗಳಿಗೆ ಪ್ರಚೋದಿಸಿದ ಸಂದರ್ಭಗಳು ಹೇರಳವಾಗಿವೆ. ವಕ್ತೃಗಳು ನೀಡಿದ ವಿವರಣೆಯ ಪ್ರಕಾರ "ಬೇಡ ಸಮುದಾಯದ ಮಹಿಳೆಯರನ್ನು ಬೇಡ ಸಮುದಾಯದ ನಾಯಕರುಗಳಲ್ಲದೇ, ಇತರ ರಾಜಕೀಯ ನಾಯಕರುಗಳು ಸಹ ದುರುಪಯೋಗ ಪಡಿಸಿಕೊಂಡು, ಅವರ ಹೆಸರಿನಲ್ಲಿಯೇ ಮುಂದು ಬಂದು ತಮ್ಮ ಜೀವನ ರೂಪಿಸಿಕೊಂಡವರೂ ಬಹುಜನರಿದ್ದಾರೆಂಬುದು" ವಕ್ತೃಗಳ ಹೇಳಿಕೆಯಾಗಿದೆ. ಆದರೆ ಇತ್ತೀಚೆಗೆ ಪಂಚಾಯತ್ ರಾಜ್ ವ್ಯವಸ್ಥೆಯಿಂದಾಗಿ ರಾಜಕೀಯ ಪ್ರಜ್ಞೆಯು ಹಳ್ಳಿಗಳಲ್ಲಿ ಹೆಚ್ಚುತ್ತಿದ್ದು ಟಿ.ನಾಗೇಂದ್ರ ಶಹಾಪೂರವರು ಈ ರೀತಿ ಹೇಳುತ್ತಾರೆ. 'ಬೇಡರು ಅಂದರೆ ಏನನ್ನು ಬೇಡದವರು, ಅದಕ್ಕಾಗಿಯೇ ಶಿವನು ಕಣ್ಣನ್ನು ಕೇಳಿದಾಗ ಕಣ್ಣಪ್ಪ ತನ್ನ ಕಣ್ಣನ್ನು ಕಿತ್ತುಕೊಂಡು ರಕ್ತ ಅಭಿಷೇಕದೊಂದಿಗೆ ದಾನ ಮಾಡಿದ.' 'ಬೇಡ' ಇಂದು ಯಾವುದನ್ನು ಪಡೆಯದೇ ನೀಡುತ್ತಲೇ ಬಂದಿದ್ದಾನೆ. ಇತಿಹಾಸದ ಪುಟಗಳನ್ನು ನೆನಪಿಸಿಕೊಂಡಾಗ ಈ ದೇಶದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಕೆಚ್ಚೆದೆಯ ಹೋರಾಟ ಮಾಡಿ ಸ್ವಾತಂತ್ರ್ಯದ ಮುನ್ನುಡಿ ಬರೆದ ಈ ಸಮುದಾಯದಲ್ಲಿ ಇಂದು ಕಿತ್ತು ತಿನ್ನುವ ಬಡತನ, ಬಡಸತದ ಒಡಲಿನಲ್ಲಿ ಹಸಿವು, ಅವಮಾನ, ಸಂಕಟ ಇದೆ. ಮತ್ತು ಅನಕ್ಷರತೆ,

ನಿರುದ್ಯೋಗ ಜೊತೆ ಜೊತೆಯಲ್ಲಿ ನೆರಳಿನಂತೆ ಹಿಂಬಾಲಿಸಿಕೊಂಡು ಬರುತ್ತಲಿವೆ.

ಹೀಗೆ ಬಳ್ಳಾರಿ ಜಿಲ್ಲೆಯು ತನ್ನದೇ ಆದ ವಿಶೇಷ ಲಕ್ಷಣಗಳಿಂದ ಕೂಡಿದ್ದು, ಐತಿಹಾಸಿಕವಾಗಿ ಖ್ಯಾತಿ ಪಡೆದ, ಪ್ರಾಚೀನ ಕಾಲದಿಂದಲೂ ಹಲವರು ಚಕ್ರಾದಿಪತ್ಯಗಳ ಆದಿಪತ್ಯಕ್ಕೆ ಒಳಗಾಗಿ, ಸ್ವತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯ ನಂತರದಲ್ಲೂ ರಾಷ್ಟ್ರಮಟ್ಟದಲ್ಲಿ ತನ್ನ ಛಾಪನ್ನು ಮೂಢಿಸಿದೆ.

ಬಳ್ಳಾರಿ ಜಿಲ್ಲೆಯು ಹೆಚ್ಚು ಬಿಸಿಲಿನಿಂದ ಕೂಡಿದೆ, ಮಳೆಯ ಪ್ರಮಾಣವು ಎಲ್ಲಾ ತಾಲೂಕುಗಳಿಗೆ ಒಂದೇ ಸಮನಾಗಿ ಬೀಳುವುದಿಲ್ಲ. ಕೆಲ ತಾಲೂಕುಗಳು ಮಳೆಯನ್ನೇ ನಂಬಿ ವ್ಯವಸಾಯ ಮಾಡಿ ಜೀವನ ಸಾಗಿಸುವುದ ಕಂಡು ಬರುತ್ತದೆ. ಹಾಗೆಯೇ ಕೆಲ ತಾಲೂಕುಗಳು ಖನಿಜಸಂಪತ್ತಿನಿಂದ ಸಂಪತ್ಭರಿತವಾಗಿವೆ. ರಾಜ್ಯದಲ್ಲಿ ಅತಿ ಹೆಚ್ಚು ಸಂಖ್ಯೆಯ ಅಂದರೆ ೩೧ ಬುಡಕಟ್ಟುಗಳನ್ನ ಹೊಂದಿದ ಜಿಲ್ಲೆ ಎಂಬ ಹೆಸರಿನೊಂದಿಗೆ ಇಲ್ಲಿನ ಒಟ್ಟಾರೆ ಬುಡಕಟ್ಟುಗಳ ಸಂಖ್ಯೆಯಲ್ಲಿ ಶೇ. ೯೭ ರಷ್ಟು ಬೇಡ ಬುಡಕಟ್ಟಿನ ಸಮುದಾಯದವರಿದ್ದಾರೆ. ಇವರಲ್ಲಿ ಊರುನಾಯಕರು ಮತ್ತು ಮ್ಯಾಸನಾಯಕರೆಂಬ ಪಂಗಡಗಳಿದ್ದು ವಿಭಿನ್ನ ಹೆಸರುಗಳಿಂದ ಈ ಸಮುದಾಯವನ್ನ ಕರೆಯುವುದುಂಟು. ಇದು ತನ್ನದೇ ಆದ ವಂಶ, ಗೋತ್ರ ಬೆಡಗುಗಳನ್ನು ಹೊಂದಿ ವ್ಯವಹರಿಸುವುದು ಕಂಡು ಬರುತ್ತದೆ. ಸಾಮಾಜಿಕವಾಗಿ ಇವರು ಕೆಳಮಟ್ಟದ ಸ್ಥಾನಮಾನ ಹೊಂದಿದ್ದು ಇತ್ತೀಚೆಗೆ ಶಿಕ್ಷಣ ಪಡೆದವರ ಸಂಖ್ಯೆ ಸಮುದಾಯದಲ್ಲಿ ಹೆಚ್ಚಾಗಿರುವುದರಿಂದ ಕೆಲವರು ಸುಧಾರಿತ ಸ್ಥಾನಮಾನ ಹೊಂದಲು ಕಾರಣವಾಗಿದೆ. ಇನ್ನೂ ಕೆಲ ಕುಟುಂಬಗಳು ದೇವದಾಸಿ ಸಂಪ್ರದಾಯವನ್ನು ಅಳವಡಿಸಿಕೊಂಡಿದ್ದು, ಅಂತಹ ಕುಟುಂಬಗಳು ಮಾತೃಪ್ರಾಧಾನ್ಯತೆಯಿಂದ ಕೂಡಿವೆ. ಜಾತಿ ಪಂಚಾಯತಿಗಳನ್ನ ಈ ಸಮುದಾಯ ಹೊಂದಿದ್ದು, ಆ ಮೂಲಕ ಸಮುದಾಯದ ಆಂತರಿಕ ಬಿಕ್ಕಟ್ಟುಗಳನ್ನು ಪರಿಹರಿಸಿಕೊಳ್ಳುವರು. ಬಂಧುತ್ವಕ್ಕೆ ಹೆಚ್ಚಿನ ಮನ್ನಣೆ ಕೊಟ್ಟು ಹಬ್ಬ ಹರಿದಿನ ಜಾತ್ರೆ ಉತ್ಸವಗಳನ್ನ ಸಾಮೂಹಿಕವಾಗಿ ಆಚರಿಸುವುದನ್ನ ಕಾಣಬಹುದಾಗಿದೆ. ಕೃಷಿಯನ್ನು ತಮ್ಮ ಪ್ರಧಾನ ಕಸುಬಾಗಿ ಹೊಂದಿ, ಜೊತೆಗೆ ಕುರಿಸಾಕಾಣಿಕೆ, ಪಶುಪಾಲನೆಯನ್ನೂ ಸಹ ಕೆಲವರು ಆರ್ಥಿಕ ಆದಾಯದ ಮೂಲವನ್ನಾಗಿ ಮಾಡಿಕೊಂಡಿದ್ದಾರೆ. ಕುಟುಂಬದ ಮಹಿಳೆಯರು ಸ್ವಸಹಾಯ ಗುಂಪುಗಳನ್ನಾಗಿ ರಚಿಸಿಕೊಂಡು ಸ್ವಾವಲಂಬನೆಯ ಬದುಕಿಗೆ ಪ್ರಯತ್ನಿಸುತ್ತಿದ್ದಾರೆ. ರಾಜಕೀಯವಾಗಿ ಬಹುತೇಕ ಈ ಸಮುದಾಯವು ಅಸಂಘಟಿತವಾಗಿ ಕಂಡು ಬರುತ್ತದೆ.

**ಅಡಿ ಟಿಪ್ಪಣಿಗಳು**

೦೧. ಶಾಂತರಸರು, ಬಳ್ಳಾರಿ ಜಿಲ್ಲೆಯ ಶಿವಶರಣರು, ಪುಟ. ೧೩.೧೯೭೫

೦೨. ಅದೇ ಪು, ೧೪

೦೩. ಬಿ.ಶೇಷಾದ್ರಿ. ಸಂಪಾದನೆ, ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು. ಪುಟ ೨೬, ೧೯೯೮

೦೪. ಭಗವತ್ ಶರಣ ಉಪಧ್ಯಾಯ, ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ಪು. ೪೧, ೧೯೫೦

೦೫. ಪ್ರಶಾಂತ ಹೆಚ್.ಡಿ. ಜನಸಮುದಾಯ ಸಂಪುಟ, ಪು.೭೪, ೨೦೦೦

೦೬. ಓ.ಕೊಟ್ರೇಶ, ಸಾಮಾಜಿಕ ಬದಲಾವಣೆಯ ಹಾದಿಯಲ್ಲ ಬೇಡರು, ಪು. ೨೫, ೨೦೦೩

೦೭. ಡಾ.ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ, ೧೯೯೩

೦೮. ಮಾ.ಭ.ಪೆರ್ಲ. ಭಾರತೀಯ ವಿವಾಹ ಸಂಸ್ಕಾರ. ಪು.೨, ೨೦೦೦

೦೯. ಮೀರಾಸಾಬಿಹಳ್ಳಿ ಶಿವಣ್ಣ, ಪ್ರಜಾವಾಣಿ ದೀಪಾವಳಿ ವಿಶೇಷಾಂಕ, ಪುಟ ೧೯೮, ೨೦೦೨,

೧೦. ಕೃಷ್ಣಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ. ಪು.೨೦೦, ೧೯೯೩

ಅಧ್ಯಾಯ ೩

## ದೇವದಾಸಿ ಸಂಪ್ರದಾಯದ ಚಾರಿತ್ರಿಕ ಅವಲೋಕನ

೦೩:೦೧ ಫಲವತ್ತತೆಯ ಹಿನ್ನೆಲೆಯಲ್ಲಿ ಮಾತೃ ದೇವತೆಯ ಆರಾಧನೆ

೦೩:೦೨ ಜಗತ್ತಿನ ವಿವಿಧ ದೇಶಗಳಲ್ಲಿದ್ದ ಪವಿತ್ರ ಕಲ್ಪನೆಯ ಧಾರ್ಮಿಕ ವೇಶ್ಯಾವೃತ್ತಿ

೦೩ ೦೩ ಭಾರತದಲ್ಲಿ ದೇವದಾಸಿ ಸಂಪ್ರದಾಯ

೦೩:೦೪ ಆರ್ಯರ ಪ್ರಭುತ್ವದಿಂದ ಭಾರತೀಯ ಸಮಾಜದಲ್ಲಾದ ಪರಿವರ್ತನೆಗಳು

೦೩:೦೫ ಧರ್ಮಶಾಸ್ತ್ರ, ಪುರಾಣ, ಶಾಸನಗಳಲ್ಲಿ ದೇವದಾಸಿ ಸಂಪ್ರದಾಯದ ಉಲ್ಲೇಖಗಳು

೦೩:೦೬ ಕರ್ನಾಟಕದಲ್ಲಿ ದೇವದಾಸಿ ಸಂಪ್ರದಾಯ

೦೩:೦೭ ದೇವದಾಸಿ ಸಂಪ್ರದಾಯದ ಪ್ರಕಾರಗಳು

೦೩:೦೮ ದೇವದಾಸಿ ಸಂಪ್ರದಾಯದ ಅಧ್ಯಯನದ ಸಂಕ್ಷಿಪ್ತ ಅವಲೋಕನ

## ದೇವದಾಸಿ ಸಂಪ್ರದಾಯದ ಚಾರಿತ್ರಿಕ ಅವಲೋಕನ

**ಪೀಠಿಕೆ**

"ಮೊದಲ ಬಾರಿಗೆ ಮಾನವ ತನ್ನ ಅಲೆಮಾರಿ ಜೀವನಕ್ಕೆ ಅಂತ್ಯಹಾಡಿ, ಒಂದೆಡೆ ನೆಲೆನಿಂತನು. ವಾಸಕ್ಕೆ ಯೋಗ್ಯವಾದ ಪ್ರದೇಶದಲ್ಲೆಲ್ಲಾ ಮಾನವ ತನ್ನ ವಾಸ್ತವ್ಯವನ್ನು ಕಂಡುಕೊಂಡನು. ಆದಿಮ ಬದುಕಿನಿಂದ ಆಧುನಿಕ ಬದುಕಿನವರೆಗೂ ವಿವಿಧ ಕಾಲಘಟ್ಟಗಳಲ್ಲಿ ಆಯಾ ಭೌಗೋಳಿಕ ಹಿನ್ನೆಲೆಯಲ್ಲಿ ರೂಢಿಸಿಕೊಂಡಿದ್ದ. ತನ್ನ ಆಹಾರ ಮತ್ತು ರಕ್ಷಣೆಯ ಸಮಸ್ಯೆ ಇಲ್ಲದಂತೆ ಮಾಡಿಕೊಂಡ, ಮಾನವನ ದೃಷ್ಟಿ ಮೊದಲ ಬಾರಿಗೆ ತನ್ನ ಆಹಾರ ಮತ್ತು ಸಂರಕ್ಷಣೆಯ ವಿಷಯದಿಂದ ಬೇರೆಡೆಗೆ ಹರಿಯಿತು. ಪೈರು ಬೆಳೆಯುವುದನ್ನು ನೋಡುತ್ತಾ, ತನ್ನ ಸುತ್ತಲಿನ ಪರಿಸರ, ಇತರ ಪ್ರಾಣಿಗಳು, ಬಾಹ್ಯಾಕಾಶ, ಅಲ್ಲಿರುವ ಸೂರ್ಯ, ಚಂದ್ರ, ನಕ್ಷತ್ರ, ಮೋಡ ಮಿಂಚು, ಗುಡುಗು, ಸಿಡಿಲು ಮತ್ತು ಮಳೆಯ, ಹಗಲು ರಾತ್ರಿಗಳ ಬಗೆಗೆ, ವಲಸೆ ಹೋಗುವ ಪ್ರಾಣಿ, ಕ್ರಿಮಿಕೀಟ ಪಕ್ಷಿಗಳ ಜಗತ್ತು, ಮುಂತಾದವುಗಳ ಬಗೆಗೆ ವಿಚಾರ ಮಾಡತೊಡಗಿದನು. ತನ್ನವರೊಡನೆ ಈ ವಿಚಾರಗಳನ್ನು ಕುರಿತು ಕೊನೆ ಇಲ್ಲದೆ ಚರ್ಚಿಸಿದನು, ಅವುಗಳ ಬಗ್ಗೆ ತನ್ನ ಜ್ಞಾನ ಮತ್ತು ಬುದ್ಧಿಮಟ್ಟಕ್ಕೆ ತಕ್ಕಂತೆ ತನ್ನದೇ ಆದ ಅರ್ಥಕಲ್ಪನೆ, ಸಿದ್ಧಾಂತ ನೀಡಿದನು "[೧]. ತನಗರ್ಥವಾಗದ ಹಾಗೂ ತನ್ನ ವಿಚಾರದ ಆಳಕ್ಕೆ ನಿಲುಕದ ವಿಷಯಗಳ ಬಗ್ಗೆ ವಿಸ್ಮಿತನಾಗುತ್ತಾ, ಈ ವಿಸ್ಮಯವೇ ಕ್ರಮೇಣ ಒಂದು ಬಗೆಯ ನಂಬಿಕೆಯಾಗಿ ಬೆಳೆಯಿತು. ಅಂದರೆ, ಎಲ್ಲಾ ವಸ್ತುಗಳ ಮತ್ತು ವಿಧ್ಯಮಾನಗಳ ಸೃಷ್ಟಿಯ ಹಿಂದೆ ಒಂದು ಅಗೋಚರವಾದ, ಪ್ರಬಲವಾದ ಶಕ್ತಿಯಿದೆ ಎಂದು ಆತ ನಂಬತೊಡಗಿದನು. ಈ ನಂಬಿಕೆಯೇ ಇಂದು ಧರ್ಮವೆನಿಸಿಕೊಂಡಿದೆ. "ಮಾನವನಲ್ಲಿನ ಈ ಧಾರ್ಮಿಕ ಮನೋವೃತ್ತಿಯು ಕೆಲವೊಮ್ಮೆ ಭಯದಿಂದಲೂ, ಬೇರೊಮ್ಮೆ ಕುತೂಹಲದಿಂದಲೂ ಆವೃತವಾಗಿರುವುದು. ಮಾನವನು ದುಃಖ, ಕ್ಷಣಿಕತೆ, ಮೃತ್ಯು, ಜನ್ಮ ಮತ್ತು ಜರೆಗಳಿಂದ ಮುಕ್ತವಾಗಬೇಕೆಂಬ ಕಾರಣದಿಂದ ಅಗೋಚರವಾದ ಶಕ್ತಿಯ ಕೃಪೆಗೆ ಪಾತ್ರನಾಗಲು, ಸಂತುಷ್ಟಿಪಡಿಸಲು, ಸೂಕ್ತಮಾರ್ಗ ಹುಡುಕಿ, ಪೂಜೆ ಆಹುತಿ, ಪ್ರಾರ್ಥನೆ, ಹರಿಕೆಗಳನ್ನು ಆಚರಣೆಗೆ ತಂದನು"[೨]. ಹೀಗೆ ಆದಿ ಮಾನವನು ನಾಗರಿಕತೆಯ ಮೊದಲ ಹಂತದಲ್ಲಿ ಪ್ರಕೃತಿಯ ವೈಚಿತ್ರ್ಯಗಳಿಗೆ ಬೆರಗಾಗಿ ಅದಕ್ಕೆ ಕಾರಣವಾದ ಅಗೋಚರ ಶಕ್ತಿಯನ್ನು 'ದೇವರು' ಎಂದು ಕರೆದು, ವಿವಿಧ ದೇವರುಗಳ್ನು ಸೃಷ್ಟಿಸಿಕೊಂಡ. ಈ ದೇವರುಗಳನ್ನು ತೃಪ್ತಿಪಡಿಸುವುದಕ್ಕಾಗಿ ನಾನಾ ರೀತಿಯ

ಆಚರಣೆಗಳನ್ನು ರೂಢಿಗೆ ತಂದ ಪರಿಣಾಮವಾಗಿ ಬಲಿ ಕೊಡುವ, ಬಸವಿ ಬಿಡುವ, ಬೆತ್ತಲೆ ಸೇವೆ ನಡೆಸುವಂತಹ ಅನಿಷ್ಟ ಪದ್ಧತಿ ಹುಟ್ಟಿಕೊಂಡವು. ಹೀಗೆ ಮನುಷ್ಯನ ಅಂಧಶ್ರದ್ಧೆ, ನಂಬಿಕೆಗಳು 'ದೇವದಾಸಿ ಸಂಪ್ರದಾಯ' ದಂತಹ ಆಚರಣೆಗಳ ಬೆಳವಣಿಗೆಗೆ ಕಾರಣವಾಗಿರಬಹುದು.

ದೇವಾನುದೇವತೆಗಳ ತೃಪ್ತಿಗಾಗಿ ಒಂದು ಹೆಣ್ಣು ಅಥವಾ ಗಂಡನ್ನು ಅರ್ಪಿಸಿ, ಆ ದೇವರ ಸೇವೆಗಾಗಿ ಮೀಸಲಾಗಿರಿಸುವ ಈ ಪರಂಪರೆಯು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದು, ಕೇವಲ ಭಾರತಕ್ಕೆ ಮಾತ್ರ ಸೀಮಿತವಾಗದೇ ವಿಶ್ವವ್ಯಾಪಿಯಾಗಿದೆ. ವಿಶ್ವ ಮಟ್ಟದಲ್ಲಿ ಇದು ಯಾವ ಕಾರಣಕ್ಕಾಗಿ, ಕಾಲ, ದೇಶ, ಸಂದರ್ಭಗಳಿಗೆ ಅನುಗುಣವಾಗಿ ಹುಟ್ಟಿ, ಬೆಳೆದು ಬಂದಿದೆ. ದೇವದಾಸಿ ಸಂಪ್ರದಾಯಗಳ ಮೂಲವನ್ನು ಪರಾಮರ್ಶೆ ಮಾಡುವಂತಹ, ಅಧ್ಯಯನಕ್ಕೆ ಪೂರಕವಾದ ಸಾಹಿತ್ಯ ಗ್ರಂಥಗಳನ್ನು ಇಲ್ಲಿ ಅವಲೋಕಿಸಿ ಸಂಪ್ರದಾಯದ ಚಾರಿತ್ರಿಕ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ.

**೩ :೧ ಫಲವತ್ತತೆಯ ಹಿನ್ನೆಲೆಯಲ್ಲಿ ಮಾತೃ ದೇವತೆಯ ಆರಾಧನೆ**

'ಧಾರ್ಮಿಕ ಶ್ರದ್ಧೆ' ಮತ್ತು 'ಮಾತೃದೇವತಾ' ಆರಾಧನೆಯ ಹಿನ್ನೆಲೆಯಲ್ಲಿ 'ದೇವದಾಸಿ' ಪದ್ಧತಿಯು ಉಗಮವಾಗಿರುವುದು ಕಂಡುಬರುತ್ತದೆ. ಫಲವತ್ತತೆಯ ಹಿನ್ನೆಲೆಯಲ್ಲಿ ಮಾನವನು ಪ್ರಕೃತಿಯನ್ನು ಪೂಜಿಸ ತೊಡಗಿದನು. ತನಗೆ ಜನ್ಮ ನೀಡುವ ಜನನಿಗೂ ಶಕ್ತಿಯ ಸ್ವರೂಪವನ್ನು ಕಲ್ಪಿಸಿಕೊಂಡನು. ಭೂಮಿ ಎಲ್ಲಾ ಸೃಷ್ಟಿ ಕ್ರಿಯೆಗೆ ಮೂಲ ಆಧಾರವಾಗಿರುವಂತೆ, ಹೆಣ್ಣು ಮನುಷ್ಯ ಸಮಾಜಕ್ಕೆ ಮೂಲ ಮತ್ತು ಆಧಾರವಾಗಿದ್ದಾಳೆ. ಹೆಣ್ಣಿನ ಗರ್ಭಧರಿಸುವಿಕೆ, ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಎರಡೂ ಪೂಜ್ಯ ವಸ್ತುಗಳೆಂದು ಭಾವಿಸಿಕೊಂಡನು.

"ಗದ್ದೆಗೆ ಹಸಿರು ಚಂದ, ಹೆಂಗಸಿಗೆ ಬಸಿರು ಚಂದ" ಎಂಬ ಗಾದೆ, ಹಾಗೆ ಫಲಬಿಡುವ ವೃಕ್ಷಕ್ಕೆ ಹೆಣ್ಣನ್ನು ಹೋಲಿಸುವುದು ಆಕೆಯ ಫಲವಂತಿಕೆಗೆ ಸಾಕ್ಷಿಯಾಗಿದೆ. ಜನಪದರು ಹೆಣ್ಣಿನ ಸೃಷ್ಟಿಶಕ್ತಿ ಗುರುತಿಸಿ, ಋತುಮತಿಯಾಗುವಿಕೆ, ವಿವಾಹ, ಗರ್ಭಧಾರಣೆಯಂಥ ಸಂದರ್ಭದಲ್ಲಿ ಕೆಲವೊಂದು ಆಚರಣೆಗಳನ್ನು ರೂಢಿಸಿಕೊಂಡು, ಇವುಗಳಿಗೆ ತಮ್ಮದೇ ಆದ ರೀತಿ ಪ್ರತಿಕ್ರಿಯಿಸಿದ್ದಾರೆ"[೩]. ಹಾಗೆ ನಿಸರ್ಗದ ಅನಂತ ಜೀವರಾಶಿಗಳನ್ನು ಗಮನಿಸಿದ ಮಾನವ ಭೂಮಿಯನ್ನು ಅದ್ಭುತ ಫಲವಂತಿಕೆಯ ಮೊತ್ತವೆಂದು ಭಾವಿಸಿರುವನು ಇಂದಿಗೂ ಬುಡಕಟ್ಟು ಸಂಸ್ಕೃತಿಯಲ್ಲಿ ಕೆಲವೊಂದು ಆಚರಣೆಗಳು ಕಂಡು ಬರುವವು. ಒರಿಸ್ಸಾದ ಸಂತಾಲರು ಭೂಮಿ ಋತುಮತಿಯಾಯಿತೆಂದು, ಜೂನ್ ತಿಂಗಳಲ್ಲಿ ನಡೆಸುವ 'ರಾಜಹಬ್ಬ'ವನ್ನು ಉದಾಹರಿಸಬಹುದಾಗಿದೆ.

ಛಾಯಾದಾತಾರ ರವರು, "ಮಾತೃ ಪ್ರಧಾನತೆಯನ್ನು ಸ್ತ್ರೀಶಕ್ತಿಯ ನೆಲೆಯಲ್ಲಿ ಅರ್ಥೈಸುವರು, ಹಸಿವು ಮತ್ತು ಲೈಂಗಿಕ ಭಾವನೆ ಇವು ಮೂಲ ಪ್ರೇರಣೆಗಳಾಗಿದ್ದರೂ, ಪ್ರಜೋತ್ಪಾದನೆಯಲ್ಲಿ ಪುರುಷನ ಪಾತ್ರವು ಗೊತ್ತಿರದಿದ್ದರಿಂದ ಸ್ತ್ರೀ ಗರ್ಭಧಾರಣೆಯ ಶಕ್ತಿಯು ನಿಗೂಢವೆನಿಸುತ್ತಿತ್ತು. ಭೂಮಿ ಹೇಗೆ ಬೆಳೆ ಬೆಳೆಯುತ್ತದೆಯೋ, ಅದೇ ಪ್ರಕಾರ ಸ್ತ್ರೀಯೂ ಫಲಿಸುತ್ತಾಳೆ, ಅವಳಲ್ಲಿ ದೈವಶಕ್ತಿ ಇದೆ ಎಂದು ತಿಳಿದಿದ್ದು ಸಹಜ. ಈ ನಂಬಿಕೆಯ ಆಧಾರವೆಂದರೆ, ಇಂದು ಅವಶೇಷವಾಗಿ ಕಂಡು ಬರುತ್ತಿರುವ ಮಾತೃದೇವತೆಗಳು. ಮಾನವ ಕುಲದ ಸಂಖ್ಯಾ ಬಲವನ್ನು ಹೆಚ್ಚಿಸುವ, ಬಾಲಕನಿಗೆ ಜನ್ಮಕೊಡುವ ಸ್ತ್ರೀ ಯೋನಿಯನ್ನು ಬಹಳ ಪವಿತ್ರ ಭಾವನೆಯಿಂದ

ನೋಡುತ್ತಿದ್ದರು. ಭೂಮಿ ಮತ್ತು ಸ್ತ್ರೀ ಇವುಗಳನ್ನು ಸಮಭಾವನೆಯಿಂದ ನೋಡುತ್ತಿದ್ದರು. ವಿಶ್ವದ ಜನ್ಮದಾತೆ 'ಸ್ತ್ರೀ' ಎಂಬ ಮಾತು ನೆಲೆಗೊಂಡಿತ್ತು."[೪] ಹೀಗೆ ಪುರುಷನು ಹೆಣ್ಣಿನ ಬಗ್ಗೆ ಕುತೂಹಲ ಬೆಳೆಸಿಕೊಂಡಿದ್ದೇ ಆಕೆಯಲ್ಲಿರುವ ಪ್ರಜನ ಶಕ್ತಿಯ ಕಾರಣಕ್ಕಾಗಿಯೇ ಆಗಿದೆ.

ಮಾತೃ ದೇವತೆಯ ಹೀಗೆ ಮಕ್ಕಳನ್ನು ಹಡೆಯುವ ಪ್ರಕೃತಿ ದತ್ತವಾದ ಗುಣವೇ ಶಕ್ತಿಯೆಂಬ ಮಾತೃ ದೇವತೆಯು ಆರಾಧನೆ ಮತ್ತು ಫಲವತ್ತತೆಯ ಹಿನ್ನೆಲೆಯಲ್ಲಿ ಹೆಣ್ಣನ್ನು ದೇವರಿಗೆ ಅರ್ಪಿಸುವ ಪದ್ಧತಿಯು ಬೆಳೆದು ಬಂದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಮಾತೃಪ್ರಧಾನ ವ್ಯವಸ್ಥೆಯು ಪ್ರಪಂಚದ ಯಾವುದೇ ಭಾಗಕ್ಕಿಂತ ಗುಣ ಮತ್ತು ಪ್ರಮಾಣ ಎರಡರಲ್ಲೂ ಭಾರತ ದೇಶದಲ್ಲಿ ವಿಫುಲವಾಗಿತ್ತೆಂದು ವಿದ್ವಾಂಸರು ಭಾವಿಸುತ್ತಾರೆ.

ಸೆಮೆಟಿಕ್ ಜನಾಂಗಗಳಲ್ಲಿ ಬೆಳೆದ ಅಪ್ಪಾಟಿನ್ ದೇವತೆಯ ಕಲ್ಪನೆ, ಈಜಿಪ್ಟ್‌ನಲ್ಲಿ ರೂಪುಗೊಂಡ 'ಇಸಿಸ್' ದೇವತೆಯ ಕಲ್ಪನೆ. ಫ್ರಿಜಿಯಲ್ಲಿ 'ಸಿಬಿಲೇ' ದೇವತೆಯ ಕಲ್ಪನೆ ಭಾರತದ ಶಕ್ತಿದೇವತೆಯ ಕಲ್ಪನೆಗೆ ಸಮಾನ ಪರಿಕಲ್ಪನೆಗಳಾಗಿವೆ.

**೩ :೨ ಜಗತ್ತಿನ ವಿವಿಧ ದೇಶಗಳಲ್ಲಿದ್ದ ಪವಿತ್ರ ಕಲ್ಪನೆಯ ಧಾರ್ಮಿಕ ವೇಶ್ಯಾವೃತ್ತಿ**

**ಬ್ಯಾಬಿಲೋನಿಯಾ:** "ಹಮ್ಮುರಬಿ ದೊರೆಯ ಕಾಲದಲ್ಲಿ ಇಪ್ತಾರ್ ಎಂಬ ಮಾತೃದೇವತೆಯ ಪೂಜೆ ಜಾರಿಯಲ್ಲಿತ್ತು. ಇವಳ ಹೆಸರಿನಲ್ಲಿ ಪವಿತ್ರ ವೇಶ್ಯಾಗಾರಿಕೆ ನಡೆಯುತ್ತಿದ್ದು, ದೇವತೆ ಇಪ್ತಾರ್ ಪ್ರತಿವರ್ಷವೂ ತನ್ನ ಪ್ರಣಯಿಯನ್ನು ಹುಡುಕಿಕೊಂಡು ಶಿಯೋಲ್‌ಗೆ ಹೋಗ ತೊಡಗಿದಳು. ಇದು ಅಲ್ಲಿನ ನೆಲದ ಫಲವತ್ತತೆಯ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರತೊಡಗಿತು. ಮಾನವ ಮತ್ತು ಪ್ರಾಣಿಗಳಲ್ಲಿ ಕಾಮವು ಮಾಯವಾಗಿ ಸಂಭೋಗ ಕ್ರಿಯೆ ನಿಂತಿತು. ಇದಕ್ಕನುಗುಣವಾಗಿ, ಈ ಘೋರ ಘಟನೆಗಳನ್ನು ತಪ್ಪಿಸಲು ಕೆಲವು ನಿವಾರಕಗಳನ್ನು ಹುಡುಕಬೇಕಾಯಿತು. ಆಗ, ಪ್ರಣಯ ದೇವತೆಯಾಗಿ ಮತ್ತು ಫಲವತ್ತತೆಯ ದೇವತೆಯಾಗಿ ಮಹಿಳೆಯರು ತಮ್ಮ ಪಾತ್ರವನ್ನು ನಿರ್ವಹಿಸಬೇಕಾದ ಅನಿವಾರ್ಯ ಒದಗಿ ಬಂತು. ಮತ್ತು ಖಾಲಿ ಬಿದ್ದ ಈ ಜಾಗವನ್ನು ತುಂಬಲು ಧಾರ್ಮಿಕ ವೇಶ್ಯಾಗಾರಿಕೆ ಸೃಷ್ಟಿಯಾಯಿತು"[೫]. ಇಪ್ತಾರ್ ದೇವತೆಯು ಮುರ್‌ಡಕ್‌ನ ಹೆಂಡತಿಯೆಂದು ಸಾಹಿತ್ಯದಲ್ಲಿ ಉಲ್ಲೇಖಿಸಲಾಗಿದೆ. ಈ ಇಪ್ತಾರ್ ದೇವತೆಯನ್ನು ಸರ್‌ಪನಿಟ್ ದೇವತೆ ಎಂದು ಕರೆಯುತ್ತಿದ್ದರು. ಈಕೆಯನ್ನು ತೃಪ್ತಿಯಿಂದಿಡಲು, ಪ್ರಸನ್ನಗೊಳಿಸಲು ಬ್ಯಾಬಿಲೋನಿಯಾದ ಎಲ್ಲ ಮಹಿಳೆಯರು ಬಲವಂತದ ತಾತ್ಕಾಲಿಕ ವೇಶ್ಯಾವೃತ್ತಿ ಮಾಡಬೇಕಿತ್ತು. ಎಂದು ಹೇರೋಡೊಟಸ್ ಉಲ್ಲೇಖಿಸುತ್ತಾನೆ. ಜೊತೆಗೆ " 'ಎರಿಕ್ ಪ್ರದೇಶದ ರಾಣಿ' ಆಸೆಯ ಹೆಣ್ಣು ದೇವತೆ, ಕಾಮನ ಕಣ್ಣಿನವಳು. ಪ್ರೀತಿಯ ವಾರಾಂಗನೆ, ದೇವಾಲಯದ ಗಣಿಕೆ, ಮತ್ತು ಪ್ರಣಯ ದೇವತೆ. ಮುಂತಾದ ಬಿರುದುಗಳನ್ನು ಇಪ್ತಾರ್ ದೇವತೆಗೆ ನೀಡಲಾಗಿದ್ದು. ಅವಳ ಲೈಂಗಿಕ ಲಕ್ಷಣಗಳಿಗೆ ಹೆಚ್ಚು ಒತ್ತು ನೀಡಿ ಚಿತ್ರಗಳಲ್ಲಿ ಮತ್ತು ಶಿಲ್ಪಗಳಲ್ಲಿ ಆಕೆಯನ್ನು ಬೆತ್ತಲೆಯಾಗಿ ಕೆತ್ತಲಾಗಿದೆ. ಅಥವಾ ತನ್ನ ಉಡುಗೆಯನ್ನು ಪಕ್ಕಕ್ಕೆ ಸರಿಸಿ ತನ್ನ ಸೌಂದರ್ಯವನ್ನು ಪ್ರದರ್ಶಿಸುವ ಮೂಲಕ ಆಕೆಯ ಲೈಂಗಿಕ ಲಕ್ಷಣಗಳಿಗೆ ಒತ್ತು ನೀಡಲಾಗಿದೆ"[೬]. ಎದೆಯನ್ನು ಮುಂದಕ್ಕೆ ಚಾಚಿದಂತಿರುವ ಶಿಲ್ಪಗಳು ಅದಕ್ಕೆ ಸಾಕ್ಷಿಯಾಗಿವೆ. ಈ ಪೈಕಿ ಕೆಲವು ಬ್ಯಾಬಿಲೋನಿಯಾದ ಹೊರಗೂ ದೊರೆತಿವೆ. ಉದಾಹರಣೆಗೆ

ಉತ್ತರದ ಸಿರಿಯಾದಲ್ಲಿ ಮತ್ತು ಕರ್ಚೆಮಿಷನಲ್ಲಿ ಕಂಡುಬಂದಿದೆ.

ಅನೇಕ ಪೂಜಾರಿಣಿಯರನ್ನು ಮತ್ತು ಸೇವಕಿಯರನ್ನು ಇಪ್ತಾರ್‌ನ ದೇವಾಲಯದಲ್ಲಿ ಕೆಲಸಕ್ಕೆ ನೇಮಿಸಿಕೊಳ್ಳಲಾಗುತ್ತಿತ್ತು. ಆ ಸೇವಕಿಯರು ಕಾಮುಕಿಯರಾಗಿದ್ದು, ಅವರಿಗೆ ಕ್ವಿಜೆರೆಟಿ (ಗಣಿಕೆ), ಶಮ್‌ಕಟಿ (ಸಂತೋಷ ನೀಡುವ ಸೇವಕಿ) ಮತ್ತು ಖರಿಮಟಿ (ನಿಷ್ಠೆಹೊಂದಿದವಳು) ಎಂದು ಹೆಸರಿಸಲಾಗಿತ್ತು. 'ಘಿರ್ರಾ' ಐತಿಹ್ಯದಲ್ಲಿ ಈ ಕಾಮುಕ ಮಾಂತ್ರಿಕರನ್ನು ಈ ರೀತಿ ವರ್ಣಿಸಲಾಗಿದೆ. 'ಎರಿಕ್' ಎಂಬ ಊರು, ಮತ್ತು ಇಪ್ತಾರ್‌ನ ಮನೆ, ಅದು ಸೂಳೆಯರ ಪಟ್ಟಣ. ಹಾದರದ ತವರು, ಗಿರಾಕಿಗಳಾಗಿ ಬಂದವರು ಇಪ್ತಾರ್‌ಗೆ ಒಂದು ಕೈಯಲ್ಲಿ ಹಣಕೊಡುತ್ತಾ ಇನ್ನೊಂದು ಕೈಯಲ್ಲಿ ಸೂಳೆಯ ಮೇಲೆ ಇಡುತ್ತಿದ್ದರು. ಬ್ಯಾಬಿಲೋನಿಯರ ಅತ್ಯಂತ ಪ್ರಮುಖವಾದ ಸಾಹಿತ್ಯ ಕೃತಿ 'ಗಿಲ್‌ಗಮೀಸ್ ಮಹಾಕಾವ್ಯ' ಈ ವಿಷಯದ ಮೇಲೆ ಗಮನಾರ್ಹ ಬೆಳಕನ್ನು ಚೆಲ್ಲುತ್ತದೆ.

ಮೇಲೆ ನೀಡಿದ ವಿವರಗಳ ಆಧಾರದ ಮೇಲೆ ಆ ಪ್ರದೇಶದ ಸಾಹಿತ್ಯ ಮತ್ತು ಪುರಾಣಗಳಲ್ಲಿ ದಾಖಲಿಸಲ್ಪಟ್ಟ ಪವಿತ್ರ ವೇಶ್ಯಾಗಾರಿಕೆ ಸ್ಥಾಪಿತವಾದುದನ್ನು ಗಮನಿಸಬಹುದು. ಪಶ್ಚಿಮ ಆಫ್ರಿಕಾದಲ್ಲಿ ಬರ್ಟನ್, ಇಲ್ಲಿಸ್, ಫ್ರೇಜರ್ ಅವರು ತಮ್ಮ ಕೃತಿಗಳಲ್ಲಿ ಮಾತೃದೇವತೆಗಳ ಹೆಸರಿನಲ್ಲಿ ಪಶ್ಚಿಮ ಆಫ್ರಿಕೆಯ Slave coast ಮತ್ತು Gold coast ಗಳಲ್ಲಿ ಪವಿತ್ರ ಸೂಳೆಗಾರಿಕೆ ಇತ್ತೆಂದು ತಿಳಿಸಿದ್ದಾರೆ. ಇಲ್ಲಿ ಗಂಡು ಅಥವಾ ಹೆಣ್ಣು, ಯಾರೇ ಹದಿಹರೆಯದವರಾಗಲಿ, ಒಂದು ದೇವರಿಗೆ ಅರ್ಪಿಸಲ್ಪಟ್ಟರೆ ಅಥವಾ ಸೇರಿಸಲ್ಪಟ್ಟರೆ ಅವರನ್ನು ಕೋಸಿಯೋ (ಕೋನೋದಿಂದ ಬಂದದ್ದು) ಅಂದರೆ ಉಪಯೋಗವಿಲ್ಲದವರು ಎಂದು ಕರೆಯಲಾಗುತ್ತಿತ್ತು. ಯಾಕೆಂದರೆ, ಒಂದು ದೇವರಿಗೆ ಅರ್ಪಿಸಲ್ಪಟ್ಟ ಮಗುವು ಆ ದೇವರ ಸೇವೆಗೆ ಹೋಗುವುದು ಸಹಜವಾಗಿರುತ್ತದೆ. ಹಾಗೆಯೇ ಅಂಥವರು ದೇವರಿಗೆ ಹೆಂಡತಿಯಾಗುತ್ತಾರೆ. ದೇವರುಗಳಿಗೆ ಸಮರ್ಪಣೆ ಮಾಡಲ್ಪಟ್ಟವರಿಗೆ ಮಾತ್ರ ಈ ಪದ ಬಳಕೆಯಾಗಬೇಕೆಂಬ ನಿರ್ಬಂಧವಿರುವುದರಿಂದ ಅವನ್ನು ಈ ಅರ್ಥದಲ್ಲಿ ಸಾಮಾನ್ಯವಾಗಿ ವಿವರಿಸಿಕೊಳ್ಳುವುದಿಲ್ಲ. ಕೋಸಿಯಳ ಮುಖ್ಯ ದಂಧೆ ವೇಶ್ಯಾಗಾರಿಕೆ, ಮತ್ತು "ಪ್ರತಿಯೊಂದು ಪಟ್ಟಣದಲ್ಲಿ ಹತ್ತರಿಂದ ಹನ್ನೆರಡು ವರ್ಷ ವಯೋಮಾನದ ಸುಂದರ ಹುಡುಗಿಯರನ್ನು ಸ್ವೀಕರಿಸಲು ಈ ಬಗೆಯ ಒಂದು ಸಂಸ್ಥೆ ಅಲ್ಲಿ ಇತ್ತು. ಅವರು ಮೂರು ವರ್ಷಗಳಿದ್ದು ದೇವರುಗಳ ಪೂಜೆಗಳ ವೈಚಿತ್ರ್ಯಗಳನ್ನು ಅಭ್ಯಾಸಿಸುತ್ತಾ ಪುರುಷ ಶಿಕ್ಷಕರೊಂದಿಗೆ ವೇಶ್ಯಾಗಾರಿಕೆಯನ್ನು ಅಭ್ಯಾಸ ಮಾಡುತ್ತಾರೆ. ತಮ್ಮ ವಾಯಿದೆ ಮುಗಿದ ನಂತರ ಸಾರ್ವಜನಿಕವಾಗಿ ವೇಶ್ಯೆಯರಾಗುತ್ತಾರೆ. ಇಷ್ಟಾದರೂ ಅವರನ್ನು ಯಾರೂ ನಿಂದಿಸುವುದಿಲ್ಲ. ಅವರನ್ನು ದೇವರೊಂದಿಗೆ ಮದುವೆಯಾದವರೆಂದೇ ಪರಿಭಾವಿಸುತ್ತಾರೆ ಮತ್ತು ಅವರ ಹಾವಳಿಯನ್ನು ದೇವರಿಂದ ನಿರ್ದೇಶಿಸಲ್ಪಟ್ಟ ಕ್ರಿಯೆಯೆಂದೇ ಭಾವಿಸಲಾಗುವುದು. ಅವರ ಕೂಡುವಿಕೆಯಿಂದ ಹುಟ್ಟಿದ ಮಕ್ಕಳು ದೇವರಿಗೆ ಸೇರಿದವರಾಗುತ್ತಾರೆ"[೭].

ಉತ್ತರ ಆಫ್ರಿಕಾ: "ಸೆಮೆಟಿಕ್ ಆದಿವಾಸಿಗಳಲ್ಲಿ ಸೆಮೆಟಿಕ್ ಮಾತೃದೇವತೆಯನ್ನು Astrat ಮತ್ತು Tanth ಹೆಸರುಗಳಿಂದ ರಚಿಸಲಾಗುತ್ತಿತ್ತು. ಈ ದೇವತೆಯ ಉತ್ಸವದಲ್ಲಿ ಜನ ಎಲ್ಲ ಬಗೆಯ ಅಶ್ಲೀಲ ಚೇಷ್ಟೆಗಳನ್ನು ಪ್ರದರ್ಶಿಸುತ್ತಿದ್ದರು. ಬಹುಶಃ ಭಕ್ತರು ತಾತ್ಪೂರ್ತಿಕವಾಗಿ hierodoaloi ಎಂದು ರೂಢಿಸಿಕೊಂಡರೆಂದು ಊಹಿಸಬಹುದು"[೮].

**ಸಿರಿಯಾ, ಫೊನೇಷಿಯಾ ಮತ್ತು ಕನಾನ್‌ಗಳಲ್ಲಿ ಮಾತೃದೇವತೆ ಮತ್ತು ಧಾರ್ಮಿಕ ವೇಶ್ಯಾಗಾರಿಕೆ ಪದ್ಧತಿ**

ಸಿರಿಯಾದಲ್ಲಿಅಟ್ಬರ್ ಅಥವಾ ಅತ್ತರ್ ಎಂದು ಮುಖ್ಯ ಮಾತೃದೇವತೆಯನ್ನು ಕರೆಯುತ್ತಾರೆ. ಲೆಬನಾನ್‌ನ ಪವಿತ್ರ ನಗರ ಹೈರಾಪೊಲಿಸ್‌ನಲ್ಲಿ 'ಅತರಗಟಿಸ್' ಎಂಬ ಹೆಸರಿನಿಂದ ಆಕೆಯನ್ನು ಗುರುತಿಸುತ್ತಾರೆ. ಪುರಾತನ ಸಾಕ್ಷ್ಯಾಧಾರಗಳನ್ನು ಉಲ್ಲೇಖಿಸಿ ಟಾವ್ನಿ ಮತ್ತು ಪೆಂಜರ್ ಈ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ.

"ಹೈರಾಪೊಲೀಸ್‌ನಲ್ಲಿ ಪೂಜೆ ಮಾಡುವುದರ ಬಗ್ಗೆ ನಮಗೆ ಉಪಲಬ್ಧವಿರುವ ದಾಖಲೆ ಎಂದರೆ, ಸುಮಾರು ಕ್ರಿ.ಶ.೧೫೦ರ ಹೊತ್ತಿನಲ್ಲಿ ಲುಸಿಯಾನ್ ಪ್ರಾರಂಭದಲ್ಲಿ ಬರೆದ ಕೃತಿಗಳಲ್ಲಿ ಒಂದಾದ ಡೇಡಿ ಸಿರಿಯದಿಂದ ಕ್ರಿ.ಪೂ.೧೪ನೇ ಶತಮಾನದಲ್ಲಿದ್ದ ಹಿಟೆಟ್ ಅಧಿಪತ್ಯವು ತುತ್ತ ತುದಿಯಲ್ಲಿದ್ದಾಗ, ಅಲ್ಲಿನ ಧಾರ್ಮಿಕ ಪದ್ಧತಿ ಲುಸಿಯಾನ್ ವಿವರಿಸಿರುವ ಹಾಗೆಯೇ ಬಹುಪಾಲು ಕಂಡು ಬರುವುದು ಎಂದು ಏಶಿಯಾ ಮೈನರ್ ಮತ್ತು ಉತ್ತರ ಸಿರಿಯಾದಲ್ಲಿ ನಾಣ್ಯಗಳ ಸಂಶೋಧನೆಯಲ್ಲಿ ಇತ್ತೀಚೆಗೆ ಕಂಡುಕೊಂಡ ಪ್ರಧಾನ ಅಂಶವಾಗಿದೆ. ಜೋಡಿಯಾದ ಗಂಡು-ಹೆಣ್ಣು ಒಂದು ವೃಷಭ ದೇವರು ಮತ್ತು ಒಂದು ಸಿಂಹ ದೇವತೆಯನ್ನು ಹಿಟ್ಟೈಟನ್ನರು ಪೂಜಿಸುತ್ತಿದ್ದರು. ಮುಂದೆ ಅದೇ ಪ್ರಬಲವಾಗಿ ಫಲವತ್ತತೆಯ ಪ್ರತೀಕವಾಗಿ ಮತ್ತು ಫೊನೇಶಿಯಾದಲ್ಲಿ ಮನುಷ್ಯರ ಹುಟ್ಟುವಿಕೆಯ ಅಧಿದೇವತೆಯಾಗಿ, ಮಾತೃದೇವತೆಯಾಗಿ ಪ್ರಮುಖವಾಯಿತು. ಬದಲಾವಣೆ ಆಗುತ್ತಿರುವ ಸಂದರ್ಭಗಳಿಗನುಗುಣವಾಗಿ ಮತ್ತು ಸಮುದಾಯದ ತಕ್ಷಣದ ಬೇಡಿಕೆ ಪೂರೈಸಲು ಪೂರ್ವದಲ್ಲಿ ಧರ್ಮ ತನ್ನನ್ನು ತಾನೇ ಅಳವಡಿಸಿಕೊಂಡಿತು"[೯].

ಹೀಗಾಗಿ, ಆಯಾ ಸಂದರ್ಭಗಳಿಗೆ ಮತ್ತು ಜನ ಸಾಮಾನ್ಯರಿಗೆ ದೇವತೆಯ ಉದ್ರೇಕಗೊಳ್ಳುವ ಮುಖವನ್ನಷ್ಟೇ ಅಭಿವೃದ್ಧಿಪಡಿಸುವಲ್ಲಿ ಒಲವು ತೋರಿಸಿತು. ಹೀಗಾಗಿ ಪಂಥಗಳು ಹೆಚ್ಚು ಕಾಮೋದ್ರೇಕದ ಲಕ್ಷಣ ಹೊಂದಿರುವ ಹಾಗೆ ಮಾಡಿದವು. ಬ್ಯಾಬಿಲೋನ್ ಬಗ್ಗೆ ಹೇಳುತ್ತ ಅಥೋನಿಯನ್ನು ಕಳೆದುಕೊಂಡ ದೇವತೆಗಳು ಶೋಕಾಚರಣೆಯ ನಂತರ ಅಲ್ಲಿನ ಜನರೆಲ್ಲ ಕೇಶ ಮುಂಡನ ಮಾಡಿಕೊಳ್ಳಬೇಕಿತ್ತು. ಅದಕ್ಕೆ ತಿರಸ್ಕರಿಸಿದ ಹೆಣ್ಣುಮಕ್ಕಳು ಆ ದೇವಾಲಯದಲ್ಲಿ ಇಡೀ ದಿವಸ ಎಲ್ಲರಿಗೂ ಅರ್ಪಿತವಾಗಬೇಕಾಗಿತ್ತು. ಅಪರಿಚಿತರು ಮಾತ್ರ ಹೆಂಗಸರನ್ನು ಬಾಡಿಗೆಗೆ ತೆಗೆದುಕೊಳ್ಳಲು ಅವಕಾಶವಿತ್ತೆಂದು ತಿಳಿದು ಬರುತ್ತದೆ. ಶಾಶ್ವತ ಹಾಗೂ ತಾತ್ಕಾಲಿಕ ಧಾರ್ಮಿಕ ವೇಶ್ಯಾಗಾರಿಕೆಯ ವ್ಯವಸ್ಥೆಯು ದೇವಸ್ಥಾನಗಳಲ್ಲಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಈ ಸಾಕ್ಷ್ಯಾಧಾರಗಳು ಸಾಬೀತು ಪಡಿಸುತ್ತವೆ.

ಫೊನೇಷಿಯಾ, ಕೆನಾನ್ ಮತ್ತು ಸೈಪ್ರಸ್ ಈ ಮುಂತಾದ ಪ್ರದೇಶಗಳಲ್ಲಿ ಹಿರಿಯ ಮಾತೃದೇವತೆಯ ಪದ್ಧತಿ ರೂಢಿಗತವಾಗಿತ್ತು. ಅಟರ್ಟ್, ಅಶೊರೆತ್ ಮತ್ತು ಅಸ್ಟೈಟ್ ಈ ಹೆಸರುಗಳಿಂದ ಆಕೆಯನ್ನು ಕರೆಯುತ್ತಿದ್ದರು. ಇಸ್ತಾರ್ ದೇವತೆಯ ಹಾಗೆಯೇ ಪ್ರಣಯ ದೇವತೆ, ಹೆರಿಗೆ, ಫಲವತ್ತತೆ ಮತ್ತು ಯುದ್ಧ ಇವುಗಳನ್ನು ಈ ದೇವತೆಗೆ ಆರೋಪಿಸಲಾಗುತ್ತಿತ್ತು. ಹಿರಿಯ ಮಾತೃದೇವತೆಯನ್ನು ಅಫ್ರೊಡೈಟ್ ಜೊತೆಗೆ ಗ್ರೀಕರು ಮತ್ತು ಫೊನೇಷಿಯನ್ನರು ಗುರುತಿಸುತ್ತಿದ್ದರು. ಇದು ಆಕೆಯ ಲೈಂಗಿಕ ಲಕ್ಷಣವನ್ನು ಹೇಳುತ್ತಿತ್ತು. ಕೊನೆಯ ಹಂತದಲ್ಲಿ ಫೊನೇಷಿಯನ್ನರು ಈ ಪದ್ಧತಿಯನ್ನು ತಮ್ಮ ವಸಹಾತುಗಳೊಂದಿಗೆ ತೆಗೆದುಕೊಂಡು ಹೋದದ್ದು ಸಹಜವೇ ಆಗಿದೆ. ಹೆರೊಡೋಟಸ್‌ನು ಸಿರಿಯಾದ ಸಂದರ್ಭದಲ್ಲಿ ಪವಿತ್ರ ವೇಶ್ಯಾಗಾರಿಕೆಯನ್ನು ಹೋಲುವ ಅಂತಹ

ಪದ್ಧತಿಯನ್ನು ತನ್ನ ಕೃತಿಗಳಲ್ಲಿ ಪ್ರಮುಖವಾಗಿ ಉಲ್ಲೇಖಿಸುತ್ತಾನೆ. ಅವುಗಳಲ್ಲಿ ಮುಖ್ಯವಾದುವೆಂದರೆ, ಅಲೆಗ್ಸಾಂಡ್ರಿಯದ ದಯೆ ಉಳ್ಳವಳು ಜಸ್ಟಿಸ್ ಮತ್ತು ಅಥೆನಕಸ್ ಸೈಪ್ರೆಸ್‌ನ್ ಕಿಟಿಯೋನ್ ದೇವಾಲಯದಲ್ಲಿ ಗಂಡು ವೇಶ್ಯೆಯರ ಬಗ್ಗೆ ವಿಶೇಷ ಗಮನಹರಿಸಲಾಗಿದೆ.

"ಫೊನೇಷಿಯಾದ ಶಿಲಾಶಾಸನಗಳು ಸಿಸಿಲಿಯ ಎರಿಕ್ಸ್ ಎಂಬಲ್ಲಿ ಅಷ್ಟಾರ್ಟ್ ಎಂಬ ಒಂದು ದೇವಾಲಯದ ಬಗ್ಗೆ ಸಾಕ್ಷ್ಯಾಧಾರವನ್ನು ಒದಗಿಸುತ್ತದೆ. ಅಷ್ಟಾರ್ಟ್, ತನಿತ್ ಈ ಹೆಸರುಗಳಿಂದ ಮಾತೃದೇವತೆಯು ಉತ್ತರ ಆಫ್ರಿಕಾದ ಕರಾವಳಿ ಉದ್ದಕ್ಕೂ ಬಹಳ ಜನಪ್ರಿಯಳಾಗಿದ್ದಳು. ಅರೆಬಿಯಾದಲ್ಲಿ ಅಯ್-ಲಟ್ ಅಥವಾ ಅಯ್-ಉಜ್ಜಾ ಮಾತೃದೇವತೆಯ ಪೂಜೆಯೊಂದಿಗೆ ತಾತ್ಕಾಲಿಕ ಧಾರ್ಮಿಕ ವೇಶ್ಯಾಗಾರಿಕೆಯು ರೂಢಿಯಲ್ಲಿತ್ತು"[೫೦].

**ಗ್ರೀಸ್ ದೇಶ:** 'ಸುಗ್ಗಿ ಪೂಜೆ' ವರ್ಷಕ್ಕೊಂದು ಬಾರಿ ಸುಗ್ಗಿ ದೇವತೆಯ ಪ್ರೀತ್ಯಾರ್ಥವಾಗಿ ಎಲ್ಲರೂ ವ್ಯಭಿಚಾರ ಮಾಡಬೇಕೆಂದು ಇಲ್ಲದಿದ್ದರೆ ಪಾಪ. ಈಗ ಅದು ಒಂದು ದೊಡ್ಡ ಉತ್ಸವವಾಗಿ ಪರಿಣಮಿಸಿದೆ. ಈ ಪೂಜೆ ಕೆಲವು ಕಡೆ ೩೦ ದಿನಗಳವರೆಗೆ ನಡೆಯುತ್ತಾ ಇತ್ತು. ಕೆಲವೆಡೆ 'ಮಹಾಮಾತೆ' ಎಂಬ ಹೆಸರಿನಿಂದ ಪೂಜೆ, ಉತ್ಸವ ನಡೆಸುತ್ತಿದ್ದರು. "ಉಪ್ಪುಲೇರೊ ಉಪ್ಪುನೂಸಾ" ಎಂಬ ಹೆಸರಿನಲ್ಲಿ ಯೂಸಿಬಿಯ ಎಂಬ ಚರಿತ್ರಾಕಾರನು 'ಪೆಟ್ರೋಲಾಜಿಯಾ ಗ್ರೀಸಿಯಾ' ಎಂಬ ತನ್ನ ಗ್ರಂಥದಲ್ಲಿ "Men who have castrated themselves in honour of the goddess" ದೇವತೆಗಾಗಿ ನಿರ್ವೀರ್ಯರಾದವರು ಎಂದು ಈ ಪಂಡಿತರ ವಿಷಯದಲ್ಲಿ ಹೇಳುತ್ತಾನೆ.

'ಮಿಗ್ನಿಸ್' ಎಂಬುವವನು ಕೂಡ ಈ ಆಚಾರವಿದೆ ಎಂದು ಬರೆದಿದ್ದಾನೆ. 'ವೆಸ್ಟರ್ ಮಾರ್ಕ್' ಈ ವಿಧದ ಅನೇಕ ಸಂಗತಿಗಳನ್ನು ಬರೆಯುತ್ತಾನೆ. ಪುರೋಹಿತರಾಗಬೇಕೆನ್ನುವವರು, ಕೆಲವೆಡೆ ನಪುಂಸಕತ್ವದಿಂದ ತೃಪ್ತಿಹೊಂದದೆ, ಸ್ತ್ರೀತ್ವವನ್ನು ನಟಿಸಬೇಕೆಂದು ಬರೆಯುತ್ತಾನೆ. ಇನ್ನೊಬ್ಬ ಪುರುಷನೊಡನೆ ತಾನು ಸ್ತ್ರೀಯಂತೆ ಸೇರಿರಬೇಕು. ಹಾಗೆ ಮಾಡದಿದ್ದರೆ, ಭೋರಾನ್ ಅಭ್ಯಾಸ ಮಾಡಲು ಬರುವುದಿಲ್ಲವಂತೆ. ಅವನಿಗೆ ಸಾಕಷ್ಟು ಮಹತ್ವವಿರುವುದಿಲ್ಲವಂತೆ. ಪವಿತ್ರತೆಯನ್ನು ಸಂಪಾದಿಸುವುದಕ್ಕಾಗಿ ಪುರುಷರೂ ಕೂಡ ಸ್ತ್ರೀತ್ವವನ್ನು ನಟಿಸುತ್ತಾ ಪುರುಷರೊಡನೆ ಸಂಗಮವನ್ನು ಹೊಂದುವ ಪದ್ಧತಿ ಅದಾಗಿದೆ.

**ಗ್ರೀಸ್‌ನಲ್ಲಿ ಪುರುಷ ಶಕ್ತಿಯ ಅರ್ಪಣೆ**

ಭಕ್ತರಲ್ಲಿ ಮಹಾ ಭಕ್ತರೆನ್ನಿಸಿಕೊಳ್ಳಲು, ತನ್ನಲ್ಲಿರುವ ಸರ್ವಶಕ್ತಿಯನ್ನು ಅರ್ಪಿಸಿಕೊಳ್ಳುವವರೆಗೂ ಶಾಂತಿ ಇರುವುದಿಲ್ಲ. ಆದ್ದರಿಂದ ದೇವಾಲಯದಲ್ಲಿ ಪವಿತ್ರವಾದ ಉದ್ದೇಶದಿಂದ, ಉತ್ತಮವಾದ ಭಕ್ತಿಯಿಂದ ಎಲ್ಲರೂ ಮೆಚ್ಚುವಂತೆ, ಈ ಮಹಾ ಭಕ್ತನು ತನ್ನ ಪುರುಷ ಶಕ್ತಿ ಎಲ್ಲವನ್ನು ಧಾರೆಯೆರೆದು ಅರ್ಪಿಸುತ್ತಾನೆ. ಈ ಅರ್ಪಣೆ ಅನೇಕ ರೀತಿಯಲ್ಲಿರುತ್ತದೆ. ಅವಯವ ಸಮರ್ಪಣೆ, ಆಧಾರ ಸಮರ್ಪಣೆ, ಪುರುಷಬಲ ಸಮರ್ಪಣೆ. ಈ ಪುರುಷ ಬಲ ಸಮರ್ಪಣೆ ಮಾಡುವುದಕ್ಕೆ ಮಾರ್ಗಗಳು ನಾನಾ ಬಗೆಯದಾಗಿದ್ದು, ನಿಷೆ ಬರುವ ವಸ್ತುಗಳ ಸೇವನೆ, ಪದೇ ಪದೇ ಸ್ತ್ರೀಸಂಗ ಮಾಡಿ ನಿರ್ವೀರ್ಯರಾಗುವುದು ಒಂದೇ ದಿನದಲ್ಲಿ ಅನೇಕ ಬಾರಿ ಹೀಗೆ ಮಾಡುವುದರಿಂದ ಕೆಲವು ದಿನಗಳಲ್ಲಿಯೇ ಈ ಮಹಾಭಕ್ತನು ಪುರುಷತ್ವವಿಲ್ಲದೇ ಹೋಗುತ್ತಾನೆ. ಇದು ಪುರುಷತ್ವದ ಅರ್ಪಣೆಯಾಗಿದೆ.

ಈ ಸಂಭೋಗ ಪೂಜೆಯನ್ನು ಮಾಡುವವರು. ಹೀಗೆ ಅನೇಕ ಕಡೆ ಬಹು ವಿಧವಾಗಿ ಈ ಲೈಂಗಿಕ ಉತ್ಸವಗಳನ್ನು ನಡೆಸುವರು. ಆದರೆ ಎಲ್ಲ ಕಡೆ ಆ ಮಹಾಭಕ್ತರ ಹೃದಯಗಳಲ್ಲಿ ಇದ್ದ ಅಭಿಪ್ರಾಯ ಇದೇ ವರ್ಷ ಸಸ್ಯವೃದ್ಧಿ ಮಾಡಿ ದೇವತೆಗಳು ಬಲಹೀನರಾಗುತ್ತಾರೆ. ಅವರಿಗೆ ಬಲವನ್ನುಂಟುಮಾಡಬೇಕು. ಎಲ್ಲರೂ ರಾತ್ರಿಯೆಲ್ಲವೂ ನಿದ್ದೆಯಿಲ್ಲದೇ ಈ ಲೈಂಗಿಕ ಮಹಾಕಾರ್ಯವನ್ನು ನಡೆಸಬೇಕು. ಊರಿಗೆ ಕ್ಷೇಮ, ಮಂಗಳವಾಗಲೆಂದು ಈ ಕಾರ್ಯ ಮಾಡದವರು ಪಾಪಿಗಳು, ದೇಶದ್ರೋಹಿಗಳೆಂದು ನಂಬಿ ಪೂಜೆಯನ್ನು ಅತಿ ನಿಷ್ಠೆಯಿಂದ, ವೈಭವದಿಂದ, ಉತ್ಸಾಹದಿಂದ ಮಾಡುತ್ತಿದ್ದರು.

ಗ್ರೀಸ್ ದೇಶದಲ್ಲಿ ಈ ಉತ್ಸವ ಜಾರಿಗೆ ಬರುವ ಹೊತ್ತಿಗೆ ಪ್ರತಿಯೊಬ್ಬರೂ, ಲೈಂಗಿಕ ಸೇವೆಯಲ್ಲಿ ಮಹಿಳೆ ವಿಹಾರ ಮಾಡುತ್ತಲಿರುತ್ತಾರೆ. ಅಷ್ಟರಿಂದಲೇ ಅವರಿಗೆ ತೃಪ್ತಿ ಸಿಗುವುದಿಲ್ಲ. ಪ್ರತಿಯೊಂದು ಮನೆಗೂ ಶುಭವನ್ನುಂಟು ಮಾಡಬೇಕು. ಪ್ರತಿ ಮನೆಗೂ ಲಕ್ಷ್ಮಿ ಬರಬೇಕು. ಅದಕ್ಕೋಸ್ಕರ ಪ್ರತಿ ಮನೆಯ ಮುಂದೆ ಹುಲ್ಲನ್ನು ಹಾಸಿಗೆಯಂತೆ ಹಾಸಿರುತ್ತಾರೆ. ಉತ್ಸವವು ವಿಜೃಂಭಿಸುತ್ತಾ ಇರುತ್ತದೆ. ಈ ಭಕ್ತರಲ್ಲಿ ಚೆನ್ನಾಗಿ ವೇಷಭೂಷಣ ಧರಿಸಿ, ಮಹಿಳೆಯರು, ಗಂಡಸರೂ ಮನೆಗೆ ಬರುತ್ತಾರೆ. ಅಲ್ಲಿ ಹರಡಿರುವ ಹುಲ್ಲಿನ ಹಾಸಿಗೆಯ ಮೇಲೆ ಸಂಗಮಕಾರ್ಯ ನಡೆಸುತ್ತಾರೆ. ಅನಂತರ ಮತ್ತೊಂದು ಮನೆಯ ಸಮೀಪಕ್ಕೆ ಹೋಗುತ್ತಾರೆ. ಹೀಗೆ ಮನೆ ಮನೆಗೆ ಲಕ್ಷ್ಮಿಪ್ರಸಾದವನ್ನುಂಟುಮಾಡುತ್ತಾರೆ.

ಲೈಂಗಿಕ ಕಾರ್ಯದ ಜೊತೆಗೆ ಅಸಹ್ಯವಾದ ಅಶ್ಲೀಲವಾದ ಮಾತುಗಳನ್ನಾಡುತ್ತಾ ಇರುತ್ತಾರೆ. ಸಂಗಮವನ್ನು ವರ್ಣಿಸುತ್ತಾರೆ. ಸ್ತ್ರೀಪುರುಷರ ಅವಯವಗಳನ್ನು ವರ್ಣಿಸುತ್ತಾರೆ. ಅತಿಶಯೋಕ್ತಿಯನ್ನು ಸುರಿಸುತ್ತಾರೆ. ಕಾರ್ಯದಲ್ಲಿ ತೋರಿಸಲಾದ ಭಕ್ತಿಯನ್ನೆಲ್ಲಾ ಮಾತುಗಳಲ್ಲಿ ತೋರಿಸಿ ಧನ್ಯರಾಗುತ್ತಾರೆ.

''ಲೀಡಿಯಾದ ಟ್ರಾಲೆಸ್‌ದಲ್ಲಿ ದೊರೆತ ಒಂದು ಗ್ರೀಕ್ ಶಿಲಾಶಾಸನದ ಪ್ರಕಾರ ಧಾರ್ಮಿಕ ವೇಶ್ಯಾಗಾರಿಕೆಯ ಆಚರಣೆ ಆದೇಶದಲ್ಲಿ ಕ್ರಿ.ಶ.೨ನೇ ಶತಮಾನದವರೆಗೂ ರೂಢಿಯಲ್ಲಿದ್ದುದು ತಿಳಿದುಬರುತ್ತದೆ. ಪಶ್ಚಿಮ ಆಫ್ರಿಕೆಯ Ewe ಮತ್ತು Tshi ಭಾಷೆಗಳನ್ನಾಡುವ ಜನರು ದೇವದಾಸಿಯರನ್ನು ಮೂರು ವಿಧವಾಗಿ ಗುರುತಿಸುತ್ತಾರೆ. ಒಂದು ವಿವಾಹಿತ ದೇವದಾಸಿ, ಎರಡನೇ ಅರ್ಚಕಿಯರು, ಮೂರನೇ ದೇವಾಲಯದ ಸೂಳೆಯರು. ದೇವದಾಸಿಯರು ಎನ್ನುವ ನಾಗದೇವತೆಗೆ ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದರು. ಪ್ರತಿಯೊಂದು ಗುಂಪು ತನ್ನದೇ ಆದ ಸಂಘಟನೆ ಹೊಂದಿದ್ದರೂ ಎಲ್ಲರೂ ಕೂಡಿ ಒಂದೇ ವಠಾರದಲ್ಲಿ ವಾಸ ಮಾಡುತ್ತಿದ್ದರು. ನೂತನ ದೇವದಾಸಿಯರು ಮೂರು ವರ್ಷಗಳವರೆಗೆ ದೇವತಾರ್ಚನೆಗೆ ಅಗತ್ಯವಾದ ನೃತ್ಯ, ಸಂಗೀತಗಳನ್ನು ಕಲಿಯುತ್ತಾ ಇರಬೇಕಾಗುತ್ತಿತ್ತು. ಈ ಅವಧಿಯಲ್ಲಿ ಅವರು ಪಾಠಶಾಲೆಯ ಬೋಧಕ, ಅರ್ಚಕ ಮುಂತಾದವರಿಗೆ ಸೂಳೆಯರಾಗಿ ಇರಬೇಕಾಗುತ್ತಿತ್ತು. ಮತ್ತು ಈ ಸಂಸ್ಕಾರದ ಅವಧಿಯಿಂದ ಬಿಡುಗಡೆಯಾದ ಬಳಿಕ ಅವರು ಸಾರ್ವಜನಿಕ ಸೂಳೆಯರಾಗುತ್ತಿದ್ದರು''[೧೧].

ಸ್ವೀಡನ್ ದೇಶ : ''ಪಶುಪಕ್ಷಿ, ಸಸ್ಯಪ್ರಪಂಚದ ಫಲವತ್ತತೆಯ ಸಂಕೇತವಾದ ಫ್ರೇ ದೇವನ ಮನುಷ್ಯ ಪ್ರಮಾಣದ ವಿಗ್ರಹವನ್ನು ಒಂದು ಬಂಡಿಯಲ್ಲಿ ಇಟ್ಟು ಅದನ್ನು ನಾಡಿನ ತುಂಬಾ ಮೆರವಣಿಗೆ ಮಾಡಿ ಆ ಬಂಡಿಯ ಜೊತೆಗೆ ಒಬ್ಬ ಸುಂದರ ಕನ್ಯೆ ನಡೆದು ಹೋಗುತ್ತಿದ್ದಳು. ಉಪ್ಸಲಾದ ಈ ದೇವತೆಯು ದೇವಾಲಯದ

ಅರ್ಚಕಳೂ ಆಗಿರುತ್ತಿದ್ದ, ಇಂಥ ಕನ್ಯೆಯನ್ನು ದೇವ ಪತ್ನಿ ಎಂದು ಕರೆಯಲಾಗುತ್ತಿತ್ತು. ಮುಂಬರುವ ವರ್ಷ ಫಲ ಸಮೃದ್ಧವಾಗಲಿ, ಎಂದು ಜನ ಗುಂಪಾಗಿ ಬಂದು ಈ ದೇವತೆಯ ವಿಗ್ರಹ ಮತ್ತು ಅವನ ಮಧು ಮಗಳಿಗೆ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು"[೧೨].

**ಅಥೆನ್ಸ್ ದೇಶ :** ಪ್ರತಿವರ್ಷ ಮದಿರಾದೇವ ಡಯೋನಿಸಸ್‌ನ ಮದುವೆ ಅಲ್ಲಿನ ರಾಣಿಯೊಂದಿಗೆ ನೆರವೇರುತ್ತಿತ್ತು. ದ್ರಾಕ್ಷಿ ಮತ್ತು ಇತರ ಫಲವೃಕ್ಷಗಳ ಸಮೃದ್ಧಿ ಇದರ ಗುರಿಯಾಗಿತ್ತು. (ಫ್ರೇಜರ್, ೧೯೫೪ -೧೪೨)

**ಪ್ರಾಚೀನ ಹಿಬ್ರೂ ಮತ್ತು ಇಸ್ರೇಲ್ :** ಧಾರ್ಮಿಕ ವೃಂದಗಳಲ್ಲಿ ಸ್ತ್ರೀಪುರುಷರು 'ದಾಸಿಯರು' ಪವಿತ್ರ ವೇಶ್ಯೆಯರಾಗಿದ್ದುದು ತಿಳಿದುಬರುತ್ತದೆ. "ಕೇವಲ ಸ್ತ್ರೀಯರು ಧಾರ್ಮಿಕ ವೇಶ್ಯಾಗಾರಿಕೆ ಅನುಸರಿಸುತ್ತಿದ್ದರು ಎಂದಲ್ಲ ಆದರೆ ಅರಸರು ಮತ್ತು ಅರ್ಚಕರು ಕೂಡ ಕೆಲವು ಹೆಣ್ಣುಗಳನ್ನು ಧಾರ್ಮಿಕ ವೇಶ್ಯಾಗಾರಿಕೆಗೆ ಅರ್ಪಿಸುತ್ತಿದ್ದರು"[೧೩].

**ಜಾವ ದ್ವೀಪ :** ಬೆಳೆಯ ಕಾಲದಲ್ಲಿ ಹೊಲದ ಯಜಮಾನ ಮತ್ತು ಅವನ ಹೆಂಡತಿ ನಗ್ನರಾಗಿ ಹೊಲಕ್ಕೆ ಹೋಗಿ, ಭಕ್ತಿ ವಿನಯದಿಂದ ಹೊಲಕ್ಕೆ ಪ್ರದಕ್ಷಿಣೆ ಮಾಡಿ, ಅದಕ್ಕೆ ಮುಂಚೆ ಮೂರು ದಿವಸಗಳು ಉಪವಾಸವಿದ್ದು, ವ್ರತವನ್ನು ಮಾಡುತ್ತಾರೆ. ಹೀಗೆ ಪ್ರದಕ್ಷಿಣೆ ಮಾಡಿ, ಹೊಲದ ಮಧ್ಯದಲ್ಲಿ ಗಂಡ - ಹೆಂಡಿರು ಸಂಭೋಗಿಸುತ್ತಾರೆ. ಈ ಕಾರ್ಯದಿಂದ ಬೆಳೆ ಚೆನ್ನಾಗಿ ಬರುತ್ತದೆಂದು ಅವರ ನಂಬಿಕೆ. ಇದು ಮಧ್ಯ ಅಮೇರಿಕೆಯಲ್ಲಿಯೂ ರೂಢಿಯಲ್ಲಿತ್ತು.

**ದೇವತೆಗಳಿಗೆ ಮದುವೆ:** 'ಉಪುಲೇರೋ' ಎಂಬ ಪುರುಷ ದೇವತೆಗೆ 'ಉಪುನೂಸ' ಎಂಬ ಸ್ತ್ರೀ ದೇವತೆಯನ್ನು ಕೊಟ್ಟು ಸುಗ್ಗಿ ಕಾಲದಲ್ಲಿ ಮದುವೆ ಮಾಡುತ್ತಾರೆ. ಈ ಉತ್ಸವ ಒಂದು ತಿಂಗಳು ನಡೆಯುತ್ತದೆ. ೩೦ ದಿವಸಗಳು ಆ ಜನರಿಗೆ ವಿಶ್ರಾಂತಿ ಇರುವುದಿಲ್ಲ. ಹೆಂಗಸರು, ಗಂಡಸರು, ಸಾಟಿ ಇಲ್ಲದಂತೆ, ಸ್ವೇಚ್ಛಾವಿಹಾರ ಮಾಡುತ್ತಾರೆ. ರಾಜಕುಮಾರಿಯನ್ನು ರೈತ ಹಿಡಿದುಕೊಂಡರೂ, ರೈತ ಹೆಣ್ಣುಮಗಳನ್ನು ಸಾಹುಕಾರ ಹಿಡಿದುಕೊಂಡರೂ ತಪ್ಪಿಲ್ಲ. ಆ ತಮಾಷೆಗೆ ಕೊನೆಯಿಲ್ಲ ಎಂದು ಹೇಳಲಾಗಿದೆ.

**ಅರೇಬಿಯಾದಲ್ಲಿ:** ಅಯ್-ಲಟ್ ಅಥವಾ ಅಯ್-ಉಚ್ಚ ಮಾತೃದೇವತೆಯ ಪೂಜೆಯೊಂದಿಗೆ ತಾತ್ಕಾಲಿಕ ಧಾರ್ಮಿಕ ವೇಶ್ಯಾಗಾರಿಕೆಯು ರೂಢಿಯಲ್ಲಿತ್ತು.

**ನ್ಯೂಗಿನಿಯಾ ದೇವಾಲಯದಲ್ಲಿ:** ಈ ದೇವಾಲಯದಲ್ಲಿ ದೊಡ್ಡ ಭವನ ಇದೆ. ಅದರಲ್ಲಿ ಸ್ತ್ರೀ ಮತ್ತು ಪುರುಷರ ವಿಗ್ರಹಗಳು ಅವಯವಗಳು ಅನೇಕ ಸೈಜಿನಲ್ಲಿ ಬಹುದೊಡ್ಡ ಸಂಖ್ಯೆಗಳಲ್ಲಿ ಕಂಡುಬರುತ್ತವೆ. ಎಡ ಮತ್ತು ಬಲಗಡೆಯ ವರಾಂಡದಲ್ಲಿ, ಮರದಿಂದ ಮಾಡಿದ ಸ್ತ್ರೀಪುರುಷರ ವಿಗ್ರಹಗಳಿರುತ್ತವೆ. ಈ ಪ್ರತಿಮೆಗಳು ಕಳಾಶಾಸ್ತ್ರ ಪದ್ಧತಿಯಂತೆ ಲೈಂಗಿಕ ಪ್ರವೃತ್ತಿಯಲ್ಲಿರುತ್ತವೆ. ಅದೇ ದೇವಾಲಯ, ಅದೇ ವಿವಾಹವಾಗದ ಸ್ತ್ರೀ ಪುರುಷರಿಗೆ ಶಯ್ಯಾಗಾರ ಕೂಡ. ಆ ದೇವತೆಯು ಬಲಹೀನನಾಗದೇ ದೇಶದ ಪ್ರಜೆಗಳನ್ನು ಪೋಷಿಸುತ್ತದೆ ಎಂದು ನಂಬಿಕೊಂಡಿದ್ದರು.

**ಪಾಫಾಸಿನಲ್ಲಿನ ಆರಾಧನೆ :** ಅದ್ಭುತ ಮತ್ತು ಮಹತ್ವದ ದೇವಾಲಯು ಪಾಫಾಸಿನಲ್ಲಿನ ಇದು ಕೈಪ್ರಸ್

ದ್ವೀಪದಲ್ಲಿತ್ತು. ಈ ದೇವಾಲಯವು ಇಂದಿನವರೆಗೆ ಸಂಪೂರ್ಣವಾಗಿ ಒಂದು ದೊಡ್ಡ ಲೈಂಗಿಕ ಪುರಾಣದಂತೆ ಕಂಡು ಬರುತ್ತದೆ. ಈ ದೇವಾಲಯ ಚಿತ್ರ ವಿಚಿತ್ರವಾಗಿರುವ ಕಳಾಶಾಸ್ತ್ರದ ಬೊಂಬೆಗಳಿಂದ ತುಂಬಿಹೋಗಿದೆ. ಏನೂ ತಿಳಿಯದಿದ್ದವರಿಗೂ ಕೂಡ ಇವು ಕಾರ್ಯ ಮಗ್ನವಾಗುವಂತೆ ಮಾಡುತ್ತವೆ. ಹೊಸ ಹೊಸ ಮಾರ್ಗಗಳನ್ನು ತಿಳಿಸುತ್ತವೆ. ಶ್ರೀ ಶುಕನಂತಹನೂ ಕೂಡ ಸ್ತ್ರೀ ಸೌಖ್ಯಕ್ಕಾಗಿ ಕಾತರಪಡುವಂತೆ ಮಾಡುತ್ತದೆ. ಇದಲ್ಲದೇ ದೇವಾಲಯದಲ್ಲಿ ಸ್ತ್ರೀ ಪುರುಷರು ಸೇರುವುದು, ಆಮೋದ, ಪ್ರಮೋದಗಳು ಜೋಡಿಯಾಗಿ ಎದುರು ನೋಡುವುದು. ಇವೆಲ್ಲವೂ ಶ್ರದ್ಧಾ ಭಕ್ತಿಗಳಿಂದ ಜರಗುತ್ತವೆ. ಅಲ್ಲಿ ಸಂಭಾಷಣೆಯೆಲ್ಲವೂ ಅಶ್ಲೀಲವೇ. ಆ ಸ್ಥಳದಲ್ಲಿ ಗಾಳಿ, ವಾತಾವರಣ, ಎಲ್ಲವೂ ಮನಸ್ಸನ್ನು ನಿಶ್ಚಲವಾದ ಭಕ್ತಿಗೆ ಪ್ರೇರೇಪಿಸುತ್ತದೆ. ಏಕಾಗ್ರ ಚಿತ್ತದಿಂದ ಸ್ತ್ರೀ ಪುರುಷರು ತಮ್ಮ ಕತೃತ್ವವನ್ನು ನಿರ್ವಹಿಸುತ್ತಾ ಇರುತ್ತಾರೆ. ಯಾವಾಗಲೂ ನಿತ್ಯ ಕಲ್ಯಾಣ, ಹಸಿರು ತೋರಣವಿರುತ್ತದೆ.

**ರತಿವಿಲಾಸ ಪಾನೀಯಗಳು :** 'ಲೆಗ್ಬಾ' ದೇವಾಲಯದಲ್ಲಿ ನಡೆಯುವ ಸಂಭ್ರಮ ವರ್ಣನಾತೀತವಾಗಿರುತ್ತದೆ. ದೇವರ ಬಾರ್ಯೆಯರು ಬಹುಮಂದಿ ಇರುತ್ತಾರೆ. ಅವರು ಮಹಾಭಕ್ತೆಯರು. ಅವರು ಊರಿನಲ್ಲಿರುವವರು ಸೇರಿ ದೇವರಾಧಾನೆ ಪ್ರಾರಂಭಿಸಿ ಮಹಾ ಸಂಗಮವೆಂಬ, ಧರ್ಮವನ್ನು ನಿರ್ವಹಿಸುತ್ತಾರೆ. ಎಷ್ಟೇ ಭಕ್ತಿಯಿಂದ ಕೂಡಿದ್ದರೂ ಸಹ ಜನ ಬಳಲಿ ಹೋಗುತ್ತಾರೇನೋ ಎನ್ನುವ ಭಯವಿರುತ್ತದಷ್ಟೇ. ಆದ್ದರಿಂದ ಸ್ತ್ರೀ ಪುರುಷರಿಗೆ ರತಿ ವಿಲಾಸವನ್ನು ವೃದ್ಧಿ ಮಾಡುವ ಔಷಧಿಯನ್ನು ಕೊಡುತ್ತಾ ಇರುತ್ತಾರೆ. ಈ ಔಷಧಿಗಳನ್ನು ಸೇವಿಸುವುದು. ಮೈಮರೆತು ವಿಹರಿಸುವುದು ದೇವರ ಕೈಂಕಾರ್ಯ ಮಾಡುವುದು. ಮೋಕ್ಷವನ್ನು ಸೂರೆಗೊಳ್ಳುವುದು ಇದೇ ಅಲ್ಲಿನ ಪರಿಪಾಠವಾಗಿದೆ.

**ಅನಾಹಿತ ಪೂಜೆಗಳು :** ಪರ್ಶಿಯಾ ದೇಶದ ಅನಾಹಿತ, ಎರೆಜ್‌ನಲ್ಲಿರುವ ಇದು ಸಂತಾನ ದೇವತೆ, ಲೈಂಗಿಕ ಕ್ರಿಯೆಯೇ ಈ ಅನಾಹಿತ ದೇವತೆಗೆ ಪೂಜೆಯಾಗಿದೆ. ಅನೇಕ ದೇಶಗಳಿಂದ ಪುರುಷರು ಮತ್ತು ಮಹಿಳೆಯರು ಈ ದೇವಸ್ಥಾನಕ್ಕೆ ಬಂದು, ಅಲ್ಲಿ ಇತರರೊಡನೆ ವ್ಯಭಿಚಾರ ಮಾಡಬೇಕಾಗುವುದು ಅನಿವಾರ್ಯವಾಗಿದೆ. ಅನಂತರ ಪುರುಷರು ಮಹಿಳೆಯರು ಖುಷಿಗೊಂಡರೆ ವಿವಾಹ ಮಾಡಿಕೊಳ್ಳಬಹುದು. ಬಳಿಕ ಉತ್ಸಾಹ, ಉದ್ರೇಕದಿಂದ ಹಬ್ಬವನ್ನು ಆಚರಿಸುತ್ತಾರೆ. ಪೂಜಾ ಮಂದಿರದಲ್ಲಿ ಪುರುಷರೆಲ್ಲರೂ ತಮ್ಮ ತಮ್ಮ ಬಟ್ಟೆಗಳನ್ನು ಕಳಚಿ, ಒಂದು ಕಡೆ ಹಾಕುತ್ತಾರೆ. ದೀಪಗಳನ್ನು ಆರಿಸಿಕೊಳ್ಳುತ್ತಾರೆ. ಕಾಯುತ್ತಿರುವ ಮಹಿಳೆಯರೆಲ್ಲರೂ ಆ ಜಾಗಕ್ಕೆ ಹೋಗಿ ಸಿಕ್ಕಿದ ಬಟ್ಟೆಯನ್ನು ತೆಗೆದುಕೊಳ್ಳುತ್ತಾರೆ. ನಂತರ ದೀಪಗಳನ್ನು ಹತ್ತಿಸುತ್ತಾರೆ. ಆ ಬಟ್ಟೆ ಯಾರದ್ದೋ ಅವರೊಡನೆ ಆ ಹೆಂಗಸು ಆ ರಾತ್ರಿಯನ್ನು ಕಳೆಯಬೇಕೆಂಬ ಆಚರಣೆ ಪಾರ್ಸಿಗಳಲ್ಲಿದೆ.

**ಇಟಲಿ:** ಮಾತೃದೇವತಾ ಸಂಪ್ರದಾಯವಿದ್ದ ಕಡೆಗೆಲ್ಲಾ ದೇವದಾಸಿ ಸಂಪ್ರದಾಯ ವಿಶೇಷವಾಗಿ ಪ್ರಚಾರದಲ್ಲಿರುವುದು ಕಂಡು ಬರುತ್ತದೆ. ಇಲ್ಲಿನ ಪ್ರಮುಖ ಬೆಳೆ ದ್ರಾಕ್ಷಿ. ಅದರ ಸಮೃದ್ಧಿಯ ಅಧಿದೇವತೆಯಾದ ಆಯಗ್ಯೂರಿನ ಹೀರಾಳ ಹೆಸರಿನಲ್ಲಿಯೂ ದೇವದಾಸಿಯರನ್ನು ಬಿಡಲಾಗುತ್ತಿತ್ತು. ಅಲ್ಲಿನ ಈ ಮಾತೃದೇವತೆಗೆ ಕಾಣಿಕೆಯಾಗಿ ಬಂದ ಈ ಸುಂದರ ತರುಣಿಯರು ದೇವಸ್ಥಾನದಲ್ಲಿ ಇರುತ್ತಿದ್ದರು. ಪ್ರತಿ ವರ್ಷ ದ್ರಾಕ್ಷಿ ಬೆಳೆಯುವ ಸುಗ್ಗಿಯಲ್ಲಿ ದ್ರಾಕ್ಷಿ ಬೆಳೆಯನ್ನು ಸಮೃದ್ಧಪಡಿಸಲು ಈ ದೇವತೆ ಪುರುಷನೊಬ್ಬನೊಡನೆ

ಮದುವೆಯಾಗಬೇಕು. ಆ ದೇವತೆಯ ಪ್ರತಿರೂಪವಾದ ದೇವದಾಸಿಯನ್ನು ನಾಡಿನಲ್ಲೆಲ್ಲಾ ಮೆರವಣಿಗೆಮಾಡಿ ಅನಂತರ ತನ್ನ ಕಾಮಾರಿತ್ವವನ್ನು ಕಳೆದುಕೊಳ್ಳಲು ಒಬ್ಬ ಪುರುಷನೊಡನೆ ಲೈಂಗಿಕವಾಗಿ ಸಂಪರ್ಕ ಹೊಂದುವ ಪದ್ಧತಿ ಇದ್ದಿತು. ಅಲ್ಲದೆ ದ್ರಾಕ್ಷಿ ಬೆಳೆಯ ಅಧಿ ದೇವತೆಯನ್ನು ನಾಡಿನ ರಾಜನಿಗೆ ವಿಧಿವತ್ತಾಗಿ ಮದುವೆ ಮಾಡುವ ಪದ್ಧತಿ ಕಂಡುಬರುವುದು. ಹೀಗೆ ದ್ರಾಕ್ಷಿ ಬೆಳೆಯ ಅಧಿದೇವತೆಯ ಪ್ರತಿರೂಪವಾದ ದೇವದಾಸಿ, ದೇವ ಪುರುಷನೊಡನೆ ಲೈಂಗಿಕ ಸಂಪರ್ಕ ಹೊಂದುವುದರಿಂದ ಫಲ ಸಮೃದ್ಧವಾಗುವುದೆಂಬ ನಂಬಿಕೆ ಇದೆ. ಹೀಗೆ ಜಗತ್ತಿನ ಅನೇಕ ಸಂಸ್ಕೃತಿಗಳಲ್ಲಿ ದೇವದಾಸಿ ಪದ್ಧತಿಯಂತಹ ಸಂಪ್ರದಾಯವಿರುವುದು ಅಲ್ಲಿನ ಜನಪದ ಧರ್ಮವನ್ನು ಅಭ್ಯಾಸಿಸುವುದರಿಂದ ತಿಳಿದು ಬರುತ್ತದೆ. ಹಾಗೆಯೇ ಚರಿತ್ರೆಯಲ್ಲಿ ದಾಖಲಾಗಿರುವಂತೆ ದೇವದಾಸಿ ಪದ್ಧತಿಯು ಸುಮೇರಿಯ್ ನಗರ ರಾಜ್ಯಗಳಲ್ಲಿಯೂ ಕಂಡು ಬರುವುದು. ದೇವರಿಗೆ ಪ್ರಿಯವಾದ ಎಲ್ಲವನ್ನು ಅರ್ಪಿಸಿದರೆ, ಪ್ರಸನ್ನನಾಗಿ ಬೆಂಬಲಕೊಡುತ್ತಾರೆ ಎಂಬ ನಂಬಿಕೆಯಿಂದ ನಗರದ ರಾಜನೇ ತನ್ನ ತಂಗಿ ಅಥವಾ ಮಗಳನ್ನು ದೇವದಾಸಿಯಾಗಿ ನೇಮಿಸಿ ಆಕೆಯಿಂದ ದೇವರ ಸೇವೆ ಮಾಡಿಸಿ, ತನಗೆ ಬೇಕಾದ ದೇವರ ಬೆಂಬಲ ಪಡೆಯುತ್ತಿದ್ದ ಎನ್ನಲಾಗಿದೆ.

**ಲಿಡಿಯಾ ದೇಶ:** 'ಟಾಲೆಸ್' ಎಂಬ ನಗರದ ಹತ್ತಿರದಲ್ಲಿ ಅಲ್ಲಿನ ಚರಿತ್ರೆ ಸಂಶೋಧಕರು ಅಗೆದು ಒಂದು ಪುರಾತನ ಪಟ್ಟಣವನ್ನು ಕಂಡುಕೊಂಡಿದ್ದಾರೆ. ಆ ಸ್ಥಳದಲ್ಲಿ ಒಂದು ಅಮೃತ ಶಿಲೆಯ ಸ್ತಂಭವೊಂದು ದೊರಕಿದೆ. ಅದರ ಮೇಲೆ ಆಗಿನ ಕಾಲದ ಭಾಷೆಯ ಶಾಸನ ಕೆತ್ತಲಾಗಿದೆ. ಫ್ರೆಂಚರು, ರಾಲಿನ್ಸ್ ಈ ಶಾಸನ ಓದಿ 'ಅರೇಲಿಯ ಇಮೀತಿಯಾ' ಎಂಬ ಓರ್ವ ಹುಡುಗಿ ತನ್ನ ವೃತ್ತಿಯನ್ನು, ತನ್ನ ವಂಶದ ವೃತ್ತಿಯನ್ನು ಬಹು ಹೆಮ್ಮೆಯಿಂದ ಹೇಳಿಕೊಂಡಿದ್ದಾಳೆ. ಅದೇನೆಂದರೆ, "ದೇವಾಲಯದಲ್ಲಿ ವ್ಯಭಿಚಾರ, ಆ ಹೆಂಗಸು ದೇವಾಲಯಕ್ಕೆ ತನ್ನ ಹಣವನ್ನು ದಾನಮಾಡಿದ್ದಾಳೆ. ಇದನ್ನು 'ರಾಮ್ಸೆ' ಎಂಬುವರು 'Unedited inscriptions of Asia-Minor'ಎನ್ನುವ ಸಂಪುಟದಲ್ಲಿ ಬರೆದಿದ್ದಾರೆ".

**ಸಿರಿಯಾ ದೇಶ:** 'ಹೇಲಿಯೋಪೋಲಿಸ್' ಎಂಬ ಊರಿನಲ್ಲಿ ಪ್ರತಿಯೊಬ್ಬ ಮಹಿಳೆ ತನ್ನ ಲೈಂಗಿಕ ಪೂಜೆ ಮಾಡಬೇಕು. ಮಕ್ಕಳು ತಾಯಿಯಾದರೂ, ವಿವಾಹವಾಗದ ಹುಡುಗಿಯರು, ಬಹುಮಂದಿ "ನಾವು ಇಷ್ಟು ಶ್ರದ್ಧಾಭಕ್ತಿಯಿಂದ ಲೈಂಗಿಕ ಪೂಜೆಯನ್ನು ಮಾಡಿದೆವು" ಎಂದು ಬರೆದು ಅವರ ಭಕ್ತಿಯನ್ನು ಪ್ರದರ್ಶಿಸಿದ್ದಾರೆ. ಫಿನೀಷಿಯಾ ಗುಡಿಗಳಲ್ಲಿ ಸಹ ಈ ಕೆಲಸವೇ ಬಹು ಪವಿತ್ರವಾಗಿ ಜರಗುತ್ತದೆ. ಅಲ್ಲಿನ ಅರೇಲಿಯಾ, ಇಮಿಲಿಯಾ ಎಂಬ ಮಹಿಳೆ ತನ್ನ ದಾನ ಶಾಸನದಲ್ಲಿ "ತನ್ನ ತಾಯಿ, ಆಕೆಯ ತಾಯಿ, ಹೀಗೆ ತಲೆ ತಲಾಂತರದಿಂದ ಈ ಭಕ್ತಿಯನ್ನು ಹೀಗೆ ನಡೆಸಿಕೊಂಡು ಬಂದಿದ್ದಾರೆಂದು ತನ್ನ ಕುಲಗೌರವವನ್ನು ಹೊಗಳಿ ಕೊಳ್ಳುತ್ತಾಳೆ.

**ಉತ್ತರ ಅಮೇರಿಕಾ:** ಕೆಲವು ಜಾತಿಗಳಲ್ಲಿ ಸಂಸ್ಕೃತಿಯಿದ್ದು, ಇದನ್ನು ಮಹಾಪುಣ್ಯಾತ್ಮರು ಮಾಡುತ್ತಾರೆ. ಅದನ್ನು ಮಾಡಿದವರನ್ನು ಪಾವನರು, ಪುಣ್ಯಾತ್ಮರು, ಮಹಾತ್ಮರು ಎಂದು ಗೌರವಿಸುತ್ತಾರೆ. ಹಳೇ ದೇವರು ಬಲಹೀನವಾಗಿ, ಆತನ ಕೆಲಸ ಹೊಸ ದೇವತೆ ತೆಗೆದುಕೊಳ್ಳುತ್ತದೆ. ಸಂತಾನ ಕಾರ್ಯವನ್ನು ಚೆನ್ನಾಗಿ ನಡೆಸುತ್ತಾ ಇರುತ್ತಾರೆ. ಬೆಳೆ (ಪೈರು) ಚೆನ್ನಾಗಿ ಇರುತ್ತದೆ. ಇದೇ ಸೂತ್ರ ಬಹು ಪುಣ್ಯಾತ್ಮ, ಸನಾತನಾದ ಒಬ್ಬ ಗೃಹಸ್ಥ, ತನ್ನಹಾಗೆ ಪವಿತ್ರರಾದ ಇನ್ನೊಬ್ಬನನ್ನು ಬದಲಿಯಾಗಿ ತೆಗೆದುಕೊಳ್ಳುತ್ತಾನೆ. ಇವರೆ ಹಳೆ ಮತ್ತು ಹೊಸದೇವತೆ

ಎಂದುಕೊಳ್ಳಬಹುದು. ಈ ಗೃಹಸ್ಥ ಒಂದು ದೊಡ್ಡ ಉತ್ಸವ ಆರಂಭಿಸುತ್ತಾನೆ. ಎಲ್ಲವೂ ಬಹು ಶಿಷ್ಟಾಚಾರದಿಂದ ಜರುಗುತ್ತದೆ. ಆ ಉತ್ಸವದಲ್ಲಿ ಮಹಾನಿಷ್ಠೆಯಿಂದ ಅವನ ಮನೆಗೆ ಆ ಬದಲಿಯವನನ್ನು ಕರೆದುಕೊಂಡು ಬಂದು, ಆ ಗೃಹಸ್ಥನ ಹೆಂಡತಿಯು ತನ್ನ ಮನೆಯಿಂದ ಹೊರಡುತ್ತಾಳೆ. ಮೇಳತಾಳ, ಎಲ್ಲ ಇರುತ್ತದೆ. ಜನಗಳೆಲ್ಲರೂ ಆಶೀರ್ವಾದ ಮಾಡುತ್ತಿರುತ್ತಾರೆ. ಮಹಾ ಉತ್ಸವ ಇರುತ್ತದೆ. ಎಲ್ಲ ಆಡಂಬರದಿಂದ ಹೆಂಡತಿಯು ಈ ಬದಲಿ ಮನುಷ್ಯನ ಹತ್ತಿರಕ್ಕೆ ಬರುತ್ತಾಳೆ. ಅವನು ಬಹು ನಿಷ್ಠೆಯಿಂದ ಅವಳಿಗೆ ಸ್ವಾಗತ ಕೋರುವುದಕ್ಕೆ ಸಿದ್ಧನಾಗಿರುತ್ತಾನೆ. ಜನಗಳೆಲ್ಲರೂ ಸುತ್ತಲೂ ಕಿಕ್ಕಿರಿದು ನೆರೆದಿರುತ್ತಾರೆ. ಆ ದೊಂಬಿಯಲ್ಲಿ ನಲುಗಿ ಹೋಗುವ ಮಹಿಳೆಯರನ್ನಾಗಲಿ, ಮಕ್ಕಳು ಅಳುವುದನ್ನಾಗಲಿ, ಲಕ್ಷ್ಯಮಾಡುವುದಿಲ್ಲ. ಎಲ್ಲರೂ ತದೇಕ ಚಿತ್ತರಾಗಿ ಅಲ್ಲಿ ನಡೆಯುವ ಚಟುವಟಿಕೆಗಳನ್ನೆಲ್ಲಾ ನೋಡುತ್ತಿರುತ್ತಾರೆ. ಹೀಗೆ ಇಷ್ಟು ವೈಭವದಿಂದ ಆ ಗೃಹಸ್ಥನ ಹೆಂಡತಿಯು ಬರುತ್ತಾಳೆ. ಅತ್ಯಂತ ಭಕ್ತಿಪೂರ್ವಕವಾಗಿ ಬದಲಿ ಮನುಷ್ಯನ ಹತ್ತಿರಕ್ಕೆ ಹೋಗುತ್ತಾಳೆ. ಸಮೀಪಿಸಿ ವಿನಯಪೂರ್ವಕವಾಗಿ ತಾನು ಉಟ್ಟುಕೊಂಡಿರುವ ಸೀರೆಯನ್ನು ಜಾರಿಬಿಟ್ಟು, ನಗ್ನಳಾಗಿ ಅಂಗಾತ ಮಲಗುತ್ತಾಳೆ. ಆ ಬದಲೀ ಪುರುಷರು ಮಹಾಭಕ್ತಿಯಿಂದ ಆ ಗೃಹಿಣಿಯೊಡನೆ ಕೂಡುತ್ತಾನೆ. ಪುರೋಹಿತನು ಶಾಸ್ತ್ರೋಕ್ತವಾಗಿ ಮಹಾಕೈಂಕಾರ್ಯವಾಗಿದೆ ಎಂದು ಎಲ್ಲರಿಗೂ ತಿಳಿಸುತ್ತಾನೆ. ಅನಂತರ ಆ ಗೃಹಿಣಿಯು ಹಿಂದಿರುಗಿ ಬಂದು "ವೇದ ವಿಹಿತವಾದ ಕೆಲಸಗಳೆಲ್ಲವನ್ನು ಸಕ್ರಮವಾಗಿ ಆಚರಿಸಿ ತಿರುಗಿ ಬಂದಿದ್ದೇನೆ" ಎಂದು ಪ್ರಕಟಿಸುತ್ತಾಳೆ. ಜನರು ಧನ್ಯವಾಗ ಹೇಳುತ್ತಾರೆ. ಆ ಗೃಹಸ್ಥನು ಗೌರವಿಸಲ್ಪಡುತ್ತಾನೆ. ಸ್ವರ್ಗಕ್ಕೆ ನೇರವಾಗಿ ಹೋಗಲು ಪುಣ್ಯ ಸಂಪಾದನೆ ಮಾಡುತ್ತಾನೆ. ಊರಿನವರೆಲ್ಲರೂ ಉಬ್ಬಿ ಹೋಗುತ್ತಾರೆ. ಹೊಸ ದೇವರಿಗೆ ಬೇಕಾದ ಒಲವು ಉಂಟಾಗುತ್ತದೆ. ಪೈರು ಚೆನ್ನಾಗಿ ಬೆಳೆಯುತ್ತದೆ. ಸಮೃದ್ಧತೆ ಮತ್ತು ಫಲವತ್ತತೆಯ ಪರಿಣಾಮ ಆಚರಣೆಗೆ ಬಂದ ಭಿನ್ನ ರೀತಿಯ ಲೈಂಗಿಕ ಸಂಬಂಧಗಳು ಆ ಕಾಲದವರಿಗೆ ಈ ಊಹೆಯು ಅನಾಚಾರವಾಗಿ, ಪಾಪಕಾರ್ಯವಾಗಿ ಕಂಡಿಲ್ಲ. ಆಚಾರವಂತರೆಲ್ಲರೂ ನಿತ್ಯ ಕಲ್ಯಾಣವನ್ನು ಸಂಸ್ಕರಿಸಲು ಪ್ರಯತ್ನ ಮಾಡಿದವರನ್ನು ಪಾಪಿಗಳೆಂದು ಕೊಂದರು. ಆಚಾರ್ಯರಿಗೂ, ಪಂಡಿತರಿಗೂ ವರ್ಷಕ್ಕೊಂದು ಬಾರಿ, ಮಾರ್ಪಾಡೆಂದರೆ ತಲೆ ತೆಗೆವಂತೆ ಆಗುತ್ತಿತ್ತು. ಆದರೂ ಮಾರ್ಪಾಡುಗಳು ಮಾತ್ರ ಬರದೇ ಇರುವುದಿಲ್ಲ ಈ ಮಾರ್ಪಾಡುಗಳು ಬಂದೇ ಬರುತ್ತವೆ. ಕಾಲ ಪ್ರವಾಹವು ಬದಲಾವಣೆ ಹೊಂದುತ್ತಾ ವಿಜೃಂಭಿಸುತ್ತ ಈ ಆಚಾರ್ಯಗೀಚಾರ್ಯರೆಲ್ಲರನ್ನು ಕೊಚ್ಚಿಕೊಂಡು ಹೋಗಿದೆ. ಆದರೆ ಆ ದಿನಗಳಲ್ಲಿ ಆ ವ್ಯವಸ್ಥೆ ತಪ್ಪೆಂದಲ್ಲ.

ಬೈಬಲ್‌ನಲ್ಲಿಯೂ ಸಹ ಪೂರ್ವ ಚರಿತ್ರೆಯ ಘಟ್ಟಗಳಲ್ಲಿ ಈ ಕ್ರಮವನ್ನು ಕಾಣಬಹುದು. ಈ ಕುರಿತು ವಿಮರ್ಶೆ ಮಾಡುತ್ತಾ ಸರ್ 'ಫ್ರೆಜರ್' ರು "ಈ ವಿಧವಾದ ಪರಿಸ್ಥಿತಿಯು ಏಶಿಯಾ ದೇಶದಲ್ಲಿ ಇತರೆ ಹಲವಾರು ಕಡೆ ಕಂಡು ಬರುತ್ತದೆ. ಅಭಿಪ್ರಾಯ ಏನೇ ಇದ್ದರೂ ಈ ಲೈಂಗಿಕ ಚಟುವಟಿಕೆಗಳು ವಿಷಯ ಲೋಲುಪತೆಯಿಂದ ಮಾಡಿದ ಕೆಲಸಗಳಲ್ಲ. ಮಹಾ ಮಾತೆಯ ಸೇವೆಯಲ್ಲಿ ಮಾಡಲಾದ ವಿಧೇಯಕಗಳು ಕೇವಲ ಶ್ರದ್ಧೆಯಿಂದ ಮಾಡಿದ ಕೆಲಸವೇ ಹೊರತು ಬೇರೆಯಲ್ಲ" ಎಂದು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ ಜಗತ್ತಿನ ಬೇರೆ ಬೇರೆ ರಾಷ್ಟ್ರಗಳಾದ ಪೆರು, ಮೆಕ್ಸಿಕೋ, ಬೋರ್ಗಿಯಾ, ಜಪಾನ್, ಇತ್ಯಾದಿಗಳಲ್ಲಿಯೂ ಈ ಬಗೆಯ ಸಂಸ್ಥೆಗಳಿದ್ದ ಬಗ್ಗೆ ನಿದರ್ಶನಗಳು ದೊರೆಯುತ್ತಿದ್ದು, ಜಗತ್ತಿನ ಈ ಎಲ್ಲಾ ಬಗೆಯ ಪವಿತ್ರ

ವೇಶ್ಯಾಗಾರಿಕೆಯನ್ನು ಅವಲೋಕಿಸಿದ ಮೇಲೆ ಕೆಳಗಿನ ನಿರ್ಣಯಗಳಿಗೆ ಬರಬಹುದಾಗಿದೆ.

ಫಲವತ್ತತೆಯ ದೇವತೆಯಾಗಿ ಹೆಣ್ಣು ದೇವತೆಯು ಸಸ್ಯ ಮತ್ತು ಪ್ರಾಣಿಗಳು ಫಲಕಾರಿಯಾಗುವಂತೆ ವಿಶೇಷವಾಗಿ ನೋಡಿ ಕೊಳ್ಳುತ್ತಾಳೆ. ಆದುದರಿಂದ ದೇವಾಲಯಗಳಲ್ಲಿ ಪುನರ್ ಸೃಷ್ಟಿಯ ಮಹತ್ಕಾರ್ಯಕ್ಕೆ ಮಹಿಳೆಯರು ನೆರವು ನೀಡಬೇಕಾಗುತ್ತದೆ. ಹೆಣ್ಣು ದೇವತೆಯು ವಸಂತಕಾಲದಲ್ಲಿ ಇಲ್ಲವೇ ತನ್ನ ಪ್ರಿಯತಮನನ್ನು ಹುಡುಕಿಕೊಂಡು ಗೈರು ಹಾಜರಾದಾಗ, ದೇವಾಲಯದಲ್ಲಿರುವ ಮಹಿಳೆಯರು ಆ ದೇವತೆಯ ಎಲ್ಲ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ದೇವತೆ ಗಂಡೇ ಆಗಿದ್ದ ಪಕ್ಷದಲ್ಲಿ ಅದು ಬದುಕಿರುವ ಗಂಡಸರ ಹಾಗೆ ಉಪಪತ್ನಿಯರನ್ನು ಬಯಸುತ್ತದೆ. ದೇವತೆಯ ವಾರಾಂಗನೆಯರಾಗಿ ಅಥವಾ ನರ್ತಕಿಯರಾಗಿ ಅವರು ಮಾಡುವ ದಿವ್ಯ ಕರ್ತವ್ಯಗಳನ್ನು ದೇವರ ಸನ್ನಿಧಿಯಲ್ಲಿ ಮಾಡಬೇಕಾಗುತ್ತದೆ.

ಕೆಲ ಹೆಣ್ಣು ದೇವತೆಗಳಿಗೆ ಕೆಲವು ಬಲಿ ಒಪ್ಪಿತವಾದವು. ಮಹಿಳೆಯರ ಶೀಲದ ಬಲಿ, ಆ ಪೈಕಿ ಬಹಳ ಮುಖ್ಯವಾದುದು ದೇವಾಲಯಗಳಲ್ಲಿ ಹುಡುಗಿಯರನ್ನು ಅರ್ಪಿಸುವುದು ಮತ್ತು ಅವರು ಅಪರಿಚಿತರಿಗೆ ಸೆರಗು ಹಾಸುವುದು ಬಹುಶಃ ಈ ಬಗೆಯ ಬಲಿಯಿಂದ ಅಸ್ತಿತ್ವಕ್ಕೆ ಬಂದಿತು.

" 'ಟಾವ್ನಿ ಮತ್ತು ಫ್ರೇಜರ್' ಹೀಗೆ ಹೇಳುತ್ತಾರೆ. "ಪ್ರಾಣಿ ಮತ್ತು ಸಸ್ಯವರ್ಗಗಳು ರಾಜ್ಯದಲ್ಲಿ ಫಲವತತ್ತೆಯನ್ನು ಖಚಿತಗೊಳಿಸುವ ಸಹಜ ಅಭೀಪ್ಸೆಯ ಆಧಾರದ ಮೇಲೆ ಈ ಎಲ್ಲಾ ವ್ಯವಸ್ಥೆಗಳು ನಿಂತಿವೆ. ಪರಿಸರ, ಬದಲಾಗುತ್ತಿರುವ ಸ್ವಭಾವ, ಧಾರ್ಮಿಕ ಭಾವನೆ, ಈ ಎಲ್ಲವೂ ಮನುಷ್ಯನ ಭಾವನೆಗಳನ್ನು ಸಮೀಪವಾಗಿ ತಾಕುವ ಒಂದು ವ್ಯವಸ್ಥೆಯಾಗಿ ಇದನ್ನು ನಡೆಸುತ್ತಿದೆ ಎಂದು ಪರಿಗಣಿಸಬಹುದೆಂದು ಹೇಳಿದ್ದಾರೆ"[೧೪].

೩.೩ ಭಾರತದಲ್ಲಿ ದೇವದಾಸಿ ಸಂಪ್ರದಾಯ

ಜಗತ್ತಿನ ಇತರ ಪ್ರಾಚೀನ ನಾಗರಿಕತೆಗಳಲ್ಲಿ ದೇವದಾಸಿ ಸಂಪ್ರದಾಯ ಇದ್ದುದು ನಿಶ್ಚಿತವಿರುವಂತೆ, ಭಾರತದಲ್ಲೂ ದ್ರಾವಿಡರ ಮಾತೃಪ್ರಧಾನ ಕುಟುಂಬದಿಂದ ಬಂದಿವೆ. ಅಂದು ಈ ಪದ್ಧತಿಯು ಜನತೆಯ ಸಾಮಾಜಿಕ ಹಾಗೂ ಧಾರ್ಮಿಕ ಜೀವನದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿತ್ತು. ಅದಕ್ಕೆ ಗೌರವ, ಆದರಗಳು ಪೂಜ್ಯನೀಯ ಭಾವನೆಯ ಹಿನ್ನೆಲೆಯಲ್ಲಿ ಹುಟ್ಟಿದ್ದು. ಅನಂತರ ಆರ್ಯರಿಂದ ಅದು ರೂಪಾಂತರ ಹೊಂದಿದ್ದನ್ನು ಗಮನಿಸಬಹುದಾಗಿದೆ.

ಮಹೆಂಜೋದಾರೊದಲ್ಲಿ ದೊರೆತಿರುವ ಸ್ತ್ರೀಪ್ರತಿಮೆಯೊಂದರಲ್ಲಿ ನರ್ತಕಿಯ ಲಕ್ಷಣವನ್ನು ಗುರುತಿಸಲಾಗಿದೆ. ನರ್ತಕಿ ನಗ್ನಳಾಗಿದ್ದು ತೋಳಿನ ತುದಿಯವರೆಗೂ ಬಳೆಗಳನ್ನು ಧರಿಸಿ ಕುತ್ತಿಗೆಯಲ್ಲಿ ಮಣಿಸರವನ್ನು ಧರಿಸಿದ್ದಾಳೆ. ತಲೆ ಕೂದಲು ಸಡಿಲವಾಗಿ ಇಳಿಬಿದ್ದಿವೆ.ಕಣ್ಣು ಮುಚ್ಚಿಕೊಂಡು ನರ್ತಿಸುತ್ತಿರುವ ಆಕೆಯ ಮುಖದಲ್ಲಿ ಭಕ್ತಿಭಾವ ಕಂಡು ಬರುತ್ತದೆ. ಈ ನಗ್ನ ನರ್ತಕಿ ದೇವದಾಸಿಯೇ ಹೌದೆಂದು ಇತಿಹಾಸ ಸಂಶೋಧಕರು ನಿರ್ಧರಿಸಿದ್ದಾರೆ.

ಹರಪ್ಪ ಮತ್ತು ಮಹೆಂಜೊದಾರೊ ನಿವೇಶನಗಳ ಅಗೆದ ಆಳವಾದ ಅಧ್ಯಯನಗಳಲ್ಲಿ ನಿರತರಾಗಿರುವ ಪ್ರಾಕ್ತನ ಶಾಸ್ತ್ರಜ್ಞರು ಮತ್ತು ಇತಿಹಾಸಕಾರರು. ಮೆಡಿಟರೇನಿಯನ್ ಪ್ರದೇಶದ ಮತ್ತು ಮಧ್ಯ ಪ್ರಾಚ್ಯ ಪ್ರದೇಶಗಳ ಬೇಸಾಯ ಪ್ರಧಾನ ನಾಗರಿಕತೆಗಳು ಆಚರಿಸುತ್ತಿದ್ದ ಧರ್ಮಗಳು ಫಲವತ್ತತೆಯ ಆಚರಣೆಗಳು

ಮತ್ತು ಮಾತೃದೇವತೆಯ ಉಪಾಸನೆಯ ಮೇಲೆ ಒತ್ತನ್ನು ನೀಡಿದೆ.

ಸಿಂಧೂ ನಾಗರಿಕತೆಯ ಹರಪ್ಪ ಮತ್ತು ಮಹೆಂಜೊದಾರೋ ಸುತ್ತ ಮುತ್ತಲಿನ ಅನೇಕ ಪ್ರತಿಮೆಗಳು ಮತ್ತು ಚಿತ್ರಗಳನ್ನು ಸಂಗ್ರಹಿಸಲಾಗಿದೆ. ಆ ಪೈಕಿ ಕ್ವೆಟ್ಟಾದ ಉತ್ತರದ ಯೋಚ್‌ನಲ್ಲಿ ಲಿಂಗ ಮುದ್ರೆಗಳೂ ದೊರಕಿವೆ. ಮಾತೃ ದೇವತಾ ಉಪಾಸನೆಯು ಪ್ರಾಚೀನ ಸಂಸ್ಕೃತಿಯಲ್ಲಿ ಅಸ್ತಿತ್ವದಲ್ಲಿತ್ತು. ಆದರೆ, ಸಿಂಧೂ ಬಯಲಿನ ನಾಗರಿಕತೆಯಲ್ಲಿ ಮಾತೃದೇವತೆಯ ಉಪಾಸನೆಯು ವೃಷಭ ರೂಪಗಳೊಂದಿಗೆ ಸಂಬಂಧ ಹೊಂದಿದೆ. ಅಲ್ಲಿ ವೃಷಭ ಚಿತ್ರಗಳು ದೊರಕುತ್ತವೆ. ಹರಪ್ಪ, ಮೆಹಂಜೊದಾರೋ ನಿವೇಶನಗಳ ಬಳಿಯ ಯೋಜ್ ಪ್ರದೇಶದ ರಣ-ಗಾಂಧಾರಿ ಮತ್ತು ಕುಳ್ಳಿಯ ಮಡಿಕೆಯಲ್ಲಿ ಮುಖ್ಯ ಆಶಯವಾಗಿ ವೃಷಭ ಸ್ವರೂಪ ಚಿತ್ರಿಸಿರುವುದನ್ನು ಕಾಣಬಹುದು.

ಸಿಂಧೂ ಬಯಲಿನ ನಾಗರಿಕತೆಯ ಅನೇಕ ಸ್ಥಳಗಳಲ್ಲಿ ಮಣ್ಣಿನಿಂದ ಮಾಡಿದ ಮಹಿಳೆಯರ ಫಲಕಗಳು ಬಹು ದೊಡ್ಡ ಪ್ರಮಾಣದಲ್ಲಿ ದೊರಕಿವೆ. ಈ ಬಗೆಯ ಮಾತೃದೇವತೆಯ ಮೂರ್ತಿ ಪ್ರತಿಯೊಂದು ಕುಟುಂಬದಲ್ಲೂ ಇತ್ತು ಎಂದು ಭಾವಿಸಲಾಗಿದೆ. ಈ ಪ್ರದೇಶದಲ್ಲಿ ಈವರೆಗೆ ಪರೀಕ್ಷಿಸಲಾದ ಇತರ ಅವಶೇಷಗಳನ್ನು ಗಮನಿಸಿದಾಗ ಈ ನಾಗರಿಕತೆಯನ್ನು ಕಟ್ಟಿದ ಜನರು ದ್ರಾವಿಡರೆಂದು ತಿಳಿದು ಬರುತ್ತದೆ.

ಡಾ.ಡಿ.ಕೋಸಾಂಬಿಯವರು "ಸುಮೇರಿಯಾ, ಬ್ಯಾಬಿಲೋನಿಯಾ, ಅಸಿರಿಯಾಗಳ ನಾಗರಿಕತೆಗಳಲ್ಲಿ ಹೇಗೊ ಹಾಗೆ, ಹರಪ್ಪ ನಾಗರಿಕತೆಗಳಲ್ಲಿಯೂ ದೇವತೆಗಳ ಸೇವೆಗೆಂದು ದೇವದಾಸಿಯನ್ನು ನೇಮಿಸುತ್ತಿದ್ದರಂತೆ, ಆಗ ಆವರನ್ನು ಅಪ್ಸರೆಯರು ಎನ್ನುತ್ತಿದ್ದರಂತೆ, ತಂದೆಯಾರೆಂದೂ ಖಚಿತವಾಗಿ ತಿಳಿಯದಾದಾಗ, ಈ ಅಪ್ಸರೆಯರ ಸಂತಾನವನ್ನು 'ಕುಂಭಸಂಭವ' ರೆನ್ನುತ್ತಿದ್ದರಂತೆ. ಕೋಸಾಂಬಿಯವರ ವಿವರಣೆ ಪ್ರಕಾರ ಮಹೆಂಜೊದಾರೋ ಅಗೆತದಲ್ಲಿ ಹೊರಬಿದ್ದಿದ್ದು, ಕೇವಲ ಸ್ನಾನ ಪಾನಾದಿಗಳಿಗಾಗಿ ಉದ್ದೇಶಿಸಿದ್ದ ತಟಾಕವಲ್ಲ. ಅದು ಧಾರ್ಮಿಕವಾದ ಪುಷ್ಕರಣಿ ಅದರ ಅಂಚಿನಲ್ಲಿರುವ ಕೋಣೆಗಳು ಅಪ್ಸರೆಯರ ಶಯ್ಯಾ ಮಂದಿರಗಳು. ಆ ಮಂದಿರಗಳೇ ಅಗಸ್ತ್ಯ ಮತ್ತು ವಸಿಷ್ಠರ ಜನ್ಮಸ್ಥಾನಗಳು ಎಂದು ಕೋಸಾಂಬಿಯವರು ಸೂಚಿಸಿದ್ದಾರೆ"[೧೯].

ಹೀಗೆ ಹರಪ್ಪ ಮಹೆಂಜೊದಾರೋ ನಾಗರಿಕತೆಗಳ ಅವಶೇಷಗಳು ಬೆಳಕಿಗೆ ಬರುವುದರೊಂದಿಗೆ, (ಸೂಚನೆ ದ್ರಾವಿಡ, ಆರ್ಯರ ಸಂಘರ್ಷದ ಅನಂತರದ ಹಂತದಲ್ಲಿ ಬರುವ ವಿವರಣೆಯಾಗಿದೆ) "ನಿತ್ಯ ಸುಮಂಗಳಿ" ಎಂಬ ತಮ್ಮ ಕೃತಿಯಲ್ಲಿ ಸಾಸ್ಕಿಯಾಸಿ ಕೆರೆಸೆನ್ ಭೂಮ ಸ್ಪೋರಿ ಹೀಗೆ ಹೇಳಿದ್ದಾರೆ.

"ಕರ್ನಾಟಕಕ್ಕೆ ಬಹುಶಃ ಕಾಲಿಟ್ಟ ಮೊದಲ ಬುಡಕಟ್ಟು ನಿಗ್ರಿಟೋ. ಸುಮಾರು ನಾಲ್ಕು ಲಕ್ಷ ವರ್ಷಗಳ ಹಿಂದೆ, ಅನಂತರ ಆಸ್ಟ್ರಲಾಯಿಡ್ ಬುಡಕಟ್ಟಿನ ಜನ, ಪ್ರೊಟೊ ಆಸ್ಟ್ರಾಲಾಯಿಡ್ ಜನರು ಆರ್ಯ ದ್ರಾವಿಡರಿಂದ ಪ್ರತ್ಯೇಕವಾದ ಮೂರನೇ ಒಂದು ಗುಂಪು. ಇವರು ವೈದ್ಯಕೀಯ ಸಾಹಿತ್ಯದಲ್ಲಿ 'ನಿಷಾಧರು' ತದನಂತರ ಮೆಡಿಟರೇನಿಯನ್ ಜನವರ್ಗ ಎಂಬ ಗ್ರಂಥದಲ್ಲಿ ಸಿರಿಯಾ, ಇರಾನ್, ಇರಾಕ್, ಪೆಲೆಸ್ಟ್ಯಾಯಿನ್, ಮುಂತಾದ ಭಾಗಗಳಲ್ಲಿದ್ದ ಪ್ರಾಚೀನ ಜನವರ್ಗಗಳ ಅಧ್ಯಯನವಿದೆ. ಇಲ್ಲಿ ಬರುವ ಅಮ್ಮ, ಮಾರಿ, ಲೂರ್, ಪವಿತ್ರ ಮದುವೆ ಪದ್ಧತಿ, ಪವಿತ್ರ ವೇಶ್ಯೆಯರು ಮುಂತಾದ ಹಲವಾರು ಸಂತತಿಗಳು ನಮ್ಮ ನಾಡಿನ ಶಬ್ದ ಮತ್ತು ಪದ್ಧತಿಗಳ ಜೊತೆ ಆಶ್ಚರ್ಯಕರ ರೀತಿಯಲ್ಲಿ ಹೋಲುತ್ತವೆ. ವೃಕ್ಷಾರಾಧನೆಗೆ ಕಾರಣವಾಗಿರುವ ಸಾಧ್ಯತೆ

ಇದೆ”[೧೫]. ಮಾವಿನ ಮರ ಅಥವಾ ಬೇವಿನ ಮರವನ್ನು ಪೂಜಿಸುತ್ತಿದ್ದ ಜನಪದ ಜನಾಂಗದ ಸಾಂಕೇತಿಕ ಆಚರಣೆ ಕಾಮನ ಹಬ್ಬ ಎಂದು ಊಹಿಸಲು ಅವಕಾಶವಿದೆ. ಇದು ಶಿಶ್ನ ಪೂಜೆ, ಫಲವಂತಿಕೆಯ ಆರಾಧನೆ, ಕೃಷಿಕರ ಹಬ್ಬ, ಶೂದ್ರರ ಉತ್ಸವ, ಬೇವಿನ ಹೂವಿಗೆ ಕಾಮನ ಹೂವು ಎನ್ನುವ ಹೆಸರಿದೆ. ಶ್ರೀ ಎಸ್.ಎಸ್.ಹಿರೇಮಠ ಅವರು ಕರ್ನಾಟಕ ದಲಿತ ಸಂಸ್ಕೃತಿಯ ಪರಂಪರೆ ಭಾಗ-೩ ರಲ್ಲಿ “ಮಾತೃಪ್ರಧಾನ ಕುಟುಂಬವಿದ್ದಲ್ಲಿ ಹೆಣ್ಣುಗಳು ಒಂದಕ್ಕಿಂತ ಹೆಚ್ಚು ಲೈಂಗಿಕ ಸಂಪರ್ಕವನ್ನಿರಿಸಿಕೊಳ್ಳಲು ಅವಕಾಶವಿತ್ತು. ಉದಾಹರಣೆಗೆ, ಸತ್ಯಕಾಮ ಜಾಬಾಲಿಯರ ಕಥೆಯಲ್ಲಿ ಮಗ ಬ್ರಹ್ಮಜ್ಞಾನ ಪಡೆಯಲು ಬಯಸಿ ತನ್ನ ಗೋತ್ರದ ಬಗ್ಗೆ ತಿಳಿಯಬಯಸುತ್ತಾನೆ. ತಾಯಿ ಜಾಬಾಲಿ ನಿನ್ನ ಮೂಲ ಯಾವುದೆಂದು ನಾನರಿಯೆ”[೧೬] ಎನ್ನುವುದು ಗಮನಾರ್ಹ.

ಹೀಗೆ ಅನಾದಿ ಕಾಲದ ಆದಿವಾಸಿಗಳಲ್ಲಿ ಲೈಂಗಿಕತೆಯ ಬಗ್ಗೆ ಮಡಿವಂತಿಕೆಯಾಗಲೀ, ಹೆಣ್ಣಿನ ಶೀಲದ ಬಗ್ಗೆ ಪಾತಿವ್ರತ್ಯದ ಕಲ್ಪನೆಯಾಗಲಿ ಇರಲಿಲ್ಲ. ಇವರ ಮಾತೃಪ್ರಧಾನ ಸಮಾಜದಲ್ಲಿ ತಾಯಿಯ ಹೊಣೆಯೆ ಹೆಚ್ಚಾಗಿದ್ದು, ಮನೆ, ಮಕ್ಕಳ ಲಾಲನೆ ಪಾಲನೆಗಳೆಲ್ಲವೂ ಇವಳ ಪಾಲಿಗಿದ್ದು, ಇವಳ ಬಗೆಗಿನ ಗೌರವ, ಆದರಗಳು ಇದ್ದುದ್ದನ್ನು ಮನಗಾಣಬಹುದಾಗಿದೆ.

ಋಗ್ವೇದ ಕಾಲಕ್ಕೂ ಅನೇಕ ಶತಮಾನಗಳ ಮೊದಲೇ ಇಲ್ಲಿ ಒಂದು ದೊಡ್ಡ ನಾಗರಿಕತೆ ಮೆರೆದಿತ್ತು ಎಂಬುದು ಸ್ಪಷ್ಟವಾಗುತ್ತದೆ. ಭಾರತದಲ್ಲಿ ಯುರೋಪಿಯನ್ನರು ಕಾಲಿಡುವ ಮೊದಲು ಆರ್ಯರು ಅವರಿಗಿಂತ ಮೊದಲು ಇದ್ದರು ದ್ರಾವಿಡರೇ ಭಾರತದ ಆದಿವಾಸಿಗಳು. ಇವರಲ್ಲಿ ವರ್ಗಗಳಲ್ಲದೆ, ಮಾತೃಪ್ರಧಾನ ಸಾಮಾಜಿಕ ವ್ಯವಸ್ಥೆ ಇದ್ದು, ಗಂಡು ಹೆಣ್ಣುಗಳ ಮಧ್ಯ ಅಸಮಾನತೆಯ ಭಾವನೆಗೆ ಅವಕಾಶಗಳಿರಲಿಲ್ಲ. ಆದರೆ ಮಕ್ಕಳ ಜನನದ ಕ್ರಿಯೆಯಲ್ಲಿ ಪುರುಷನ ಪಾತ್ರವು ಗೊತ್ತಿರದಿದ್ದರಿಂದ ಸ್ತ್ರೀಗರ್ಭಧಾರಣೆಯ ಶಕ್ತಿಯು ನಿಗೂಢವೆನಿಸಿ, ಭೂಮಿಯಲ್ಲಿ ಬೆಳೆ ಹೇಗೆ ಬೆಳೆಯುವುದೋ ಹಾಗೆ ಸ್ತ್ರೀಯು ಫಲಿಸುತ್ತಾಳೆ ಎಂದೂ ಅವಳಲ್ಲಿ ದೈವೀಶಕ್ತಿ ಇದೆ ಎಂದು ತಿಳಿದಿದ್ದರು. ಈ ನಂಬಿಕೆಯ ಆಧಾರವೆಂದರೆ, ಇಂದು ಅವಶೇಷವಾಗಿ ಕಂಡು ಬರುವ “ಮಾತೃದೇವತೆಗಳು” ಭೂಮಿ ಮತ್ತು ಸ್ತ್ರೀಯನ್ನು ಸಮಭಾವನೆಯಿಂದ ನೋಡುತ್ತಿದ್ದರು. ವಿಶ್ವದ ಜನನಿದಾತೆ ‘ಸ್ತ್ರೀ’ ಎಂಬ ಮಾತು ನೆಲೆಗೊಂಡಿತ್ತು. ವಂಶಾವಳಿಯು ತಾಯಿಯಿಂದಲೇ ಆರಂಭವಾಗುತ್ತಿತ್ತು. ಪಂಗಡದ ಸದಸ್ಯತ್ವವು ತಾಯಿಯಿಂದಲೇ ನಿರ್ಣಯಿಸಲ್ಪಡುತ್ತಿತ್ತು. ಸ್ತ್ರೀಯರು ಸ್ಥಿರವಾಗಿ ತಮ್ಮ ಮನೆಯಲ್ಲಿಯೇ ಒಂದೆಡೆ ಇರುತ್ತಿದ್ದರು. ಪುರುಷರು ಬೇಟೆಯ ಸಂದರ್ಭದಲ್ಲಿ ಹೊರಗಡೆ ಹೆಚ್ಚು ಸಮಯ ಇರುತ್ತಿದ್ದರು. ಪಂಗಡದ ವ್ಯಾಪಕತೆಯಲ್ಲಿ ಸ್ತ್ರೀಯರ ಪಾಲು ಹೆಚ್ಚಾಗಿತ್ತು. ಹೀಗಿದ್ದರಿಂದಲೇ ಸ್ತ್ರೀಯರಿಗೆ ಮಾನ್ಯತೆ ಇತ್ತು.

ಹೆಣ್ಣನ್ನು ಮನುಷ್ಯಳಾಗಿ ಗ್ರಹಿಸದೇ ‘ಮಾತೆ’ಯನ್ನಾಗಿ ಗುರುತಿಸಲಾಗುತ್ತಿತ್ತು. ‘ಮಾತೃ’ ಎನ್ನುವುದು ಹೆಣ್ಣಿನ ಮಾತೃತ್ವವನ್ನು ಪ್ರತಿನಿಧಿಸುವಂತದ್ದು ಆಗಿದೆ. ಇದು ಭಕ್ತಿಯಾಗಿ ರೂಪಾಂತರಗೊಂಡು, ‘ಅಮ್ಮ’ ಕೇವಲ ‘ಮಾತೆ’ ಮಾತ್ರವಲ್ಲದೇ ‘ಕುಲದೇವತೆ’, ‘ಮನೆದೇವತೆ’, ‘ಗಡಿ ದೇವತೆ’, ಗ್ರಾಮದೇವತೆಯಾಗಿ ಕಂಡು ಆಕೆಯನ್ನು ತೃಪ್ತಿ ಪಡಿಸಲು, ಕೃಪೆಗೆ ಪಾತ್ರರಾಗಲು, ಹಾಡಿ, ನೃತ್ಯಮಾಡಿ, ನೆಲ, ಅಂಗಳ ತೊಳೆದು, ದೀಪ ಹಚ್ಚಿ, ಹೂವು ಪತ್ರಿಕೆಗಳಿಂದ ಆಕೆಯನ್ನು ಪೂಜಿಸಿ, ಆಕೆ ಸಂತುಷ್ಟಳಾದರೆ, ಮಳೆ, ಬೆಳೆ, ಉತ್ತಮವಾಗಿ, ರೋಗರುಜನೆ ಬಾರದಂತೆ ಸಹಾಯ ಮಾಡುವಳೆಂಬ ನಂಬಿಕೆಯಲ್ಲಿ ದೇವಿಯ ಸೇವೆಗಾಗಿ ಸ್ತ್ರೀ ಪೂಜಾರಿಣಿಯನ್ನು ಹೊಂದಿದ್ದು,

ಶುದ್ಧ ಆರಾಧನೆಯ ರೂಪದಲ್ಲಿತ್ತು. ತಮ್ಮ ಮನೆಯನ್ನು ನೋಡಿಕೊಂಡು ಹೋಗಲು ಒಬ್ಬ ಹೆಣ್ಣು ಮಗಳಿರುವಂತೆ, ದೇವತೆಯನ್ನು ನೋಡಿಕೊಂಡು ಹೋಗಲು ಒಬ್ಬ ಹೆಣ್ಣು ಮಗಳು ದೇವತೆಯ ಮನುಷ್ಯಳಾಗಿರಬೇಕು ಎಂಬ ಮುಗ್ಧ ಭಾವನೆಯಿಂದ ಕೂಡಿತ್ತು. ಹೀಗೆ ಹಲವು ರೂಪಗಳಲ್ಲಿ ಕಂಡುಕೊಂಡ ಸಂಗತಿಯು ಐತಿಹಾಸಿಕ ಆಧಾರಗಳಿಂದ ತಿಳಿಯಬಹುದಾಗಿದೆ.

ದೇಶದಾದ್ಯಂತ ವ್ಯಾಪಕವಾಗಿ ಹರಡಿದ್ದ ದ್ರಾವಿಡ ಸಮುದಾಯವು ಸಿಂಧೂ ನಾಗರೀಕತೆ ಮತ್ತು ಸಂಸ್ಕೃತಿಯ ನಿರ್ಮಾಪಕರು ಹಾಗೂ ಇನ್ನೂ ಬೇರೆ ಬೇರೆ ಜನಸಮುದಾಯಗಳಿದ್ದರೂ ಅದರಲ್ಲಿ ದ್ರಾವಿಡರದೇ ಪ್ರಧಾನ ಗುಂಪಾಗಿತ್ತು. ಅನಂತರ ಆರ್ಯರು ದನಕರುಗಳನ್ನು ಮೇಯಿಸುತ್ತಾ ರಥ ಮತ್ತು ಕಬ್ಬಿಣದ ಅಸ್ತ್ರಗಳಿಂದ, ಕುದುರೆಗಳಿಂದ ಸುಸಜ್ಜಿತರಾಗಿ, ಕ್ರಿ.ಪೂ.೧೫೦೦ರ ವೇಳೆಗೆ ಆರ್ಯರು ಭಾರತಕ್ಕೆ ಬಂದರು. ಇವರು ಯುರೋಪ್ ಮತ್ತು ಏಷ್ಯಾದಲ್ಲಿರುವ ಆರ್ಯರ ಭಾಷೆ ಮತ್ತು ಪುರಾಣಗಳಲ್ಲಿ ಕಂಡುಬರುವ ಅನೇಕ ಸಾಮ್ಯಗಳಿಂದಾಗಿ ಇವರು ಇದೇ ಮೂಲದವರೆನ್ನಬಹುದು. ಇಲ್ಲಿನ ಆರ್ಯರು ಗುಂಪು ಗುಂಪುಗಳಾಗಿ ಚದುರಿ ವಲಸೆ ಬರಲು ಕಾರಣವೆಂದರೆ, ಬಹುತೇಕ ಪ್ರಕೃತಿ ವಿಕೋಪವೇ ಇರಬೇಕೆಂದು ಎಲ್ಲಾ ಧರ್ಮಗ್ರಂಥಗಳು ಸಾಕಷ್ಟು ಪುರಾವೆಯನ್ನು ಒದಗಿಸುತ್ತವೆ. ಹೀಗಾಗಿ ಇವರು ಪ್ರಧಾನವಾಗಿ ಅಲೆಮಾರಿಗಳು. ತಮಗೂ ತಮ್ಮ ಪರಿವಾರದವರಿಗೂ ಹಾಗೂ ತಮ್ಮ ದನಕರಗಳಿಗೂ ಆಹಾರ, ನೀರನ್ನು ಅರಸುತ್ತಾ ಗುಂಪಾಗಿ ಅಥವಾ ಪಂಗಡದ ರೂಪದಲ್ಲಿ ಭಾರತಕ್ಕೆ ಬಂದರು.

ಇತಿಹಾಸಕಾರರ ಪ್ರಕಾರ ಆರ್ಯರು ಭಾರತಕ್ಕೆ ಬರುವ ಮೊದಲೇ ಇಲ್ಲಿನ ಆದಿವಾಸಿಗಳು ಉತ್ಪಾದನಾ ವಿಧಾನದಲ್ಲಿ ಅವರಿಗಿಂತಲೂ ಮುಂದುವರೆದ, ಅವರಿಗೆ ಸಾಕಷ್ಟು ಕಠಿಣ ಹೋರಾಟವನ್ನು ಕೊಟ್ಟಿರಬಹುದಾದ, ಕೊನೆಗೆ ಅವರಲ್ಲಿ ಸೋತ ದ್ರಾವಿಡರು ಇತಿಹಾಸಕಾರರಿಂದ ತಿಳಿದುಬರುವಂತೆ, ಹಳ್ಳಿಯ ಜೀವನಕ್ಕೆ ಹೊಂದಿಕೊಂಡಿರುವ ಇವರು ದನಕರುಗಳು, ಕಬ್ಬಿಣದ ಬಳಕೆ ಹಾಗೂ ಕುದುರೆಗಳನ್ನು ಪಳಗಿಸುವುದರಲ್ಲಿ ದ್ರಾವಿಡರಿಗಿಂತ ಆರ್ಯರು ಸುಧಾರಿತರಾಗಿದ್ದರು. ದ್ರಾವಿಡರಿಗಿಂತ ಸಾಮರ್ಥ್ಯ ಹಾಗೂ ಕೌಶಲ್ಯಗಳೆಲ್ಲ ನೈಪುಣ್ಯತೆಯನ್ನು ಹೊಂದಿದ್ದರಿಂದ ಭಾರತವನ್ನು ಜಯಿಸಲು ಇವರಿಗೆ ಕಾರಣವಾಯಿತೆಂದು ತೋರುತ್ತದೆ. ಇವರಲ್ಲಿ ಕೆಲವರು ನಿರ್ನಾಮವಾದರೆ, ಇನ್ನು ಕೆಲವರು ಕಾಡುಮೇಡುಗಳ ಸೇರಿದರು. ಅಳಿದುಳಿದವರು ಅವರ ಸೆರೆಯಾಳುಗಳಾದರು. ಈ ಸೆರೆಯಾಳುಗಳನ್ನು ಸ್ವತಂತ್ರವಾಗಿ ಕ್ಷಮಾಧಾನಮಾಡಿ ಜೀವಿಸಲು ಬಿಡುವಷ್ಟು ಕರುಣಾಳುಗಳು ಆರ್ಯರು ಆಗಿರಲಿಲ್ಲ. ಆ ಕಾಲಕ್ಕಾಗಲೇ 'ಗುಲಾಮಗಿರಿ' ಪದ್ಧತಿಯ ಲಾಭವನ್ನು ತಿಳಿದುಕೊಂಡಿದ್ದರಿಂದ ಯುದ್ಧ ಬಂಧಿಗಳನ್ನು ಕೊಲ್ಲುವುದರ ಬದಲು, ಅವರನ್ನು ಗುಲಾಮರಾಗಿ ಪರಿವರ್ತಿಸುವುದು ಹೆಚ್ಚು ಪ್ರಯೋಜನಕರ ಎಂದು ಭಾವಿಸಿ, ಸೋತ ದ್ರಾವಿಡರನ್ನು ದಾಸ ದಾಸಿಯರನ್ನಾಗಿ ಮಾಡಿಕೊಂಡು ತಮ್ಮಗಳ ಸೇವೆಗೆ ಇಟ್ಟುಕೊಂಡರು.

### ೩.೪ ಆರ್ಯರ ಪ್ರಭುತ್ವದಿಂದ ಭಾರತೀಯ ಸಮಾಜದಲ್ಲಾದ ಪರಿವರ್ತನೆಗಳು

ದ್ರಾವಿಡರು ಅನುಸರಿಸುತ್ತಿದ್ದ ಸಾಮಾಜಿಕ ಸಂಸ್ಥೆಗಳು, ಪೂಜಾ ಪದ್ಧತಿಗಳು, ಧಾರ್ಮಿಕ ಶ್ರದ್ಧೆ ಹಾಗೂ ನಂಬಿಕೆಗಳು ಜನರನ್ನು ಪ್ರಭಾವಕ್ಕೀಡು ಮಾಡಿದವು. ವೇದಸಾಹಿತ್ಯ ಇವೆಲ್ಲವುಗಳಿಗೆ ಭಂಡಾರಗಳಾಗಿದ್ದವು.

ವ್ಯಕ್ತಿಗಳ ವೈಯಕ್ತಿಕ ಜೀವನಕ್ಕೆ ಆಶ್ರಮದ ಹಂತಗಳು, ಸಾಮಾಜಿಕ ಜೀವನಕ್ಕೆ ವೃತ್ತಿ, ಆಧಾರದ ಮೇಲೆ ವರ್ಣಗಳ ವಿಂಗಡಣೆ ಸಾಮಾಜಿಕ ಸಂಘಟನೆಗಳನ್ನು ಆರ್ಯರ ಪ್ರಭಾವದಿಂದ ಗುರುತಿಸಬಹುದಾಗಿದೆ.

ಆರ್ಯನ್ನರ ಜೀವನ ಚಿತ್ರಣವನ್ನು ಮಹಾಕಾವ್ಯಗಳು ಮತ್ತು ಇತರ ಸಾಹಿತ್ಯಿಕ ಬರವಣಿಗೆಯಲ್ಲಿ ಕಾಣಬಹುದು. ಪ್ರಾರಂಭದ ಮಹಾಕಾವ್ಯವಾದ ರಾಮಾಯಣದಲ್ಲಿ ಆರ್ಯನ್ನರು ಭಾರತದ ಮೇಲೆ ತಮ್ಮ ಸಂಪೂರ್ಣ ಹಿಡಿತವನ್ನು ಸಾಧಿಸದೆ ಇದ್ದಂತಹ ಕಾಲವನ್ನು ಗಮನಿಸಿದರೆ, ಅನಂತರದ ಮಹಾಕಾವ್ಯವಾದ ಮಹಾಭಾರತದ ಅವಧಿಗಾಗಲೇ ಇಡೀ ಭಾರತವು ಆರ್ಯನ್ನರ ಪ್ರಭಾವಕ್ಕೆ ಒಳಗಾಗಿರುವುದನ್ನು ಅವಲೋಕಿಸಬಹುದಾಗಿದೆ. ದೀರ್ಘಕಾಲಾವಧಿಯಲ್ಲಿ ಸ್ಥಿರವಾಗಿ ನೆಲೆಗೊಳ್ಳಲು ಅನುಕ್ರಮಿಸಿದಂತೆ ಸಾಮಾಜಿಕ ವ್ಯವಸ್ಥೆ ಸಂಕೀರ್ಣವಾಗತೊಡಗಿತು. ಸಾಮಾಜಿಕ ಜೀವನದ ವೃತ್ತಿ ಆಧಾರಿತ ವಿಭಜನೆಯಲ್ಲಿ ವರ್ಣಪದ್ಧತಿ ವರ್ಣಾಂಕುರವಾಗಿ ಜಾತಿರೂಪವನ್ನು ಪಡೆಯಲಾರಂಭಿಸಿತು. ಪುರೋಹಿತವರ್ಗ ಮತ್ತು ಕ್ಷತ್ರಿಯರ ನಡುವೆ ದೀರ್ಘ ಕಾಲದ ಸಂಘರ್ಷದ ನಂತರ ಪುರೋಹಿತ ವರ್ಗ ಜಯಗಳಿಸಿ ಸಮಾಜದ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಿಕೊಂಡಿತು. ಕಾಲಾನಂತರದಲ್ಲಿ ಪುರೋಹಿತ ವರ್ಗಕ್ಕೆ ವಿಶೇಷತೆಯನ್ನು ಕೊಡುವ ಮೂಲಕ ಅವರು ಅನುಸರಿಸುವ ಪದ್ಧತಿ, ಪೂಜಾ ವಿಧಾನ, ಮುಂತಾದವುಗಳನ್ನು ಒಳಗೊಂಡು ಬ್ರಾಹ್ಮಣತ್ವಕ್ಕೆ ಅವಕಾಶವಾಯಿತು. ಆರ್ಯನ್ನರ ರಾಜಕೀಯ ವ್ಯವಸ್ಥೆಯು ಚುನಾಯಿತ ಮತ್ತು ಪ್ರಜಾಪ್ರಭುತ್ವ ತಳಹದಿ ಹೊಂದಿದ ರಾಜ್ಯಗಳಿಗೆ ಮತ್ತು ಶ್ರೇಣೀಕೃತ ಸಮಾಜಗಳಿಗೆ ಅನುವು ಮಾಡಿಕೊಟ್ಟಿತು.

ಆರ್ಯರು ದಾಸ ದಾಸಿಯರನ್ನು ತಮ್ಮ ಸಂಸ್ಕೃತಿಯ ಪ್ರಭಾವಕ್ಕೆ ಒಳಪಡಿಸಿದರು. ಅವರು ಅನುಸರಿಸುತ್ತಿದ್ದ ಸಾಮಾಜಿಕ ಸಂಸ್ಥೆಗಳು, ಪೂಜಾ ಪದ್ಧತಿಗಳು, ಧಾರ್ಮಿಕ ಶ್ರದ್ಧೆ ಹಾಗೂ ನಂಬಿಕೆಗಳು ಭಾರತೀಯ ಆದಿವಾಸಿಗಳನ್ನು ಪ್ರಭಾವಕ್ಕೀಡು ಮಾಡಿದವು. ವೇದಸಾಹಿತ್ಯ ಇವೆಲ್ಲವುಗಳಿಗೆ ಭಂಡಾರಗಳಾಗಿದ್ದವು. ವ್ಯಕ್ತಿಗಳ ವೈಯಕ್ತಿಕ ಜೀವನಕ್ಕೆ ಆಶ್ರಮದ ಹಂತಗಳು. ಸಮಾಜಿಕ ಜೀವನಕ್ಕೆ ವೃತ್ತಿ ಆಧಾರಿತ ವರ್ಣಗಳ ವಿಂಗಡನೆ, ಸಾಮಾಜಿಕ ಸಂಘಟನೆಗಳ ಪ್ರಭಾವ ಮೊದಲಾದವುಗಳಿಂದ ಕೀಳು ಸ್ಥಾನಕೊಟ್ಟು ಅವರ ವರ್ಗ ವ್ಯವಸ್ಥೆಯ ತಳಹಂತಕ್ಕೆ ಸೇರ್ಪಡೆಗೊಳಿಸಿ, ಅಂಧಕಾರದ, ಗೊಡ್ಡು ಸಂಪ್ರದಾಯಗಳಿಂದ ಕೂಡಿದ 'ಜಾತಿಪದ್ಧತಿ' ಎಂಬ ವಿಷಬೀಜವನ್ನು ಬಿತ್ತಲು ಪ್ರಾರಂಭಿಸಿದರು. ಜೊತೆಗೆ ಆರ್ಯರು ತಾವು ಶ್ರೇಷ್ಠರು ಎಂದು ಸ್ವಯಂ ಘೋಷಣೆ ಮಾಡಿಕೊಳ್ಳುತ್ತಾ ಸೆರೆಯಾದ ದ್ರಾವಿಡರನ್ನು ತಮ್ಮ ಸೇವೆಗೆ ಇರಿಸಿಕೊಳ್ಳುವ ಮತ್ತು ತಮ್ಮ ವಿಕೃತ ಬೇಡಿಕೆಗಳನ್ನು ಅವರಿಂದ ಪೂರೈಸಿಕೊಳ್ಳುವ ನೆಪದಲ್ಲಿ ಧರ್ಮ, ದೇವರನ್ನು ಬಳಸಿ, ಇವರು ಹುಟ್ಟಿರುವುದು ಆರ್ಯರ ಸೇವೆಗೋಸ್ಕರ ಎಂಬ ಭಾವನೆ ಬೆಳೆಸಿ ತಮ್ಮ ಆದಿಪತ್ಯವನ್ನು ಪ್ರಬಲವಾಗಿ ಸ್ಥಾಪನೆ ಮಾಡುವ ಕುತಂತ್ರ, ನಯವಂಚಕ ತನದಿಂದ, ಮಾತೃ ಪ್ರಧಾನದಂತಹ ಮೌಲ್ಯಗಳ ಹಾಗೂ ಆಚರಣೆಗಳ ವಿನಾಶಕ್ಕೆ ಕಾರಣವಾಗಿ, ಲಿಂಗ ವ್ಯವಸ್ಥೆಯಲ್ಲಿ ಅಗಾಧ ಅಂತರವನ್ನು ಸೃಷ್ಟಿಸಿ, ಸಮಾಜದಲ್ಲಿ ಅಸಮಾನತೆ, ಅನ್ಯಾಯ, ಅಧರ್ಮ ತಾಂಡವಾಡಲು ಅವಕಾಶ ಮಾಡಿಕೊಟ್ಟರು. ಈ ನಿಟ್ಟಿನಲ್ಲಿ ದ್ರಾವಿಡರ ಮಾತೃದೇವತೆಗಳನ್ನು, ಆರ್ಯರು ತಮ್ಮ 'ಪಿತೃ ಪ್ರಧಾನ' ತತ್ವ ಆಧಾರಿತ ಪುರುಷ ದೇವತೆಗಳು ಬಂದು ಈ ನೆಲೆಯಲ್ಲಿ ತಮ್ಮ ಪುರುಷ ದೇವತೆಗಳ ಹೆಂಡಂದಿರಾಗಿ ಸ್ತ್ರೀದೇವತೆಗಳನ್ನು ಸ್ವೀಕರಿಸಿ, ಗ್ರಾಮಗಳಲ್ಲಿದ್ದ ಸ್ತ್ರೀ ದೇವತೆಗಳ ಬದಲಾಗಿ

ಆರ್ಯರ ಪ್ರಾಬಲ್ಯದಿಂದಾಗಿ, ಸ್ತ್ರೀ ಗ್ರಾಮದೇವತೆಗಳ ಸ್ಥಾನಮಾನದಲ್ಲಿ ಹಲವು ವ್ಯತ್ಯಾಸಗಳಾಗಿ, ಆರ್ಯರ ಶಿಷ್ಟಗೊಂಡ ಪುರುಷದೇವತೆಗಳು ಆಚರಣೆ ಬಂದು ಅವರ ಹೆಂಡಂದಿರಾಗಿಯೇ ಸ್ತ್ರೀ ದೇವತೆಗಳು ಮಾರ್ಪಟ್ಟವು.

ಆರ್ಯರು ಸ್ತ್ರೀಯನ್ನು 'ಪ್ರಕೃತಿ'ಯನ್ನಾಗಿ ಪುರುಷರನ್ನು 'ಸಂಸ್ಕೃತಿ' ಯನ್ನಾಗಿ ಇವರ ಪರಂಪರೆ ನಿರ್ವಚಿಸುತ್ತವೆ. ಬನದಮ್ಮ, ಬಳಲಿಕವ್ವ, ಹುಲಿಗೆಮ್ಮ, ಬನಶಂಕರಿ, ಬಾದುಬ್ಬೆ ಮುಂತಾದ ಸ್ತ್ರೀ ದೇವತೆಗಳು ಕೃಷಿ ಸಮೃದ್ಧಿ ನೆಲೆಯಲ್ಲಿ ನಿರ್ವಚಿಸಲ್ಪಟ್ಟಿವೆ. ಹಾಗೆಯೇ ಎಲ್ಲಮ್ಮ ಮತ್ತು ಲಜ್ಜಾಗೌರಿ ಸಂತಾನಶಕ್ತಿಯಡಿ ನಿರ್ವಚಿಸಲ್ಪಟ್ಟಿದ್ದು ಸಹ ಉಂಟು. ಪರಿಣಾಮವಾಗಿ ಸ್ತ್ರೀಯ ಸ್ತನ-ಗರ್ಭ-ಯೋನಿ ಇವು ಮಾತೃದೇವತೆಯ ಪರಿಕಲ್ಪನೆಗಳ ಸಂಕೇತಗಳಾಗಿ, ಪಾಲನೆ ಧಾರಣೆ ಸೃಷ್ಟಿಗಳ ಸಂಕೇತವಾಗಿವೆ.

'ಲಜ್ಜಾಗೌರಿ' ಯ ವಿಗ್ರಹದಲ್ಲಿ ದೃಶ್ಯಕ್ಕೆ ಕಾಣಿಸಿಕೊಳ್ಳುವ ಯೋನಿ, ಸ್ತನಗಳ ಚಿತ್ರಗಳು, ಪುರುಷ ಸಂಸ್ಕೃತಿಯ ಆಧಾರಾಂಶಗಳಾಗಿದ್ದು. ಇಲ್ಲಿ ಲಜ್ಜೆಯನ್ನು ನಿರಾಕರಿಸುವ ವಿಧಾನವು ಪುರುಷ ರಾಜಕಾರಣವನ್ನು ಸಮರ್ಥವಾಗಿ ಧ್ವನಿಸುತ್ತದೆ. ಕಾರಣ ಮನುಷ್ಯನ ದೇಹದಲ್ಲಿ ಮುಂಡದಷ್ಟೆ ರುಂಡವೂ ಪ್ರಮುಖವಾದುದು. ಆದರೆ ರುಂಡ, ಶಿರಸ್ಸು ಇಲ್ಲದ ಯೋನಿ, ಸ್ತನ ಗರ್ಭದ ಮೂಲಕ ಗುರುತಿಸಲ್ಪಡುವ ಲಜ್ಜಾಗೌರಿಯ ವಿಗ್ರಹ ರುಂಡದ ಸಂವೇದನೆಯನ್ನು ಸಂಪೂರ್ಣ ನಿರಾಕರಿಸಿದ ಪಿತೃವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ. ಡಾ.ಡಿ.ಕೋಸಾಂಬಿಯವರು "ಮಾತೃದೇವತೆಯ ಪೂಜೆಯನ್ನು ಮೊದಲಿಗೆ ಮಹಿಳೆಯರೇ ನಿರ್ವಹಿಸುತ್ತಿದ್ದರು. ಅಷ್ಟೇ ಅಲ್ಲದೇ ಆ ಪೂಜಾ ಸ್ಥಳಗಳಿಗೆ ಪುರುಷರು ಹೋಗುವಂತಿರಲಿಲ್ಲ"[೧೯]. ಇಂತಹ ಆಚರಣೆಗಳನ್ನು ಪುರುಷ ಪ್ರಧಾನ ಶಿಷ್ಟ ಸಂಪ್ರದಾಯದಲ್ಲಿ ಸ್ತ್ರೀಯರು ಪೂಜಾರಿಗಳಾಗುವುದಕ್ಕೆ ನಿಷೇಧಿಸಲಾಯಿತು.

ದ್ರಾವಿಡರ ಕಾಲದಲ್ಲಿದ್ದ ಸ್ತ್ರೀ ಪೂಜಾರಿಣಿಯರು ಪುರುಷ ವ್ಯವಸ್ಥೆಯ ಮಧ್ಯವರ್ತಿಗಳಾಗಿ ಕೆಲಸ ನಿರ್ವಹಿಸುವಂತಾಗಿ, ಧಾರ್ಮಿಕ ಸಂಸ್ಥೆಗಳು ಪುರುಷರಿಂದಲೇ ರೂಪುಗೊಂಡು ಪುರುಷ ಪರವಾಗಿಯೇ ಇರುವ ಸಂಸ್ಥೆಗಳಾಗಿ, ಈ ವ್ಯವಸ್ಥೆಯಲ್ಲಿ ಪುರೋಹಿತನು ಪ್ರಬಲನಾಗುತ್ತಾನೆ. 'ದ್ರಾವಿಡ' ಅಂದರೆ, ತಳ ಸಮುದಾಯದ ಪೂಜಾರಿಣಿಯರು ಪುರುಷ ಪ್ರಧಾನ ವ್ಯವಸ್ಥೆಗೆ ಲೈಂಗಿಕ ಭೋಗವನ್ನು ಕಲ್ಪಿಸುವ ಮಧ್ಯವರ್ತಿಯಾಗುತ್ತಾಳೆ. ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪುರುಷ ನಿಷ್ಠೆ ಮೌಲ್ಯಗಳನ್ನು ಪೋಷಿಸುವವಳಾಗುತ್ತಾಳೆ. ಹೀಗೆ ಮಹಿಳಾ ಪೂಜಾರಿಗಳು ತಮ್ಮ ವೃತ್ತಿಯಿಂದ ಕುಟುಂಬದಲ್ಲಿ ಸಮಾಜದಲ್ಲಿ ಉಪಭೋಗದ ನೆಲೆಯಲ್ಲಿ ಬಳಸಲ್ಪಡುತ್ತಾಳೆ.

ದ್ರಾವಿಡ ಸಂಸ್ಕೃತಿಯನ್ನು ಅನಾಗರಿಕ ನೆಲೆಗಟ್ಟಿನಲ್ಲಿ ನಿರ್ವಚಿಸಲಾಗಿದೆ. ಇವರ ಮೂಲ ಮಾತೃ ಪ್ರಧಾನ ಸಮಾಜವನ್ನು ಅಸಂಸ್ಕೃತವಾಗಿ ಪರಿಗಣಿಸಲ್ಪಟ್ಟು, ಮಾತೃ ಮೂಲದಿಂದ ಬಂದಿದ್ದ ಬಸವಿ, ಜೋಗತಿ, ಪಾತ್ರದವರನ್ನು ಗೌರವ, ಶುದ್ಧತೆ, ಸ್ವತಂತ್ರ್ಯತೆಯಿಂದ ಇದ್ದವರನ್ನು ಈಗ ನಿಕೃಷ್ಟವಾಗಿ ಕಾಣಲಾಯಿತು. ಇವರನ್ನು ಅನಾಗರಿಕರು, ಅಸಂಸ್ಕೃತರೆಂದು ಗುರುತಿಸಿ, ಪಿತೃ ಮೂಲ ಕುಟುಂಬದವರನ್ನು ಸುಸಂಸ್ಕೃತ, ನಾಗರಿಕರಾಗಿ ಪರಿಗಣಿಸುವ ವ್ಯವಸ್ಥೆ ಜಾರಿಗೊಳಿಸಿದರು.

ಮೇಲ್ಪದರಿನಲ್ಲಿ ಸ್ತ್ರೀ ಪ್ರಾಮುಖ್ಯತೆಯನ್ನು ಅಧಿಕಾರವನ್ನು ಹೇಳುವ ಅನೇಕ ಆಚರಣೆಗಳು, ನಂಬಿಕೆಗಳು, ಆಳದಲ್ಲಿ ಪುರುಷಶಾಹಿ ಧೋರಣೆಯನ್ನು ಪೋಷಿಸುತ್ತವೆ. ದ್ರಾವಿಡ ಸಂಸ್ಕೃತಿಯಲ್ಲಿ ಕಂಡುಬರುತ್ತಿದ್ದ ಸ್ತ್ರೀಪುರುಷ ಸಮಾನತೆಯನ್ನು ಗೌರವಿಸುತ್ತಿದ್ದ ಮೌಲ್ಯಗಳು ನಾಶವಾದವು. ಇದೇ ಸಮಯದಲ್ಲಿ 'ವೇದಧರ್ಮ'ವು

ಬೆಳೆದು ಪ್ರಾಬಲ್ಯವನ್ನು ಪಡೆದು ಇಡೀ ಭರತ ಖಂಡದಲ್ಲಿ ಈ ಧರ್ಮದ ಪ್ರಭಾವ ಹರಡಲಾರಂಭಿಸಿತು. ಈ ಕಾಲದಲ್ಲಿ ಆಚರಣೆಗಳ ಪರಿಷ್ಕಾರ ನಡೆದು ತಾರತಮ್ಯ ಭಾವನೆ ಬಿಗಿಗೊಳ್ಳುತ್ತದೆ ಸ್ತ್ರೀಯರನ್ನು ಕುರಿತು ಇಲ್ಲಿಯ ವರೆಗೂ ವ್ಯಕ್ತವಾಗಿದ್ದ ಶುದ್ಧ ಅಶುದ್ಧ ಎಂಬ ಭಾವನೆಗಳು ಮೂಡಿ ಬಂದು ಸ್ತ್ರೀಯರು ತಮ್ಮ ಜೀವನದ ಹಲವು ಹಂತಗಳಲ್ಲಿ ಅಶುದ್ಧ ಎಂದು ಗುರುತಿಸಲಾಯಿತು. ಪರಿಣಾಮ ಧಾರ್ಮಿಕ ಕ್ಷೇತ್ರದಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಕ್ರಮೇಣ ಕಡಿಮೆಯಾಗತೊಡಗಿತು. ಜೊತೆಗೆ ಧರ್ಮದ ಹೆಸರಿನಲ್ಲಿ ಸ್ತ್ರೀಯನ್ನು ಬೆತ್ತಲೆಗೊಳಿಸುವ ಅಮಾನವೀಯ ವ್ಯವಸ್ಥೆ ರೂಪುಗೊಳ್ಳತೊಡಗಿತು ದೇವದಾಸಿಯರ ಪಾಡು ಹೀನಾಯವಾಗುತ್ತಾ ಹೋಗುವ ಕ್ರಮವಿದು. ಹೀಗಾಗಿ ಮಾನವ ಮತ್ತು ಅವನ ದೇವತೆ ನಡುವಣ ಸಂಬಂಧಗಳಲ್ಲಿ ಮಾತ್ರವೇ 'ದೇವದಾಸಿ'ಯರ ಹುಟ್ಟನ್ನು ಹುಡುಕುವುದು ಸಾರ್ಥಕವಾದ ಮಾರ್ಗವಲ್ಲ ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದವರ ಬಣದಲ್ಲೇ (ದ್ರಾವಿಡ) ಹೆಚ್ಚಾಗಿ ಪ್ರಕಟಗೊಂಡಿರುವುದು. ಉಚ್ಚ ವರ್ಣದವರು ತಮ್ಮ ತಮ್ಮ ದೇವತೆಗಳ ಜೊತೆಗೆ ದೇವದಾಸಿಯರ ರೂಪದಲ್ಲಿ ಸಂಬಂಧಗಳನ್ನು ಏಕೆ ಸೃಷ್ಟಿಸಿಕೊಳ್ಳಲಿಲ್ಲ? ಅವರ ಸಂಸ್ಕೃತಿ ಹಿಂದುಳಿದವರ ಆಚರಣೆಗಳನ್ನೇಕೆ ರೂಢಿಸಿಕೊಳ್ಳಲಿಲ್ಲ? ಇದಕ್ಕೆ ಇರುವುದು ಒಂದೇ ಉತ್ತರ ದೇವದಾಸಿಯರಾಗಲು ಯಾರೂ ಸಾಂಸ್ಕೃತಿಕ ಪ್ರೇರಣೆ ಹೊಂದಿ ಸ್ವಯಂ ಇಚ್ಛೆಯಿಂದ ಆ ಹಾದಿ ತುಳಿಯಲಿಲ್ಲ. ಅವರು ಆ ಹಾದಿಗೆ ನೂಕಲ್ಪಟ್ಟರು. ನೂಕಿದವರ ಸಂಸ್ಕೃತಿ ಅಂತಹದ್ದು. ಇತರರನ್ನು ದೇವರ ಸೇವಕಿಯರನ್ನಾಗಿ ಬಲವಂತವಾಗಿ ಪ್ರತಿಬಿಂಬಿಸುವುದು, ತನ್ಮೂಲಕ ಅವರನ್ನು ತಮ್ಮ ಸೇವಕಿಯರನ್ನಾಗಿ ಮಾರ್ಪಡಿಸಿಕೊಳ್ಳುವುದು. ಈ ಸಾಂಸ್ಕೃತಿಕ ದೌರ್ಜನ್ಯ ಅನ್ಯಾದೃಶ್ಯವಾದುದು. ಸಾಮಾಜೀಕೃತ, ಶ್ರೇಣಿಕೃತ ವ್ಯವಸ್ಥೆಯಿಂದ ಬಂದಿದ್ದು. ಇಲ್ಲದಿದ್ದರೆ, ಇಂತಹ ಕಡು ದೌರ್ಜನ್ಯಕ್ಕೆ ಭೂಮಿಕೆ ಲಭಿಸಲಾರದು.

ವೇದ, ಪುರಾಣ, ಮಹಾಕಾವ್ಯಗಳಲ್ಲಿನ ತತ್ವಗಳ ಸಾರಾಂಶದಂತೆ ಆರ್ಯರು ದೇವತೆಗಳೆಂದೂ, ದ್ರಾವಿಡರು ರಾಕ್ಷಸರೂ, ಅನಾಗರಿಕರೂ ಎಂದು ನಿರೂಪಿಸುವುದೇ ಆಗಿದೆ, ಹೊರತು ಆ ವೇದ ಸೃಷ್ಟಿಯಲ್ಲಿ ಮನುಷ್ಯರೆಲ್ಲರೂ ಒಂದೇ ಎಂಬುದಕ್ಕೆ ಅಲ್ಲಿ ಆಸ್ಪದವೇ ಇರುವುದಿಲ್ಲ. ಇಂತಹ ಧಾರ್ಮಿಕ ಗ್ರಂಥಗಳೆಲ್ಲವನ್ನು ಸೃಷ್ಟಿ ಮಾಡಿ ಅಂದಿನಿಂದ ಇಂದಿನವರೆಗೆ ಅಂತ್ಯಜನ ಮಹಿಳೆಯರನ್ನು ಸೂಳೆಯರನ್ನಾಗಿ ಮಾಡಿ, ಅಂತ್ಯಜರ ಗಂಡು ಮಕ್ಕಳನ್ನು ಗುಲಾಮರನ್ನಾಗಿ ಮಾಡುವ ಇವರ ಸಾಹಿತ್ಯ 'ಸಕ್ಕರೆ ಲೇಪಿತ ವಿಷ' ಎನ್ನುವಂತಿದೆ.

ಭಗವತ್ ಶರಣ ಉಪಧ್ಯಾಯ ಅವರ "ಭಾರತೀಯ ಸಾಮಾಜಿಕ ಐತಿಹಾಸಿಕ ವಿಶ್ಲೇಷಣೆ" ಯಲ್ಲಿ 'ದಸ್ಯು' ದಿಂದ ದೇವದಾಸಿ ಪದ ಹುಟ್ಟಿದೆ. ಹಿಂದೆ ಆರ್ಯರು ಯಾರನ್ನು ಕೃಷ್ಣಾ (ಕಪ್ಪಾಗಿರುವವರು), ಅನಾಸಾ (ಮೂಗಿಲ್ಲದವರು), ಮೃಧ್ರವಾಚಾ (ಒರಟು ಮಾತನ್ನಾಡುವವರು), ಅದೇವಾಯು (ಅಧರ್ಮಿಕರು), ಅಮಚ್ಛನ್ (ಯಜ್ಞಯಾಗಾದಿಗಳನ್ನು ಮಾಡದವರು), ಶಿಶ್ನದೇವ (ಲಿಂಗಪೂಜಕರು) ದಾಸ (ಗುಲಾಮರು), ದಸ್ಯು (ಪಾಪಕರ್ಮಿಗಳು) ಎಂದು ಹೆಸರಿಸಿದ್ದರೋ ಅವರನ್ನೇ ಈಗ ತಮ್ಮ ಸಾಮಾಜಿಕ ಅಂತಸ್ತಿಗೆ ಆಧಾರವಾಗಿರಿಸಿಕೊಂಡರು. ಆ ಅನಾರ್ಯರ ಸಮ್ಮಿಶ್ರಣದಿಂದಲೇ ಅವರ ವರ್ಣವ್ಯವಸ್ಥೆಯು ತೀರಾ ಕೆಳಹಂತ, ಅಂದರೆ 'ಶೂದ್ರರ' ಹಂತ ರೂಪುಗೊಂಡಿತು. ವರ್ಣಗಳ ಉನ್ನತ ಮತ್ತು ನಿಮ್ನ ಸ್ಥಾನಮಾನಗಳು ಸಾಪೇಕ್ಷ ಸೇವೆಗಳನ್ನೇ ಅವಲಂಬಿಸಿಕೊಂಡಿದ್ದವು. ಇದರ ಪರಿಣಾಮವಾಗಿ ಗೆದ್ದ ಶತೃಗಳಿಗೆ ಸೂಕ್ತವಾದ ಸ್ಥಾನಮಾನಗಳು

ದೊರಕಿದವು. ಋಗ್ವೇದ ಕಾಲದ ರಾಜರುಗಳ ಮತ್ತು ಋಷಿಗಳ ಅಂತಃಪುರಗಳ ಮೇರೆಗಳು ವಿಸ್ತರಿಸಿ ಕೊಳ್ಳತೊಡಗಿದವು. ದೇಶಿಯ ಸಮುದಾಯದ ನಾರಿಯರು ಈ ಅಂಥಃಪುರಗಳನ್ನು ತುಂಬ ತೊಡಗಿದರು. ರಾಜರು ಮತ್ತು ಶ್ರೀಮಂತರುಗಳು ತಮ್ಮ ಸಂತೋಷವನ್ನು ಪ್ರದರ್ಶಿಸುವ ಅಂಗವಾಗಿ ತಮ್ಮ ಮೆಚ್ಚುಗೆಯನ್ನು ಸೂರೆಗೊಂಡವರಿಗೆ ನಾರಿಯರಿಂದ ಕೂಡಿದ ರಥಗಳನ್ನು ದಾನವಾಗಿ ಕೊಡತೊಡಗಿದರು. ಈ ಅಂತಃಪುರಗಳು ದಲಿತ ನಾರಿಯರ ನಾಗರಿಕತೆ ಹೆಚ್ಚು ಉತ್ತಮವಾದುದೆಂದು ಭಾವಿಸಲಾಗಿದೆ. ಈ ನಾರಿಯರು ಅವರಿಗಿಂತಲೂ ಹೆಚ್ಚು ಆಕರ್ಷಕವಾಗಿದ್ದರು. ಆರ್ಯರು ಇವರ ಲಾವಣ್ಯಕ್ಕೆ ಮರುಳಾಗತೊಡಗಿದರು. ಅನೇಕ ವೇಳೆ ಈ ಬಗೆಯ ಅಕರ್ಷಣೆಗಳ ಪರಿಣಾಮ ಸುಖಾಂತವಾಗಿರುತ್ತಿತ್ತು. ಕಕ್ಷಿವಾನ, ಜಾಶಿವ ಮತ್ತು ವತ್ಸ ಎಂಬುವವರು ಈ ಸಂಕರದಿಂದ ಹುಟ್ಟಿ ಬಂದ ಆರ್ಯ ಋಷಿಗಳಾಗಿದ್ದರು''[೯] ಎಂದು ಹೇಳಿದ್ದಾರೆ.

ಮಾಂತ್ರಿಕ ಕ್ರಿಯೆ ಹೆಂಗಸಿನಿಂದ ಗಂಡಸಿಗೆ ವರ್ಗಾವಣೆ ಮಾಡಿದ ನಂತರ ಗಂಡಸಿನ ಶಿಶ್ನವು ಉತ್ಪಾದಕ ಶಕ್ತಿಯನ್ನು ಹೊಂದುತ್ತದೆಂದು ನಂಬಿ, ಶಿಶ್ನಪೂಜೆ ಪ್ರಾರಂಭವಾಯಿತು. ಯೋನಿ ಪೂಜೆ ಹೊಲೆ ಮಾದಿಗರ ಜನರ ಸಂಪರ್ಕ ನಂತರವಷ್ಟೇ ಪಶುಪಾಲಕರಲ್ಲಿ ಶಿಶ್ನಪೂಜೆ ಶುರುವಾಗಿರಬೇಕು. ತದನಂತರ ಕಾಲದಲ್ಲಿ ಇವೆರೆಡರ ಸಂಯೋಗ ಕಲ್ಪನೆ (ಸಂಭೋಗ ಪಂಚಮಕಾರದಲ್ಲಿ) ಎರಡೂ ಜನನಾಂಗಗಳ ಸಂಯೋಗವನ್ನು ಸೂಚಿಸುವುದು. ಶಿಶ್ನದೇವ ಭೈರವನ ಆರಾಧಕರು ಜೋಗಿ ಜಾತಿಗೆ ಸೇರಿದವರು. ಇವರು ಪಶುಪಾಲಕ ದ್ರಾವಿಡ ಜಾತಿಯ ಪುರೋಹಿತರು. ಎಂಬ ವಿವರಣೆ ಇವೆ.

ಅದರಂತೆಯೇ ದೇವಾಲಯಗಳಲ್ಲಿ ವಿವಿಧ ಸೇವೆಗಳ ಹೆಸರಿನಲ್ಲಿ ಪುರೋಹಿತರು ಕೋರಿಕೆಯ ಮೇರೆಗೆ ಸ್ತ್ರೀಯರನ್ನು ಕಾರ್ಯನಿರತರನ್ನಾಗಿ ಮಾಡಲಾಗುತ್ತಿತ್ತು. ಜೊತೆಗೆ ಪುರೋಹಿತರು ಹಲವಾರು ಪುರಾಣಗಳನ್ನು ರಚಿಸಿ, 'ಮಾತೃದೇವತೆ ಲೈಂಗಿಕವಾಗಿ ಜಾಗೃತಳಾದರೆ, ಮಾತ್ರ ಜಗತ್ತಿಗೆ ಕಲ್ಯಾಣ' ಎಂದು ಸಾರುವ ಮೂಲಕ ಮಾತೃದೇವತೆಯನ್ನು ಸಾಂಕೇತಿಕವಾಗಿ ಬೃಹತ್ ಯೋನಿಯ ರೂಪದಲ್ಲಿ ಕಂಡುಕೊಂಡು ಒಂದು ಹಂತದಲ್ಲಿ ಭಕ್ತರ ಕಷ್ಟಗಳ ಪರಿಹಾರಕ್ಕೆ ಪ್ರಕೃತಿ ಪುರುಷರ ಸಾಂಕೇತಿಕವಾಗಿ ಈ ಬೃಹತ್ ಯೋನಿಯೊಡನೆ, ಸಂಭೋಗ (ಶಿವಲಿಂಗದ ಕಲ್ಪನೆ) ನಡೆಸುವಂತೆ ಮಾಡಲು ಪೂಜೆ, ಆಹುತಿ, ನೀಡಿ ಪ್ರಚೋದಿಸುತ್ತಿದ್ದರು. ಕಾಲಾನುಕ್ರಮದಲ್ಲಿ ಈ ಬೃಹತ್ ಯೋನಿಯ ಪುಜಾರಿಣಿಯರು ದೇವತೆಯ ಪ್ರತಿನಿಧಿಗಳಾಗಿ ಪುರುಷರೊಡನೆ ಲೈಂಗಿಕ ಸಂಬಂಧ ಹೊಂದುವಂತೆ ವ್ಯವಸ್ಥೆ ಮಾಡಿದರು. ಹೀಗೆ ತಮ್ಮ ಮಾನವ ಪ್ರತಿರೂಪಗಳ ಮಿಲನದಿಂದ ದೇವತೆಗಳು ಜಾಗೃತರಾಗಿ ಭಕ್ತರ ಕೋರಿಕೆಗಳನ್ನು ಈಡೇರಿಸುತ್ತಾರೆ ಎಂದು ಭಕ್ತರಲ್ಲಿ ನಂಬಿಕೆಯನ್ನು ಹುಟ್ಟಿಸಲಾಯಿತು. ಧರ್ಮವು ತಾತ್ವಿಕ ಹಂತದಿಂದ ಸಾಂಕೇತಿಕ ಹಂತವನ್ನು ಮುಟ್ಟಿದಾಗ ಬೃಹತ್ ಯೋನಿಯಲ್ಲಿ ಪುರುಷ ಸಂಕೇತ (ಶಿವಲಿಂಗ)ವನ್ನಿಟ್ಟು ಇದು ದೇವರುಗಳ ನಿರಂತರವಾದ ಮಿಲನ ಎಂದು ಸಾರಿದರು. ಹೀಗೆ ಸದಾ ಮಿಲನವಾಗಿರುವ ದೇವರುಗಳು ಸದಾ ಜಾಗೃತರಾಗಿದ್ದು ಭಕ್ತರನ್ನು ರಕ್ಷಿಸುವರು ಎಂದೂ ಸ್ತ್ರೀ ಪುರುಷ ದೇವರುಗಳು ಅಗಲುವುದರಿಂದ ಪ್ರಪಂಚದಲ್ಲಿ ಕೋಲಾಹಲ ಸಂಭವಿಸುವುದು. ಉದಾಹರಣೆಗೆ, ಶಿವ ಪತ್ನಿ ಇಲ್ಲದೇ ತಪಸ್ಸಿನಲ್ಲಿದ್ದಾಗ ಆತನ ಜಡ ಅಥವಾ ತಟಸ್ಥಾವಸ್ಥೆಯಿಂದಾಗಿ ದುಷ್ಟಶಕ್ತಿಗಳು ಅವನ ಭಕ್ತರನ್ನು ಕಾಡಿದವು. ಶಿವನನ್ನು ಜಾಗ್ರತಗೊಳಿಸಲು ಮನ್ಮಥನು ತಪೋಭಂಗ ಮಾಡಿದ್ದರಿಂದ ಗಿರಿಜೆಯ ಕಲ್ಯಾಣವಾಗಿ ಶಿವ

ಜಾಗ್ರತನಾದ ಕಾರಣ ಷಣ್ಮುಖನ ಹುಟ್ಟು, ಜೊತೆಗೆ ದುಷ್ಟ ಶಕ್ತಿಗಳ ದಮನವಾಯಿತು ಎಂದು ವಿವರಣೆ ನೀಡುತ್ತಾ ದೇವತೆಗಳನ್ನು ಸದಾ ಜಾಗ್ರತವಾಗಿಡಲು ಭಕ್ತರು ಹೆಚ್ಚು ಹೆಚ್ಚು ಜನ ದೇವದಾಸಿಯರನ್ನು ಆತನ ಸೇವೆಗೆ ಕಾಣಿಕೆಯಾಗಿ ನೀಡಲು ಪ್ರೇರಣೆಗೆ ಒಳಪಡಿಸಿದರು.

ಆರ್ಯರ ಕೃತಿಯಾದ ಋಗ್ವೇದದಲ್ಲಿ 'ಕನ್ಯಾಕುವರ' ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುವ ಗಣಿಕೆಯರು, ವಿಂಧ್ಯಪರ್ವತದ ಗುಹೆಯಲ್ಲಿ ಸಿಗುವ ಸಂತಾನಕಾ, ದಾಸಿಕುಮಾರಿ, ಮುಂತಾದ ಪ್ರಾಕೃತ ಶಬ್ಧಗಳು ದೇವದಾಸಿಯ ಸಮಾನಾರ್ಥಕ ಶಬ್ಧಗಳೇ, ದೇವದಾಸಿಯಾಗಿದೆ. ದೇವದಾಸಿಯರನ್ನು ಪುರೋಹಿತರು ರಾಜರಿಂದ ಪಡೆದ ಬಳುವಳಿ. ಋಗ್ವೇದದಲ್ಲೂ ಆನಂತರ ಬರವಣಿಗೆಗಳಲ್ಲೂ, ರಾಜರ ಹಾಗೂ ಪ್ರಜೆಗಳ ಆಶ್ರಯ ಪಡೆದಿದ್ದ ವೇಶ್ಯೆಯರ, ಗಣಿಕೆಯರ ಹಾಗೂ ನಾಯಕಸಾನಿಯರ ಪ್ರಸ್ತಾಪಗಳು ಇವೆ.

**ಕಾವ್ಯಯುಗ :** ಪತಿಯ ಎದುರಿನಲ್ಲಿ ಪತ್ನಿ ತುಚ್ಛಳಾಗಿಯೇ ಉಳಿದಿದ್ದಾಳೆ. ದಾಸಿಯರಿಗೆ ಅವಳು ಮೇಲ್ವಿಚಾರಕಳೂ ಆಗಿದ್ದಾಳೆ. ಅವಳ ಗಂಡನ ಬಿಸಿ ಹೆಣ್ಣುಗಳಿಗೆ ಅಥವಾ ಉಪಪತ್ನಿಯರು ಅವಳಿಗೆ ಪ್ರತಿ ಸ್ಪರ್ಧಿಗಳೂ ಹೌದು. ತನ್ನ ಹೆಂಡತಿಯ ಸುತ್ತಲೂ ಪಾವಿತ್ರ್ಯತೆಯ ಬೇಲಿ ಹಾಕಿ, ಶ್ರೀಮಂತರು ಹೇಗೆ ತನ್ನ ನಲ್ಲೆಯೊಂದಿಗೆ, ಅಥವಾ ಮತ್ತೊಬ್ಬನ ಪತ್ನಿಯೊಂದಿಗೆ ಮಲಗಿರುತ್ತಾನೆ. ಹಾಗೆ ಕಾವಲುಗಾರನು ಹೊರಗೆ ಕಾವಲು ನಿಂತಿರುತ್ತಾನೆ. ಅರುಣೋದಯದ ಮೊದಲು ಮಬ್ಬು ಕಿರಣಾವಳಿಗಳು ಕಾಣಿಸಿಕೊಳ್ಳುತ್ತಿದ್ದಂತೆ ಶ್ರೀಮಂತನು ಯಾರಿಗೂ ಕಾಣದಂತೆ ತಪ್ಪಿಸಿಕೊಂಡು ಹೋಗಲು ಅನುವಾಗುವಂತೆ ಕಾವಲುಗಾರನು ಅವನಿಗೆ ಎಚ್ಚರಿಕೆಯ ಕರೆ ನೀಡುತ್ತಾನೆ ಎಂಬುದನ್ನು 'ಅಲ್ಬಾಸ್'ಗಳು ಪ್ರಾವೆನ್ಸ್ ಪ್ರಾಂತ್ಯದ ಪ್ರೇಮಕಾವ್ಯಗಳಲ್ಲಿ ಹೇಳಿದ್ದಾರೆ. ಇಂತಹ ಘಟನೆಗಳಿಂದ ಕೂಡಿದ ಸಾಮಾಜಿಕ ವ್ಯವಸ್ಥೆ ಇದು. ಮನೆಯಲ್ಲಿ ಸವತಿಯರ ಪ್ರವಾಹ ಉಕ್ಕಿ ಹರಿಯುತ್ತಿತ್ತು. ರಾಜರು ತಮ್ಮ ಪರಿಜನರಿಗೆ ತಮ್ಮ ಪುರೋಹಿತರಿಗೆ ಹಸು, ಎಮ್ಮೆ, ಕುದುರೆಗಳ ಜೊತೆಗೆ ರಥಗಳಲ್ಲಿ ತುಂಬಿ ತುಂಬಿ ದಾಸಿಯರನ್ನು ದಾನವಾಗಿ ಕೊಡ ತೊಡಗಿದರೆನ್ನಲಾಗಿದೆ. ರಾಜ 'ತ್ರಸದಸ್ಯು' ಸೌಭರ್ಯ ಕಣ್ವನಿಗೆ '೫೦' ಮಂದಿ ದಾಸಿಯರನ್ನು ದಾನಮಾಡಿದ. ಕಕ್ಷಿವಾನ್, ಜಾಶಿಜ, ವತ್ಸ ಮೊದಲಾದ ಅನೇಕ ಆಚಾರವಂತರಾದ ಋಷಿ ಮುನಿಗಳೆಲ್ಲ ಇಂಥ ಬೆಳವಣಿಗೆಯ ಫಲವಾಗಿ ಜನ್ಮತಳೆದರು.

ಋಷಿಯಾಗಿದ್ದ ಕಕ್ಷೀವಾನನೂ ವರದಕ್ಷಿಣೆಯಾಗಿ ರಥಗಟ್ಟಲೆ ದಾಸಿಯರನ್ನು ಪಡೆದನು. ಅನುಷ್ಠಾನ ರೂಪದಲ್ಲಿ ವಿವಾಹ ನಡೆಯುತ್ತಿದ್ದುದ್ದು ಆರ್ಯನಾರಿಯರೊಂದಿಗೆ ಮಾತ್ರ. ಆದರೆ ದಾಸಿಯರಿಗೂ 'ವಧೂ' ಎಂಬ ಹೆಸರನ್ನು ಕೊಡುತ್ತಿದ್ದುದ್ದಕ್ಕೆ ಇನ್ನೊಂದು ಕಾರಣವೆಂದರೆ, ಮದುವೆಯಾಗದೆಯೂ ಕಾನೂನು ಬದ್ಧವಾದ ಮಾತೃತ್ವದ ಅಧಿಕಾರ ಅವರಿಗೆ ಲಭ್ಯವಾಗಬೇಕೆಂಬುದೇ ಆಗಿದೆ.

ಅಲೆಕ್ಸಾಂಡರ್ ಭಾರತದ ಮೇಲೆ ಆಕ್ರಮಣ ಮಾಡಿದ ಕಾಲದಲ್ಲಿ ತಕ್ಷಶಿಲೆಯ ಪೇಟೆಯಲ್ಲಿ ದಾಸ, ದಾಸಿಯುರನ್ನು ಮಾರಲಾಗುತ್ತಿತ್ತು. ತೈಮೂರ್ ಮೊದಲಾದವರು ಭಾರತದಿಂದ ಲಕ್ಷಗಟ್ಟಲೆ ದಾಸರನ್ನು ಕೊಂಡೊಯ್ದರು. ಇದರಿಂದ ಮಧ್ಯ ಮತ್ತು ಪಶ್ಚಿಮ ಏಷ್ಯಾದಲ್ಲಿ ದಾಸರ ಸಂಖ್ಯೆ ಹೆಚ್ಚಿತು. ಅಂದರೆ ೬೦ ಪೈಸೆಗೆ ಒಬ್ಬ ದಾಸಿ, ಉಪಪತ್ನಿಯನ್ನು ಕೊಳ್ಳಬಹುದಿತ್ತು. ೩೦ ಪೈಸೆಗೆ ಉಪಪತ್ನಿ ದಾಸಿಯರ ಮಕ್ಕಳನ್ನು ಕೊಳ್ಳಬಹುದಿತ್ತು.

ಹೀಗೆ 'ದಾಸ' ರೂಪದ ಕಾಮನ ಸಾಧನವಾದ ಸ್ತ್ರೀಯರು ಧರ್ಮದ ಹೆಸರಿನಲ್ಲಿ ವ್ಯಭಿಚಾರ ಮಾಡುವುದು ರೂಢಿಗೆ ಬಂದಿತು. ಪುರೋಹಿತರು ಸೇವಿಸಿದ ದೇವರುಗಳ ಲೈಂಗಿಕ ಸಂಬಂಧಗಳಲ್ಲೇ ನೈತಿಕ ಸಂಬಂಧಗಳನ್ನು ಅವರ ದೇವರುಗಳಲ್ಲಿ ಮತ್ತು ವೀರರಲ್ಲಿ ಬಳಕೆಯಲ್ಲಿದ್ದುದ್ದನ್ನು ಹಿಂದೂ ಧರ್ಮ ಗ್ರಂಥಗಳು ದಾಖಲಿಸಿವೆ. ಉದಾಹರಣೆಗೆ ಪಾಂಡುರಾಜ ಮಕ್ಕಳನ್ನು ಪಡೆಯುವುದಕ್ಕಾಗಿಯೇ ಮಡದಿಯರಾದ ಕುಂತಿ ಮತ್ತು ಮಾದ್ರಿಯರನ್ನು ಇನ್ನೊಬ್ಬರ ಜೊತೆ ಮಲಗಲು ಹೇಳಿದ ಕುಂತಿ ತನ್ನ ಕೌಮಾರ್ಯದಲ್ಲೇ ಸೂರ್ಯನಲ್ಲಿಗೆ ಹೋಗಿ ಮಗುವನ್ನು ಪಡೆದಳು. ಸೃಷ್ಟಿಕರ್ತನಾದ ಅಥವಾ ಪ್ರಜಾಪತಿಯಾದ 'ಬ್ರಹ್ಮ' ತನ್ನ ಮಗಳು 'ಶಾರದೆ'ಯನ್ನು ಮದುವೆಯಾದ ಮತ್ಸ್ಯ ಮತ್ತು ವಾಯು ಪುರಾಣಗಳು ಬ್ರಹ್ಮನ ಬಗ್ಗೆ ಇದನ್ನೆ ಹೇಳುತ್ತವೆ. 'ಮನು' ತನ್ನ ಮಗಳಾದ 'ಇಳೆ'ಯನ್ನು ಮದುವೆಯಾದ ಹಾಗೆ 'ಜಹ್ನುವು' ಮಗಳಾದ 'ಜಾಹ್ನವಿ'ಯನ್ನು ವಿವಾಹವಾದ ದಕ್ಷನು ಬ್ರಹ್ಮನ ಮಗನೆಂದು, ಬ್ರಹ್ಮನು ದಕ್ಷನ ಮಗಳನ್ನು ಕೂಡಿ ಇದರ ಫಲವೇ ಪ್ರಸಿದ್ಧನಾದ 'ನಾರದ'ನ ಜನನ. ಇಂತಹ ಸಂಬಂಧಗಳೆಲ್ಲ ಆಗಿನ ಕಾಲದಲ್ಲಿ ಸಾಧ್ಯವಾಗಿತ್ತು.

ಪಿತೃ ಪ್ರಧಾನ ವ್ಯವಸ್ಥೆಯ ನೀತಿ ನಿಯಮಗಳು ತಿಳಿಯಲು ಮೂಢನಂಬಿಕೆಗಳ ಕಂತೆಯಾದ 'ಪುರಾಣ'ಗಳು ಚರಿತ್ರೆಗೆ ಬಹಳ ಸಹಾಯಕವಾಗಿವೆ. ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಬಂದ ಚರಿತ್ರಾಕಾರನಾದ 'ವ್ಯಾಸನು' ಮಾನವ ಪ್ರಜಾಪತಿಯಿಂದಲೇ ಪ್ರಾರಂಭಿಸುತ್ತಾನೆ. ಇದರಲ್ಲಿ ಸೋತ ಮೂಲ ಪ್ರಜಾಪತಿ ಮತ್ತು ಮಕ್ಕಳನ್ನು ತಾಯಿಯ ಹೆಸರಿನಿಂದಲೇ ಗುರುತಿಸ ಬೇಕಾಗುತ್ತಿತ್ತು. ಹೀಗೆ ಪುರುಷ ಚರಿತ್ರಾಕಾರ ಆ ಕಾಲಕ್ಕಾಗಲೇ ಮಹಿಳೆಯನ್ನು ದಾಸ್ಯಕ್ಕೆ ತಳ್ಳಿದ ಸಮಾಜವನ್ನು ಎದುರು ಹಾಕಿಕೊಂಡು ಹೆಂಗಸು ತನ್ನ ಮೂಲ ಪ್ರತಿಷ್ಠೆಯನ್ನು ವ್ಯಕ್ತಮಾಡಿ ಚರಿತ್ರೆಯಲ್ಲಿ ದಾಖಲಿಸುತ್ತಾನೆ.

ಮಹಾಭಾರತದಲ್ಲಿ ದ್ರೌಪದಿ ಅಲ್ಲದೇ ಪ್ರತಿ ಪಾಂಡವರಿಗೂ ಒರ್ವ ಹೆಂಡಂದಿರಿದ್ದರು. ಪಾಂಡವರು ತಮ್ಮ ಹೆಂಡತಿಯ ಬಗೆಗಿನ ನಿಷ್ಠೆಯನ್ನು ಎಷ್ಟು ಸಾಧ್ಯವೋ ಅಷ್ಟು ಮುರಿದರೂ ದ್ರೌಪದಿ ಅದೆಲ್ಲವನ್ನೂ ಮೌನದಿಂದ ಸಹಿಸಬೇಕಾಯಿತು. ಏಕೆಂದರೆ, ಆ ಕಾಲಕ್ಕಾಗಲೇ ಹೆಣ್ಣು ತನ್ನ ಸ್ವಾತಂತ್ರ್ಯ ಮತ್ತು ಸ್ಥಾನವನ್ನು ಕಳೆದುಕೊಂಡಿದ್ದಳು. ಈ ಸ್ಥಿತಿಯಿಂದಲೇ ಪಾಂಡವರು ದ್ರೌಪದಿಯನ್ನು ಕೌರವನಿಗೆ ಪಣವಾಗಿಡಲು ಸಾಧ್ಯವಾಯಿತು. ಮಹಾಕಾವ್ಯಗಳ ಕಾಲದಲ್ಲಿ ಹೆಂಗಸರನ್ನು ಅಪಹರಿಸುವುದು ಮತ್ತು ಮಾರಾಟ ಮಾಡುವುದು ಸಾಮಾನ್ಯವಾಗಿತ್ತು. ಉದಾಹರಣೆಗೆ ಕೃಷ್ಣ ರುಕ್ಮಿಣಿ, ಅರ್ಜುನನಿಂದ ಸುಭದ್ರೆ, ಅನಿರುದ್ಧನಿಂದ ಉಷಾ, ಪ್ರದ್ಯುಮ್ನನಿಂದ ಪಾರ್ವತಿ, ನಿಶುಂಭನಿಂದ ಭಾನುಮತಿ, ಅಂಬಿ ಅಂಬಾಲಿಕೆ, ಭೀಷ್ಮ ಮುಂತಾದವರ ಪ್ರಕರಣಗಳು ಅತ್ಯಂತ ಗಮನಾರ್ಹವಾಗಿವೆ.

ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ ಜಾನುಶ್ರುತಿಯ ಕಥೆಯನ್ನು ಇಲ್ಲಿ ಗಮನಿಸಬಹುದು. ಜಾನುಶ್ರುತಿ ಎಂಬ ಅರಸನಿಗೆ ಒಮ್ಮೆ ಪಕ್ಷಿಗಳೆರಡರ ಸಂವಾದ ಕೇಳುವ ಅವಕಾಶ ಲಭಿಸಿತು. ಅವು 'ರೈಕ್ವ'ನೆಂಬ ಜ್ಞಾನಿಯ ಬಗ್ಗೆ ಹೊಗಳುತ್ತಿದ್ದುದ್ದನ್ನು ಕೇಳಿ ಅವನ ಬಗ್ಗೆ ಆದರ ಹುಟ್ಟಿ ರೈಕ್ವನಿಗೆ ಅನೇಕ ಕಾಣಿಕೆಗಳನ್ನು ನೀಡಿ ತನಗೆ ಜ್ಞಾನೋಪದೇಶ ಮಾಡಲು ಕೋರಿದ. ಆಗ ರೈಕ್ವನು ನಿರಾಸಕ್ತನಾಗಿರಲು ತನ್ನ ಮಗಳನ್ನು ದಕ್ಷಿಣೆಯಾಗಿ ಕೊಡಲು ಉತ್ಸುಕನಾದ. ಹೀಗೆ ಅಪ್ಪನ ಜ್ಞಾನ ತೃಷೆಗೆ ಶುಲ್ಕವಾದ ಪರಿಸ್ಥಿತಿ ಆ ಕಾಲದಲ್ಲಿ ಹೆಣ್ಣಿಗಿತ್ತು ಎಂಬುದು ದೇವದಾಸಿಯಂತಹ ಪದ್ಧತಿಗೆ ಉಪೋದ್ಘಾತದಂತಿದೆ. ಹಾಗೆ ಯಯಾತಿಯ ಮಗಳು ಮಾಧವಿಯ ಪ್ರಕರಣವನ್ನು

ಇಲ್ಲಿ ನೋಡಬಹುದಾಗಿದೆ.

ಏಕಪತ್ನಿತ್ವದ ನಿಬಂಧನೆಗಳೆಲ್ಲಾ ಹೆಂಗಸರಿಗೆ ಮಾತ್ರ ಅನ್ವಯವಾಗಿ, ಪುರುಷರ ಅನೈತಿಕ ಲೈಂಗಿಕ ಸಂಬಂಧಗಳಿಗಾಗಿ ಧರ್ಮದ ಹೆಸರಿನಲ್ಲಿ ದೇವದಾಸಿ ಸಂಪ್ರದಾಯವನ್ನು ವ್ಯಾಪಕವಾಗಿ ಬಳಸಲಾರಂಭಿಸಿದ. ಆರ್ಯ ಸಮಾಜದ ಕಾನೂನು ತಜ್ಞರು ಮತ್ತು ಬರಹಗಾರರಿಗೆ ಸ್ತ್ರೀಯರ ಭಾವನೆಗಳಾಗಲಿ, ಪರಿಶುದ್ಧತೆಗಳಾಗಲಿ ಮುಖ್ಯವಾಗಿರಲಿಲ್ಲ. ಗಂಡಸಿನ ಆಸ್ತಿಗೆ ಯಾವ ರೀತಿಯಿಂದಲಾದರೂ ಉತ್ತರಾಧಿಕಾರಿಯನ್ನು ಪಡೆಯುವ ಉದ್ದೇಶ ಮುಖ್ಯವಾಗಿತ್ತು. ಈ ನಿಟ್ಟಿನಲ್ಲಿ ಗಂಡನಿಂದ ಮಕ್ಕಳನ್ನು ಪಡೆಯುವುದು ಸಾಧ್ಯವಾಗದೇ ಹೋದರೆ 'ನಿಯೋಗ ಪದ್ಧತಿ' ಮೂಲಕ ಯಾವನೇ ಆಗಂತುಕನನ್ನಾಗಲಿ, ಬ್ರಾಹ್ಮಣ ಅಥವಾ ಋಷಿ ಸಾಮರ್ಥ್ಯವಿರುವವನ್ನು ಕೂಡಿ ಮಕ್ಕಳನ್ನು ಪಡೆಯಲು ಹೇಳಲಾಗುತ್ತಿತ್ತು. ಉದಾಹರಣೆಗೆ ವೇದ ವ್ಯಾಸರು ವಿಚಿತ್ರವೀರ್ಯನ ಹೆಂಡಂದಿರನ್ನು ಕೂಡದೇ ಇರುತ್ತಿದ್ದರೇ ಪ್ರಖ್ಯಾತ ಪಾಂಡವ ವಂಶದ ಚರಿತ್ರೆಯು ಬೆಳಕನ್ನೇ ಪಡೆಯುತ್ತಿರಲಿಲ್ಲ. ದೀರ್ಘತಮನು ಬಲಿಯ ಹೆಂಡಂದಿರನ್ನು ಒಬ್ಬ ಭಿಕಾರಿ ಬ್ರಾಹ್ಮಣನು ಶರದಂದಯಾನನ ಹೆಂಡತಿಯನ್ನು ಕೂಡಿದ ಪ್ರಕರಣಗಳು ಚಿರನೂತನ.

**ವೈದಿಕ ಧರ್ಮದ ಸುಳ್ಳು ಸೃಷ್ಟಿಗಳು**

ಧರ್ಮ, ದೇವರು, ಸಂಸ್ಕೃತಿ ಪರಂಪರೆಯ ಬೆನ್ನಲ್ಲಿಯೇ ಭೀಕರವಾದ ಕಪ್ಪ ಕರಾಳ ಸಂಸ್ಕೃತಿ, ಹೇಯವಾದ, ದುರಾಚಾರ, ಅನಾಚಾರ, ಕಂದಾಚಾರಗಳು ಇಡೀ ಭವ್ಯ ಭಾರತೀಯ ಸಂಸ್ಕೃತಿಯ ಪರಂಪರೆ ಅಳಿಸಲಾಗದಂತೆ ಅಂಟಿಕೊಂಡು ಬಂದಿರುವ ಕಪ್ಪು ಚುಕ್ಕೆಗಳಾಗಿ, ಕುರುಹುಗಳಾಗಿ, ಜಾತೀಯತೆ, ಅಸ್ಪೃಶ್ಯತೆ, ಅಸಮಾನತೆ, ದೇವದಾಸಿಪದ್ಧತಿ, ವೇಶ್ಯಾವಾಟಿಕೆ ಮುಂತಾದವು ದುರ್ಗಂಧದಿಂದ ನಾರುತ್ತಿರುವುದು ಗೊತ್ತಾಗಬಾರದೆಂದೋ ಏನೋ ಇದಕ್ಕೆ ಧರ್ಮ ಮತ್ತು ದೇವರ ಸುಗಂಧದ ಪರಿಮಳವನ್ನು ಮೇಲೆ ಲೇಪಿಸಿಲಾಗಿದೆ. ಇವುಗಳ ಆಧಾರದಲ್ಲಿಯೇ ಭೀಭತ್ಸವೆನಿಸುವ ಕರಾಳ ಪದ್ಧತಿಗಳೂ ಪುರೋಹಿತಶಾಹಿಯ, ಅಧಿಕಾರ ಶಾಹಿಯ, ಅಟ್ಟಹಾಸಗಳು ಮುಗ್ಧ ಅಜ್ಞಾನ, ಶೂದ್ರ, ಅಸ್ಪೃಶ್ಯ ಜನಾಂಗದ ಸ್ತ್ರೀಪುರುಷರ ಮೇಲೆ ಪ್ರಯೋಗಿಸಲ್ಪಟ್ಟು, ಪರಿಣಾಮ ಅವರ ಆಕ್ರಂದನ, ನೋವು, ನರಳಾಟಗಳು ಚಿತ್ಕರಿಸುತ್ತಲೇ ಬೆಳೆದಿವೆ.

'ದೀಪದ ಕೆಳಗೆ ಕತ್ತಲು' ಎಂಬ ಅನುಭವದ ಗಾದೆಯಂತೆ 'ಸರ್ವೇಜನಾಃ ಸುಖಿನೋಭವಂತು' ಎಂದು ಸಾರಿದ ವಿಶಾಲ ಮನೋಭಾವನೆ ಹೊರ ಹೊಮ್ಮಿಸಿದ ಧರ್ಮ, ಸಂಸ್ಕೃತಿಗಳ ಅಂತರಾಳದಲ್ಲಿ 'ಸ್ವಜನಾಃ ಸುಖಿನೋಭವಂತು' ಎಂಬ ವಿಕೃತ ಅಟ್ಟಹಾಸದ ದುರಾಚಾರದ ಕೀಳು ಆಚರಣೆಯು ಬೆಳೆದು ಬಂದಿದೆ. ಸ್ವಾರ್ಥ ಪುರುಷನ ಪುರೋಹಿತಶಾಹಿ ಮನೋಭಾವದ ಕುತಂತ್ರದ ಫಲಗಳಾಗಿ ಜಾತೀಯತೆ, ದೇವದಾಸಿ ಪದ್ಧತಿಯ ಹೆಸರಿನಲ್ಲಿ ವಿಕೃತ ವೇಶ್ಯಾ ಪದ್ಧತಿ ಇದರ ಫಲವಾಗಿ ಬೆಳೆದು ಬಂದಿವೆ. ಇವು ಭವ್ಯ ದಿವ್ಯ ಭಾರತೀಯ ಧರ್ಮ, ಸಂಸ್ಕೃತಿ, ಪರಂಪರೆಗಳಿಗೆ ಅಂಟಿಕೊಂಡಿರುವ ಕಳಂಕಗಳಾಗಿಯೇ ಶಾಶ್ವತವಾಗಿ ಉಳಿದುಬರಲು, ಇಂದಿಗೂ ಉಳಿಯಲು ಮುಂದುವರೆಯಲು ಕಾರಣವಾಗಿವೆ.

ದೇವದಾಸಿಯರೊಡನೆ ಲೈಂಗಿಕ ಮಿಲನದಿಂದ ದೇವತೆಗಳ ಜಾಗ್ರತಿಗೆ ಕಾರಣವಾಗಿ, ವಿಶ್ವಶಾಂತಿ, ಮೋಕ್ಷ ಸಾಧನೆ ಎಂದು ಹೇಳುತ್ತಾ ತಮ್ಮ ವೈಯಕ್ತಿಕ ಸಾಧನೆಯನ್ನು ಮರೆಮಾಚುತ್ತಾ ಈ ರೀತಿಯ ಇನ್ನು ಹಲವು ಕಟ್ಟು

ಕತೆಗಳನ್ನು ಸೃಷ್ಟಿಸಿದರು. ಅಂದರೆ ಹಂತ ಹಂತವಾಗಿ ದೇವದಾಸಿ ಪದ್ಧತಿ ಬೆಳೆದುಕೊಂಡು ಬರಲು ಕಾರಣ ಮನು ಶಾಸ್ತ್ರದ ಮೂಲಕ ಭಾರತೀಯ ಆದಿ ಪುರೋಹಿತನ ವೈದಿಕ ಮನಸ್ಸನ್ನು ಉತ್ಪನನ ಮಾಡಿದಾಗ ನಿಜವಾದ ಮೂಲ ಕಾರಣ ಅಡಗಿರುವುದು ಗೊತ್ತಾಗುತ್ತದೆ. "ಯುದ್ಧ ಹುಟ್ಟುವುದು ಸರ್ವಾಧಿಕಾರಿಯ ಮನಸ್ಸಿನಲ್ಲಿ" ಎಂಬಂತೆ ದೇವದಾಸಿ ಹುಟ್ಟಿನ ಬೀಜ ವೈದಿಕ ಮನಸ್ಸಿನಲ್ಲಿ "ಬೆವರು ಸುರಿಸದೇ ಬೆಣ್ಣೆ ಹೊಡೆಯುವ, ಕೈಕೆಸರಾಗದೇ ಬಾಯಿ ಮೊಸರು ಮಾಡಿಕೊಂಡು ಅದು ಕರಗಲು ಮಾಡಿದ ಕರಾಮತ್ತೇ ಈ ದೇವದಾಸಿ ಪದ್ಧತಿ"[೧೫] ಎಂದು ಡಾ.ಚನ್ನಣ್ಣವಾಲೀಕರ್ ಹೇಳಿದ್ದಾರೆ. ಧರ್ಮ, ದೇವರ ಹೆಸರಿನಲ್ಲಿ ತನ್ನ ಹಾದರ ಯಾರೂ ಪ್ರಶ್ನಿಸಲಾರರು ಎಂದು ಅವರು ಸೃಷ್ಟಿಸಿದ ಮಾಯಾಜಾಲ, ಕಣ್ಣಿಗೆ ಕಾಣದ, ನಿರ್ಗುಣ, ನಿರಾಕಾರ ದೇವರಿಗೆ ಆಕಾರ ನೀಡಿ, ಆತನಿಗೆ ಉಪಪತ್ನಿಯರನ್ನು ಸೃಷ್ಟಿಸಿ ತನ್ನೆಲ್ಲಾ ವಿಕೃತ ಬಯಕೆಗಳನ್ನು ದೇವರ ಹೆಸರಿನಲ್ಲಿ ಈಡೇರಿಸಿಕೊಳ್ಳುವ ಮಾಯಾಜಾಲವನ್ನು ಸೃಷ್ಟಿಸಿದ. ದೇವರ ಸೇವೆ, ಪೂಜೆ ಎಂಬ ಹೆಸರಿನಲ್ಲಿ ಅಂಗ ಭೋಗ, ರಂಗಭೋಗಗಳ ವ್ಯವಸ್ಥೆ, ಕಲೆಯ ಹೆಸರಿನಲ್ಲಿ ಕಲಾವಿದೆಯರ ಮೇಲೆ ವ್ಯಭಿಚಾರ ಪ್ರಾರಂಭವಾದುದರ ಫಲ ಸ್ವರೂಪವೇ ದೇವದಾಸಿ ಪದ್ಧತಿಯ ಇನ್ನೊಂದು ಮುಖವಾಗಿದೆ. ಕಾಮುಕರ ಕಾಮ ಪಿಪಾಸೆಗೆ ಅನಿವಾರ್ಯವಾಗಿ ಬಲಿಯಾಗುವಂತೆ ಮಾಡಿಕೊಂಡು ಬರಲಾಗಿದೆ. ದೇವದಾಸಿಯರೆಂದರೆ ಪ್ರಾರಂಭದ ಹಂತದಲ್ಲಿ ಗೌರವದ ಹೆಸರಿನಲ್ಲಿ ಪ್ರಾರಂಭಗೊಂಡ ಈ ಪದ್ಧತಿ ಬರುಬರುತ್ತಾ ಪಾತ್ರದವರು, ಬಸವಿಯರು, ಸೂಳೆಯರು, ಗಣಿಕೆಯರು ಎಂಬ ಬದಲಾವಣೆಯೊಂದಿಗೆ ತನ್ನ ದುರಂತದ ಪರಾಕಾಷ್ಠೆ ಮುಟ್ಟಿತೆನ್ನಬಹುದು.

**ಸಂಗಮ ಸೃಷ್ಟಿಯ ಬಲವರ್ಧನೆ :** ಭೂಮಿ ಸ್ತ್ರೀಯ ಅಂಗವೆಂದು, ಇದರಿಂದಲೇ ಮನುಷ್ಯನಿಗೆ ಬೇಕಾದ ಮರ, ಗಿಡ, ಕಾಯಿ, ಹಣ್ಣು ಮುಂತಾದವುಗಳು ಹುಟ್ಟುತ್ತವೆ. ಇದೇ ಮಾತೃ ಭಾಗ. ಇನ್ನೂ ಪುರುಷನಿಗೆ ಸೂರ್ಯನನ್ನು ಹೋಲಿಸಿ, ಭೂಮಿ ಸೂರ್ಯನ ಸಂಗಮ ಬಹು ಪವಿತ್ರವಾದುದು. ಇದರ ಫಲವೇ ಸಮೃದ್ಧತೆ ಆದರೆ ಸೂರ್ಯ ಸಾಯಂಕಾಲ ಕ್ಷೀಣಿಸುತ್ತಾನೆ. ದಿನವೆಲ್ಲಾ ಸುತ್ತಾಡಿ ಬಂದ ಮನುಷ್ಯನಿಗೆ ಹೇಗೆ ಬಲಹೀನತೆಗೊಳಗಾಗುತ್ತಾನೋ ಹಾಗೆ ನಮ್ಮನ್ನು ಸೃಷ್ಟಿಸಿದ ದೇವರು ಬಲಹೀನನಾಗುತ್ತಾನೆ. ಸುಸ್ತಾದ ದೇವರು ಅಷ್ಟು ಕೆಲಸ ಮಾಡಲಾರ. ಕೆಲಸ ಮಾಡದಿದ್ದರೆ ಸಂಗಮ ಕಾರ್ಯಕ್ಕೆ ಅಡ್ಡಿಯಾಗಿ, ಫಲಕೊಡುವ ಸೃಷ್ಟಿಸುವ ಶಕ್ತಿ ಕುಂಠಿತವಾಗುತ್ತದೆ. ಹಾಗಾದರೆ ಮಾನವನು ಏನು ಮಾಡಬೇಕು? ಎಂದು ಆಲೋಚಿಸಿ, ಬಲಹೀನನಾದ ದೇವರಿಗೆ ಬಲಕೊಡುವ ಕೆಲಸಕ್ಕೆ ಕೈ ಹಾಕಿ, 'ಸಂಧ್ಯಾವಂದನೆ'ಯನ್ನು ಆಚರಣೆಗೆ ತಂದನು. ಯಾತ್ರೆ ಮಾಡುವ ಸೂರ್ಯನಿಗೆ ಅಡೆತಡೆಗಳನ್ನು ತಡೆದು ಮಂದೇಹರೆಂಬ ರಾಕ್ಷಸರು ಸೂರ್ಯನ ಕುದುರೆಗಳನ್ನು ತಡೆಯುತ್ತಾರೆ. ಸೂರ್ಯ ಕಷ್ಟಕ್ಕೆ ಸಿಲುಕುತ್ತಾನೆ. ಆಗ ಪ್ರಪಂಚದ ಗತಿ ಏನು? ಮೂರು ಲೋಕದಲ್ಲಿ ನಡೆಯುವ ಪುಣ್ಯದ ಕಾರ್ಯಗಳು ಏನಾದವು? ಆದ್ದರಿಂದ ಸೂರ್ಯನಿಗೆ ಬಲಕೊಟ್ಟು, ಬಂದೋಬಸ್ತು ಮಾಡಲು ಉದಯ, ಮಧ್ಯಾಹ್ನ, ಸಾಯಂಕಾಲ ಎಂದು ಸಂಧ್ಯಗಳನ್ನಿಟ್ಟುಕೊಂಡು ಸಂಧ್ಯವಂದನೆ ಮಾಡಿ, ನೀರನ್ನು ಮೇಲಕ್ಕೆ ಎಸೆದು ಆ ನೀರಿನ ಬಿಂದುಗಳು ಅತ್ಯಂತ ತೀಕ್ಷ್ಣವಾದ ಬಾಣಗಳಾಗಿ ಹೋಗಿ ಆ ಮಂದೇಹ ರಾಕ್ಷಸರನ್ನು ಕೊಲ್ಲುತ್ತವೆ. ಸೂರ್ಯನು ತಡೆ ಇಲ್ಲದೇ ತನ್ನ ಯಾತ್ರೆಯನ್ನು ಇದರಿಂದ ಸಾಗಿಸುತ್ತಾನೆ ಎಂಬ ಭಾವನೆಯನ್ನು ಹುಟ್ಟು ಹಾಕಲಾಗಿದೆ.

**ದೇವರ ಸೃಷ್ಟಿ**

ಅಮೂರ್ತನಾದ ದೇವರನ್ನು ಸೃಷ್ಟಿಸಿ ವಿವಿಧ ಪಾತ್ರಗಳನ್ನು ಒಳಗೊಂಡ ಅನೇಕ ದೇವರುಗಳು ಉಪದೇವತೆಗಳು ಅತಿಮಾನುಷ ಶಕ್ತಿಗಳು ಮತ್ತು ಜನಸಾಮಾನ್ಯರನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ದುಷ್ಟ ಪ್ರೇತಗಳನ್ನು ಸೃಷ್ಟಿಸಲಾಯಿತು. ಅವುಗಳಿಗೆ ರೂಪವನ್ನು ಕೊಟ್ಟು, ಗುಣಗಳನ್ನು ಕಲ್ಪಿಸಿ, ಒಂದು ದೊಡ್ಡ ಸ್ಥಾನವನ್ನು ಕೊಟ್ಟು ಆ ದೇವರಿಗೆ ಮಾನವ ಸಹಾಯ ಮಾಡುವುದು ದೇವರಿಗೆ ಬೇಕಾದುದನ್ನು ದಾನ ಮಾಡುವುದು, ಅಶ್ಲೀಲವೆಲ್ಲವೂ ದೇವತಾರ್ಪಣೆ ಎನ್ನುವ ಹಾಗೆ ಅಕ್ರಮ ಲೈಂಗಿಕ ಕೆಲಸಗಳನ್ನೆಲ್ಲಾ ದೇವಾರ್ಪಣೆ ಎಂದು ಸಂಗಮ ಕಾರ್ಯಕ್ಕೆ ಕುಮ್ಮಕ್ಕು ಕೊಡುವ ಭಗವಂತನ ಕಾರ್ಯಗಳೆಲ್ಲವೂ ಸಂಗಮವೇ ಆದ್ದರಿಂದ ದೇವರುಗಳ ಆಶೀರ್ವಾದ ಮತ್ತು ಭೂತ ಪ್ರೇತಾದಿಗಳನ್ನು ಪ್ರಸನ್ನಗೊಳಿಸಲು ಅನೇಕ ವಿಧಾನಗಳಲ್ಲಿ ಸುಂದರ ಹುಡುಗಿಯರನ್ನು ಅರ್ಪಿಸಲು ಸಲಹೆ ನೀಡುತ್ತಿದ್ದು, ಸಂಗಮ ಎನ್ನುವುದು ಬಹು ಪವಿತ್ರವಾದ ಕೆಲಸ. ದೇವರ ಮುಖ್ಯ ಕರ್ತವ್ಯ ಅದೇ. ನಮ್ಮನ್ನು ಹುಟ್ಟಿಸಿದ ದೇವರಿಗೂ ಸೂರ್ಯನಂತೆ ಸುಸ್ತಾಗಿ ಬಲಹೀನತೆಗೆ ಒಳಗಾಗುತ್ತಾನೆ. ಆಗ ಮಹಾ ಸಂಗಮ ಕಾರ್ಯಕ್ಕೆ ಬಲ ಹೀನತೆ ಉಂಟಾಗುತ್ತದೆ. ಸುಸ್ತಾದ ದೇವರು ಆ ಕಾರ್ಯ ಮಾಡಲಾರ, ಆದ್ದರಿಂದ ಬಲವೃದ್ಧಿ ಮಾಡಲು ಬಡವಾಗಿರುವ ದೇವರನ್ನು ಪುರುಷ ಭಾಗವೆಂದು ಭಾವಿಸಿ, 'ಅಂಗ' ಎಂದು ಕರೆದು, ದೇವರ ಪುರುಷ ಅಂಗ, ದೇವಿಯ ಸ್ತ್ರೀ ಪಾಣೆಪಟ್ಟ ಯೋನಿ ಈ ವಿಧಾನವೇ 'ಲಿಂಗ ಯೋನಿ' ದೇವಸ್ಥಾನಗಳು ಈ ಎರಡರ ಸಂಗಮದ ಮಹಾಕಾರ್ಯಕ್ಕೆ ಮೂಲ ಸ್ಥಳಗಳಾಗಿದ್ದವು. ಈ ಸಂಗಮಕಾರ್ಯಕ್ಕೆ ಬಲಕೊಡುವ ಉದ್ದೇಶದಿಂದ ದೇವದಾಸಿಯರನ್ನು ಪರ ಪುರುಷರ ಲೈಂಗಿಕ ಸಂಬಂಧ ಬೆಳೆಸಿ ಆ ಮೂಲಕ ಹೆಚ್ಚೆಚ್ಚು ಸ್ತ್ರೀಯರು ದೇವದಾಸಿಯರಾಗುವಂತೆ ಅವರಿಗೆ ಸ್ವರ್ಗಕ್ಕೆ ಮಾರ್ಗ ಅಥವಾ ಮುಕ್ತಿ ಲಭಿಸುವುದೆಂದು ಹೇಳಿ ಲೈಂಗಿಕ ಶೋಷಣೆಗೆ ಒಳಪಡಲಾಯಿತು.

ಮತ್ತೊಂದು ಪುರಾಣದಲ್ಲಿ ಈ ರೀತಿಯ ವರ್ಣನೆ ಇದೆ. ವಿವಾಹದ ಅನಂತರ ಶಿವನು ಹಿಮವಂತನ ಮನೆಯಲ್ಲಿ ಅಳಿಯನಾಗಿ ಆರೈಕೆ ಮಾಡಿಕೊಳ್ಳುತ್ತಾ ಕ್ರೀಡಾಲೋಲನಾಗುತ್ತಾನೆ. ಈತನ ಸ್ವೇಚ್ಛಾವರ್ತನೆಯಿಂದ ನಿಲ್ಲಿಸುವಂತೆ ಹಿಮವಂತ ರಾಜನು ಆಲೋಚಿಸುತ್ತಾನೆ. ಈ ಸಂಗತಿ ತಿಳಿದ ಶಿವನು, ಯಾರಿಗೂ ಹೇಳದೇ 'ದಾರುಕಾವನಕ್ಕೆ' ಹೋಗುತ್ತಾನೆ. ಆ ವನದಲ್ಲಿ ಮಹಾ ಋಷಿಗಳ ಹೆಂಡತಿ ಮಕ್ಕಳನ್ನು ನೋಡಿದ ಶಿವನಿಗೆ ಕಾಮೋದ್ರೇಕವಾಗುತ್ತದೆ. ಆ ಋಷಿಗಳ ಪತ್ನಿಯರ ಪಾತಿವ್ರತ್ಯವನ್ನು ಭಂಗ ಮಾಡುತ್ತಲಿದ್ದಾನೆಂದು ಋಷಿಗಳು ಕೋಪದಿಂದ ಪ್ರತಿಕಾರ ಮಾಡಬೇಕೆಂದು ಆಲೋಚಿಸುತ್ತಾರೆ. ಈ ಸಂಗತಿ ತಿಳಿದ ಶಿವನು ತನ್ನ ಪುರುಷಾಂಗವನ್ನು ಆಕಾಶದವರೆಗೂ ಬೆಳೆಸಿ, ಬ್ರಹ್ಮಾಂಡವೆಂಬ ಬಾನುಲಿಯನ್ನು ಅಪ್ಪಳಿಸುವಂತೆ ಮಾಡಿದ ಮೇಲೆ ಎಲ್ಲಾ ಋಷಿಮುನಿಗಳು ಆ ಮಹಾಲಿಂಗಕ್ಕೆ ನಮಸ್ಕರಿಸಿ ಅಧಿಕ ಭಕ್ತಿಯಿಂದ ಸ್ತೋತ್ರ ಮಾಡಲು ತೊಡಗಿದರು. ಆಗ ಬ್ರಹ್ಮನು ಮಹಾಲಿಂಗಕ್ಕೆ ಅಭಿಷೇಕ ಮಾಡಿದ. ಆಗ ಶಿವನು ತನ್ನ ಅನುಪಮವಾದ ಈ ದಿವ್ಯಲಿಂಗವು ಅರ್ಚನೆಗೆ ಅರ್ಹವಾದುದು" ಎಂದು ಹೇಳಿದಂದಿನಿಂದ ಪೂಜೆಗೆ ಅರ್ಹವಾಯಿತೆನ್ನಲಾಗಿದೆ.

**ಸುಳ್ಳು ಸೃಷ್ಟಿಯಲ್ಲಿ ಒಂದಾದ ಬೆತ್ತಲೆ ಸೇವೆ**

ಇದನ್ನು ಅರ್ಪಣಾ ಭಾವದ ತಾತ್ವಿಕತೆಯಿಂದ ಕೂಡಿದ್ದಾಗಿದೆ ಎನ್ನುವರು. ಮುಗ್ಧ ಕೂಸಿನ ರೂಪದಲ್ಲಿ

ದೇವರೆದುರಿಗೆ ಹೋಗಬೇಕೆನ್ನುವುದು ಇದರರ್ಥ ಇದು ಕೇವಲ ಕೆಳಜಾತಿಗಳಿಗೆ ಮೀಸಲು ಮಾಡಿದ ಪದ್ಧತಿಯಾಗಿದ್ದು, ಇದನ್ನು ಬುಡಕಟ್ಟಿನವರು ಮೈಮೇಲಿನ ಮೋಹ ತೆಗೆದು ದೇವರನ್ನು ಪೂಜಿಸಬೇಕೆಂಬ ಒಳಾರ್ಥ ಎಂದು ನಂಬಿದ್ದಾರೆ. ವಾಸ್ತವದಲ್ಲಿ ಇದು ಸೂಳೆಗಾರಿಕೆಗೆ ದಾರಿ ಮಾಡಿಕೊಡುವ, ಅಮಾಯಕ ಬಡ ಹೆಣ್ಣು ಮಕ್ಕಳ ಬದುಕನ್ನು ಬಲಿ ತೆಗೆದುಕೊಳ್ಳುವ ಪದ್ಧತಿಯಾಗಿರುವುದನ್ನು ಕಾಣುತ್ತೇವೆ. ಮೇಲ್ವರ್ಗದ ಜನ ತಮ್ಮ ಮನದಾಸೆಯನ್ನು ಪುಕ್ಕಟೆಯಾಗಿ ತೀರಿಸಿಕೊಳ್ಳಲು ಸುಖಭೋಗ ಪಡೆಯಲು ಈ ಹೀನ ಸಂಪ್ರದಾಯವನ್ನು ಜನತೆಯಲ್ಲಿ ಗಟ್ಟಿಗೊಳಿಸಿದ್ದನ್ನು ಕಾಣುತ್ತೇವೆ. ಪರಶುರಾಮ ರೇಣುಕೆಯನ್ನು ಕೊಲ್ಲಲೆಂದು ಬೆನ್ನಟ್ಟಿಕೊಂಡು ಓಡುವಾಗ ತನ್ನೆಲ್ಲಾ ಬಟ್ಟೆಗಳನ್ನು ಕಳಚಿಕೊಂಡು ಶಿವನ ಗುಡಿಯಲ್ಲಿ ಬೆತ್ತಲಾಗಿ ಮುಚ್ಚಿಕೊಳ್ಳುತ್ತಾಳೆ. ಈಗಲೂ ಚಂದ್ರಗುತ್ತಿಯಲ್ಲಿ ಗುಹೆಯೊಂದಿದ್ದು ಅನಂತರ ಪರಶುರಾಮ ವರ ಪಡೆದು ತಾಯಿಯನ್ನು ಮಾತಂಗಿಯ ಮಗ ಬೀರಪ್ಪನ ಆಶ್ರಯದಲ್ಲಿ ಬಿಡುತ್ತಾನೆ. ಆದರೆ ಬೀರಪ್ಪ ಒಬ್ಬ ಕಾಮುಕ ರಾಕ್ಷಸ. ಅವನ ತಾಯಿ ಮಾತಂಗಿ ವಸ್ತ್ರಾಪಹರಣಗೊಂಡ ಎಲ್ಲಾ ಸ್ತ್ರೀಯರಿಗೂ ಬಟ್ಟೆಗಳನ್ನು ಕೊಡುತ್ತಾರೆ. ಇದು ಇಂದಿಗೂ ಬೆತ್ತಲಾಗಿ ಬಂದ ಬೆತ್ತಲೆ ಹೆಂಗಸರಿಗೆ ಮಾತಂಗಿ ದೇವಾಲಯದಲ್ಲಿ ಹೊಸ ಬಟ್ಟೆ ಕೊಡುತ್ತಾರೆ. ಎಲ್ಲಮ್ಮನ ಹರಿಕೆಯಲ್ಲಿಯೂ ಬೆತ್ತಲೆಸೇವೆ ವಿಶಿಷ್ಟಸ್ಥಾನ ಪಡೆದಿದೆ. ಬೆತ್ತಲೆಸೇವೆ ಪವಿತ್ರವಾದುದಾಗಿದ್ದು, ಭಕ್ತರು ಸಂಪೂರ್ಣ ನಗ್ನರಾಗಿ ಮರ್ಮಾಂಗಗಳಿಗೆ ಮಾತ್ರ ಬೇವಿನ ಸೊಪ್ಪಿನಿಂದ ಮುಚ್ಚಿಕೊಂಡು ಗುಡಿಯಲ್ಲಿ ಸಲ್ಲಿಸುವ ಸೇವೆಯೇ ಬೆತ್ತಲೆ ಸೇವೆ.

ಮಾರ್ಚ್ ತಿಂಗಳಲ್ಲಿ ಎಲ್ಲಾ ವಯಸ್ಸಿನ ಹೆಂಗಸರು, ಗಂಡಸರು ತಾವು ಹೊತ್ತ ಹರಕೆಯನ್ನು ಸಲ್ಲಿಸಲು ದೇವರಿಗೆ ಬೆತ್ತಲೆಯಲ್ಲಿ ಪೂಜೆ ಮಾಡಬೇಕು. ವರದಾ ನದಿಯಲ್ಲಿ ಮೊದಲು ಪ್ರಾತಃಕಾಲ ಮುಳುಗಿ ಎದ್ದು, ಮೈಮೇಲೆ ದೇವತೆಯ ಆಹ್ವಾನ ಆಗುವವರೆಗೆ ಕಾದು, ಸುಮಾರು ೫ ಕಿ.ಮಿ. ದೂರ ಓಡುತ್ತಲೇ ಎಂಟುನೂರು ಮೀಟರ್ ಎತ್ತರದ ಒಂದು ಗುಡ್ಡವನ್ನು ಹತ್ತಿ ಅಲ್ಲಿರುವ ರೇಣುಕಾಂಬೆಯನ್ನು ಬೆತ್ತಲೆಯಲ್ಲಿ ಪೂಜಿಸುತ್ತಾರೆ. ಕೆಲ ವಿಚಾರವಾದಿಗಳು ಇದರ ಒಳಮರ್ಮವನ್ನು ಅರಿತು ಬೆತ್ತಲೆ ಪೂಜೆ ತಪ್ಪೆಂದು, ಅಮಾನವೀಯವೆಂದು, ಈ ಜನರನ್ನು ಒಲಿಸಿ ಬದಲಾಯಿಸಲು ಪ್ರಯತ್ನಿಸಿದರು. ಜೊತೆಗೆ ಹಲವು ಪತ್ರಿಕೆಗಳು ಇದನ್ನು ಅಮಾನವೀಯ ಮೂಢನಂಬಿಕೆಯೆಂದು ಖಂಡಿಸಿದರು. ಆದರೂ ಇಂತಹ ಹೇಳಿಕೆಗಳಿಗೆ ಕಿವಿಕೊಡದೇ ಜನರು ಆವೇಶದಲ್ಲಿ ಬೆತ್ತಲಾಗಿ ಹುಚ್ಚು ಹಿಡಿದವರಂತೆ ತನ್ಮಯರಾಗಿ, ಇಂದಿಗೂ ಬೆತ್ತಲೆ ಸೇವೆಯನ್ನು ಆಚರಿಸುತ್ತಿದ್ದಾರೆ. ಈ ಆಚರಣೆಯ ವಿರುದ್ಧ ಕ್ರಮಕೈಗೊಳ್ಳಲು ಪೋಲೀಸ್ ಇಲಾಖೆಯ ಡಿ.ವೈ.ಎಸ್.ಪಿ ಯಂತವರನ್ನು ಕೆಲವರು ಕ್ರೌರ್ಯಕ್ಕೆ ಒಳಗಾಗಿ ಖಾಕಿ ಸಮವಸ್ತ್ರ ಕಿತ್ತೆಸೆದು, ಉಳಿದ ಬೆತ್ತಲೆ ಹರಕೆ ಹೊತ್ತವರ ಜೊತೆ ಮೆರವಣಿಗೆಯಲ್ಲಿ ಬೆತ್ತಲಾಗಿ ಓಡಿಸಿಕೊಂಡು ಹೋದರು. ಸ್ತ್ರೀ ಪೋಲೀಸ್‌ರನ್ನು ಅವರು ಬಿಡಲಿಲ್ಲ. ಅರಿಶಿಣ ಕುಂಕುಮ ಬಳಿದು ಪೋಲೀಸರ ಹೆಲ್ಮೇಟುಗಳನ್ನು, ಪ್ಯಾಂಟ್‌ಗಳನ್ನು ಬಾವುಟದಂತೆ ಬೀಸುತ್ತಾ ಕಬ್ಬಿಣ ತ್ರಿಶೂಲಗಳನ್ನು ಗಾಳಿಯಲ್ಲಿ ತಿವಿಯುತ್ತ ಉನ್ಮಾದದಲ್ಲಿ ಕುಣಿದಾಡಿದರು. ಸಮೂಹ ಸನ್ನಿಗೆ ಒಳಗಾಗಿ, ರೇಣುಕಾಂಬೆಯ ಕೋಪದಿಂದ ಇದು ಉದ್ಭವವಾದದ್ದೆಂದು ತಿಳಿದು ತೆಂಗಿನಕಾಯಿಯನ್ನು ದೇವರೆದುರು ಚಚ್ಚುವಂತೆ ಕ್ಯಾಮರಾಗಳನ್ನು ಚೂರು ಚೂರಾಗುವಂತೆ ಚಚ್ಚಿಸಿಕೊಂಡ ಪೋಟೋಗ್ರಾಫರ್‌ಗಳು ಪೆಚ್ಚಾಗಿದ್ದು ಇದೆ. ಈ ರೀತಿಯಾಗಿ ಕೆಳಜಾತಿಯ

ಜನರಲ್ಲಿ ಇಂತಹ ಮನೋಸ್ಥಿತಿಯನ್ನೇ ಧರ್ಮದ ಹಿನ್ನೆಲೆಯಲ್ಲಿ ಹುಟ್ಟು ಹಾಕಲಾಗಿದೆ.

ಈ ಬಗ್ಗೆ, ಡಾ.ಯುಆರ್. ಅನಂತಮೂರ್ತಿಯವರು "ಇಂತಹ ಬೆತ್ತಲೆ ಸೇವೆಯನ್ನು ಧಾರ್ಮಿಕ ಶ್ರದ್ಧೆಯ ಉತ್ಕಟತೆಯಲ್ಲಿ ಇರುವವರೆಂದು, ನಾವು ನೀವು ದುರದೃಷ್ಟವಶಾತ್ ಕಳೆದುಕೊಂಡಿರುವ ದೈವಿಕ ಶ್ರದ್ಧೆಯ ಉತ್ಕಟತೆಯನ್ನು ಆ ಬೆತ್ತಲೆ ಪೂಜೆಯಲ್ಲಿ ನೀವು ಏಕೆ ಕಾಣುವುದಿಲ್ಲ? ಇದಕ್ಕೆ ಏಕೆ ಭಾವನಾತ್ಮಕವಾಗಿ ನಾವು ಸ್ಪಂದಿಸುವುದಿಲ್ಲ ಪ್ರಪಂಚದಲ್ಲಿ ಎಲ್ಲಾ ಇಲ್ಲದ್ದನ್ನು ಇಲ್ಲಿ ಕಾಣುತ್ತೇವೆ ಅಲ್ಲವೇ? ಬೆತ್ತಲೆ ದೇಹ ಪೂಜ್ಯವೆಂದು ಕಾಣುವುದು ಅಪರೂಪವಲ್ಲವೇ?"[೨೨] ಎಂಬ ಅವರ ಅನಿಸಿಕೆಗಳಿಗೆ ಡಾ.ಚೆನ್ನಣ್ಣ ವಾಲೀಕಾರ್‌ರವರು ಇದನ್ನು ಅನಂತರಮೂರ್ತಿಯವರು ಶಿಷ್ಟ ಭಕ್ತರಿಗೆ ಹೇಳುವಂತಹದ್ದು. ಎಲ್ಲಮ್ಮನ ಭಕ್ತರೆಲ್ಲರೂ ದೈವಿಕ ಶ್ರದ್ಧೆಯಲ್ಲಿ ಉತ್ಕಟತೆಯವರಲ್ಲ. ಅವರು ಮೂಢನಂಬಿಕೆ ಕಂದಾಚಾರ, ಅಂಧಾನುಕರಣೆಯ ಭೀತಿ ಭಕ್ತಿ. ಅದಕ್ಕಾಗಿ ಡಾ.ಯು.ಆರ್‌ಅನಂತ ಮೂರ್ತಿಯವರು ಈಗ ಅವಲೋಕಿಸಬೇಕಾಗಿದೆ. ಇದು ಎಷ್ಟರ ಮಟ್ಟಿಗೆ ಸರಿ ಎಂದು ಅಂದಿನ ಇಂದಿನ ಕಾಲದ ಏರಿಳಿತಗಳ ಸಮಯ ಸಂದರ್ಭಗಳ ಮೇಲಿಂದ ಸಾರಾಸಾರವಾಗಿ ಅರಿಯಬೇಕಾಗಿದೆ ಎಂದಿದ್ದಾರೆ.

**ಬಿದಿರು ಮರೆ ಸೇವೆ**

'ಬಿದಿರು ಮರೆ ಸೇವೆ' ಮತ್ತು ತೇರಡಿ ಸೇವೆಗಳು ಲೈಂಗಿಕ ಮುಕ್ತ ಸಮಾಜವೊಂದರ ಆಚರಣೆಯಾಗಿದ್ದು. ಮಕ್ಕಳಾಗದ ಹೆಂಗಸರು ಹರಕೆ ಹೊತ್ತು ದೇವಿಯ ಜಾತ್ರೆಗೆ ಹೋಗುತ್ತಾರೆ. ನಿಗದಿಪಡಿಸಲಾದ ಬಿದಿರುಮರೆ ಪಕ್ಕದಲ್ಲಿ ಕುಳಿತು ಗಂಡಿಗಾಗಿ ಹೆಣ್ಣು ಕಾಯುತ್ತಾಳೆ. ಈ ಸಂದರ್ಭ ಅಲ್ಲಿಗೆ ಬರಬಹುದಾದ ಯಾವುದೇ ಗಂಡು ದೇವದೂತ ಅಂದು ಆ ಇಬ್ಬರಿಗೂ ಸ್ವಾತಂತ್ರ್ಯ ಅಂದಿನ ಫಲವಾಗಿ ಹುಟ್ಟಬಹುದಾದ ಮಗು ದೇವರ ಪ್ರಸಾದವೆಂದು ಭಾವಿಸಲಾಗುವುದು. ದಕ್ಷಿಣ ಕನ್ನಡದ ಕೊರಗ ಜನಾಂಗದವರು ಕಂಬಳದ ಹಬ್ಬದಲ್ಲಿ ಆಚರಿಸುವ ಪನಿಕಲ್ಲುನ (ಹನಿಯಲ್ಲಿ ಕುಳಿತುಕೊಳ್ಳುವುದು) ಆಚರಣೆಯ ಮುಕ್ತ ಲೈಂಗಿಕತೆಯನ್ನು ಸಂಕೇತಿಸುವ ಒಂದು ವಿಧಿ ಎಂದು ಹೇಳಲಾಗುತ್ತದೆ.

ಅನಾದಿ ಕಾಲದ ಆದಿವಾಸಿ ಬುಡಕಟ್ಟುಗಳಲ್ಲಿ ಲೈಂಗಿಕತೆಯ ಬಗ್ಗೆ ಮಡಿವಂತಿಕೆಯಾಗಲಿ, ಹೆಣ್ಣಿನ ಶೀಲದ ಬಗ್ಗೆ ಪಾತಿವ್ರತ್ಯದ ಕಲ್ಪನೆಯಾಗಲೀ ಇರಲಿಲ್ಲ. ಇಂದೂ ಸಹ ಕಾಡು ಮೇಡುಗಳಲ್ಲಿಯೇ ಜೀವಿಸುತ್ತಿರುವ ಬುಡಕಟ್ಟುಗಳಲ್ಲಿ ಈ ಭಾವನೆ ಬದಲಾಗಿಲ್ಲ. ಬುಡಕಟ್ಟುಗಳಲ್ಲಿ ಅಷ್ಟೇ ಅಲ್ಲ ನಾಗರಿಕರ ಮಧ್ಯ ಜೀವಿಸುತ್ತಿರುವ ಹಲವು ಹತ್ತು ಕೆಳಸ್ತರದ ಜಾತಿಗಳಲ್ಲಿಯೂ ಈ ಭಾವನೆ ಇದೆ. ಮೇಲ್ವರ್ಗದವರಿಗೆ ಬೆತ್ತಲೆ ಸೇವೆ, ಉರುಳು ಸೇವೆ, ದೇವದಾಸಿಯರಾಗಿರುವುದು ಧಾರ್ಮಿಕ ನಿಷೇಧವಿದ್ದು, ಕೆಳವರ್ಗದವರಿಗೆ ಮಾತ್ರ ಮೀಸಲಿರಿಸಿದೆ. ಬ್ರಹ್ಮ, ವಿಷ್ಣು, ಮಹೇಶ್ವರರ, ದಶಾವತಾರ, ಸಾಕ್ಷಾತ್ಕಾರ, ಮೋಕ್ಷ, ಸ್ವರ್ಗ, ನರಕ, ಪುನರ್ಜನ್ಮ, ಪಂಚಮುಖ ಶಿವ, ಚತುರ್ಮುಖ ಬ್ರಹ್ಮ, ಏಳು ಎಡೆಯ ಆದಿಶೇಷ, ಹತ್ತು ತಲೆಯ ರಾಕ್ಷಸರು, ಇಪ್ಪತ್ತು ಕೈಗಳ ದೈವತೆಗಳು ಮುಂತಾದವುಗಳನ್ನು ಸತ್ಯವೆಂದು ಬರೆದು ದಲಿತರನ್ನು ನಂಬಿಸಿ ವಂಚಿಸಲಾಗುತ್ತಿದೆ.

ಪಾಂಡರೀಕ ಯಜ್ಞ; ವೇದಘೋಷ, ಮಂತ್ರಪಠಣದ ನಡುವೆ ಬಂದು ಚಪ್ಪರವನ್ನು ಹಾಕಿ, ಕೆಳಗೆ ಬ್ರಾಹ್ಮಣರು ಹೋಮ ಮಾಡುತ್ತಾರೆ. ಹಾಗೂ ಮಂತ್ರ ಧ್ವನಿಯು ನಾಲ್ಕು ದಿಕ್ಕುಗಳಲ್ಲಿ ಹರಡಿ ವೇದ ಘೋಷ

ಕೇಳಿಸುತ್ತಿರುತ್ತದೆ. ಪಾಂಡರಿಕವನ್ನು ಮಾಡುವ ಮಹಾನುಭಾವ, ಆತನ ಹೆಂಡತಿ ಇಬ್ಬರನ್ನು ಮಹಾದೀಕ್ಷೆಯಿಂದ, ಉತ್ತಮವಾದ ನಿಷ್ಠೆಯಿಂದ ಆ ಚಪ್ಪರವನ್ನು ಹತ್ತಿಸುತ್ತಾರೆ. ಆ ಚಪ್ಪರವನ್ನು ಬಹುಭದ್ರವಾಗಿ ಹಗ್ಗಗಳಿಂದ ಕಟ್ಟಿರುತ್ತಾರೆ. ಅದರ ಮಧ್ಯದಲ್ಲಿ ಒಂದು ರಂಧ್ರವಿರುತ್ತದೆ. ಪುಣ್ಯಾತ್ಮರೂ, ಅದೃಷ್ಟವಂತರೂ, ಪ್ರತಿಭಾನ್ವಿತರೂ, ಎಲ್ಲರೂ ಸುತ್ತಿಕೊಂಡು ನೋಡುತ್ತಿರುತ್ತಾರೆ. ಭಕ್ತಿ ಪರವಶರಾದ ಪತಿಪತ್ನಿ ಉತ್ಸಹಭರಿತರಾಗಿ ಮಹೂರ್ತಕ್ಕೆ ಸರಿಯಾಗಿ ಕೂಡುತ್ತಾರೆ. ಎಲ್ಲರೂ ನೋಡುತ್ತಿದ್ದಂತೆಯೇ ಅವರಿಬ್ಬರೂ ದಂಪತಿಗಳು ಸಂಭೋಗ ಕ್ರಿಯೆಯಲ್ಲಿ ತೊಡಗುವರು. ಹೀಗೆ ಬಹಿರಂಗವಾಗಿ, ಶಾಸ್ತ್ರೋಕ್ತವಾಗಿ, ಮಂತ್ರಗಳ ಮೂಲಕ ಅವರಿಬ್ಬರು ಸಂಗಮಿಸಬೇಕು. ಆ ರೇತಸ್ಸು ಕೆಳಗಿರುವ ಹೋಮಾಗ್ನಿಯಲ್ಲಿ ಬಿದ್ದು ಆಹುತಿಯಾಗಬೇಕು. ಹಾಗಾದಲ್ಲಿ ಪಾಂಡರಿಕವೆಂಬ ಯಜ್ಞ ಪೂರ್ತಿ ಫಲಕೊಡುತ್ತದೆ. ಇದನ್ನು ಒಂದು ವಿಧವಾಗಿ 'ನರಬಲಿ' ಎಂದೂ ಹೇಳಬಹುದು. ಅಥವಾ 'ಬೀಜ ರೂಪದ ನರಬಲಿ' ಎಂದೂ ಸಹ ಕರೆಯುವರು. ಈ ಕಾರ್ಯಕ್ಕಾಗಿ ಅನಂತರ ಬದಲಾವಣೆಗಳನ್ನು ಮಾಡಿಕೊಂಡು ಅಪರಿಚಿತ ಪುರುಷ ಮತ್ತು ವೇಶ್ಯೆಯರನ್ನು ಕೂಡಿಸಿ ಈ ಯಜ್ಞವನ್ನು ಮಾಡಲಾರಂಭಿಸಿದರು. ಇದರಿಂದ ಲಭಿಸುವ ಪುಣ್ಯವೆಂದರೆ ವೈದಿಕರ ಪ್ರಕಾರ ಪರಲೋಕದಲ್ಲಿ ರಂಭಾಸಂಭೋಗ ದೊರಕುತ್ತದೆನ್ನಲಾಗಿದೆ. ಪರಮ ರಸಿಕರೆನಿಸಿಕೊಂಡವರು ಈ ಯಜ್ಞವನ್ನು ಮಾಡುವುದು ಸಾಮಾನ್ಯವಾಗಿದ್ದು ಕವಿಯೊಬ್ಬನು ಈ ಸಂದರ್ಭದಲ್ಲಿ ನಡೆದ ಅನಾಚಾರಗಳನ್ನು ವಿವರಿಸುತ್ತಾ ಪೂರ್ವಕಾಲದಲ್ಲಿ ಪಾಂಡರಿಕ ಬೀದಿ ಬೀದಿಗಳಲ್ಲಿ ನಡೆಸುತ್ತಿದ್ದುದ್ದನ್ನು ಬಣ್ಣಿಸಿರುವುದು ಸತ್ಯ ಘಟನೆಗಳನ್ನು ಬಿಂಬಿಸುತ್ತವೆ.

ಯಜ್ಞಗಳನ್ನು ನೆರವೇರಿಸುತ್ತಿದ್ದು, ಆ ದಿವಸಗಳಲ್ಲಿ ಇವೆಲ್ಲಾ ಪವಿತ್ರವಾದ ಸಂಗತಿಗಳೇ ಆಗಿದ್ದವು. ಅವುಗಳನ್ನು ನಿಂದಿಸುವವರು ಪಾಪಾತ್ಮರು ನರಕದಲ್ಲಿ ಬೀಳುವವರು ಎಂದು ಬಲವಾಗಿ ನಂಬಲಾಗಿತ್ತು. ದಿನಗಳು ಕಳೆದಂತೆ ಅವರಲ್ಲಿಯೂ ಬದಲಾವಣೆ ಆಗತೊಡಗಿತ್ತು.

**ಪತ್ನಿಯರನ್ನು ದಾನವಾಗಿ ಕೊಡುವ ಅಶ್ವಮೇಧಯಾಗ :** ಅಶ್ವಮೇಧಯಾಗ ಯಜ್ಞವನ್ನು ಮಾಡಿದರೆ, ಆ ಯಜಮಾನನಿಗೆ, ಇಹಲೋಕದಲ್ಲಿ ಅಖಂಡವಾದ ಕೀರ್ತಿಯುಂಟಾಗುತ್ತದೆ. ಪರಲೋಕದಲ್ಲಿ ಸ್ವರ್ಗವಾಸದ ಮಹಾ ಸೌಖ್ಯವು ಲಭಿಸುತ್ತದೆ ಎನ್ನಲಾಗಿದೆ. "ದುಷ್ಯಂತನ ಮಗನಾದ ಭರತನು ೧೩೩ ಅಶ್ವಮೇಧಯಾಗಗಳನ್ನು ಮಾಡಿದನೆಂದು ತಿಳಿದುಬರುತ್ತದೆ". ಇದು ಅಮೋಘವಾದ ಉತ್ತಮ ಕಾರ್ಯ. ಈಗ ಆ ಕಾರ್ಯ ಅಸಹ್ಯಕರವಾದದ್ದಾಗಿದೆ. ಅದನ್ನು ಮಹಾ ನೀಚವಾದ ಆಚಾರವೆಂದು ಇಂದಿನವರು ನಿಂದಿಸದೇ ಬಿಡಲಾರರು ಎಂದು ದಯಾನಂದ ಸರಸ್ವತಿಯವರು ಅಭಿಪ್ರಾಯಪಟ್ಟಿದ್ದಾರೆ. ಮ್ಯಾಕ್ಸ್‌ಮುಲ್ಲರ್, ಜೋನ್ಸ್, ಮೋನಿಯತ್ ಮುಂತಾದ ಪಂಡಿತರು ಅದನ್ನು ಹೀನಾಯವಾಗಿ ಕಂಡಿದ್ದಾರೆ. ಅದು ಅಪಕೀರ್ತಿ, ನಿರಸನ, ನಿಂದನೆಗೆ ಒಳಗಾಗಿ ಕಣ್ಮರೆಯಾಗಿದೆ. ಶ್ರೀರಾಮ, ಧರ್ಮರಾಯ, ಜನಮೇಜಯರಾಜ, ಇವರು ಎಷ್ಟೇ ಮಹಾನಿಷ್ಠೆಯಿಂದ ಮಾಡಿದ ಕಾರ್ಯಗಳು ಈಗ ಅವಾಚ್ಯಾವಾಗಿದ್ದು ಎಲ್ಲಾ ಕಾಲದಿಂದಲೂ ಒಂದೇ ತರಹದವಾಗಿವೆ ಎಂದುಕೊಳ್ಳುವುದು ಸಮಂಜಸವಲ್ಲ.

ಅಶ್ವಮೇಧಯಾಗವೆಂದರೆ ಕುದುರೆಯ ಲಿಂಗವನ್ನು ಯಜ್ಞಮಾಡುವವನ ಹೆಂಡತಿಯು ತನ್ನ ಯೋನಿಯಲ್ಲಿಟ್ಟುಕೊಳ್ಳುವುದು. 'ಅಂಬೇಅಂಬಾಲ್ಯಂಬಿಕೇ' ಎಂಬ ಮಂತ್ರವನ್ನು ಜಪಿಸುತ್ತಾ, ರೇಷ್ಮೆವಸ್ತ್ರದಿಂದ

ರಾಣಿ ಮತ್ತು ಅಶ್ವವನ್ನು ಮುಚ್ಚುತ್ತಾರೆ. ಇದಾದ ನಂತರ ಯಜಮಾನನು ತನ್ನ ನಾಲ್ಕು ಜನ ಭಾರ್ಯೆರನ್ನು ಋತ್ವಿಜರಿಗೆ ದಾನ ಕೊಡಬೇಕು.

ಜನಮೇಜಯರಾಜನು ಮಾಡಿದ ಯಜ್ಞದಲ್ಲಿ ಅವನ ಪತ್ನಿಯ ಅಶ್ವದೊಡನೆ ಮಲಗಿದ್ದಾಗ, ಅಶ್ವವು ಕದಲಿತಂತೆ, ಹಾಗೆ ಕದಲುವುದು ತಪ್ಪು. ಅದರ ನಿಕೃಷ್ಟ ಕಾರ್ಯಗಳನ್ನು ನೋಡಿ ಜನಮೇಜಯನು ಇಂದಿನಿಂದ ಮುಂದೆ ಯಾರೂ ಅಶ್ವಮೇಧಯಾಗವನ್ನು ಮಾಡಬಾರದೆಂದನು. ಇದರಿಂದ ಧರ್ಮ, ಪುರಾಣಗಳ ವಿಷಯದಲ್ಲಿ ದೊಡ್ಡ ಸುಧಾರಣೆಯಾಯಿತು.

**ಸಿರಿ ಆಚರಣೆ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಸಿರಿ ಜಾತ್ರೆ' ಫಲವಂತಿಕೆಗೆ ಸಂಬಂಧಿಸಿದ ಜಾತ್ರೆಗಳಲ್ಲಿ ಒಂದಾಗಿದೆ. ಇಲ್ಲಿ ಸಾವಿರಾರು ಹೆಂಗಸರು ಸಾಮೂಹಿಕವಾಗಿ ದೈವಾವೇಶಕ್ಕೆ ಒಳಗಾಗುವ ಮತ್ತು ಇಡೀ ರಾತ್ರಿ ಕುಣಿದು, ಕಿರುಚಿ, ಎದ್ದು, ಬಿದ್ದು ತನ್ನ ಮನದಾಳದ ಎಲ್ಲಾ ದುಗುಡವನ್ನು ಹೊರಚೆಲ್ಲುವ ಪ್ರಕ್ರಿಯೆಯಾಗಿದೆ. ಕೆಲವರಿಗೆ ಆ ಹೊತ್ತಿನ ಮಾನಸಿಕ ತುಮುಲ ಯಾವ ಬಗೆಯಾದಾಗಿರುತ್ತದೆ ಎಂದು ಯೋಚಿಸುತ್ತಿರಲಿಲ್ಲ. ನಂಜನಗೂಡಿನಲ್ಲಿ ನೆರವೇರುವ ಜಾತ್ರೆಯಲ್ಲಿ ತೇರು ಎಳೆಯುವ ಹಿಂದಿನ ರಾತ್ರಿ ತೇರಿನ ಕೆಳಗೆ ಪರ ಪುರುಷನೊಡನೆ ಮಲಗಬೇಕು. ಅಂದರೆ 'ತೇರಡಿ ಸೇವೆ' ಮಾಡಿದರೆ ಮಕ್ಕಳಾಗಿ ಬಂಜೆ ಎಂಬ ಶಾಪದಿಂದ ಮುಕ್ತರಾಗುತ್ತೇವೆ ಎಂಬ ನಂಬಿಕೆಯಿದೆ. ಚಿತ್ರದುರ್ಗ ಜಿಲ್ಲೆಯ ನಾಯಕನಹಟ್ಟಿ ಜಾತ್ರೆಯಲ್ಲಿ ಇದಕ್ಕೆ ಅವಕಾಶವಿತ್ತೆಂದು ತಿಳಿದು ಬರುತ್ತದೆ. ಇಂತಹ ಹಲವು ಜಾತ್ರೆಗಳು ಕರ್ನಾಟಕದಾದ್ಯಂತ ಆಚರಣೆಯಲ್ಲಿವೆ. ಈ ಆಚರಣೆಯ ಮೂಲ ಉದ್ದೇಶ ಬಂಜೆ ಅಥವಾ ಮಕ್ಕಳ ಸಂತಾನ ಇಲ್ಲದವರು ಮಕ್ಕಳನ್ನು ಪಡೆಯುವುದೇ ಆಗಿದೆ.

"ಕಂದನ ಕೊಡು ಶಿವನೆ ಬಂಧನ ಪಡಲಾರೆ

ಹಂಗೀನ ಬಾನ ಉಣಲಾರೆ ಮರ್ತ್ಯದಾಗ

ಬಂಜೆಂಬ ಶಬುದ ಹೊರಲಾರೆ"[೨೨]

ಎಂಬ ಸ್ತ್ರೀಯ ಅಳಲನ್ನು ನಿವಾರಿಸುವ ಹಾಗೂ ವಿವಾಹಿತ ಸ್ತ್ರೀಗೆ ದೇವರ ಸೇವೆಯ ಹೆಸರಿನಲ್ಲಿ ಒಂದು ರೀತಿಯಲ್ಲಿ ನಿಯೋಗಕ್ಕೆ ಜಾತ್ರೆಗಳಲ್ಲಿ ಅವಕಾಶ ಕಲ್ಪಿಸುವುದಾಗಿದೆ. ಗಂಡ ತನ್ನ ದೈಹಿಕ ದೋಷ ರಹಸ್ಯವಾಗಿಡಲು ಈ ಬಗೆಯ ಮಿಲನವನ್ನು ಒಪ್ಪಿಗೆ ನೀಡಿದ್ದ ಸಮಾಜ ಕೂಡ ವಂಶಾಭಿವೃದ್ಧಿಗಾಗಿ ಇದಕ್ಕೆ ಸ್ತ್ರೀಯೋಗ್ಯ ಸಮ್ಮತಿ ಕೊಟ್ಟಿರುವುದಾಗಿದೆ. ಹೆಣ್ಣು ಸಂತಾನಾಪೇಕ್ಷೆಯ ಈಡೇರಿಕೆಗಾಗಿ ಪತಿಯೂ ಅಲ್ಲದ ಪ್ರಿಯಕರನೂ ಅಲ್ಲದ ಪರಪುರುಷನಿಂದ ಇಂಥಹ ಬಳಸುಮಾರ್ಗ ಹಿಡಿಯಲಾಗಿದೆ.

**ಜಾತಿ ಪದ್ಧತಿಯ ಸೃಷ್ಟಿ**

ಪ್ರಾಚೀನ ಭಾರತದಲ್ಲಿ ವರ್ಗರಹಿತವಾದ ಸಾಮಾಜಿಕ ವ್ಯವಸ್ಥೆ ಇದ್ದುದ್ದನ್ನು ಬದಲಾಯಿಸಿ 'ವರ್ಣ ವ್ಯವಸ್ಥೆ'ಯನ್ನು ಜಾರಿಗೊಳಿಸಿ, ಕ್ರಮೇಣ ಇದನ್ನು ಜಾತಿ ವ್ಯವಸ್ಥೆಯಾಗಿ ರೂಪಾಂತರಗೊಳಿಸಿದರು. ಈ ಜಾತಿ ವ್ಯವಸ್ಥೆಯಲ್ಲಿ ಜನ್ಮದ ಆಧಾರದ ಮೇಲೆ ಜಾತಿಗಳಿಗೆ 'ದ್ವಿಜ ಜಾತಿಗಳಿಗೆ' ಸೇರ್ಪಡೆಗೊಳಿಸಿ, ಜನ್ಮತಾಃ ದಾಸ ವರ್ಗದಲ್ಲಿ ಹುಟ್ಟಿದವರು ಕೀಳು ಜಾತಿಗಳಲ್ಲಿ ಅಂದರೆ 'ಶೂದ್ರಜಾತಿಯ' ಸದಸ್ಯತ್ವ ಪಡೆಯುವ ವ್ಯವಸ್ಥೆಯನ್ನು

ಜಾರಿಗೆ ತಂದರು. ಈ ಜಾತಿ ವ್ಯವಸ್ಥೆಯ ಸ್ಥಾನಮಾನಗಳಿಗೆ ಸಂಬಂಧಿಸಿದಂತೆ 'ಋಗ್ವೇದದ ಪುರುಷ ಸೂಕ್ತದಲ್ಲಿ' ಧರ್ಮ, ದೇವರುಗಳನ್ನು ಬಳಸಿಕೊಂಡು, ಆ ಹಿನ್ನೆಲೆಯಲ್ಲಿ ಶೂದ್ರನಿಗೆ ಅತ್ಯಂತ ಕೀಳು ಸ್ಥಾನ ಕೊಡಲಾಗಿದೆ. ಹೇಗೆಂದರೆ, ಸೃಷ್ಟಿಕರ್ತನಾದ ಬ್ರಹ್ಮನ ಶಿರದಿಂದ ಬ್ರಾಹ್ಮಣರು ಜನಿಸಿದ್ದು. ಇವರು ಎಲ್ಲರಿಗಿಂತರೂ ಬಹು ಶ್ರೇಷ್ಠವಾದವರಾಗಿದ್ದು, ವೇದಾಧ್ಯಯನ, ಪುರೋಹಿತಿಕೆ ಮಾಡುವ ಗುರುವಿನ ಸ್ಥಾನ ಪಡೆದರು. ಎರಡನೆಯವರಾಗಿ ಸೃಷ್ಟಿಕರ್ತ ಬ್ರಹ್ಮನ ಬಾಹುವಿನಿಂದ ಕ್ಷತ್ರಿಯರು ಜನಿಸಿದ್ದು ಇವರು ಸಾಮಾಜಿಕ ವ್ಯವಸ್ಥೆಯ ಎರಡನೇ ಸ್ಥಾನದಲ್ಲಿದ್ದು, ರಾಜ್ಯಾಡಳಿತ ನೋಡಿಕೊಳ್ಳುವುದು ರಾಜ್ಯರಕ್ಷಣೆಯ ಜವಾಬ್ದಾರಿಯನ್ನು ಇವರಿಗೆ ವಹಿಸಲಾಯಿತು. ನಂತರ ಬ್ರಹ್ಮನ ತೊಡೆಯಿಂದ ವೈಶ್ಯರು ಹುಟ್ಟಿದ್ದು, ಇವರಿಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಮೂರನೇ ಸ್ಥಾನ ಕೊಟ್ಟು, ಇವರು ವ್ಯವಸಾಯ, ವ್ಯಾಪಾರ, ಪಶುಸಂಗೋಪನೆ ಮೊದಲಾದ ಕಾರ್ಯಗಳಿಗೆ ನೇಮಿಸಲಾಯಿತು. ಹಾಗೆಯೆ ಬ್ರಹ್ಮನ ಪಾದಗಳಿಂದ ಶೂದ್ರರು ದಾಸರು ಹುಟ್ಟಿದ್ದು ಇವರು ಸಾಮಾಜಿಕ ವ್ಯವಸ್ಥೆಯ ಕೆಳಸ್ಥಾನವನ್ನು ಹೊಂದಿ ಮೇಲಿನ ಮೂರು ಜಾತಿಗಳ ಸೇವೆ ಮಾಡುವುದು ಅವರ ಕಾರ್ಯವಾಗಿತ್ತು. ಹೀಗೆ ಜಾತಿಗಳ ಹುಟ್ಟಿಗೆ ದೈವೀಕಾರಣ ಕೊಟ್ಟು ಈ ಸ್ಥಾನಮಾನಗಳೆಲ್ಲವೂ ದೇವಾಜ್ಞೆ. ಇದನ್ನು ಯಾರೂ ಪ್ರಶ್ನಿಸುವಂತಿಲ್ಲ. ಪಾಲಿಗೆ ಬಂದ ಅಂತಸ್ತನ್ನು ಪೂರ್ವ ಜನ್ಮದ ಕರ್ಮದ ಫಲ ಎಂದು ನಂಬಿ ನಡೆಯಬೇಕಿತ್ತು. 'ಜಾತಿ'ಯ ನೆಪದಲ್ಲಿ ಶೂದ್ರ ವರ್ಗದ ಮೇಲೆ ಹಲವಾರು ನಿರ್ಬಂಧಗಳನ್ನು ಹೇರಿ, ಮೇಲ್ಜಾತಿಗಳ ಕೇರಿಗಳಲ್ಲಿ ಶೂದ್ರರು ವಾಸಿಸುವಂತಿಲ್ಲ. ಮದುವೆಯಲ್ಲಿ ಮೆರವಣಿಗೆ ಇಲ್ಲ. ಕುದುರೆ ಸವಾರಿ ಮಾಡಬಾರದು, ಆಕಳನ್ನು ಮುಟ್ಟಬಾರದು. ಹಾಲು, ಮೊಸರು, ಬೆಣ್ಣೆಗಳ ಸೇವನೆ ಇಲ್ಲ. ಬಂಗಾರದ ಆಭರಣಗಳನ್ನು ಧರಿಸಬಾರದು, ಮೇಲ್ಜಾತಿಗಳ ಕೆರೆ, ಬಾವಿ ನೀರನ್ನು ಉಪಯೋಗಿಸಬಾರದು. ಸ್ಮಶಾನದ ಉಪಯೋಗ ಮಾಡುವಂತಿಲ್ಲ. ಪವಿತ್ರರ ದೇವರುಗಳನ್ನು ಪೂಜಿಸುವಂತಿಲ್ಲ. ಅವರ ದೇವಾಲಯಗಳ ಒಳಗೆ ಪ್ರವೇಶವಿಲ್ಲ. ಪವಿತ್ರ ಗ್ರಂಥಗಳನ್ನು ಓದುವುದಾಗಲಿ, ಕೇಳುವುದಾಗಲಿ ಮಾಡುವಂತಿಲ್ಲ. ತಮ್ಮ ಮಹಿಳೆಯರನ್ನು ದೇವರ ಹೆಸರಿನಲ್ಲಿ ಸಮಾಜಕ್ಕೆ ಒಳ್ಳೆಯದನ್ನು ಮಾಡುವ, ದೇವರನ್ನು ಸಂತೃಪ್ತಿಗೊಳಿಸುವ ನೆಪದಲ್ಲಿ ದೇವರಿಗೆ ಬಿಡುವ, ಮೊದಲಾದ ನಿರ್ಬಂಧಗಳನ್ನು ಹೇರಿ ಶೋಷಣೆಗೆ ಒಳಪಡಿಸಿ ಅವರಿಂದ ಎಷ್ಟು ಸಾಧ್ಯವೋ ಅಷ್ಟೆಲ್ಲಾ ಸೇವೆಗಳನ್ನು ಪಡೆಯಲು ಧರ್ಮದ ಹೆಸರಿನಲ್ಲಿ ನಂಬಿಸಿ, ಶ್ರೇಷ್ಠರ ವಿರುದ್ಧ ಚಕಾರ ಎತ್ತದಂತೆ ಸೇವೆಯಲ್ಲಿ ನಿರತರಾಗುವಂತೆ ಸಿದ್ಧಗೊಳಿಸಲಾಯಿತು. ಹೀಗೆ ಶೂದ್ರರು, ಅಂತ್ಯಜರು, ಪಂಚಮರು, ಪಾಪಯೋನಿಯರು ಎಂಬ ಕಟ್ಟುಕತೆಗಳನ್ನು ಸೃಷ್ಟಿಸುತ್ತಾ ಅದನ್ನೇ ಈ ಮುಗ್ಧರು ಅಜ್ಞಾನದಿಂದ ಮೂಢತನದಿಂದ ನಂಬುತ್ತಾ ಬರುವಂತೆ ಮಾಡಲಾಗಿದೆ.

ರಾಜರು ತಮ್ಮ ವೈಭವ, ಆನಂದಗಳನ್ನು ಹೆಚ್ಚಿಸಲು ನಾಯಕಸಾನಿಯರ ದೊಡ್ಡದೊಂದು ದಂಡನ್ನೇ ನೇಮಿಸುತ್ತಿದ್ದರೆಂದು ದೇವದಾಸಿ ಪದ್ಧತಿಯ ಕ್ರಿ.ಶ.೧೨೦೦ ರಲ್ಲಿಯೇ ರೂಢಿಯಲ್ಲಿತ್ತೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಅದರಂತೆಯೇ ದೇವಾಲಯಗಳಲ್ಲಿ ವಿವಿಧ ಸೇವೆಗಳ ಹೆಸರಿನಲ್ಲಿ ಪುರೋಹಿತರ ಕೋರಿಕೆಯ ಮೇರೆಗೆ ಸ್ತ್ರೀಯರನ್ನು ಕಾರ್ಯನಿರತರನ್ನಾಗಿ ಮಾಡಲಾಗುತ್ತಿತ್ತು. ಆದುದರಿಂದ ಈ ಪದ್ಧತಿಯು ಪುರೋಹಿತರು ರಾಜರಿಂದ ಪಡೆದ ಬಳುವಳಿಗಳು. ಋಗ್ವೇದದಲ್ಲೂ, ಆನಂತರದ ಬರವಣಿಗೆಗಳಲ್ಲೂ ರಾಜರ ಹಾಗೂ ಪ್ರಜೆಗಳ

ಆಶ್ರಯ ಪಡೆದಿದ್ದ ವೇಶ್ಯೆಯರ ಗಣಿಕೆಯರ ಹಾಗೂ ನಾಯಕಸಾನಿಯರ ಪ್ರಸ್ತಾಪಗಳು ಇವೆ. ಅದರಲ್ಲಿ ಮಹಾಭಾರತದ ಕಾಲದಲ್ಲಿ ರಾಜರು ತಮ್ಮ ಸ್ಥಾನಮಾನ, ವೈಭವದ, ಸಂಕೇತವಾಗಿ ಈ ನಾಯಕಸಾನಿಯರನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಾಕುತ್ತಿದ್ದರು ಎಂಬ ಅಂಶ ಕಂಡು ಬರುತ್ತದೆ.

**೩.೫ ಧರ್ಮಶಾಸ್ತ್ರ, ಪುರಾಣ, ಶಾಸನಗಳಲ್ಲಿ ದೇವದಾಸಿ ಸಂಪ್ರದಾಯದ ಉಲ್ಲೇಖಗಳು**

**ಪುರಾಣಗಳಲ್ಲಿನ ಉಲ್ಲೇಖಗಳು**

ವೇದಗಳ ತರುವಾಯ ಧರ್ಮಾಚರಣೆಗಳ ವಿಷಯಗಳನ್ನು ಸರಳಗೊಳಿಸುವ ಉದ್ದೇಶದಿಂದ ಪುರಾಣಗಳು ಉದ್ಭವವಾದವು. ಜನಸಾಮಾನ್ಯರಿಗೆ ಅರ್ಥವಾಗುವ ವೇದ ವಿಷಯಗಳನ್ನು ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಯಿತಾದರೂ, ಇವು ಒಂದಕ್ಕೊಂದು ಸಂಬಂಧಗಳಿಲ್ಲದಂತೆ, ಅವೈಜ್ಞಾನಿಕ, ನೀತಿಬಾಹಿರ ಹಾಗೂ ತತ್ವ ವಿರೋಧಿಯಾದಂತಹ ಬರೀ ಪೊಳ್ಳುಕತೆಗಳಿಂದ ಹೆಣೆಯಲ್ಪಟ್ಟು ದೇವದಾಸಿ ಪದ್ಧತಿಗೆ ಪ್ರೇರಣೆ ನೀಡಿರುವಂತಹದ್ದನ್ನು ನೋಡಬಹುದಾಗಿದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಕ್ಷತ್ರಿಯರು ನಾಯಕಸಾನಿಯರ ಪಡೆಯನ್ನೆ ಕಟ್ಟಿಕೊಂಡು ವೈಭವ, ಆನಂದಗಳಿಂದ ಮೆರೆಯುತ್ತಿದ್ದದ್ದನ್ನು ನೋಡಿ, ಸಹಿಸಲು ಮತ್ತು ಅದನ್ನು ಜೀರ್ಣಿಸಿಕೊಳ್ಳಲು ಸಾಧ್ಯವಾಗದ, ಸಮಾಜದ ಪ್ರಥಮ ಸ್ಥಾನದ ಪುರೋಹಿತ ವರ್ಗವು ದೇವತೆಗಳ ಮತ್ತು ದೇವಾಲಯಗಳ ಸೇವೆಗಾಗಿ ಹುಡುಗಿಯರನ್ನು ಅಪೇಕ್ಷಿಸುವ, ಒಪ್ಪಿಸುವ ಪದ್ಧತಿಯನ್ನು ಒಂದು ಪವಿತ್ರಕಾರ್ಯವೆಂದು ಭೋದಿಸ ತೊಡಗಿದರು. ಆ ಕಾಲಕ್ಕೆ ಸಾಮಾನ್ಯ ಜನರಿಗೆ ಸ್ವರ್ಗ, ನರಕಗಳ ಅಸ್ತಿತ್ವದ ಬಗ್ಗೆ ನಂಬಿಕೆ ಬೆಳೆದು ಸ್ವರ್ಗ ಭೋಗದ ಬಗೆಗೆ ಕಲ್ಪನೆಗಳ ಅಶಾ ಸೌಧ ನಿರ್ಮಾಣ ಮಾಡಿದರು. ಹೀಗಾಗಿ, 'ಪದ್ಮ ಪುರಾಣದ' ಸೃಷ್ಟಿಕಾಂಡದ ಅಧ್ಯಾಯ ಚಂದದ ಹೆಣ್ಣುಗಳನ್ನು ಕೊಂಡು ದೇವಾಲಯಗಳಿಗೆ ಉಡುಗೊರೆಯಾಗಿ ಕೊಡುವ ಬಗ್ಗೆ ಸಲಹೆ ನೀಡುತ್ತದೆ.

'ಭವಿಷ್ಯ ಪುರಾಣದಲ್ಲಿ' ಸೂರ್ಯಲೋಕ ಅಥವಾ ಸ್ವರ್ಗಲೋಕಕ್ಕೆ ಹೋಗಲು ಇರುವ ಒಂದೇ ಒಂದು ಮಾರ್ಗವೆಂದರೆ, ಸೂರ್ಯ ದೇವಾಲಯಕ್ಕೆ ಹೆಚ್ಚಿನ ಸಂಖ್ಯೆಯ ಸುಂದರ ಹುಡುಗಿಯರನ್ನು ಅರ್ಪಿಸುವುದು ಎಂದಿದ್ದು, ಇದರಿಂದ ರಾಜರುಗಳು ಈ ಪದ್ಧತಿಯನ್ನು ಅನುಸರಿಸಿ, ಧರ್ಮದ ಹೆಸರಿನಲ್ಲಿ ಪುರೋಹಿತರ ಜೊತೆ ಸೇರಿ ಕೆಳಜಾತಿ ಮಹಿಳೆಯರನ್ನು ಅರ್ಪಿಸಲು ಆರಂಭಿಸಿದರು ಎಂದು ಹೇಳಬಹುದು.

"ದೇವದಾಸಿಯರು ಗಣ್ಯರ ಉಪಪತ್ನಿಯ ಸ್ಥಾನಕ್ಕಿಂತಲೂ ಉತ್ತಮ ಸ್ಥಾನಪಡೆಯುವ ಅವಕಾಶ ಪಡೆದಿರಲಿಲ್ಲ. ಆಕೆಯು ಯಾರಾದರೊಬ್ಬರು ಗಣ್ಯರಿಂದ ಉಪಪತ್ನಿಯಾಗಿ, ಸ್ವೀಕರಿಸಲ್ಪಟ್ಟಳೆಂದರೆ, ಅದು ಆಕೆಯ ಜೀವನದ ಬಹುದೊಡ್ಡ ಸಾಧನೆ ಎಂಬಂತೆ, ಬಿಂಬಿಸಲಾಗಿದೆ. 'ರಂಬೆ' ಎಂಬ ಪದಪ್ರಯೋಗವು 'ದೇವದಾಸಿ' 'ವಾರಾಂಗನೆ'ಯ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಸಾಧಿಸಬಹುದಾದ ಅತ್ಯಂತ ವೈಭೋಗ ಜೀವನದ ಪ್ರತೀಕವಾಗಿದೆ. ರಂಭೆ ಇಂದ್ರನ ಆಸ್ಥಾನದ ನೃತ್ಯಗಾತಿ ಮತ್ತು ದೇವಲೋಕದ ಸುರರ ಕಾಮೇಚ್ಛೆ ತಣಿಸುವ ಸಾರ್ವಜನಿಕ ಆಸ್ತಿ ಎಂದೆ ಪುರಾಣಗಳಲ್ಲಿ ಬಿಂಬಿತವಾಗಿದೆ. 'ದೇವದಾಸಿ' 'ವಾರಾಂಗನೆ'ಯರು ರಂಭೆಯು ಹಾಗೆ ಸಾರ್ವಜನಿಕ ಆಸ್ತಿ. ಹೆಣ್ಣು ಪುರುಷರ ಕಾಮ ಜೀವನಕ್ಕೆ ಸೀಮಿತವಾದವಳು"[೨೨]. ಆಕೆಗೆ ಶಾರೀರಿಕ ಅಸ್ತಿತ್ವ ಮಾತ್ರ ಪ್ರಧಾನ. ಆಕೆಯ ಮಾನಸಿಕ ಮತ್ತು ಬೌದ್ಧಿಕ ಅಸ್ತಿತ್ವ ನಿರಾಕರಣೆ ಯೋಗ್ಯ. ಇಲ್ಲಿ

ಹೆಣ್ಣನ್ನು ಸಾರ್ವಜನಿಕ ಆಸ್ತಿಯಾಗಿ ಪರಿಭಾವಿಸಿದೆ. ಪತ್ನಿಯನ್ನು ವೈಯಕ್ತಿಕ ಆಸ್ತಿಯಾದ ಹೆಣ್ಣನ್ನು ಕುರಿತು ಅಭಿವ್ಯಕ್ತವಾಗಿರುವ ಅಂಶವನ್ನು ಹೇಳಲಾಗಿದೆ.

**ವೇದ ಉಪನಿಷತ್ತು, ಬ್ರಾಹ್ಮಣ ಮತ್ತು ಪುರಾಣಗಳಲ್ಲಿ ಈ ಕೆಳಗಿನ ಉಲ್ಲೇಖಗಳಿವೆ**

ವಿವಿಧ ಪಾತ್ರಗಳನ್ನೊಳಗೊಂಡ ಅನೇಕಾನೇಕ ದೇವರುಗಳನ್ನು ಉಪದೇವತೆಗಳನ್ನು, ಅತಿಮಾನುಷ ಶಕ್ತಿಗಳು, ಜನಸಾಮಾನ್ಯರನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಸಲುವಾಗಿ ದುಷ್ಟ, ಭೂತ ಪ್ರೇತಗಳನ್ನು ಸೃಷ್ಟಿಸಲಾಯಿತು. ಇವುಗಳ ದುಷ್ಪಭಾವನೆಯನ್ನು ತಡೆಯುವ ಸಲುವಾಗಿ, ದೇವರುಗಳಿಂದ ಆಶೀರ್ವಾದವನ್ನು ಯಾಚಿಸುತ್ತೇನೆ ಎಂದು ಪುರೋಹಿತ ಹೇಳುತ್ತಾ, ದೇವರ ಆಶೀರ್ವಾದ ಮತ್ತು ಭೂತ ಪ್ರೇತಾದಿಗಳನ್ನು ಪ್ರಸನ್ನಗೊಳಿಸುವ ಅನೇಕ ವಿಧಾನಗಳೆಲ್ಲ ಹುಡುಗಿಯರನ್ನು ಅರ್ಪಿಸಲು ಸಲಹೆ ನೀಡುತ್ತಿದ್ದರು. ಗಂಡು ಸಂತಾನವಿಲ್ಲದೇ ಹೋದರೆ, ಸ್ವರ್ಗ ಪ್ರಾಪ್ತಿಯಾಗದು. ಆದ್ದರಿಂದ ಆ ಹೆಣ್ಣನ್ನು ದೇವಾಲಯಕ್ಕೆ ಅರ್ಪಿಸಿದರೆ, ಗಂಡು ಸಂತಾನ ಪ್ರಾಪ್ತವಾಗುತ್ತದೆ ಎಂದು ಜನತೆಗೆ ಸಲಹೆ ಪುರಾಣಗಳ ಮೂಲಕ ನೀಡುತ್ತಾ ಕೆಳಜಾತಿಯ ಜನರು ನಿಯತವಾಗಿ ಸಣ್ಣ ವಯಸ್ಸಿನ ಹುಡುಗಿಯನ್ನು ತಮ್ಮ ಸಮುದಾಯದಿಂದ ದೇವರ ಹೆಸರಿಗೆ ಬಿಡುವ ನಿಬಂಧನೆ ಹೇರುವಷ್ಟರ ಮಟ್ಟಿಗೆ ಪ್ರಬಲ ಕಥೆಗಳನ್ನು ಪುರೋಹಿತರು ಕಟ್ಟಿದರು.

ಹೀಗೆ ಭೂಲೋಕದ ಶಾಂತಿಗಾಗಿ ಸುಖ ನೆಮ್ಮದಿ ಕಾಪಾಡುವ ನೆಪದಲ್ಲಿ ಗಣಿಕೆಯರಿಗೂ ಸ್ಥಾನಕಲ್ಪಿಸಿವೆ. ಗಂಡಸರು ವೇಶ್ಯಾವಾಟಿಕೆಯ ಒಡನಾಟದಲ್ಲಿರುವುದೊಂದು ಶ್ರೀಮಂತಿಕೆಯ ಲಕ್ಷಣವೆಂದು ನಮ್ಮ ಸನಾತನರು ಸಮ್ಮತಿಸಿದ್ದಾರೆ. ಸ್ವರ್ಗಲೋಕದ ತುಂಬಾ ಗಣಿಕೆಯರಿದ್ದು ಅವರ ಹತ್ತಿರ ಹೋಗುವುದಕ್ಕಾಗಿಯೇ ನಮ್ಮ ಋಷಿ ಮುನಿಗಳು, ರಾಜ ಮಹಾರಾಜರು ಸಮಯ ಉಪಯೋಗಿಸಿಕೊಂಡು, ತಪಸ್ಸು ಮಾಡಿ, ಯುದ್ಧ ಮಾಡಿ, ಅಲ್ಲಿಗೆ ಪ್ರವೇಶಿಸುತ್ತಾರೆ. ಇಷ್ಟೇ ಅಲ್ಲ. ದೇವಕನ್ಯೆಯರು ನಮ್ಮ ಲೋಕಕ್ಕೆ ಇಳಿದು ಬಂದು ತಮಗೆ ಬೇಕಾದವರ ಜೊತೆಗೂಡಿದ್ದು, ಬೇಡವಾದಾಗ ಮತ್ತೆ ಹಿಂದಕ್ಕೆ ಹೋಗಿರುವುದಕ್ಕೆ ಪುರಾಣ ಪುಣ್ಯ ಕಥೆಗಳೇ ಸಾಕ್ಷಿಯಾಗಿವೆ.

ಇಲ್ಲಿನ ನಮ್ಮ ದೇವದಾಸಿಯರು ಬೇರೆಯಲ್ಲ, ಅಲ್ಲಿನ ರಂಭ, ಊರ್ವಸಿ, ಮೇನಕೆಯಂತೆಯೇ ಎಲ್ಲಾ ಅವರಂತೆ ಇವರಿಗೂ ಹಾದರದ ದೋಷವಿಲ್ಲ, ಲೈಂಗಿಕ ಕಟ್ಟುಪಾಡುಗಳ ಕಾಟವಿಲ್ಲ ಎಂದು ಪುರಾಣಗಳು ಹೇಳುತ್ತವೆ. ಪೌರಾಣಿಕವಾಗಿ ಶತ್ರುಗಳನ್ನು (ರಾಕ್ಷಸರನ್ನು) ಸೋಲಿಸಲು ಮತ್ತು ಅವರನ್ನು ಮೋಸಗೊಳಿಸಲು ರಂಭೆ, ಊರ್ವಸಿ, ಮೇನಕೆಯರನ್ನು ಬಳಸುತ್ತಿದ್ದುದ್ದರ ಬಗ್ಗೆ ಉಲ್ಲೇಖಗಳಿವೆ. ಅನೇಕ ಸಲ ದೇವೇಂದ್ರ ತನ್ನ ಕೆಲಸ ಮಾಡಿಸಿಕೊಳ್ಳಲೂ ಈ ಮಾನಿನಿಯರ ಸಹಾಯ ಪಡೆಯುತ್ತಿದ್ದು ಪುರಾಣಗಳು ಹೇಳುತ್ತವೆ. ಚಾರಿತ್ರಿಕವಾಗಿ ರಾಜರುಗಳು ವಿಷಕನ್ಯೆಯರನ್ನಾಗಿ ಇವರನ್ನು ಬಳಸುತ್ತಿದ್ದು, ಶತ್ರು ರಾಜರುಗಳನ್ನು ಕೊಲ್ಲಲ್ಲು ಇವರನ್ನು ದಾಳಗಳಾಗಿ ಬಳಸಿ ಕಾರ್ಯ ಸಾಧಿಸುತ್ತಿದ್ದದ್ದು ಗಮನಾರ್ಹ. ಹಾಗೆ ರಾಜನು ಇವರನ್ನು ಕೆಲವು ಬಾರಿ ರಾಜಕೀಯ ಸೂತ್ರವಾಗಿ ಬಳಸಿಕೊಳ್ಳುವ ಕ್ರಮವಿತ್ತೆಂದು ಪುರಾಣ ಇತಿಹಾಸಗಳಿಂದ ತಿಳಿಯುವುದು.

ಇಂದ್ರನ ಆಸ್ಥಾನದಲ್ಲಿ ರಂಭೆ, ಊರ್ವಶಿ, ಮೇನಕೆ ಮೊದಲಾದವರು ನೃತ್ಯಮಾಡಿ, ದೇವತೆಗಳ ಮತ್ತು ಅತಿಥಿಗಳ ಮನಸ್ಸನ್ನು ಸಂತೋಷಪಡಿಸುತ್ತಿದ್ದರು. ರಾಕ್ಷಸರ ಘೋರ ತಪಸ್ಸನ್ನು ಭಂಗಪಡಿಸಲು, ಇಂದ್ರಾದಿ ದೇವತೆಗಳು ರಂಭೆ, ಮೇನಕೆ, ಊರ್ವಶಿಯರನ್ನು ಉಪಯೋಗಿಸುತ್ತಿದ್ದರಂತೆ. ಉದಾ. ವಿಶ್ವಾಮಿತ್ರನ ತಪಸ್ಸನ್ನು

ಮೇನಕೆ ಭಂಗಗೊಳಿಸಿದಳೆಂಬುದು ಲೋಕ ವಿಖ್ಯಾತವಾದ ವಿಷಯವಾಗಿದೆ.

**ಪದ್ಮ ಪುರಾಣದಲ್ಲಿ:** ದೇವರಿಗೆ ಸುಂದರ ಸ್ತ್ರೀಯರನ್ನು ಅರ್ಪಿಸುವ ಭಕ್ತರಿಗೆ ಒಂದು ಕಲ್ಪಾಂತದವರೆಗೆ ಅಂದರೆ ೪೩೨೦೦೦೦೦೦೦ ವರ್ಷಗಳವರೆಗೆ ಸ್ವರ್ಗವಾಸ ಲಭಿಸುತ್ತದೆ ಎಂದು ಹೇಳಲಾಗಿದೆ.

**ಸ್ಕಂದ ಪುರಾಣದಲ್ಲಿ:** ಶಿವನಿಗೆ ಪ್ರಾರ್ಥನೆ ಮಾಡಿ ಅಗ್ನಿಗೆ ಆಹುತಿ ನೀಡಲು ಏಳು ಮಂದಿ ಸುಂದರಿಯರು ಹುಟ್ಟಿದರು. ಅವರನ್ನು ಶಿವನಿಗೆ ನಿವೇದಿಸಲಾಯಿತೆಂದು ಮಾರ್ಕಂಡೇಯ ಋಷಿ ಹೇಳಿದ್ದಾನೆ.

**ಶಿವ ಪುರಾಣದಲ್ಲಿ:** ಶಿವದೇವಾಲಯವನ್ನು ಕಟ್ಟಿಸಿದಾಗ ನೃತ್ಯ ಮತ್ತು ಸಂಗೀತದಲ್ಲಿ ನಿಪುಣೆಯರಾದ ಚೆಲುವೆಯರನ್ನು ಯೋಜಿಸತಕ್ಕದೆಂದು ಹೇಳಲಾಗಿದೆ. ವಿಶ್ವಾಮಿತ್ರನೊಂದಿಗೆ ಸದಾ ಸೆಣೆಸಿದ ವಶಿಷ್ಟ ಮುನಿಯು ವೇಶ್ಯೆಯ ಮಗನಾಗಿದ್ದನೆಂದು ಪುರಾಣಗಳು ಹೇಳುತ್ತವೆ.

ತಮ್ಮ ಕಾಮನನ್ನು ಉತ್ತೇಜನಗೊಳಿಸಲು, ಪುರೋಹಿತಶಾಹಿ ಮತ್ತು ರಾಜ್ಯಶಾಹಿ ವ್ಯವಸ್ಥೆಗಳು ತಮ್ಮ ಭದ್ರತೆಗೆ ಬಲಿಷ್ಠತೆಗೆ ದೇವದಾಸಿ ಪರಂಪರೆಯನ್ನು ಬೆಳೆಸಿ, ತಮ್ಮ ಸಮಾಜಬಾಹಿರ, ನೀತಿಬಾಹಿರ, ಚಟುವಟಿಕೆಗಳಿಗೆಲ್ಲ 'ಪುರಾಣ'ಗಳಂತಹ ರಂಜಕ ಕಥೆಗಳ ಮೂಲಕ ಧಾರ್ಮಿಕ ರಕ್ಷಣೆ ಪಡೆದು, ಭಾರತೀಯ ಸಂಸ್ಕೃತಿಯುದ್ದಕ್ಕೂ ಪುರೋಹಿತಶಾಹಿ ಮತ್ತು ರಾಜ್ಯಶಾಹಿಗಳು ಶೋಷಕ ಸ್ಥಾನದ ಉದ್ಯೋಗದಲ್ಲಿದ್ದು, ಮುಗ್ಧ ಸಮುದಾಯವನ್ನು ಅದರಲ್ಲೂ ಸ್ತ್ರೀಯರನ್ನು ನಯವಾಗಿ ವಂಚಿಸಿ ಶೋಷಣೆಗೆ ಸಹಾಯಕವಾಗುವ ಕೆಲ ಪುರಾಣಗಳ ಸೃಷ್ಟಿಮಾಡಿಕೊಂಡಿದ್ದನ್ನು ಉದಾಹರಣೆಗೆ ಕೆಲವನ್ನು ನಾವು ನೋಡಬಹುದಾಗಿದೆ.

**ಕರ್ನಾಟಕದ ದೇವದಾಸಿ ಪದ್ಧತಿಯ ಕೇಂದ್ರ ದೇವತೆ ಸವದತ್ತಿ ಯಲ್ಲಮ್ಮ**

ಪುರಾಣಗಳಲ್ಲಿ ರೇಣುಕೆ ಎಂದೇ ಕರೆಯಲಾಗಿದ್ದು ವಾಯುಪುರಾಣ, ಹರಿವಂಶ, ಭಾಗವತ, ಸ್ಕಂದ ಪುರಾಣ, ತ್ರಿಪುರಾ ರಹಸ್ಯ ಮತ್ತು ಮಹಾಭಾರತಗಳಲ್ಲಿ ಈಕೆಯ ಉಲ್ಲೇಖವಿದೆ.

'ಯಲ್ಲಮ್ಮ' ದ್ರಾವಿಡರ ಜನಪದ ದೇವತೆ. ಈಕೆಯನ್ನು ರೇಣುಕೆಯನ್ನಾಗಿ ಮಾಡಿ, ಜಮದಗ್ನಿಯನ್ನು ಗಂಡನನ್ನಾಗಿ ಮಾಡಿ, ಅವನಿಗಿಂತ ಆಕೆ ಕಡಿಮೆ ಎಂಬ ಭಾವನೆ ಹುಟ್ಟಿಸುವ ಘಟನೆಗಳನ್ನು ಸೃಷ್ಟಿಸಿ, ಆಕೆಯನ್ನು ಕಳಂಕಿತಳನ್ನಾಗಿ ಮಾಡಿ, ಅವನಿಂದ ಶಾಪಕೊಡಿಸುವ, ಮಕ್ಕಳಿಂದ ಕೊಲ್ಲಿಸುವ ಕಟ್ಟು ಕಥೆಗಳನ್ನು ಕಟ್ಟಿ ಈ ಪ್ರಕಾರ ಮಗ ಪರಶುರಾಮ ತಂದೆಯ ಆಜ್ಞೆಯ ಪ್ರಕಾರ ತಾಯಿಯನ್ನು ಕೊಲ್ಲಲು ಬೆನ್ನುಹತ್ತಿದಾಗ ಆಕೆ ಓಡಿ ಹೋಗಿ ಗುಡ್ಡದಲ್ಲಿರುವ ಮರ ಹೊಕ್ಕಳಂತೆ, ಅದಕ್ಕಾಗಿ ಜನತೆ ಮರವನ್ನು ಪೂಜಿಸುವರು. ಅಲ್ಲಿಂದ ಓಡಿ, ಗುಲ್ಬರ್ಗದ ಆಳಂದ ತಾಲೂಕಿನ ಚುಂಚುರುಮಾಪುರದ ಅರಣ್ಯದ ಹುತ್ತದಲ್ಲಿ ಹೊಕ್ಕಳಂತೆ. ಅದಕ್ಕಾಗಿ ಅಲ್ಲಿನ ಜನ ಹುತ್ತಕ್ಕೆ ಪೂಜಿಸುವರು. ಮುಂದೆ ರಾಯಚೂರು ಜಿಲ್ಲೆಯ ಕೊಪ್ಪಳ ತಾಲೂಕಿನ ಹುಲಿಗಿಯಲ್ಲಿ ಬಂದು ಹುಲಿಸವಾರಿ ಮಾಡಿ ದಣಿವಾರಿಸಿಕೊಳ್ಳಲು ಆ ಸ್ಥಳಗಳಲ್ಲಿ ಕುಳಿತಳಂತೆ ಅದಕ್ಕಾಗಿ ಆ ಸ್ಥಳದಲ್ಲಿ ಪೂಜಿಸುವುದನ್ನು ನೋಡಬಹುದು. ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿ ದುರ್ಗದ ಗುಡ್ಡ ಹೊಕ್ಕುದಕ್ಕೆ ಜನ ಗುಡ್ಡಕ್ಕೆ ಪೂಜಿಸುವರು ಮುಂದೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಚಂದ್ರಗುತ್ತಿಯ ಯಲ್ಲಮ್ಮ ಪರಶುರಾಮನಿಂದುಳಿಯಲು ಓಡಿ ಬಂದು ಬೆಟ್ಟದ ಕೆಳಗೆ ನೀರಿನಲ್ಲಿ ಮುಳುಗಿ ಮೇಲೆ ಬಂದು ಗುತ್ತಿಯಲ್ಲಿ ಬಂದು ಅಡಗಿ ಕುಳಿತಿದ್ದಕ್ಕೆ ಅಲ್ಲಿನ ಜನ ಗುತ್ತಿಗೆ ಪೂಜಿಸುವರು. ಕೊನೆಗೆ ಮಗನ ಕೈಗೆ ಸಿಕ್ಕು ಕೊಲ್ಲಲ್ಪಟ್ಟ ಪುರಾಣ

ಸೃಷ್ಟಿಗೆ ಅವಳನ್ನು ಅವಳ ಅನುಯಾಯಿಗಳನ್ನು ವ್ಯಭಿಚಾರಿಗಳನ್ನಾಗಿ ಮಾಡುವ ಕುತಂತ್ರವನ್ನು ಇಲ್ಲಿ ಕಾಣುತ್ತೇವೆ. ಶಿಷ್ಟ ಸಮಾಜದ ವಿಚಾರಗಳ ಒತ್ತಡಕ್ಕೆ ಸಿಲುಕಿ ಅವಳನ್ನು ಲೋಕ ದೇವತೆಯನ್ನಾಗಿ ಮಾಡಿ, ಆಕೆಯ ಭಕ್ತರನ್ನು ಭ್ರಷ್ಟಗೊಳಿಸುವಂತಹ ಸೌದತ್ತಿ ಚುಂಚೂರು, ಹುಲಿಗಿ, ಉಚ್ಚಂಗಿದುರ್ಗ, ಚಂದ್ರಗುತ್ತಿ ಮುಂತಾದ ಸ್ಥಳಗಳಲ್ಲಿ ರೇಣುಕೆ ಗಂಧರ್ವನ ಲೀಲೆ ನೋಡುತ್ತಾ ಕುರಿತ ತಪ್ಪಿಗೆ ಅವಳನ್ನು ಪತಿತಳನ್ನಾಗಿ ಮಾಡಿ ಸೃಷ್ಟಿಸಿದ ದೇವದಾಸಿ ಪದ್ಧತಿಯಿಂದ ಇನ್ನು ಕೆಲವು ಕ್ರೂರ ಪದ್ಧತಿಗಳು ಹುಟ್ಟಿಕೊಂಡಿವೆ. ದೇವತೆಗಳಿಗೆ ಅರಸನಾದ ದೇವೇಂದ್ರನು ಗೌತಮ ಋಷಿಯ ವೇಷದಲ್ಲಿ ಮೋಸದಿಂದ ಬಂದು ಬೆಳಗಾಯಿತೆಂದು ಋಷಿಗೆ ನದಿ ಸ್ನಾನಕ್ಕೆ ಕಳುಹಿಸಿ, ಈ ಕಡೆ ಆತನ ಹೆಂಡತಿಯಾದ ಅಹಲ್ಯೆಯ ಜೊತೆಗೆ ಗಂಡನ ವೇಶದಲ್ಲಿ ಸುಖಿಸಿ ಹೋದದ್ದು, ಇದನ್ನು ತಿಳಿದ ಗೌತಮ ಋಷಿ ಅವನಿಗೆ ಮೈಯಲ್ಲ ಕಣ್ಣಾಗುವ ಶಾಪ ನೀಡಿ, ಹೆಂಡತಿ ಅಹಲ್ಯೆಗೆ ಕಲ್ಲಾಗಿ ಬೀಳುವಂತೆ ಮಾಡಿದ್ದು ಇದರಲ್ಲಿ ಏನೂ ತಪ್ಪಿಲ್ಲದ ಅಹಲ್ಯೆಗೆ ಶಿಕ್ಷೆಕೊಟ್ಟದ್ದು ನೋಡಬಹುದು.

ತ್ರಿಮೂರ್ತಿಗಳ ಪತ್ನಿಯರಾದ ಲಕ್ಷ್ಮಿ, ಸರಸ್ವತಿ, ಪಾರ್ವತಿಯರು ಭೂಲೋಕದಲ್ಲಿ ಪಾತಿವ್ರತ್ಯ ಎನಿಸಿದ ಅನುಸೂಯಾಳ ಪದವಿಯನ್ನು ಸಹಿಸದೆ, ಅಸೂಯೆ ಪರರಾಗಿ, ಆಕೆಯ ಪಾತಿವ್ರತ್ಯ ಭಂಗಗೊಳಿಸುವ ದುರುದ್ದೇಶದಿಂದಲೇ ತಮ್ಮ ತಮ್ಮ ಪತಿಯರನ್ನು ಅವಳಲ್ಲಿಗೆ ಕಪಟವೇಷ ಧರಿಸಿ ವಿವಸ್ತ್ರಳಾಗಿ ತಮಗೆ ಊಟ ಬಡಿಸುವಂತೆ ಕೇಳಿ, ತನ್ಮೂಲಕ ಆಕೆಯ ಪಾತಿವ್ರತ್ಯ, ಶೀಲವನ್ನು ಭಂಗಪಡಿಸಲು ಹೋಗಿ ಅನಸೂಯಾ ದೇವಿಯಿಂದ ಆಕೆಯ ಪತಿವ್ರತಾ ಪ್ರಭಾವದಿಂದ ಮುಗ್ಧ ಕಂದಮ್ಮಗಳಾಗಿ ಆಕೆಯ ಆಶ್ರಮದಲ್ಲಿ ಅಳುತ್ತಿದ್ದುದ್ದನ್ನು ನಾರದನಿಂದ ಕೇಳಿ ತಿಳಿದ ತ್ರಿಮೂರ್ತಿಗಳ ಪತ್ನಿಯರು ಪುನಃ ಅನಸೂಯಾಳ ಬಳಿಗೆ ಹೋಗಿ ಕ್ಷಮೆಯಾಚಿಸಿ, ತಮ್ಮ ಪತಿಗಳನ್ನು ಪಡೆದ ಬಗ್ಗೆ ಪುರಾಣಗಳಿವೆ.

ಹಾಗೆ ತುಳಸಿ ಜಲಂಧರರ ಕಥೆ ಪುರಾಣದಲ್ಲಿ ಪ್ರಸಿದ್ಧವಾಗಿದೆ. ಜಲಂಧರನೆಂಬುವನು ಭೂಲೋಕದ ಒಬ್ಬ ದೈತ್ಯರ ರಾಜ. ಈತನ ಪತ್ನಿಯ ಹೆಸರು ಬೃಂದಾ. ಈಕೆ ಮಹಾ ಪತಿವ್ರತೆ ಹಾಗೂ ವಿಷ್ಣುವಿನ ಅನನ್ಯ ಭಕ್ತಳಾಗಿದ್ದಳು. ಒಮ್ಮೆ ಪರಮೇಶ್ವರನಿಗೂ ಹಾಗೂ ಜಲಂಧರನಿಗೂ ಕಾರಣಾಂತರಗಳಿಂದ ಯುದ್ಧ ಪ್ರಾರಂಭವಾಗುತ್ತದೆ. ಇದರಲ್ಲಿ ಪರಮೇಶ್ವರನಿಗೆ ಸೋಲುಂಟಾಗುವ ಸ್ಥಿತಿ ಬಂದಾಗ ಭಯಗ್ರಸ್ತರಾದ ದೇವತೆಗಳು ಸಭೆಸೇರಿ ಸಾಕ್ಷಾತ್ ಪರಮೇಶ್ವರನನ್ನ ಸೋಲಿಸುವಂತಹ ಅಸಾಧಾರಣ ಶಕ್ತಿಯ ಜಲಂಧರನಿಗೆ ಹೇಗೆ ಬಂದೀತೆಂದು ತರ್ಕಿಸಿದಾಗ, ಆತನ ಪತ್ನಿಯಾದ ಬೃಂದಾಳ ಪತಿವ್ರತಾ ಶಕ್ತಿಯ ಪ್ರಭಾವವೇ ಈ ಜಲಂಧರನಿಗೆ ವಜ್ರಕವಚ ರೂಪದಲ್ಲಿ ಆತನ ಗೆಲುವಿಗೆ ಕಾರಣವೆಂದು ತಿಳಿದು ಬರುತ್ತದೆ. ಬೃಂದಾಳ ಪಾತಿವ್ರತ್ಯ ಭಂಗವಾಗದ ಹೊರತು ಜಲಂಧರನನ್ನು ಸೋಲಿಸುವುದು ಸಾಧ್ಯವಿಲ್ಲ ಎಂಬುದನ್ನು ಮನಗಂಡ ದೇವತೆಗಳು ಆಕೆಯ ಶೀಲಹರಣಕ್ಕಾಗಿ ಮಹಾವಿಷ್ಣುವನ್ನು ಪ್ರೇರೇಪಿಸಿ, ವಿಷ್ಣುವೇ ಮಾಯಾ ವೇಷದಲ್ಲಿ ಜಲಂಧರನಂತೆ ಬೃಂದಾಳಲ್ಲಿಗೆ ಬಂದು ಆಕೆಯ ಪಾತಿವ್ರತ್ಯವನ್ನು ಶೀಲವನ್ನು ಹರಣ ಮಾಡುವನು. ನಂತರ ಸತ್ಯಸಂಗತಿ ತಿಳಿದ ಆಕೆಯು ವಿಷ್ಣುವನ್ನು ಕುರಿತು, ಸಾಕ್ಷಾತ್ ದೇವರೆಂದು ನಿನ್ನನ್ನೇ ಕುರಿತು ತ್ರಿಕರಣ ಶುದ್ಧಳಾಗಿ ಆರಾಧಿಸುತ್ತಿದ್ದಾಗ್ಯೂ ನೀನೇ ನನ್ನನ್ನು ವಂಚಿಸಿ ಮೋಸಮಾಡಿದೆಯಾ, ದ್ರೋಹಮಾಡಿದ್ದಕ್ಕಾಗಿ ಭೂಲೋಕದಲ್ಲಿ ನೀನು ಕಲ್ಲಾಗಿ ಹೋಗು ಎಂದು ಶಾಪಕೊಡುತ್ತಾಳೆ. ಆಗಲೂ ತಪ್ಪನ್ನು ತಿದ್ದಿಕೊಳ್ಳದೇ ಕಾಮಾಂಧನಾಗಿ ವಿಷ್ಣು ನಾನು

ಭೂಲೋಕದಲ್ಲಿ ನಿನ್ನ ಶಾಪದಂತೆ ಕಲ್ಲಾಗಿ ಹುಟ್ಟುತ್ತೇನೆ. ನೀನು ಸಹ ತುಳಸಿಯಾಗಿ ಭೂಲೋಕದಲ್ಲಿ ಹುಟ್ಟಿ, ಭೂಲೋಕದಲ್ಲಿ ಯಾವ ಭಕ್ತನು ನಿನ್ನನ್ನು ಶ್ರದ್ಧೆಯಿಂದ ತಂದು ನನಗೆ ಅರ್ಪಿಸುವನೋ ಅಂಥಹ ಭಕ್ತ ಇಹಲೋಕದಲ್ಲಿ ಮಾಡಿದ ಎಲ್ಲಾ ಪಾಪಗಳನ್ನು ತೊಳೆದು ಆತನನ್ನು ಪುನೀತಗೊಳಿಸುವೆ. ಅಂತಹವನಿಗೆ ವೈಕುಂಠದಲ್ಲಿ ಸ್ಥಾನ ನೀಡುವೆ ಎಂದು ಭಕ್ತರಿಗೆ ಆಶ್ವಾಸನೆ ನೀಡುತ್ತಾನೆ ಎಂದು ತುಳಸಿ ಜಲಂಧರ ಪುರಾಣದಲ್ಲಿ ದಾಖಲೆಯಿದೆ.

ಹೀಗೆ ಪುರಾಣಗಳು ತತ್ವ ವಿರುದ್ಧ ಬರಿ ಪೊಳ್ಳು ಕಥೆಗಳಿಂದ ಹೆಣೆಯಲ್ಪಟ್ಟಿವೆ. ಭಗವಂತನ ಜನ್ಮ, ರೂಪ, ಸ್ವಭಾವಾದಿ ಗುಣಗಳನ್ನು ನೋಡಿದರೆ ಭಗವಂತನಲ್ಲಿ ಅವತಾರ ಪುರುಷನೂ ಒಂದಲ್ಲ ಒಂದು ರೀತಿಯಲ್ಲಿ ಮಾನವರಾದ ನಮಗಿಂತಲೂ ಅದೆಷ್ಟೋ ಹೀನರಾಗಿ ಕಾಣಿಸಿಕೊಂಡಿರುವಾಗ ಇಂತವರು ತಮಗಿಂತಲೂ ಆದರ್ಶ ಪುರುಷೋತ್ತಮರು ಹೇಗೆ ಆದರು? ಇಂತಹ ನೀತಿಗೆಟ್ಟ ಕತೆಗಳಿಂದ ಪುಣ್ಯ ಹೇಗೆ ತಾನೇ ಬಂದೀತು?

**ಪ್ರಾಚೀನ ಧರ್ಮ ಗ್ರಂಥಗಳಲ್ಲಿ**

**ಋಗ್ವೇದದಲ್ಲಿ:** ಸಾಮಾನ್ಯ ವೇಶ್ಯಾಗಾರಿಕೆಯ ಬಗ್ಗೆ ಕೆಲವು ಸೂಚನೆಗಳಿವೆ. ‘ವಾರಾಂಗನೆ’ ‘ಸೇವಕಿಯ ಮಗ’ ‘ಮದುವೆಯಾಗದ ಹುಡುಗಿಯ ಮಗ’ ಎಂಬ ಅರ್ಥದ ಪದಗಳನ್ನು ಕಾಣುತ್ತೇವೆ. ಋಗ್ವೇದಗಳಲ್ಲೂ ಆನಂತರದ ಬರವಣಿಗೆಗಳಲ್ಲೂ, ರಾಜರ ಮತ್ತು ಪ್ರಜೆಗಳ ಆಶ್ರಯ ಪಡೆದಿದ್ದ ವೇಶ್ಯೆಯರ, ಗಣಿಕೆಯರ ಮತ್ತು ನಾಯಕ ಸಾನಿಯರ ಪ್ರಸ್ತಾಪಗಳಿವೆ. ಋಗ್ವೇದದ ಕಾಲದಲ್ಲಿ ಜನಸಾಮಾನ್ಯರಿಂದ ಸಾಮೂಹಿಕ ಸಂಪತ್ತು ಎಂಬಂತೆ ಭೋಗ್ಯಳಾದ ನಾರಿಯನ್ನು ವೇಶ್ಯೆ ಎಂದು ಕರೆಯಲಾಗಿದೆ.

**ಮಹಾಭಾರತದಲ್ಲಿ:** ಮಹಾಭಾರತದ ಪ್ರಕಾರ ಆ ಕಾಲದಲ್ಲಿ ರಾಜರು ತಮ್ಮ ಸ್ಥಾನಮಾನ, ವೈಭವ ಮತ್ತು ಆನಂದದ ಸಂಕೇತವಾಗಿ ನಾಯಕಸಾನಿಯರನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಾಕುತ್ತಿದ್ದರು ಎಂಬ ಅಂಶ ಕಂಡುಬರುತ್ತದೆ. ಹಾಗೆಯೇ ಸ್ವೇಚ್ಛಾಚಾರವಿತ್ತು ಎನ್ನುವುದಕ್ಕೆ ‘ಶಲ್ಯನ ಮುದ್ರರಾಜ್ಯವೇ’ ಸಾಕ್ಷಿ.

**ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ:** ಗಣಿಕೆಯರ ವಿಷಯ, ವಿಸ್ತಾರವಾಗಿದ್ದರೂ ದೇವದಾಸಿಯರ ಪ್ರಸ್ತಾಪ ವಿರುವುದಿಲ್ಲ. ಈ ಗ್ರಂಥವು ಕ್ರಿ.ಪೂ.೩೦೦ರಲ್ಲಿ ರಚನೆಯಾಯಿತು. ಈ ಗ್ರಂಥದ ೩ನೇ ಭಾಗದ ೨೭ನೇ ಅಧ್ಯಯನದಲ್ಲಿ ‘ಗಣಿತಾಧ್ಯಕ್ಷ’ನ ಕರ್ತವ್ಯಗಳು ಮತ್ತು ಸವಲತ್ತುಗಳ ಬಗ್ಗೆ ತಿಳಿಸಲಾಗಿದೆ. ಚಂದ್ರಗುಪ್ತ ಮೌರ್ಯನ ಆಳ್ವಿಕೆಯ ಕಾಲದಲ್ಲಿ ಅತಿ ದೊಡ್ಡ ಸಂಬಳದ ಉನ್ನತ ಅಧಿಕಾರವನ್ನು ಹೊಂದಿದ್ದ, ಆ ಕಾಲದಲ್ಲಿ ಕಛೇರಿಯ ನಿಯಮಗಳ ಬಿಗಿ ಹಿಡಿತದಲ್ಲಿ ಗಣಿಕೆಯರಿದ್ದರು. ಆ ನಿಯಮ ಉಲ್ಲಂಘನೆ ಮಾಡಿದವರಿಗೆ ದಂಡ ವಿಧಿಸುವ ಪಟ್ಟಿಯನ್ನು ಕೌಟಿಲ್ಯ ನೀಡುತ್ತಾನೆ. ಇವರು ದೇವಾಲಯಗಳ ಸೇವೆಯಿಂದ ನಿವೃತ್ತರಾಗುವ ಸ್ವಾತಂತ್ರ್ಯವನ್ನು ಹೊಂದಿದ್ದರು. ಇವರ ಕರ್ತವ್ಯಗಳ ಕೆಲ ಉಲ್ಲೇಖಗಳು ಹೀಗಿವೆ. ಆಸ್ಥಾನದಲ್ಲಿ ರಾಜನು ಸಿಂಹಾಸನಾರೂಢನಾದಾಗ ಅಥವಾ ರಥದಲ್ಲೋ, ಪಲ್ಲಕ್ಕಿಯಲ್ಲೋ ಪ್ರಯಾಣಿಸುತ್ತಿದ್ದಾಗ, ಚಿನ್ನದ ಹೂಜಿಯನ್ನು ಕೈಯಲ್ಲಿ ಹಿಡಿದು ಚಾಮರಗಳಿಂದ ಗಾಳಿ ಬೀಸುತ್ತಾ, ಆಸ್ಥಾನದಲ್ಲಿ ಹಾಡುವ ನರ್ತಿಸುವಂತಹ ಸೇವೆಗಳನ್ನು ಗಣಿಕೆಯರಿಂದ ನಿರೀಕ್ಷಿಸಲಾಗುತ್ತಿತ್ತು.

ಹಾಗೆ ಕೌಟಿಲ್ಯನ ಪ್ರಕಾರ ನಾಲ್ಕು ಹಂತಗಳಲ್ಲಿ ವೇಶ್ಯೆಯರು ನಿರ್ಮಾಣವಾಗುತ್ತಾರೆ. ೧.ಗಣಿಕೆಯರ

ಮಕ್ಕಳು, ೨.ಕೊಂಡುಕೊಂಡವರು, ೩.ಯುದ್ಧದಲ್ಲಿ ಸೆರೆ ಹಿಡಿದು ತಂದವರು, ೪.ಶಿಕ್ಷೆಗೊಳಗಾದ ಕಳಂಕಿತ ಮಹಿಳೆಯರು.

ವಾತ್ಸಾಯನನ ಕಾಮಸೂತ್ರ (ಕ್ರಿ.ಶ.೨೫೦) ಇಲ್ಲಿ ವಾರಾಂಗನೆಯರನ್ನು ಕುರಿತು ವಿವರವಾಗಿ ತಿಳಿಸಿದ್ದಾರೆ. ನೃತ್ಯ ಮಾಡುವುದು, ಹಾಡುವುದು, ಸಂಗೀತ, ವಾದ್ಯಗಳನ್ನು ನುಡಿಸುವುದು ಇವು ವೇಶ್ಯೆಯರಿಗೆ ಮಾತ್ರ ಪ್ರಮುಖ ಅವಶ್ಯಕತೆಯಾಗಿರಲಿಲ್ಲ. ತಮ್ಮ ಗಂಡಂದಿರ ಪ್ರೀತಿಗಳಿಸಿಕೊಳ್ಳಲು ಬಯಸುವ ಮದುವೆಯಾದ ಮಹಿಳೆಗೂ ಅವಶ್ಯಕತೆಯಾಗಿತ್ತು. ಅವನು ವೇಶ್ಯೆಯರಲ್ಲಿ ೯ ಬಗೆಗಳನ್ನು ತಿಳಿಸುತ್ತಾನೆ. ಆ ಪೈಕಿ ಹೆಚ್ಚು ಗೌರವಕ್ಕೆ ಪಾತ್ರಳಾದವಳು 'ಗಣಿಕಾ' ಆ ಬಗೆಯ ಮಹಿಳೆಯರು ರಾಜರಿಂದ ಮನ್ನಣೆ, ಬಹುಮಾನ, ಗಣ್ಯವ್ಯಕ್ತಿಗಳಿಂದ ಹೊಗಳಿಕೆಗೆ ಪಾತ್ರರಾಗುತ್ತಿದ್ದರು. ಅವಳ ಸಂಬಂಧಕ್ಕಾಗಿ ಅನೇಕ ಜನರು ಹಾತೊರೆಯುತ್ತಿದ್ದರು.

ಈತ ವೇಶ್ಯೆಯರನ್ನು ಪ್ರಮುಖವಾಗಿ ೩ ಪ್ರಕಾರಗಳಲ್ಲಿ ವಿಂಗಡಿಸಿದ್ದಾನೆ.

**೧. ಗಣಿಕಾ:** ಇವರು ಅತ್ಯಂತ ಚಲುವೆಯರಿದ್ದು, ೬೪ ಕಲೆಗಳಲ್ಲಿ ಪ್ರವೀಣರಾಗಿದ್ದ, ಅರಸರು ಮತ್ತು ಅಧಿಕಾರಿಗಳಿಂದ ಮನ್ನಣೆ ಪಡೆದು ಉನ್ನತ ಸ್ಥಾನದಲ್ಲಿದ್ದರು.

**೨. ರೂಪಜೀವಿ:** ಇವರು ಸಾಮಾನ್ಯ ದರ್ಜೆಯ ವೇಶ್ಯೆಯರಾಗಿರಲಿಲ್ಲ, ಸುಂದರಿಯರಿದ್ದು, ಉನ್ನತ ಮಟ್ಟದ ವೇಶ್ಯಾವೃತ್ತಿ ನಡೆಸುತ್ತಿದ್ದರು.

**೩. ಸಾಮಾನ್ಯ ವೇಶ್ಯೆಯರು:** ಇವರು ತಮ್ಮೊಂದಿಗೆ ಬರುವವರೊಡನೆ ಲೈಂಗಿಕ ಸಂಬಂಧ ಬೆಳೆಸುತ್ತಿದ್ದರು. ಇವರಲ್ಲಿ ಪುನಃ ೫ ಬಗೆಗಳಾಗಿ ವರ್ಗೀಕರಿಸಿರುವುದುಂಟು,

**೧.ರಾಜವೇಶ್ಯೆ:** ರಾಜನ ಸೇವೆಗೆ ಮೀಸಲಿದ್ದವಳು

**೨.ನಾಗರೀ ವೇಶ್ಯೆ:** ಪಟ್ಟಣದ ವೇಶ್ಯೆ

**೩.ಗುಪ್ತವೇಶ್ಯೆ:** ಗೌರವ ಮನೆತನದ ಹೆಣ್ಣುಗಳು ಗುಪ್ತವಾಗಿ ಈ ಉದ್ಯೋಗ ಮಾಡುತ್ತಿದ್ದರು

**೪.ದೇವ ವೇಶ್ಯೆಯರು:** ದೇವರಿಗೆ ಮಾತ್ರ ಮೀಸಲಾಗಿರುವ ಹೆಣ್ಣುಗಳು

**೫.ಬ್ರಹ್ಮವೇಶ್ಯೆಯರು:** ಯಾತ್ರಾ ಸ್ಥಳಗಳಲ್ಲಿ ಬರುವ ಅತಿಥಿಗಳಿಗ ಲೈಂಗಿಕ ಸಂಬಂಧದಿಂದ ತೃಪ್ತಿಪಡಿಸುವವರು.

ಹೀಗೆ ವಾತ್ಸಾಯನನ ಕಾಮಸೂತ್ರದಲ್ಲಿ ಒಂದೇ ಉದ್ದೇಶಕ್ಕೆ ನಿಯೋಜಿತರಾದ ವೇಶೆಯರನ್ನು ಅವರು ಹೊಂದಿರುವ ವ್ಯಕ್ತಿಗಳ ಸಂಬಂಧವನ್ನು ಆಧರಿಸಿ ಅವರನ್ನು ವಿಂಗಡಿಸಲಾಗಿದೆ.

**೫. ಕಾಳಿದಾಸನು** ತನ್ನ ಮೇಘದೂತ ಕೃತಿಯಲ್ಲಿ ಉಜ್ಜಯಿನಿಯ ಮಹಾಕಾಳಿ ದೇವಸ್ಥಾನದಲ್ಲಿ ನರ್ತಕಿಯರಿದ್ದ ವಿಷಯವನ್ನು ತಿಳಿಸಿದ್ದಾನೆ. ಸಾಯಂಕಾಲ ಪೂಜಾ ಸಮಯದಲ್ಲಿ ನರ್ತಕಿಯರು ಹಾಜರಿರಬೇಕೆಂದು ನಿರೀಕ್ಷಿಸಲಾಗುತ್ತಿತ್ತು ಎಂದು ತಿಳಿಸಿದ್ದಾನೆ.

೬. ಬುದ್ಧಘೋಷನ ಕಾಲದಲ್ಲಿ ದೇವದಾಸಿಯರಾಗಿ ಅರ್ಪಿಸುವ ಪದ್ಧತಿ ಜಾರಿಯಲ್ಲಿತ್ತು ಎಂದು ಚನಾನ ಅಭಿಪ್ರಾಯಪಡುತ್ತಾರೆ. (ಚನಾನ ೧೯೭೫-೭೦)

೭. ಶೂದ್ರಕನ ಮೃಚ್ಛಕಟಿಕ ನಾಟಕದಲ್ಲಿ: ಒಬ್ಬ ಬಡ ಬ್ರಾಹ್ಮಣನ ಮತ್ತು ಶ್ರೀಮಂತ ಉದಾರಿಯಾದ ವಸಂತಸೇನೆ ಎಂಬ ವೇಶ್ಯೆ ಇವರಿಬ್ಬರ ಸಮಾಗಮ ಮತ್ತು ಮದುವೆಯ ಪ್ರಸ್ತಾಪವಿದೆ. ಜೊತೆಗೆ ಒಂದು ಸಾವಿರ

ಚಿನ್ನದ ನಾಣ್ಯ ಮತ್ತು ಆಭರಣಗಳನ್ನು ಗಣಿಕೆಯ ಮನೆಗೆ ಅವಳ ಮನ ಒಲಿಸಿಕೊಳ್ಳಲು ಕಲಿಸಿರುವುದನ್ನು ಕಾಣುತ್ತೇವೆ.)

೮. ಬುದ್ಧ ಮತ್ತು ಆತನ ಅನುಚರರಿಗೆ ಆಹಾರವನ್ನು ನೀಡಿದ ಮಹಾನ್ ವೇಶ್ಯೆಯರ ಅನೇಕ ಹೆಸರುಗಳನ್ನು ದೀರ್ಘ ನಿಕಾಯ, ಮಜ್ಜಿಯ ನಿಕಾಯ ಮತ್ತು ಸಂಯುಕ್ತ ನಿಕಾಯ ಎಂಬ ಭೌದ್ಧ ಗ್ರಂಥಗಳು ನಮೂದಿಸುತ್ತವೆ. ವೇಶ್ಯೆಯಾದ ಅಂಮ್ರಪಾಲಿಕೆಯು ಬುದ್ಧ ಮತ್ತು ಆತನ ಅನುಚರರಿಗೆ ನೀಡಿದ ದೊಡ್ಡ ಜಾತನಾದ ಪ್ರಸಂಗವಿದ್ದು ಅವಳು ಬೌದ್ಧಭೀಕ್ಷುಗಳಿಗೆ ತನ್ನ ಮಾವಿನ ತೋಪನ್ನು ದಾನವಾಗಿ ಕೊಡುತ್ತಾಳೆ. ಸಾಲವತಿಯ ಮಗಳು ಸಿರಿಯಾ ಒಂದು ರಾತ್ರಿಗೆ ೧೦೦೦ ಕಾರ್ಶಷಣಗಳನ್ನು ಕೇಳುತ್ತಿದ್ದಳಂತೆ. ರೂಪ ಯೌವನ ಕಳೆದುಕೊಂಡ ವೇಶ್ಯೆಯರ ಸ್ಥಾನಮಾನ ಕಡಿಮೆಯಾಗುತ್ತಿತ್ತು. ಆಗ ಅವರು ಎಂತಹ ಕನಿಷ್ಟ ಬೆಲೆಗೂ ಸಿದ್ಧರಾಗುತ್ತಿದ್ದರು ಎಂದು ವೇಶ್ಯಾವೃತ್ತಿಯ ಕುರಿತ ಪ್ರಮುಖ ಕೃತಿಯಾದ 'ಕುಟ್ಟನೀಮತಿ' ಯಲ್ಲಿ ಪರಿಪರಿಯ ಕಷ್ಟಗಳನ್ನು ಅನುಭವಿಸಿದ ವೇಶ್ಯೆಯರ ಸ್ಥಿತಿಗತಿಗಳನ್ನು ದಾಖಲಿಸಿರುವುದನ್ನು ಗಮನಿಸಬಹುದಾಗಿದೆ.

**ಶಾಸನಗಳಲ್ಲಿ ದೇವದಾಸಿ ಸಂಪ್ರದಾಯದ ಬಗೆಗಿನ ಉಲ್ಲೇಖಗಳು**

ಕ್ರಿಸ್ತ ಶಕ ಆರಂಭದ ದಶಕಗಳಲ್ಲಿ ಕಟ್ಟಿದ ದೇವಸ್ಥಾನಗಳಿದ್ದು ಅವುಗಳಿಗೆ ರಾಜರು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರೆಂದು ಶಾಸನಗಳು ತಿಳಿಸುತ್ತವೆ. ಸುಮಾರು ಕ್ರಿ.ಶ.೧೫೦ರ ಕದಂಬರ ಪ್ರಾಕೃತ ಶಾಸನದಲ್ಲಿ ಶಾತವಾಹನರ ರಾಜನೊಬ್ಬನು ಮಟ್ಟ ಪಟ್ಟದೇವರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವಿದೆ. ಆ ದೇವಸ್ಥಾನವು ಮಹಾಮುನಿಗಳ ವಾಸಸ್ಥಾನವೂ ಆಗಿದ್ದಿತೆಂದು ಆ ಶಾಸನವು ತಿಳಿಸುತ್ತದೆ. ಸುಮಾರು ೪೫೦ರ ತಾಳಗುಂದದಲ್ಲಿ ಮಹಾದೇವನ ದೇವಸ್ಥಾನವಿದ್ದದ್ದು ಶಾಸನದಿಂದ ತಿಳಿಯುವುದು.

"ಅಶೋಕ ಚಕ್ರವರ್ತಿಯ ಆಡಳಿತ ಕಾಲದಲ್ಲಿ ಪ್ರಾಕೃತ ಶಾಸನ ಕುರಿತು ಸಂಶೋಧಕ ಜೆ.ಬ್ಲಾಕ್‌ರವರು ವಿಂದ್ಯಬೆಟ್ಟಗಳಲ್ಲಿರುವ ರಾಮಘುರ್ ಬಳಿಯ ಒಂದು ಗುಹೆಯಲ್ಲಿ ಎರಡು ಶಾಸನಗಳಿದ್ದು ಅದರಲ್ಲಿ ಒಂದು ಚಿತ್ರಕಾರನಾದ ಹರೆಯದ ದೇವದಿನ್ನ ದೇವರ ಗುಲಾಮ ಹುಡುಗಿ 'ಸೂತನುಕ'ಳನ್ನು ಪ್ರೀತಿಸಿದ"[೨೪].

ಮುಂದೆ ದೇವಾಲಯದ ಮೇಲೆ ವೇಶ್ಯೆ, ದೇವದಾಸಿ ಮತ್ತು ಅದೇ ಮಾದರಿಯ ಹೆಂಗಸಿಗೆ ಈ ಮೋಹಕ ಶಕ್ತಿಯ 'ಸೂತನುಕ' ಪದವನ್ನು ಬಳಸಲಾಯಿತೆನ್ನಲಾಗಿದೆ.

ಪ್ರಾಚೀನ ಭಾರತದಲ್ಲಿಯೇ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ರೀತಿಯಲ್ಲಿದ್ದದ್ದು ಕಂಡು ಬರುತ್ತದೆ. ಶಿಲಾಶಾಸನಗಳಿಂದ ತಿಳಿದುಬಂದಂತೆ, ದಕ್ಷಿಣ ಭಾರತದಲ್ಲಿ ತಂಜಾವೂರು, ಮಧುರೆ ಮುಂತಾದ ಕಡೆ ಇರುವ ದೇವಸ್ಥಾನಗಳಲ್ಲಿಯೂ ದೇವದಾಸಿಯರು ಇದ್ದು ಅವರು ಅಲ್ಲಿ ನಿರ್ದಿಷ್ಟ ಸೇವೆ ಮಾಡುತ್ತಿದ್ದರು. ಇವರನ್ನು ಅಂಗಭೋಗ ಮತ್ತು ರಂಗಭೋಗದ ಸೇವೆಯವರು ಎಂದು ಎರಡು ಭಾಗ ಮಾಡಲಾಗುತ್ತಿತ್ತು. ಅಂದರೆ, ಈಗಾಗಲೇ ವಿವರಿಸಿದಂತೆ ದೇವರನ್ನು ಮಾನವರಂತೆ ಕಂಡುಕೊಂಡು ಅವನಿಗೂ ತಮ್ಮಂತೆ ಅಂಗ, ರಂಗಭೋಗಗಳ ಸೇವೆಗಳನ್ನು ನೀಡಲು ಪ್ರಾರಂಭಿಸಿದರು. ಅನೇಕ ದಕ್ಷಿಣ ಭಾರತದ ದೇವಾಲಯಗಳಲ್ಲಿ ರಂಗ ಮಂಟಪಗಳಿರುವುದು ಕಂಡುಬರುತ್ತದೆ. ದೇವರಿಗೆ ಮುಡಿಪಾದ ಸ್ತ್ರೀ ದೇವರ ಮನರಂಜನೆಗೆ ಇಲ್ಲಿ ನೃತ್ಯ ಮಾಡುತ್ತಿದ್ದಳು. ಈ ಎರಡೂ ಗುಂಪುಗಳಲ್ಲಿ ಅನೇಕ ಸುಂದರ ಸ್ತ್ರೀಯರಿದ್ದು, ಈ ಪದ್ಧತಿಯಂತೆ ಒಂದು ಹೊಸ

ದೇವಸ್ಥಾನ ನಿರ್ಮಾಣ ಮಾಡಿದಾಗ ಅಥವಾ ಜೀರ್ಣೋದ್ಧಾರ ಮಾಡಿದಾಗ, ಆ ನಾಡಿನ ಅಥವಾ ನಗರದಲ್ಲಿನ ಅನೇಕ ಸುಂದರ ಸ್ತ್ರೀಯರನ್ನು ಅಲ್ಲಿ ಸೇವೆ ಮಾಡಲು ದತ್ತಿಯಾಗಿ ನೀಡುವ ಪದ್ಧತಿ ಇರುವುದು ತಿಳಿದು ಬರುತ್ತದೆ. ಮುಂದೆ ಹೆಚ್ಚು ಸಂಖ್ಯೆಯಲ್ಲಿ ಅನೇಕ ಸಾರಿ ಕಂಬಕ್ಕೆ ಅಥವಾ ಬಾಗಿಲಿಗೆ ಒಬ್ಬಳಂತೆ ಸುಂದರಿಯರನ್ನು ಗುಡಿಗೆ ಕಾಣಿಕೆಯಾಗಿ ನೀಡುವುದು ರಾಜರ ಪ್ರತಿಷ್ಠೆಯ ಕುರುಹಾಗಿದ್ದಿತು.

ಆದ್ದರಿಂದ ನೂರು ಅಥವಾ ಸಾವಿರಕ್ಕಿಂತ ಹೆಚ್ಚು ಸುಂದರಿಯರನ್ನು ನೀಡಿರುವ ಉಲ್ಲೇಖಗಳು ಶಾಸನಗಳಿಂದ ತಿಳಿದು ಬರುತ್ತದೆ. ಕ್ರಿ.ಶ. ೪೫೦ರಲ್ಲಿ ಶಿಕಾರಿಪುರದ ಬಳಿಯಲ್ಲಿ ತಾಳಗುಂದದ ಶಾಸನದಲ್ಲಿ ಮಹಾದೇವನ ಗುಡಿಯಲ್ಲಿ ಮಂತ್ರಘೋಷ, ಗಾಯನಗಳು, ಕೇಳಿಬರುತ್ತಿದ್ದವೆಂದು ಹೇಳಲಾಗಿದೆ.

ಒಂದರಿಂದ ಹದಿನಾರು ಜನ ದೇವದಾಸಿಯರನ್ನು ಪ್ರತಿಯೊಂದು ದೇವಾಲಯವು ಹೊಂದಿದ್ದು, ಅಂತಹ ಮಹಿಳೆಯರ ಹೆಸರುಗಳನ್ನು ಹೊಂದಿರುವ ಕೆಲವು ಶಾಸನಗಳು ನಮಗೆ ದೊರಕುತ್ತವೆ. ಅವುಗಳೆಂದರೆ, ಸೂಡಿಕಾಳಿದೇವ ದೇವಾಲಯದ ಪಾತ್ರದ ಸಿರಿಯವ್ವೆ (ಕ್ರಿ.ಶ.೧೦೫೫), ಬೆಳ್ಳಿಗಾವೆಯ ತ್ರಿಪುರಾಂತಕ ದೇವಾಲಯದ ಪದ್ಮಾವತಿ, ಹುಣಿಗಾರ್ ಮಾದೆವ್ವೆ, ಆನೆಯಮಾಳವ್ವೆ, ನಾಗವ್ವೆ, ಚಂದ್ರವ್ವೆ, ಹೊಯ್ಸಳೇಶ್ವರ ದೇವಾಲಯದ ಪಾತ್ರದ ದೇವವ್ವೆ, ಹಾಡುವ ಕಾಮವ್ವೆ, ಆ ಪೈಕಿ ಕೆಲವರು ಇವರುಗಳನ್ನು ಕರ್ನಾಟಕದ ಪುರಾತನ ದೇವದಾಸಿಯರೆಂದು ಪರಿಗಣಿಸಲಾಗಿದೆ. ವಿರೂಪಾಕ್ಷ ದೇವಾಲಯಕ್ಕೆ 'ದೇಗುಲದ ಸೂಳೆ' ಒಂದು ಕುದುರೆ ರಥ ಮತ್ತು ಒಂದು ಆನೆಯ ರಥವನ್ನು ನೀಡಿದಳು ಎಂಬ ವಿಷಯ ಕರ್ನಾಟಕದ ಅತ್ಯಂತ ಪ್ರಾಚೀನ ಶಾಸನವು ಹೇಳುತ್ತದೆ.

ಭುವನೇಶ್ವರಕ್ಕೆ ಸ್ವಲ್ಪ ದೂರ ಪುರಿ ಜಿಲ್ಲೆಯ ಕನಾರಕ್ (ಕೋಣಾರ್ಕ) ಎಂಬಲ್ಲಿ ಎಣೆ ಇಲ್ಲದ ಸೌಂದರ್ಯದಿಂದ ಕೂಡಿದ ಸೂರ್ಯದೇವಾಲಯ, ಅಲ್ಲಿನ ಕಿಂಕರ ದೇವತೆಗಳ ಕೆತ್ತನೆ. ಪ್ರೇಕ್ಷಕರ ಲೋಕವನ್ನು ವಿಸ್ಮಯಗೋಳಿಸುತ್ತವೆ. ಮಂತ್ರ ಮುಗ್ಧವಾಗಿಸುತ್ತವೆ. ನಿರ್ಜೀವವಾಗಿರುವ ಕಲ್ಲು ಹೇಗೆ ಸತತವಾಗಿ ಜಾಗರೂಕವಾಗಿರುವ ಮತ್ತು ವಾಚಾಳಿಯಾಗಿರುವ ಮಾನವನನ್ನು ಮೂಕವಾಗಿಸುತ್ತವೆ. ಮಾನವೀಯ ನೆಲೆಗಟ್ಟನ್ನು ಮೀರಿಸುವ ಶೃಂಗಾರಪೂರ್ಣ ಮೈಥುನ ಶಿಲ್ಪಿಗಳ ಆಕರ್ಷಕ ಅನುನಯ ಇವೆಲ್ಲ ಒಂದಾಗಿ ಸೇರಿಕೊಂಡು ಆ ವಿಶಾಲ ಶಿಲಾಸಮುದಾಯದಲ್ಲಿ ಚೈತನ್ಯವನ್ನು ಸೃಷ್ಟಿಸಿಬಿಡುತ್ತವೆ. ಇದರಂದ ಮಾನವ ಅಂತರ್ಮುಖಿಯಾಗಿಬಿಡುತ್ತಾನೆ.

ಕಾಮುಕ ಚಿತ್ರಗಳ ಕೆತ್ತನೆಯು ೬ ಮತ್ತು ೭ನೇ ಶತಮಾನದ ಖಜುರಾಹೋವಿನ ಚಂದೇಲ ಮಂದಿರ. ಎಲ್ಲೋರದ ಕೈಲಾಸನಾಥ ದೇವಾಲಯ, ಕಾಶಿಯ, ನೇಪಾಳಿ ಮಂದಿರ, ಇವೆಲ್ಲಾ ಈ ಬಗೆಯ ಶೃಂಗಾರ ಚಿತ್ರಗಳಿಂದ ಕೂಡಿವೆ. ಹೀಗೆ ಕಲೆಯಲ್ಲಿ ನಗ್ನ ಸೌಂದರ್ಯೋಪಾಸನೆ ತುಂಬಾ ಪ್ರಾಚೀನವಾದುದಾಗಿದೆ. ಕುಷಾಣರ ಮತ್ತು ಗುಪ್ತರ ಕಾಲದಲ್ಲಿ ಯಕ್ಷ-ಯಕ್ಷಿಣಿಯರ ಕಾಮ ಪ್ರಮತ್ತ ಪರಿವಾರ ಹುಲುಸಾಗಿ ಬೆಳೆದು ನಿಂತಿದೆ. ಪುರುಷನ ವಿಷಯ ವಾಸನಾಜನ್ಯ ಕಾಮುಕತೆ ಭಾರತದಿಂದಲೇ ತುಳಿಯಲ್ಪಟ್ಟು ಈ ವಿಷಯದಲ್ಲಿ ನಾರಿಗೆ ಸರ್ವೋಚ್ಛ ಸ್ಥಾನ ದೊರೆತಿದೆ. ಅವನನ್ನು ಮೆಟ್ಟಿನಿಂತು ನಾರಿ ನಗ್ನ ತಾಂಡವವನ್ನಾಡುತ್ತಿದೆ. ಈ ಕಾರಣಕ್ಕೆ ಬುದ್ಧ ಸಂಘಕ್ಕೆ ನಾರಿಯರು ಪ್ರವೇಶ ಮಾಡುವುದನ್ನು ನಿಷೇಧಿಸಿದ್ದ. ಹೀಗೆ ದೇವಾಲಯಗಳಲ್ಲಿ ಮೂರ್ತಿಗಳು

ನಗ್ನರೂಪದಲ್ಲಿ ಕಂಡುಬರುವುದನ್ನು ಪ್ರತ್ಯಕ್ಷವಾಗಿ ಕಾಣಬಹುದಾಗಿದೆ. ಕಾರಣ ಇಂದಿಗೂ ಈ ಪ್ರತಿಮೆಗಳು ಜೀವನವನ್ನು ತುಂಬಿ ಪ್ರೇಕ್ಷಕರನ್ನು ಕಾಡುತ್ತಿವೆ. ೭ನೇ ಶತಮಾನದ ವಜ್ರಯೋನಿಗಳ ತಾಂಡವ ನೃತ್ಯ ಆರಂಭಗೊಂಡಿತ್ತು. ಎಲ್ಲೆಲ್ಲಿ ಈ ಕಾಮೋತ್ತೇಜಕ ಪ್ರತಿಮೆಗಳ ಬಳಕೆ ಕಂಡುಬರುತ್ತದೆಯೋ ಆ ದೇವಾಲಯಗಳು ೭ನೇ ಶತಮಾನದ ನಂತರದಲ್ಲಿ ನಿರ್ಮಾಣವಾದವುಗಳಾಗಿವೆ.

ಕ್ರಿ.ಶ.೬ನೇ ಶತಮಾನದ ಅನಂತರದ ಸಾಹಿತ್ಯ ಮತ್ತು ಶಾಸನಗಳಲ್ಲೆಲ್ಲಾ ದೇವದಾಸಿಯರ ಅಸ್ತಿತ್ವವನ್ನು ಕಾಣುತ್ತೇವೆ. ಉತ್ತರ ಭಾರತದಲ್ಲಿ ವ್ಯಾಪಾರದ ಹೆದ್ದಾರಿಯು ತೆರೆಯುತ್ತಿದ್ದಂತೆ ನಗರ ಪಟ್ಟಣ ಅಸ್ತಿತ್ವಕ್ಕೆ ಒಂದು ಆಸ್ಥಾನ ಸ್ತ್ರೀಯರ ಪ್ರವಾಸಿಗರನ್ನು ಆಕರ್ಷಿಸುವ ಮತ್ತು ತಮ್ಮ ದಂಧೆಯನ್ನು ನಡೆಸುವ ಪ್ರಯತ್ನ ನಡೆಸುತ್ತಿದ್ದರು. ಆಸ್ಥಾನದ ಸ್ತ್ರೀಯರು ಹಲವಾರು ಲಲಿತ ಕಲೆಗಳಲ್ಲಿ ತರಬೇತಿ ಹೊಂದಿದವರು. ಆಗಿದ್ದರು. ಈ ಕಲಾರಾಧನೆ ರಾಜ್ಯದ ಬೊಕ್ಕಸದಿಂದ ಧನಸಹಾಯ ದೊರೆಯುತ್ತಿದ್ದದ್ದು ಉಂಟು ಈ ಕಲಾವಿದೆಯರು ರಾಜನ ಮನಸ್ಸಂತೋಷ ಪಡಿಸುವುದಷ್ಟೇ ಅಲ್ಲದೇ ಬೇಹುಗಾರರಾಗಿಯೂ ಕೆಲಸ ಮಾಡುತ್ತಿದ್ದುದುಂಟು. ಎನ್ನಲಾಗಿದೆ.

ಕರ್ನಾಟಕದ ಕೆಲವು ಶಾಸನಗಳಲ್ಲಿ ದೇವದಾಸಿಯರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ರಾಣಿವಾಸದ ಪೆಂಡವಾಸಿ, ಪೆಂಡವಾರದ ಸೂಳೆಯರು, ವಾರವಧು, ಗಣಿಕೆ, ಪಣ್ಯಾಂಗಮೆ, ಎಡಗಂಬದ ಸೂಳೆ, ಬಲಗಂಬದ ಸೂಳೆ, ನಡುಗಂಬದ ಸೂಳೆ, ಬಾಗಿಲದ ಸೂಳೆ ಮುಂತಾದ ಹೆಸರುಗಳಿಂದ ಕರೆದಿರುವುದು ಕಂಡುಬರುತ್ತದೆ.

ಹಾಗೆಯೇ "ಕ್ರಿ.ಶ.೯೮೫ ರಲ್ಲಿ ಸಿಂಹಾಸನ ಏರಿದ ದಕ್ಷಿಣ ಭಾರತದ ಚೋಳ ಸಾಮ್ರಾಟನು ಕ್ರಿ.ಶ.೧೦೪೦ರಲ್ಲಿ ತಂಜಾವೂರಿನ ಪ್ರಧಾನ ದೇವಾಲಯಕ್ಕೆ 'ನಾಲ್ಕುನೂರು' 'ತಾಳಿ ಚೇರಿವೆಂಡುಗಳ' ಅಥವಾ 'ದೇವಾಲಯದ ಮಹಿಳೆಯರ' ಸಂಬಂಧ ಹೊಂದಿದ್ದರೆಂದು ಶಾಸನ ತಿಳಿಸುತ್ತದೆ"[೫]. ಬಾದಾಮಿಯ ಚಾಲುಕ್ಯ ಚಕ್ರವರ್ತಿ ವಿಜಯಾದಿತ್ಯನಿಗೆ 'ವೀನಾಪೋಟಿ' ಎಂಬ ದೇವದಾಸಿ ಆತನ ಪ್ರಾಣವಲ್ಲಭೆಯಾಗಿದ್ದಳು ಎಂದು ಶಾಸನವು ತಿಳಿಸುತ್ತದೆ. ಕ್ರಿ.ಶ.೯೭೪ರ ಶಾಸನದಲ್ಲಿ ದೇವರಿಗೆ ಇಬ್ಬರು ಕನ್ಯೆಯರನ್ನು, ಹನ್ನೆರೆಡು ಹಸುಗಳನ್ನು ದಾನವಾಗಿ ಕೊಟ್ಟಂತೆ ಹೇಳಿದೆ.(EC VII Hi 64, 974 AD)

ಕ್ರಿ.ಶ.೧೦೫೪ರಲ್ಲಿ ಲಕ್ಷ್ಮೇಶರ ದೇವಸ್ಥಾನವನ್ನು ನಿರ್ಮಾಣಮಾಡಿಸಿ ಅದಕ್ಕೆ ದತ್ತಿಯನ್ನು ಬಿಟ್ಟುಕೊಟ್ಟಿದ್ದು ಉಲ್ಲೇಖವಿದೆ. ಎಡ ಪಕ್ಕದ ಕೇರಿಯ ಮೊದಲದೆಸೆಯ ಬಿಟ್ಟಿಯ ಚಾಮರದ ಸೂಳೆ, ಬೈಗೆಮ ೧೧ ಪೆರ್ಗಡ ಬಾಳಮೂಕಯ್ಯಂಗೆ ಮ ೧೫ ಬದಲ ದೆಸೆಯ ಮೊದಲ ಕಂಬದ ಸೂಳೆ ಬೈಗೆಮ ೧೫ ಅಲ್ಲಿಯ ಕಂಬದ ಸೂಳೆ ಅಸಗಬ್ಬೆಗೆ ಮ ೧೩ ಎಡದ ದೆಸೆಯ ಮೊದಲ ಕಂಬದ ಸೂಳೆ. ದೇವಗಬ್ಬೆಗೆ ಮ ೧೩ ಅಲ್ಲಿಯ ಕಂಭದ ಸೂಳೆ ಗುಬ್ಬಿಯ ಚಾವುಂಡಬ್ಬೆಗೆ ಮತ್ತರ್ ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ. ಬೈಗೆಯ ೧೨ ಅಲ್ಲಿಯ ಕೇರಿಯ ಚಾಮರದ ಸೂಳೆ ಜೆಟ್ಟಿಯಬ್ಬೆಗೆ ಮ ೧೨ ಎಡದ ದೆಸೆಯ ಪಾತ್ರಂ ಸೂಳೆ ಗಾರ್ಗಬ್ಬೆಗೆ ಮ ೧೨ ಎಡಪಕ್ಕದ ಕೇರಿಯ ಸೂಳೆ ಮೈಲಬ್ಬೆಗೆ ೧೨ ಬಲ ಪಕ್ಕದ ಕೇರಿಯ ಸೂಳೆ. ಅಕ್ಕಬ್ಬೆಗೆ ಮತ್ತರುಂ ೧೨ ಇಂತೀ ಮರ್ಯಾದೆಯುಂ ತಪ್ಪದೇ ಪ್ರತಿಪಾಳಿ.(EC XVp 82 1054 AD)

ದೇವದಾಸಿಯರನ್ನು ವೇಶ್ಯಾವೃತ್ತಿಯನ್ನು ಅವಲಂಬಿಸಿದ ಸಾಮಾನ್ಯ ವೇಶ್ಯೆಯರನ್ನು ಕನ್ನಡ ಶಾಸನಗಳು ಗೌರವದಿಂದ ಕಂಡಿವೆ. ಅನೇಕ ಪುರುಷರು ತಮ್ಮನ್ನು 'ವೇಶ್ಯಾಭುಜಂಗ' 'ವಿಟ'ರೆಂದು. 'ವಿಟಚಕ್ರವರ್ತಿ' ಎಂದು ಕರೆದುಕೊಳ್ಳಲು ಸಂಕೋಚ ಪಟ್ಟುಕೊಂಡಿಲ್ಲ. ಎಷ್ಟೋ ಕಡೆ ಹೆಮ್ಮೆಯ ಛಾಯ ಇದೆ. ಬಹುಶಃ ಧರ್ಮಪತ್ನಿಯ ಜೊತೆಯಲ್ಲಿ ಒಬ್ಬ ವೇಶ್ಯೆಯೊಡನೆ ಸಂಪರ್ಕವಿಟ್ಟುಕೊಳ್ಳುವುದು ಅವಮಾನಕರವೆಂದು ಜನರು ಭಾವಿಸಿರಲಿಲ್ಲ. ಹಾಗೆಯೇ ಸೂಳೆಯರ ಹಾವಭಾವಾದಿಗಳನ್ನು ಅವಹೇಳನ ಮಾಡಿರುವ ಶಾಸನಗಳೂ ಇವೆ. ಕ್ರಿ.ಶ.೧೨೦೪ರ ಮಂಗಳೂರಿನ ಶಾಸನದಲ್ಲಿ "ಕೂತಾಡುವ ಬಾಕನಂಗೆಯರು ಅಂದರೆ ದೇವದಾಸಿಯರು ಕ್ರಮ ಪ್ರಕಾರವಾಗಿ ದಿನ ನಿತ್ಯವೂ ನರ್ತಿಸಬೇಕೆಂದು ಸೂಚಿಸಲಾಗಿದೆ. ಇದು ಅವರ ಕರ್ತವ್ಯ ಮತ್ತು ಮಹತ್ವವನ್ನು ಸೂಚಿಸುತ್ತದೆ"[೨೬]. ಚೋಳ ಸಾಮ್ರಾಟರ ಆಡಳಿತ ಕಾಲಕ್ಕೆ ಸಂಬಂಧಿಸಿದಂತೆ, ಒಂದು ತಮಿಳು ಶಾಸನದಲ್ಲಿ ಹುಡುಗಿಯರನ್ನು ದೇವಾಲಯಗಳಿಗೆ ಅರ್ಪಿಸುವುದರ ಉಲ್ಲೇಖ ಸಿಗುತ್ತದೆ. ಇದು ಅತ್ಯಂತ ಪುರಾತನವಾದುದು." ಕ್ರಿ.ಶ.೯೮೫ರಲ್ಲಿ ಚೋಳರ ಸಾಮ್ರಾಟ ಸಿಂಹಾಸನ ಏರಿದನು. ಕ್ರಿ.ಶ.೧೦೪೦ರಲ್ಲಿ ತಂಜಾವೂರಿನ ಪ್ರಧಾನ ದೇವಾಲಯಕ್ಕೆ ನಾಲ್ಕುನೂರು 'ತಾಳಿ ಚೇರಿವೆಂಡಗಳ' ಅಥವಾ 'ದೇವಾಲಯದ ಮಹಿಳೆಯರು' ಸಂಬಂಧ ಹೊಂದಿದ್ದ ಅಂಶ ಶಾಸನವು ತಿಳಿಸುತ್ತದೆ. ಅವರು ದೇವಾಲಯ ಮತ್ತು ಸುತ್ತ ಇರುವ ಬೀದಿಗಳಲ್ಲಿ ವಾಸಮಾಡುತ್ತಿದ್ದರು ಎನ್ನಲಾಗಿದೆ"[೨೭]. ಈ ಶಾಸನದಿಂದ ಇಡೀ ಚೋಳ ದೇಶವು ದೇವದಾಸಿಯರನ್ನೊಳಗೊಂಡ ದೇವಾಲಯಗಳಿಂದ ತುಂಬಿಹೋಗಿದದ್ದು ಸ್ಪಷ್ಟವಾಗಿ ತಿಳಿದುಬರುತ್ತದೆ. ತಂಜಾವೂರು ದೇವಾಲಯಕ್ಕೆ ಕಳುಹಿಸಲಾದ ನರ್ತಕಿಯರ ಒಂದು ದೊಡ್ಡ ಪಟ್ಟಿಯನ್ನೇ ಶಾಸನ ನೀಡುತ್ತದೆ. ಈ ರೀತಿ ಕಳುಹಿಸಲ್ಪಟ್ಟ ಪ್ರತಿಯೊಬ್ಬ ನರ್ತಕಿಯ ಹೆಸರಿನ ಮುಂದೆಯೆ ಆಕೆ ಯಾವ ದೇವಾಲಯದ ಮೂಲದಿಂದ ಬಂದವಳು. ಆಕೆ ಪಡೆಯುವ ಸಂಭಾವನೆ ಮತ್ತು ಆಸ್ತಿ ಎಷ್ಟು ಎಂದು ತೋರಿಸಲಾಗಿದೆ. ಪಟ್ಟಿಯ ಕೊನೆಯಲ್ಲಿ ನಪುಸಂಕರು ಸಂಗೀತಗಾರರು, ನೃತ್ಯೋಪದ್ಯಾಯರು, ಹಾಡುಗಾರರು, ಛತ್ರಿಹಿಡಿಯುವವರು, ಮತ್ತಿತರ ದೇವಾಲಯದ ಸೇವಕರ ಹೆಸರುಗಳು ಮತ್ತು ಅವರ ಪಾಲನ್ನು, ಸಂಭಾವನೆಯನ್ನು'ತೋರಿಸಲಾಗಿದೆ.

ಅದೇ ಸೊಂಡಿಯ ನಾಗೇಶ್ವರ ದೇವಸ್ಥಾನದ ದೇವದಾಸಿಯರಿಗೆ ದತ್ತಿಗಳನ್ನು ಬಿಟ್ಟುಕೊಟ್ಟ ಶಾಸನದ ಭಾಗ ಈ ರೀತಿ ಇದೆ. ದೇವರ ಭೋಗಕ್ಕೆ ನಡೆದ ಪಿರಿಯವಾಳದ ಸೂಳೆಗೆ, ಮತ್ತರ್ ೩೦ ಪೆರ್ಗಡೆವಾಳ ಸೂಳೆಗೆ ಮತ್ತರ್ ೧೫ ಬಲವಕ್ಕದೆಡವಕ್ಕದ ಕಂಬದ ಸೂಳೆಯರ್ ನಾಲ್ವರ್ಗ್ಗಂ ಮತ್ತರ್ ೪೮ ಬಲಕ್ಕೆವಡೆವಕ್ಕದ ಭೋಗದ ಸೂಳೆಯೊಬ್ಬರ್ಗಂ ಮತ್ತರ್ ೨೪ ಎಂದು ಈ ಶಾಸನವು ನಾಗೇಶ್ವರವನ್ನು ಕಟ್ಟಿಸಿದ ನಾಗದೇವಯ್ಯನು ದೇವಸ್ಥಾನದ ಪಕ್ಕದಲ್ಲಿಯೇ ಸೂಳೆಗೇರಿಯನ್ನು ಕಟ್ಟಿಸಿದನು ಎಂದು ಅದೇ ಶಾಸನ ತಿಳಿಸುತ್ತದೆ. ಅದೇ ರೀತಿ "ಕ್ರಿ.ಶ.೧೧೧೨ ರ ಶಾಸನದಲ್ಲಿ ದಂಡನಾಥ ಅನಂತಮಯ ಪುಲಿಗೆರೆಯ ಸ್ವಯಂ ಭೂ ದೇವಾಲಯದ ಮುಂದೆ ಅದಕ್ಕೆ ಸೇರಿದ ಸೂಳೆಗೇರಿಯನ್ನು ಮಾಡಿಸಿದನೆಂದು ಅಲ್ಲಿಯ ಪಾತ್ರ ಪಾವುಳಕ್ಕೆ ಮಾತ್ರವಲ್ಲದೆ, ಹೊರಗಿನಿಂದ ಬಂದ ಸೂಳೆಯರಿಗೂ ದತ್ತಿಗಳನ್ನು ಕೊಟ್ಟಂತೆ ಅಲ್ಲಿ ಹೇಳಿದೆ. ಹಾಗೆಯೇ ಆಂಧ್ರ ಪ್ರದೇಶದ ಕೃಷ್ಣ ಜಿಲ್ಲೆಯ ಬೆಬ್ರೂಲು ಎಂಬಲ್ಲಿ ಕ್ರಿ.ಶ.೧೧೪೬ ಕ್ಕೂ ಹಿಂದಿನ ಒಂದು ಶಾಸನವನ್ನು ಚರಿತ್ರಾಕಾರರು ಪತ್ತೆಹಚ್ಚಿದ್ದಾರೆ. ತಮ್ಮ ಎಂಟನೆಯ ವರ್ಷದಿಂದಲೇ ನಾಗೇಶ್ವರ ದೇವಾಲಯದಲ್ಲಿ ಕೆಲವು ನರ್ತಕಿಯರು ಸೇವೆ ಸಲ್ಲಿಸುತ್ತಿದ್ದರು ಎಂದು

ಶಾಸನವು ಹೇಳುತ್ತದೆ"[೨೮]. ದಕ್ಷ ಮಧ್ಯಪ್ರದೇಶಗಳಿಗೆ ತಿರುಗಿದರೆ, ನಾವು ಹೈದ್ರಾಬಾದಿನ ನಿಜಾಮರನ್ನು ಕಾಣುತ್ತೇವೆ. ಸಾಮಾನ್ಯವಾಗಿ ತೆಲುಗು ನರ್ತಕಿಯರನ್ನು 'ಬೋಗಮ್'ಗಳೆಂದು ಹೆಸರಿಸುತ್ತಾರೆ. ಹಿಂದೂ ಮತ್ತು ಮಹಮದೀಯ ವರ್ಗಗಳಿಗೆ ಇವರು ಸೇರಿದ್ದಾರೆ ಎನ್ನಲಾಗಿದೆ.

ದೇವದಾಸಿಯರಿಗೂ ಬಸವಿಯರಿಗೂ ಒಂದು ಪ್ರಧಾನ ವ್ಯತ್ಯಾಸವಿರುವುದನ್ನು ಗುರುತಿಸಬಹುದಾಗಿದೆ. ಬಹುಶಃ ದೇವದಾಸಿಯರ ವೃತ್ತಿಯು ತಲೆ ತಲಾಂತರ ಮುಂದುವರಿಯುತ್ತದೆ. ಹುಡುಗಿಯ ತಾಯಿ ತಂದೆಯರು ಯಾವುದೋ ಕಾರಣಕ್ಕಾಗಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಿಕೆ ಹೊತ್ತುಕೊಳ್ಳುತ್ತಾರೆ. ಇದು ದೇವರಿಗೆ ಬಸವ ಅಥವಾ ಗೂಳಿಯನ್ನು ಬಿಟ್ಟಂತೆ ಆದ್ದರಿಂದಲೇ ಅವನನ್ನು ಬಸವಿಯರೆಂದು ಕರೆಯಲಾಗಿದೆ. ಬಸವಿಯೂ ಕೂಡ ದೇವರ ಸೇವೆಯಲ್ಲಿರುವ ದೇವದಾಸಿಯೇ ಆಗಿದ್ದು, ನಮಗೆ ತಿಳಿದ ಮಟ್ಟಿಗೆ ಕ್ರಿ.ಶ.೧೧೫೦ ವರೆಗಿನ ಯಾವ ಶಾಸನದಲ್ಲಿಯೂ ಬಸವಿ ಎಂಬ ಪದ ಬಳಕೆ ಲಭ್ಯವಾಗಿರುವಿದಿಲ್ಲ. ಹನ್ನೊಂದನೇ ಶತಮಾನದ ಶಾಸನಗಳಲ್ಲಿ ಬಳ್ಳಿಗಾವೆಯ 'ತ್ರಿಪುರಾಂತಿಕ ದೇವರ' ಪಾತ್ರ ಪದಮಾವತಿ ಸೂಳೆಯ ಹೆಸರಿದೆ. ಇವಳು ದೇವದಾಸಿಯೂ ಹೌದು. ನರ್ತಕಿಯೂ ಹೌದು ಎಂದು ಭಾವಿಸಬೇಕಾಗುತ್ತದೆ. ದೇವದಾಸಿಯರು ಗೀತೆ ನೃತ್ಯಗಳಲ್ಲಿ ಪರಿಣಿತಿಯನ್ನು ಪಡೆದಿದ್ದರು. ಜೊತೆಗೆ ಸುಂದರಿಯರೂ ಇದ್ದು, ದೇವಸ್ಥಾನವನ್ನು ಕಟ್ಟಿಸಿದ ಮೇಲೆ ಅಂತಹವರಿಗಾಗಿ ಶೋಧನೆ ನಡೆಸಿದಂತೆ, ಅವರನ್ನು ದೇಶದ ನಾನಾ ಭಾಗಗಳಿಂದ ಆರಿಸಿ ತಂದಂತೆ ತಿಳಿದು ಬರುತ್ತದೆ. ತಂಜಾವೂರಿನಲ್ಲಿ ರಾಜರಾಜೇಶ್ವರ ದೇವಸ್ಥಾನವನ್ನು ಕಟ್ಟಿಸಿದಾಗ ರಾಜರಾಜನು ೪೦೦ ನರ್ತಕಿಯರನ್ನು ಹಾಗೆ ಆರಿಸಿ ತಂದಂತೆ ತಿಳಿದು ಬರುತ್ತದೆ. ತಂಜಾವೂರಿನಲ್ಲಿ ರಾಜರಾಜೇಶ್ವರನು ದೇವಸ್ಥಾನವನ್ನು ಕಟ್ಟಿಸಿದಾಗ, ರಾಜರಾಜನು ಕರ್ನಾಟಕದಲ್ಲಿ ಮಹಾದೇವ ಚಮೂಪತಿಯು ಇಟ್ಟಗಿಯಲ್ಲಿ ತಾನು ಕಟ್ಟಿಸಿದ ಮಹಾದೇವ ದೇವಾಲಯಕ್ಕಾಗಿ ರತಿ, ರಂಭೆಯರನ್ನು ಹೋಲುವ ಕಾಮಿನಿಯರ ನಾಯ್ದು, ಪುರವರ್ಗದ ಸೂಳೆಯರನ್ನಾಗಿ ಮಾಡಿದಂತೆ, ಶಾಸನವೊಂದು ತಿಳಿಸುತ್ತದೆ. ಈ ದೇವದಾಸಿಯರು ದೇವಸ್ಥಾನದ ಅಕ್ಕ ಪಕ್ಕಗಳಲ್ಲಿಯೂ ವಾಸಿಸುತ್ತಿದ್ದಂತೆ ಶಾಸನವೊಂದು ತಿಳಿಸುತ್ತದೆ. ಕೆಲವು ಶಾಸನಗಳಲ್ಲಿ 'ಸೂಳೆಯವರ' ಎಂಬ ವ್ಯಕ್ತಿಗೂ ದಾನವನ್ನು ಕೊಟ್ಟಂತೆ ಹೇಳಲಾಗಿದೆ. ಪಡೆಗಳ ಮೇಲ್ವಿಚಾರಕ ಪಡೆಗಳ ಇದ್ದಂತೆ ದೇವಸ್ಥಾನದ ಸೂಳೆಯರ ಮೇಲ್ವಿಚಾರಕ ಸೂಳೆವಳ ಇರಬಹುದು ಎನ್ನಲಾಗಿದೆ.

**ಶಾಸನದಲ್ಲಿ ಸೂಳೆಯರ ಪಟ್ಟಿಯು ಈ ರೀತಿಯಲ್ಲಿದೆ**

| | |
|---|---|
| ೧.ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಚಾಮರದ ಸೂಳೆ | ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ |
| ೨.ಎಡದ ದೆಸೆಯ ಮೊದಲ ಕಂಬದ ಸೂಳೆ | ಬಲದ ದೆಸೆಯ ಮೊದಲ ಕಂಬದ ಸೂಳೆ |
| ೩.ಕಂಬದ ಸೂಳೆ | ಕಂಬದ ಸೂಳೆ |
| ೪.ಎಡದ ದೆಸೆಯ ಕೇರಿಯ ಚಾಮರದ ಸೂಳೆ | ಕೇರಿಯ ಚಾಮರದ ಸೂಳೆ |
| ೫.ಎಡದ ದೆಸೆಯ ಪಾತ್ರಂ ಸೂಳೆ | ಬಲದ ದೆಸೆಯ ಪಾತಂ ಸೂಳೆ |
| ೬.ಎಡ ಪಕ್ಕದ ಕೇರಿಯ ಸೂಳೆ | ಬಲದ ಪಕ್ಕದ ಕೇರಿಯ ಸೂಳೆ |

ಇಲ್ಲಿ ಬರುವ 'ಕೇರಿ' ಎಂಬ ಪದವನ್ನು ನೋಡಿದರೆ, ದೇವದಾಸಿಯರು ವಾಸಿಸುವ ಬೀದಿಯನ್ನು ವರ್ಣಿಸುತ್ತಿರುವಂತೆ ಭಾವಿಸಲು ಅವಕಾಶ ಕೊಡುತ್ತದೆ. 'ಮಾಡ' ಎಂಬುದೂ ಇದೇ ಸಂದೇಹವನ್ನು ದೃಢಪಡಿಸುತ್ತದೆ. ಆದರೆ ಚಾಮರ ಹಾಕುವ ವೃತ್ತಿಯನ್ನು ನರ್ತಿಸುವ ವೃತ್ತಿಯನ್ನು ನೋಡಿದರೆ, ಗರ್ಭಗುಡಿಯ ಮುಂಭಾಗದಲ್ಲಿ ಬೇರೆ ಬೇರೆ ಕರ್ತವ್ಯಗಳನ್ನು ಹೊತ್ತು ಬೇರೆ ಬೇರೆ ಕಂಬಗಳ ಹತ್ತಿರ ನಿಂತುಕೊಳ್ಳುವ ಬಹುಶಃ ಹಾಡುವ ನರ್ತಿಸುವ ಅಥವಾ ಅಲಂಕಾರಕ್ಕಾಗಿ ನಿಂತುಕೊಳ್ಳುವ ದೇವದಾಸಿಯರನ್ನು ಅವರ ವೃತ್ತಿಗಳನ್ನು ಸ್ಥಾನಗಳನ್ನು ಹೆಸರಿಸಿರುವಂತೆ ಕಾಣುತ್ತದೆ. ಈ ಎರಡೂ ರೀತಿಯ ವಿವರಣೆಗಳನ್ನು ನೋಡಿದಾಗ ಎರಡನೇಯ ವಿವರಣೆ ಹೆಚ್ಚು ಸಮ್ಮತ. ಆ ದೇವಾಲಯದ ನವರಂಗದಲ್ಲಿ ಹಲವು ಕಂಬಗಳಿರುವುದೂ ಗಮನಾರ್ಹ. ಸೂಳೆಗೂ, ಪಾತ್ರಂ ಸೂಳೆಗೂ ವ್ಯತ್ಯಾಸವನ್ನು ಊಹಿಸಬಹುದು.

**ಶಾಸನದಲ್ಲಿ ಸೂಳೆಯರ ಪಟ್ಟಿಯನ್ನು ಈ ರೀತಿ ಕೊಡಲಾಗಿದೆ.**

| | |
|---|---|
| ೧.ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಚಾಮರದ ಸೂಳೆ | ಬಲದ ದೆಸೆಯ ಬಟ್ಟೆಯ ಚಾಮರದ ಸೂಳೆ |
| ೨.ಎಡದ ದೆಸೆಯ ಮೊದಲ ಕಂಭದ ಸೂಳೆ | ಬಲದ ದೆನೆಯ ಮೊದಲ ಕಂಬದ ಸೂಳೆ |
| ೩.ಕಂಬದ ಸೂಳೆ | ಕಂಬದ ಸೂಳೆ |
| ೪.ಎಡದ ದೆನೆಯ ಕೇರಿಯ ಚಾಮರದ ಸೂಳೆ | ಕೇರಿಯ ಚಾಮರದ ಸೂಳೆ |

ಎರಡನೆಯವಳು ನೃತ್ಯದ ಅಭಿನಯಗಳನ್ನು ಮಾಡುವವಳು. ಪಾತ್ರದವಳನ್ನು ಮತ್ತು ಕಂಬದ ನಾಲ್ವರನ್ನು ಬೇರೆಗಾಗಿ ಹೇಳುವುದನ್ನು ನೋಡಿದರೆ ಪಾತ್ರ ಮತ್ತು ಸೂಳೆ ಇಬ್ಬರೂ ಬೇರೆ ಎಂದು ಕಾಣುತ್ತದೆ. ಪಾತ್ರದಾಕೆಗೆ ಎಂಟು ಮತ್ತಾರಂ ಸೂಳೆಗೆ ಮೂರು ಮತ್ತಾರು ಜಮೀನು, ದತ್ತಿ ಕೊಟ್ಟಿರುವುದನ್ನು ನೋಡಿದರೆ, ಸೂಳೆಗಿಂತ ಪಾತ್ರದವಳು ಮೇಲಿನವಳೆಂಬುದನ್ನು ಸ್ಪಷ್ಟವಾಗುತ್ತದೆ. ಪಾತ್ರದವಳು ಬಹುಶಃ ನರ್ತನಾದಿಗಲನ್ನು ಮಾಡುವವಳು ಎಂಬುದು ಇದರಿಂದ ಸಮರ್ಥಿತವಾಗುತ್ತದೆ. ಆದರೆ ಚಾಮರದ ಸೂಳೆಗೂ ವ್ಯತ್ಯಾಸವೇನು ಬಿಟ್ಟಿ ಎಂದರೆ ಹಣವನ್ನು ತೆಗೆದುಕೊಳ್ಳದೇ ಕೆಲಸವನ್ನು ಮಾಡುವುದು ಆದರೆ ಮೇಲಿನ ಶಾಸನದಲ್ಲಿ ಬಿಟ್ಟಿಯ ಚಾಮರದ ಸೂಳೆಗೂ ದತ್ತಿಯನ್ನು ಬಿಟ್ಟುಕೊಟ್ಟಿದೆ. ಹೀಗಾಗಿ ಅವರಿಬ್ಬರಿಗಿದ್ದ ವ್ಯತ್ಯಾಸವನ್ನು ಹೇಳುವುದು ಕಷ್ಟ. ಅದೇ ಸೊಂಡಿಯ ನಾಗೇಶ್ವರ ದೇವಸ್ಥಾನದ ದೇವದಾಸಿಯರಿಗೆ ದತ್ತಿಗಳನ್ನು ಬಿಟ್ಟುಕೊಟ್ಟ ಶಾಸನದ ಭಾಗವು ಈ ರೀತಿಯೇ ಇದೆ.

**ಉತ್ತರ ಭಾರತದ ರಾಜ್ಯಗಳಲ್ಲಿ ದೇವದಾಸಿ ಸಂಪ್ರದಾಯ**

ಉತ್ತರ ಭಾರತದಲ್ಲಿ ದೇವದಾಸಿ ಸಂಪ್ರದಾಯ ವ್ಯಾಪಕವಾಗಿ ಆಚರಣೆಯಲ್ಲಿದ್ದುದ್ದನ್ನು ಶಾಸನಗಳು, ಪುರಾಣಗಳು, ಮಹಾಕಾವ್ಯಗಳ ಪ್ರಾಚೀನ ಗ್ರಂಥಗಳ ಮೂಲಕ ತಿಳಿಯಬಹುದಾಗಿದೆ.

ದೇವದಾಸಿ ಪದ್ಧತಿಯ ಪ್ರಾಚೀನತೆಯನ್ನು ಕುರಿತು 'ಅಳೇತೀಕರ್' "ಹೀಗೆ ಅಭಿಪ್ರಾಯಪಟ್ಟಿದ್ದಾರೆ "ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗಣಿಕೆಯರ ಹೆಸರು ವಿಸ್ತಾರವಾಗಿ ಬಂದಿದ್ದರೂ ದೇವದಾಸಿಯರನ್ನು ಹೆಸರಿಸಿಲ್ಲ. ಈ ಸಂಪ್ರದಾಯ ಬಹುಶಃ ಕ್ರಿ.ಶ.೩ನೇ ಶತಮಾನದಲ್ಲಿ ಆರಂಭವಾಗಿರಬಹುದು. ಏಕೆಂದರೆ ಉಜ್ಜಯಿನಿಯ

ಮಹಾಕಾಲ ದೇವಸ್ಥಾನದಲ್ಲಿ ನರ್ತಕಿಯರಿದ್ದ ವಿಷಯವನ್ನು ಕಾಳಿದಾಸ ತನ್ನ ಮೇಘದೂತದಲ್ಲಿ ನಿರೂಪಿಸುತ್ತಾನೆ"[೨೯] ಎಂದಿದ್ದಾರೆ.

ಹಾಗೆಯೇ ಪ್ರಾಚೀನ ಹಿಂದೂ ಗ್ರಂಥಗಳಲ್ಲಿ ಏಳು ವಿಧದ ದೇವದಾಸಿಯರ ಉಲ್ಲೇಖ ಸಿಗುತ್ತದೆ.

೧.ದತ್ತಾ : ತನ್ನನ್ನು ತಾನೇ ಯಾವುದಾದರೂ ದೇವಾಲಯವೊಂದಕ್ಕೆ ಅರ್ಪಿಸಿಕೊಂಡವಳು.

೨.ವಿಕ್ರೀತಾ: ದೇವಾಲಯದ ಸೇವಾ ಕಾರ್ಯಗಳಿಗಾಗಿ ತನ್ನನ್ನೆ ಮಾರಿಕೊಂಡವಳು.

೩.ಭೃತ್ಯಾ: ತನ್ನ ಕುಟುಂಬದವರು ಘೋಷಣೆಯ ಸಲುವಾಗಿ ದೇವದಾಸಿಯಾದವಳು.

೪.ಭಕ್ತಾ: ಕೇವಲ ಭಕ್ತಿ ಭಾವಗಳಿಂದ ಪ್ರೇರಿತಳಾಗಿ ದೇವಾಲಯವನ್ನು ಪ್ರವೇಶಿಸಿದವಳು.

೫.ಹೃತಾ: ಅಪಹರಿಸಿಕೊಂಡು ತಂದ ಹೆಣ್ಣು ದೇವಾಲಯಕ್ಕೆ ಉಡುಗೊರೆಯಾಗಿ ಬಂದವಳು.

೬.ಅಲಂಕಾರ: ರಾಜ ಅಥವಾ ಮಂತ್ರಿ ಯಾವ ಯುವತಿಯನ್ನು ಅಪೇಕ್ಷಿತ ಪರಂಪರೆಯಲ್ಲಿ ಸಂಪೂರ್ಣ ದಕ್ಷತೆಯೆಂದು ಭಾವಿಸುತ್ತಿದ್ದರು. ಅಂಥ ಯುವತಿಯನ್ನು ಅಲಂಕರಿಸಿ ದೇವಾಲಯಕ್ಕೆ ಒಪ್ಪಿಸಲಾಗುತ್ತಿತ್ತು.

೭.ರುದ್ರಗಣಿಕ ಅಥವಾ ಗೋಪಿಕಾ: ನಿಯಮಿತ ವೃತ್ತಿ ಅಥವಾ ವೇತನ ಪಡೆದು ನಾಟ್ಯ, ಗಾಯನ ಮೊದಲಾದ ಕೆಲಸಗಳನ್ನು ನಿರ್ವಹಿಸುವವಳು.

೬ನೇ ಶತಮಾನದ ನಂತರದ ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಇದರ ಅಸ್ತಿತ್ವವನ್ನು ಕಾಣಬಹುದಾಗಿದೆ. ಉತ್ತರ ಭಾರತದ ವ್ಯಾಪಾರದ ಹೆದ್ದಾರಿಗಳು, ಪಟ್ಟಣ, ನಗರಗಳು, ಅಸ್ತಿತ್ವಕ್ಕೆ ಬಂದು, ಸ್ತ್ರೀಯರು ಪ್ರವಾಸಿಗರನ್ನು ಅಕರ್ಷಿಸಲು ಮತ್ತು ತಮ್ಮ ದಂಧೆಯನ್ನು ನಡೆಸುವ ಪ್ರಯತ್ನ ನಡೆಸಿದರು. ಗಣಿಕಾ, ರೂಪ ಜೀವಾ, ವೇಶ್ಯಾ, ಮದಾಕೀ ಇವರು ರಾಜರಿಗೆ ತಮ್ಮ ವೃತ್ತಿಗೆ ಅನುಗುಣವಾಗಿ ತೆರಿಗೆಗಳನ್ನು ಕೊಡುತ್ತಿದ್ದರು. ವ್ಯವಸ್ಥಿತವಾದ ಕೆಂಪು ದೀಪ ಪ್ರಾಂತ್ಯಗಳು ಹೆಚ್ಚು ನಿಯಮಿತವಾಗಿ ತೆರಿಗೆಯನ್ನು ಪಾವತಿ ಮಾಡುತ್ತಿದ್ದವು. ವ್ಯವಸ್ಥಿತವಾದ ವೇಶ್ಯಾವಾಟಿಕೆಗಳು ರಾಜಸ್ಥಾನದಿಂದ ಹೆಚ್ಚು ನೆರವನ್ನು ದೊರಕಿಸಿಕೊಂಡವು ಎನ್ನಲಾಗಿದೆ.

೬ನೇ ಶತಮಾನದಲ್ಲಿ 'ಮುಲ್ತಾನ' ಎಂಬಲ್ಲಿ ಸೂರ್ಯದೇವಾಲಯದಲ್ಲಿ ಗಾಯಕಿಯರನ್ನು ಕಂಡದ್ದಾಗಿ ಹ್ಯೂಯನ್‌ತ್ಸಾಂಗ್ ಹೇಳುತ್ತಾನೆ ಹಾಗೆ ರಾಜ ತರಂಗಿಣಿಯಲ್ಲಿ ಕಾಶ್ಮೀರದಲ್ಲಿ ಕ್ರಿ.ಶ.೭ನೇ ಶತಮಾನದಲ್ಲಿ ಈ ಸಂಪ್ರದಾಯವಿದ್ದುದಾಗಿ ತಿಳಿದು ಬರುತ್ತದೆ. ಗುಜರಾತಿನ ಬಹು ಪ್ರಸಿದ್ಧವಾಗಿದ್ದ ಸೋಮನಾಥ ದೇವಾಲಯದಲ್ಲಿ ೫೦೦ ನರ್ತಕಿಯರಿದ್ದರೆಂದು ತಿಳಿದು ಬರುತ್ತದೆ. ೧೦೨೭ರಲ್ಲಿ ಘೋರಿ ಮಹಮ್ಮದ್‌ನ ಧಾಳಿಯ ಸಂದರ್ಭದಲ್ಲಿ ಈ ಸಂಗತಿ ಬರುತ್ತದೆ. ೯ನೇ ಶತಮಾನದಲ್ಲಿ ಒರಿಸ್ಸಾದಲ್ಲಿ ಹಾಗೆ ಸುಖ ಸಮೃದ್ಧಿ ಹೊಂದಿದ್ದ ಗುಪ್ತರ ಕಾಲದಲ್ಲಿ ಬೆಳಕಿಗೆ ಬಂತು. ದೇವರ ಸೇವೆಗಿದ್ದವರು ರಾಜನ ಸೇವೆಗೆ ತೊಡಗಬೇಕಾಯಿತು.

ಮಧ್ಯಕಾಲೀನ ವಿವರಣೆಯ ಪ್ರಕಾರ "ಗುಜರಾತ್ ಒಂದರಲ್ಲಿಯೇ ೪೦೦೦ ದೇವಾಲಯಗಳ ನಡುವೆ ೨೦,೦೦೦ ದೇವದಾಸಿ ನರ್ತಕಿಯರಿದ್ದರು. ೧೦ನೇ ಶತಮಾನದಲ್ಲಿ ಚೋಳರ ಅರಸ ರಾಜರಾಜ ಕಟ್ಟಿಸಿದ ತಂಜಾವೂರು ದೇವಾಲಯದಲ್ಲಿ ೪೦೦ 'Talicheri pendrugal' ಅಥವಾ ದೇವಾಲಯದ ಹೆಣ್ಣು ಮಕ್ಕಳು ನೆಲೆಸಿದ್ದರು. ಅಲ್ಲಿನ ಪ್ರತಿಯೊಬ್ಬರ ನಿರ್ವಹಣೆಗೆ ಭೂಮಿ ದತ್ತಿ ಕೊಡಲಾಗಿತ್ತು"[೩೦].

ಅಕ್ಬರನ ಆಡಳಿತ ಕಾಲದಲ್ಲಿ (೧೫೫೬-೧೬೦೫) ಪವಿತ್ರ ಮತ್ತು ಸಾಮಾನ್ಯ ವೇಶ್ಯೆಯರ ಪರಿಸ್ಥಿತಿ ಹೇಗಿತ್ತು

ಎಂಬುದನ್ನು ಅಬ್ದುಲ್ ಫಜಲ್ ತನ್ನ ಪ್ರಸಿದ್ಧ ಕೃತಿಯಾದ ಐನ್-ಐ-ಅಕ್ಬರಿಯಲ್ಲಿ ಹೀಗೆ ಹೇಳಿದ್ದಾನೆ.

"ರಾಜ್ಯದ ವೇಶ್ಯೆಯರು 'ಸೈತಾನ್‌ಪುರ್' ಅವರಿಗೆ ಗೊತ್ತುಪಡಿಸಿದ ಪ್ರದೇಶದಲ್ಲಿಯೇ ಬೇರೆಯೇ ಆದ ಮನೆಗಳನ್ನು ಹೊಂದಿದ್ದರು. ಎಣಿಕೆಗೂ ಸಿಗದಷ್ಟು ದೊಡ್ಡ ಪ್ರಮಾಣದಲ್ಲಿ ಅವರನ್ನು ಸಂಗ್ರಹಿಸಲಾಗಿತ್ತು. ಒಬ್ಬ ದರೋಘಾ ಎಂಬ ಮೇಲ್ವಿಚಾರಕ ಮತ್ತು ಒಬ್ಬ ಗುಮಾಸ್ತೆಯನ್ನು ಅದಕ್ಕಾಗಿ ನೇಮಿಸಲಾಗಿತ್ತು. ಅವರು ವೇಶ್ಯೆಯರಾಗಿ ಬಂದವರ ಹೆಸರುಗಳನ್ನು ಮತ್ತು ಮನೆಗಳಿಗೆ ಕರೆದುಕೊಂಡು ಹೋಗುತ್ತಿದ್ದವರ ಹೆಸರುಗಳನ್ನು ನೋಂದಾಯಿಸಿ ಕೊಳ್ಳುತ್ತಿದ್ದರು. ಸುಂಕದ ಅಧಿಕಾರಿಗಳಿಗೆ ತಿಳಿಸಿ, ಜನರು ಈ ಸಂಬಂಧದಲ್ಲಿ ತೊಡಗಬಹುದಾಗಿತ್ತು. ಆದರೆ ಅನುಮತಿ ಇಲ್ಲದೆ ನೃತ್ಯದ ಹುಡುಗಿಯರನ್ನು ಕರೆದುಕೊಂಡು ಹೋಗಲು ಅವಕಾಶವಿರಲಿಲ್ಲ"[೩೧] ಎನ್ನಲಾಗಿದೆ. ಅಕ್ಬರನ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಸಂಗೀತಗಾರನಾದ ತಾನ್‌ಸೇನ್‌ನು ಈ ನೃತ್ಯದ ಹುಡುಗಿಯರ ಸ್ವಂತ ಪೋಷಕನಾಗಿದ್ದನು ಕ್ರೂಕ್ ಎಂಬುವವನು ಉತ್ತರ ಭಾರತದ ಬುಡಕಟ್ಟು ಸಮುದಾಯವನ್ನು ಪಟ್ಟಿ ಮಾಡುವಾಗ್ಗೆ, ನೃತ್ಯ, ಗಾಯನ, ಹಾಗೂ ವೇಶ್ಯಾವೃತ್ತಿಗಳಲ್ಲಿ ಮಗ್ನರಾಗಿದ್ದ 'ತವೈಫ್' ಹಾಗೂ ಪಾತರದವರನ್ನು ಗುರುತಿಸಿದ್ದಾನೆ.

ಜಹಂಗೀರ್ ಚಕ್ರವರ್ತಿ (ಕ್ರಿ.ಶ.೧೬೦೫-೧೬೨೭) ಮತ್ತು ಷಹಜಾನ್ (ಕ್ರಿ.ಶ.೧೬೨೮-೧೬೫೮) ಕಾಲದಲ್ಲಿ ವೈಭವ, ಆಡಂಬರ, ದುಂದುವೆಚ್ಚ ಮತ್ತು ಭ್ರಷ್ಟತೆಗಳು ಹೆಚ್ಚಿದವು. "ಔರಂಗಜೇಬನ ಆಡಳಿತದ ಕಾಲದಲ್ಲಿ ಸಾವಿರಾರು ಹಿಂದೂ ದೇವಾಲಯಗಳನ್ನು ನಾಶಪಡಿಸಲಾಯಿತಲ್ಲದೆ, ಅವುಗಳೊಂದಿಗೆ ಸಂಬಂಧ ಹೊಂದಿದ್ದ ಎಲ್ಲಾ ವೇಶ್ಯೆಯರನ್ನು ಮತ್ತು ಅವರಿಗೆ ಸಂಬಂಧಿಸಿದ ಎಲ್ಲವನ್ನು ನಾಶಮಾಡಲು ಪ್ರಯತ್ನ ನಡೆಸಲಾಯಿತು. ಹಾಡುವುದು ಮತ್ತು ನೃತ್ಯ ಮಾಡುವುದರ ವಿರುದ್ಧ ಅವನು ಆಜ್ಞೆಗಳನ್ನು ಜಾರಿ ಮಾಡಿದ. ಅದೇ ಹೊತ್ತಿನಲ್ಲಿ ಎಲ್ಲಾ ನೃತ್ಯದ ಹುಡುಗಿಯರಿಗೆ ಮದುವೆ ಮಾಡಿಕೊಳ್ಳಲು ಆಜ್ಞೆ ಮಾಡಿದ. ಒಪ್ಪದಿದ್ದವರನ್ನು ತನ್ನ ರಾಜ್ಯದಿಂದ ಹೊರಗೆ ಹಾಕಿದ"[೩೨].

ಔರಂಗಜೇಬನ ಸಾವಿನ ನಂತರ ಬ್ರಿಟಿಷರ ಕಾಲದವರೆಗೂ ಅರಾಜಕತೆಯ ಕಾಲ ಮುಂದುವರೆಯಿತು. ರಾಜಕುಮಾರರ ಮತ್ತು ಸಾರ್ವಜನಿಕ ವ್ಯಕ್ತಿಗಳ ನೈತಿಕ ಮಟ್ಟ ಅತ್ಯಂತ ಕೆಳ ಹಂತವನ್ನು ತಲುಪಿತು. ಇಲ್ಲಿ ವೇಶ್ಯಾಗಾರಿಕೆ ದೊಡ್ಡ ಪ್ರಮಾಣಗಳಲ್ಲಿ ವ್ಯಾಪಿಸಿತು. ಹೀಗೆ ಮುಸ್ಲಿಂರ ಆಕ್ರಮಣ ಅನೈತಿಕತೆಯ ಹೆಚ್ಚಳವಾಗಿ ದೇವಾಲಯದ ನೃತ್ಯಗಾತಿಯರ ಧಾರ್ಮಿಕ ಅಂಶಗಳು ನಾಪತ್ತೆಯಾದವು. ಅವರು ಸಂದರ್ಭಕ್ಕನುಸಾರವಾಗಿ ನೃತ್ಯ ಮಾಡುವ ಸಾಮಾನ್ಯ ವೇಶ್ಯೆಯರಾದರು. ಅವರನ್ನು ಮದುವೆಯ ಸಂದರ್ಭದಲ್ಲಿ ಇಲ್ಲವೇ ಖಾಸಗಿ ಮನರಂಜನೆಗಾಗಿ ನೃತ್ಯ ಮಾಡಲು ಆಹ್ವಾನಿಸಲಾಯಿತು. ಇದು ಭಾರತದಲ್ಲಿ ಬಹು ಹಿಂದಿನಿಂದಲೂ ಇದ್ದ ನೃತ್ಯ ಮಾಡುವುದು ಮತ್ತು ವೇಶ್ಯಾವೃತ್ತಿ ಮಾಡುವುದರ ಮುಂದುವರೆಯುವಿಕೆಯೇ ಆಯಿತೆನ್ನಲಾಗಿದೆ.

**ಮಧ್ಯ ಭಾರತದಲ್ಲಿ ದೇವದಾಸಿ ಪದ್ಧತಿ**

ಚೀನಿ ಯಾತ್ರಿಕ 'ಚನ್-ಚು-ಕ್ವ' ತನ್ನ ಕೃತಿಯಲ್ಲಿ 'ಚು-ಫಾನ್-ಚಿ' ನಲ್ಲಿ ಮಧ್ಯ ಭಾರತದಲ್ಲಿ ದೇವಾಲಯದ ನರ್ತಕಿಯರ ಬಗ್ಗೆ ಉಲ್ಲೇಖಿಸಿರುವುದೇ ನಮಗೆ ದೊರೆಯುವ ಮೊದಲ ವರದಿ ಅಲ್ಲದೆ ಈ ಕೃತಿಯು ೧೨ ಮತ್ತು ೧೩ನೇ ಶತಮಾನಗಳಲ್ಲಿ ಚೀನಿ ಮತ್ತು ಅರಬ್ ದೇಶಗಳೊಂದಿಗೆ ಭಾರತ ವಾಣಿಜ್ಯ ವ್ಯವಹಾರವನ್ನು

ಕುರಿತು ಹೇಳುತ್ತದೆ. ಗುಜರಾತಿನ ನಾಲ್ಕು ಸಾವಿರ ಬೌದ್ಧ ದೇವಾಲಯಗಳ ಕಟ್ಟಡಗಳಲ್ಲಿ ೩೦,೦೦೦ ಕ್ಕಿಂತಲೂ ಹೆಚ್ಚು ನರ್ತಕಿಯರು ವಾಸವಾಗಿದ್ದರು. ಅವರು ಹೂವನ್ನು ಅರ್ಪಿಸುವಾಗ ದಿನಕ್ಕೆ ಎರಡು ಬಾರಿ ಹಾಡುತ್ತಿದ್ದರು ಎಂದು ಅವನು ಕಾಂಬೋಡಿಯದಲ್ಲೂ ಈ ಬಗೆಯ ಪದ್ಧತಿ ಇರುವುದು ತಿಳಿಸುತ್ತಾನೆ. ಅವರನ್ನು 'ಅನಾನ್' ಎನ್ನುತ್ತಾರೆ.

ಬೊಂಬಾಯಿಯ ಮಾನವಕುಲ ಸಂಬಂಧ ಶಾಸ್ತ್ರದ ಪರಿವೀಕ್ಷಣೆ ೧೯೦೯ರ ಹೊತ್ತಿನಲ್ಲಿಯೇ 'ಭವಾನಿಗಳು ಮತ್ತು ದೇವಲಿಯರು' ಎಂಬ ತಲೆಬರಹದ ಏಕೋಪಾಧ್ಯಯದ ಗ್ರಂಥವನ್ನು ಸಿದ್ಧಪಡಿಸಿತ್ತು. ಕೆಲವು ಪ್ರದೇಶಗಳ ಕೆಲವು ದೇವದಾಸಿಯರ ಸಮಾರಂಭಗಳ ಮತ್ತು ಜೀವನ ವಿಧಾನಗಳನ್ನು ಕುರಿತು ಈ ಗ್ರಂಥಗಳು ತಿಳಿಸುತ್ತವೆ. ಸಾವಂತವಾಡಿ ಅಥವಾ ಮಾಳ ಪ್ರಮುಖರ ಹೆಣ್ಣು ಸೇವಕಿಯರ ಮೂಲದವರೆಂದು ಬಹಳಷ್ಟು ಜನ ಗುರುತು ಹೇಳಿಕೊಳ್ಳುತ್ತಾರೆ. ಅವರು ಸ್ಥಳೀಯ ದೇವರುಗಳಿಗೆ ನಿಯತವಾಗಿ ಅರ್ಪಿಸಲ್ಪಟ್ಟವರು. ದೇವಾಲಯದ ದೇವರ ದೀಪದ ಎಣ್ಣೆಯನ್ನು ತಮ್ಮ ತಲೆಗಳ ಮೇಲೆ ಹುಯ್ದುಕೊಳ್ಳುವುದರಿಂದ ಮಾತ್ರವೇ ಶೂದ್ರ ಜಾತಿಯ ಹೆಂಗಸು ಭಾವಿನ್‌ಗಳಾಗುತ್ತಿದ್ದಾರೆ. ಭಾವಿನ್ ಹುಡುಗಿಯು ಋತುಮತಿಯಾಗುತ್ತಿದ್ದ ಹಾಗೆ ಆಕೆ ಶೇಷ ಎಂಬ ಹೆಸರಿನಿಂದ ಮದುವೆಯಾಗುತ್ತಾಳೆ. ಮುಂದೆ ದೇವಾಲಯಗಳ ಕರ್ತವ್ಯಗಳಲ್ಲಿ ಭಾಗಿಯಾಗಿ ಅವಳು ದೇವದಾಸಿಯಾಗಿರುವುದರಿಂದ ಮಾಮೂಲಿ ವೇಶ್ಯಾ ವೃತ್ತಿಗಿಂತ ಭಿನ್ನವಾದ, ಬೆರಕೆಯ ವೇಶ್ಯಾವೃತ್ತಿಯನ್ನು ಆಚರಿಸುತ್ತಾರೆ.

ಮಧ್ಯಭಾರತದ ಪುರಿಯ 'ಜಗನ್ನಾಥ' ದೇವಾಲಯದ ಸುತ್ತ ಮುತ್ತ ಇಂದಿಗೂ ದೇವದಾಸಿಯರು ನೆಲೆಸಿರುವುದನ್ನು ಕಾಣಬಹುದಾಗಿದೆ. ಇತ್ತೀಚೆಗೆ ಬ್ರಿಟಿಷ್ ಕೊಲಂಬಿಯಾ ವಿಶ್ವವಿದ್ಯಾನಿಲಯದ (ಮಾರ್ಗ್ಲಿನ್-೧೯೮೫) ಹಿರಿಯ ಪ್ರಾಧ್ಯಾಪಕರು ಈ ಬಗ್ಗೆ ವಿಶೇಷವಾದ ಅಧ್ಯಯನ ನಡೆಸಿದ್ದಾರೆ. ಈ ವ್ಯವಸ್ಥೆ ವಂಶವಾಹಿನಿಯ ಅಧ್ಯಯನ ನಡೆಸಿಲ್ಲ. ಕ್ರಿ.ಶ. ೧೮೧೫ರ ಹೊತ್ತಿನಲ್ಲಿದ್ದ ಬ್ರಿಟಿಷ್ ಪಾದ್ರಿ ವಾರ್ಡ ಪುರಿಯಲ್ಲಿದ್ದ ಈ ವ್ಯವಸ್ಥೆಯ ಬಗ್ಗೆ ಬರೆದಿರುವುದನ್ನು ನೋಡಬಹುದಾಗಿದೆ. ಆತನು ಈ ರೀತಿ ಹೇಳಿದ್ದಾನೆ. "ಈ ಸ್ಥಳದಲ್ಲಿ ಕೀಳು ನಡತೆಯುಳ್ಳ ಅನೇಕ ಹೆಂಗಸರನ್ನು ದೇವರ ಮುಂದೆ ನರ್ತಿಸಲು ಮತ್ತು ಹಾಡಲು ನೇಮಿಸಿಕೊಂಡಿರುವುದು ಬಹು ದೃಢವಾದ ಸಂಗತಿ. ಅವರು ದೇವಾಲಯಗಳಲ್ಲಿ ವಾಸಿಸದೇ ಬೇರೆ ಬೇರೆ ಮನೆಗಳಲ್ಲಿ ವಾಸಿಸುತ್ತಾರೆ. ಜಗನ್ನಾಥನನ್ನು ನೋಡಲು ಹೋಗುವ ವ್ಯಕ್ತಿಗಳು ಈ ಹೆಂಗಸರೊಂದಿಗೆ ಅನೈತಿಕವಾಗಿ ನಡೆದುಕೊಂಡಿದ್ದರ ಬಗ್ಗೆ ಸಂಶಯ ಹೊಂದಿರುತ್ತಾರೆ"[೩೩]. ಅಲ್ಲಿರುವ ಬ್ರಾಹ್ಮಣ ವರ್ಗ ಆ ದೇವದಾಸಿಯರೊಂದಿಗೆ ಅನೈತಿಕ ಸಂಬಂಧಗಳನ್ನು ಹೊಂದಿದ್ದಾರೆ ಎಂದು ಹೇಳಲಾಗಿದೆ. ಅನಂತರದ ಸುಮಾರು ಒಂದು ಶತಮಾನದ ಮಧ್ಯಭಾರತದಲ್ಲಿ 'ಕಸ್ಬಿ'ಗಳು ಎಂದು ಕರೆಯಲ್ಪಡುತ್ತಿದ್ದ ದೇವದಾಸಿಯರ ಆಚರಣೆಗಳು ಮತ್ತು ಸಮಾರಂಭಗಳ ಬಗ್ಗೆ ಆರ್.ವಿ.ರಸೆಲ್ ವಿವರವಾದ ಮಾಹಿತಿ ನೀಡುತ್ತಾನೆ.

**ದಕ್ಷಿಣ ಭಾರತವಲ್ಲಿ ದೇವದಾಸಿ ಪದ್ಧತಿ:** ದಕ್ಷಿಣ ಭಾರತವಂತೂ ದೇವದಾಸಿಯರ ಕೇಂದ್ರ ಭೂಮಿಕೆಯಾಗಿದೆ. ದಕ್ಷಿಣ ಭಾರತದಲ್ಲಿ ರಾಜರುಗಳ ಆಸಕ್ತಿಯಿಂದಾಗಿ, ದೇವಾಲಯಗಳ ನಿರ್ಮಾಣದ ಚಟುವಟಿಕೆ ತೀವ್ರಗೊಂಡವು. ಓಟಗಾಗಿ ಈ ಪದ್ಧತಿಯು ಭಾರತೀಯ ಸಂಸ್ಕೃತಿಯಲ್ಲಿ ಅಷ್ಟೊಂದು ಆಳವಾಗಿ ಬೇರುಬಿಟ್ಟಿದೆ. ಕ್ರಿ.ಶ.೭ನೇ

ಶತಮಾನದ ವೇಳೆಗೆ ಸೂರ್ಯ ದೇವಾಲಯವು ಶೃಂಗಾರಕ್ಕೆ ಪ್ರಸಿದ್ಧವಾಗಿದ್ದು. ಈ ದೇವಾಲಯದಲ್ಲಿ ದೇವದಾಸಿಯರ ತಂಡೋಪ ತಂಡಗಳನ್ನು ಕಾಣಬಹುದಾಗಿದೆ. ಕೆಲ ಕಾಲನಂತರ ಈ ತೆರನಾದ ದೇವಾಲಯಗಳು ಹಾಡುವ, ನರ್ತಿಸುವ ಹುಡುಗಿಯರಿಂದ ತುಂಬಿ ಹೋದವು. ಹೀಗೆ ೧೦ನೇ ಶತಮಾನದ ಅಂತ್ಯದ ವೇಳೆಗೆ ದೇವಾಲಯಗಳು ಪ್ರತಿಷ್ಠೆಗಳಿಗನುಗುಣವಾಗಿ ದೇವಾಲಯಗಳ ದೇವದಾಸಿಯರ ಸಂಖ್ಯೆಯು ಹೆಚ್ಚುತ್ತಾ ಹೋಯಿತು. ತಮಿಳು ಭಾಷೆಯ ಮಹಾಕಾವ್ಯವಾದ 'ಶಿಲಪ್ಪದಿಗಾರಂ'ನಲ್ಲಿ ದೇವದಾಸಿಯರ ಸಂಗೀತ ನೃತ್ಯಗಳ ಬಗ್ಗೆ ವಿವರಿಸಲಾಗಿದೆ. ಚೋಳರ ಕಾಲದ ಶಾಸನಗಳಲ್ಲಿಯೂ ದೇವದಾಸಿಯರಿದ್ದು, ಶಿವನ ಅವತಾರವೆಂದೇ ಜನಪ್ರಿಯವಾಗಿರುವ 'ಖಂಡೋಬ' ಮಹಾರಾಷ್ಟ್ರದ ಒಂದು ದೇವತೆ. ಪೂನ ಜಿಲ್ಲೆಯ 'ಜೆಜುರಿ' ಖಂಡೋಬನ ಪ್ರಧಾನ ಸ್ಥಳ. ಸತಾರ ಜಿಲ್ಲೆಯಲ್ಲಿ ಪಾಳಿ ಎಂಬಲ್ಲೂ ಒಂದು ಪೂಜಾ ಸ್ಥಳವಿದೆ. ಬಾಲ್ಯದ ದಿನಗಳಲ್ಲಿಯೇ ತಮ್ಮ ತಂದೆ ತಾಯಿಗಳಿಂದ ಖಂಡೋಬ ದೇವತೆಗೆ ಸಮರ್ಪಿಸಲ್ಪಟ್ಟ ಹುಡುಗಿಯರಿಗೆ 'ಮುರಳಗಳು' ಎಂದು ಹೆಸರು "ಮೋಸ ಹೋದ ಬಡ ಹೆಂಗಸರು, ಖಂಡೋಬನಿಗೆ ಮಕ್ಕಳನ್ನು ಕರುಣಿಸೆಂದು, ಮೊದಲು ಹುಟ್ಟಿದ ಮಗಳನ್ನು ಅವನಿಗೆ ಅರ್ಪಿಸುವುದಾಗಿ, ಪ್ರಮಾಣ ಮಾಡುತ್ತಿದ್ದರು. ಅದರಂತೆ ಹೆಣ್ಣನ್ನು ಖಂಡೋಬನಿಗೆ ಅರ್ಪಿಸಿ, ಅವಳ ಕತ್ತಿಗೆ ಏಳು ಕವಡೆಗಳ ಸರವನ್ನು ಹಾಕಿ, ಖಂಡೋಬ ಅಥವಾ ಕಠಾರಿಗೆ ಅವಳನ್ನು ಮದುವೆ ಮಾಡುತ್ತಿದ್ದರು. ಹಾಗಾಗಿ ಅವಳು ಅವನ ಹೆಂಡತಿಯಾಗುತ್ತಿದ್ದಳು. ಅಲ್ಲಿಂದ ಆಕೆ ತನ್ನ ಜೀವನೋಪಾಯಕ್ಕೆ ಸಾಮಾನ್ಯ ವೇಶ್ಯೆಯಾಗಿ ಕೀಳು ಬದುಕನ್ನು ಸವೆಸಬೇಕಿತ್ತು. ಇದನ್ನು ಕೆಳಜಾತಿಗೆ ಸೇರಿದವರು ಈ ಬಗೆಯಲ್ಲಿ ತಮ್ಮ ಮಕ್ಕಳನ್ನು ಮುರಳಿಗಳನ್ನು ಮಾಡುತ್ತಿದ್ದರು"[೩೪] ಎನ್ನಲಾಗಿದೆ.

"ಈ ಪ್ರದೇಶದ ಮೇಲ್ಜಾತಿಯ ಜನರೂ ಖಂಡೋಬನನ್ನು ಪೂಜಿಸುತ್ತಾರೆ. ಆದರೆ, ಇವರು ಪೂಜಿಸುವ ವಿಧಾನವೇ ಬೇರೆಯೇ ಆಗಿದೆ. ಅವರು ಖಂಡೋಬನಿಗೆ ತಮ್ಮ ಹೆಣ್ಣು ಮಕ್ಕಳನ್ನು ಕೊಡುವುದಿಲ್ಲ. ಆದರೆ ಕೆಳಜಾತಿಯ ತಂದೆ ತಾಯಿಗಳಿಂದ ಹಣಕ್ಕೆ ಕೊಂಡುಕೊಂಡು ತಮ್ಮ ಮಕ್ಕಳಿಗೆ ಬದಲಾಗಿ ಅವರನ್ನು ಅರ್ಪಿಸುತ್ತಾರೆ"[೩೫].

ಫುಲ್ಲರ್ ರವರ, "ಜೆಜುರಿ ಒಂದರಲ್ಲೆ ಪ್ರತಿವರ್ಷ ಅಥವಾ ಒಂದೆರಡು ವರ್ಷಗಳಿಗೊಮ್ಮೆ ಸುಮಾರು ಒಂದು ನೂರು ಹುಡುಗಿಯರನ್ನು ಅರ್ಪಿಸಲಾಗುವುದು. ಸುಮಾರು ಹತ್ತು ಸಾವಿರ ಜನಸಂಖ್ಯೆಯ ಒಂದು ಪಟ್ಟಣದಲ್ಲಿ ಸುಮಾರು ೨೮೦ ಮುರಳಿಯರಿರುವರೆಂದು ಪೋಲಿಸರು ನೋಂದಾಯಿಸಿದ್ದಾರೆ. ಮಹಾರಾಷ್ಟ್ರದಲ್ಲಿ ನಾಚಿಕೆಗೆಟ್ಟ, ಬದುಕಿಗೆ ಜೋತು ಬಿದ್ದಿರುವ ನೂರಾರು ಹುಡುಗಿಯರಲ್ಲಿ ಈ ಎರಡು ಸಂಗತಿಗಳು ತೀರಾ ಕಮ್ಮಿಯಾದವು" ಫುಲ್ಲರಳ ದಾಖಲೆಗಳು ಮಹಾರಾಷ್ಟ್ರದಲ್ಲೂ ಕೂಡ ಹುಡುಗಿಯರನ್ನು ಸಮರ್ಪಿಸುವ ಪದ್ಧತಿ ವ್ಯಾಪಕವಾಗಿತ್ತು ಎಂದು ತಿಳಿಸುತ್ತದೆ.

'ಮಾರ್ಕೊ ಪೋತಿ' ತಂಜಾವೂರಿನಲ್ಲಿ ರೂಢಿಗತವಾಗಿದ್ದ ವಿಷಯವನ್ನು ಅವರು ಕೋರಮಂಡಲ ತೀರವನ್ನು ಕ್ರಿ.ಶ.೧೨೯೦ ರಲ್ಲಿ ಸಂದರ್ಶಿಸಿ 'ಮಲಬಾರ್ ಪ್ರಾಂತ್ಯ'ದ ನಿವಾಸಿಗಳನ್ನು ಕುರಿತು ಈ ರೀತಿ ಹೇಳಿದ್ದಾರೆ.

ಅವರು ಕೆಲವು ಭವ್ಯವಾದ ದೇವಾಲಯ ಕಟ್ಟಡಗಳನ್ನು ಹೊಂದಿದ್ದರು. ಅಲ್ಲಿರುವ ದೇವರು ಮತ್ತು ಹೆಣ್ಣು ದೇವತೆಗಳಿಗೆ ಅನೇಕ ಚಿಕ್ಕ ವಯಸ್ಸಿನ ಹೆಣ್ಣು ಮಕ್ಕಳು ಸಮರ್ಪಣೆಗೊಂಡಿದ್ದರು. "ಅವರ ತಂದೆ ತಾಯಿಗಳು

ಅವರಿಗೆ ನೀಡಿದ ಪ್ರತಿಮೆಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು ಮತ್ತು ಯಾವುದಾದರೂ ದೇವಾಲಯದ ಸನ್ಯಾಸಿಯು ದೇವರಿಗೆ ಹಬ್ಬ ಮಾಡಲು ಇಚ್ಛಿಸಿದಾಗ ಈ ಮದನಿಕೆಯರನ್ನು ಕಳುಹಿಸಲಾಗುತ್ತಿತ್ತು. ಅಲ್ಲಿ ಅವರು ಪ್ರತಿಮೆಯ ಮುಂದೆ ಹಾಡುಗಾರಿಕೆ, ನರ್ತನಗಳನ್ನು ಮಾಡುತ್ತಿದ್ದರು. ಅವರು ಪ್ರತಿಮೆಗೆ ನೈವೇದ್ಯ ನೀಡಲು ತಮ್ಮೊಂದಿಗೆ ಮಾಂಸವನ್ನು ಕೂಡ ತರುತ್ತಿದ್ದರು. ಇದರ ಅರ್ಥ ಆ ಮದನಿಕೆಯರು ಮಾಂಸಹಾರಿಗಳಾಗಿದ್ದರು. ಅದನ್ನು ದೇವರ ಮುಂದೆ ಇರಿಸುತ್ತಿದ್ದರು. ಆ ದೇವರು ತಾವು ತಂದ ಆಹಾರವನ್ನು ತಿನ್ನುವವರೆಗೆ ಆ ಮದನಿಕೆಯರು ಹಬ್ಬದ ವಾತಾವರಣದಲ್ಲಿ ಹಾಡುವುದು ಮತ್ತು ನರ್ತಿಸುವುದನ್ನು ಮಾಡುತ್ತಿದ್ದರು. ಆ ಹೊತ್ತಿನಲ್ಲಿ ದೇವರು ಗಾಳಿಯ ರೂಪದಲ್ಲಿ ಬಂದು ಆಹಾರದ ಸಾರವನ್ನು ತಿಂದು ಹೋಗಿದೆ ಎಂದುಕೊಂಡು ಅವರು ನೈವೇದ್ಯದ ಮುಚ್ಚಳವನ್ನು ತೆಗೆದು ಸಂತೋಷದಿಂದ ಅದನ್ನು ತಿನ್ನುತ್ತಿದ್ದರು. ಈ ಹಬ್ಬಕ್ಕೆ ಮದನಿಕೆಯರೆಲ್ಲಾ ಒಂದೆಡೆ ಸೇರುತ್ತಿದ್ದ ಕಾರಣವೆಂದರೆ, ದೇವರು ಹೆಣ್ಣು ದೇವತೆಯನ್ನು ಪೀಡಿಸುತ್ತಿದ್ದಾನೆ ಮತ್ತು ಅವಳೊಂದಿಗೆ ಕೋಪಗೊಂಡಿದ್ದಾನೆಂದು, ಯಾವುದೇ ರೀತಿಯ ಮಾತುಕತೆಯನ್ನು ಅವರೊಂದಿಗೆ ಮಾಡುತ್ತಿಲ್ಲ ಎಂದು ಸನ್ಯಾಸಿಗಳು ಹೇಳುತ್ತಿದ್ದರು. ಅವರಿಬ್ಬರ ನಡುವೆ ಶಾಂತಿ ಏರ್ಪಡದಿದ್ದರೆ, ಪರಿಸ್ಥಿತಿ ಹದಗೆಡುತ್ತದೆ ಮತ್ತು ಅವರು ತಮಗೆ ವರವನ್ನು ಅನುಗ್ರಹಿಸುವುದಿಲ್ಲ ಎಂಬ ಭಾವನೆಯಿಂದ ಗಂಡು ಮತ್ತು ಹೆಣ್ಣು ದೇವತೆಗಳ ಎದುರು ಬೆತ್ತಲೆಯಾಗಿ ಬಂದು ಹಾಡಿ, ನರ್ತಿಸಿ ಅವರಿಬ್ಬರನ್ನು ಈ ಹೆಣ್ಣುಗಳು ತಣಿಸಬೇಕಾಗಿತ್ತು"[೨೬] ಎಂದಿದ್ದಾರೆ.

ಹಾಗೆಯೇ ದುಬಾಯಿಸ್ ಒಬ್ಬ ಕ್ರೈಸ್ತ ಧರ್ಮ ಪ್ರಚಾರಕನಾಗಿ ೧೭೭೨ರ ಕಾಲದಲ್ಲಿ ಮದ್ರಾಸು ಮತ್ತು ಮೈಸೂರು ಪ್ರಾಂತ್ಯದಲ್ಲಿ ಕೆಲಸ ಮಾಡಿದನು. "ಹಿಂದೂ ನಡತೆಗಳು, ಪದ್ಧತಿಗಳು ಮತ್ತು ಸಂಪ್ರದಾಯಗಳು" ಎಂಬ ತಮ್ಮ ಪ್ರಸಿದ್ಧ ಗ್ರಂಥದಲ್ಲಿ ಹಿಂದೂಗಳ ಪದ್ಧತಿ ಮತ್ತು ಸಮಾರಂಭಗಳನ್ನು ವಿವರಿಸಿದ್ದಾನೆ. ಜೊತೆಗೆ ಅವರು ನರ್ತಿಸುವ ಹುಡುಗಿಯರ ಬಗ್ಗೆ ಕುತೂಹಲಕಾರಿ ಅಂಶಗಳನ್ನು ಗುರುತು ಮಾಡಿದ್ದಾನೆ. "ನರ್ತಿಸುವ ಹುಡುಗಿಯರು ಮೊದಲು ಬ್ರಾಹ್ಮಣರಿಗೆ ಮೀಸಲಾಗಿ ಅನಂತರ ಸಾರ್ವಜನಿಕರನ್ನು ಮೋಹಕ ಶಕ್ತಿಯಿಂದ ತಮ್ಮತ್ತ ಸೆಳೆಯುವ ಈ ಕೀಳು ಮಹಿಳೆಯರು, ಭಾರತದಲ್ಲಿ ವಿಶೇಷವಾದ ರೀತಿಯಲ್ಲಿ ದೇವತೆಗಳ ಪೂಜೆಗೆ ಅರ್ಪಿಸಲ್ಪಟ್ಟರು. ಎಂಟು, ಹನ್ನೆರಡು ಅಥವಾ ಅದಕ್ಕಿಂತ ಹೆಚ್ಚು ಗುಂಪುಗಳಲ್ಲಿ ಪ್ರತಿಯೊಂದು ದೇವಾಲಯಗಳಲ್ಲಿ ಅವರು ಸೇವೆ ಸಲ್ಲಿಸುತ್ತಿದ್ದರು. ದೇವಾಲಯದಲ್ಲಿ ಬೆಳಿಗ್ಗೆ ಮತ್ತು ಸಂಜೆ ದಿನಕ್ಕೆರಡು ಬಾರಿ ನರ್ತಿಸುವುದು ಮತ್ತು ಹಾಡುವುದು ಅವರ ಅಧಿಕೃತ ಕರ್ತವ್ಯಗಳು. ಅವರು ಸಾರ್ವಜನಿಕ ಸಮಾರಂಭಗಳಲ್ಲೂ ಈ ಕರ್ತವ್ಯ ನಿರ್ವಹಿಸಬೇಕಾಗಿತ್ತು. ಅವರು ದೇವರ ಆಶೀರ್ವಾದಕ್ಕಾಗಿ ಮೊದಲು ಈ ಕೆಲಸಗಳನ್ನು ಮಾಡುವವರಾದರೂ ಅವರ ಸ್ವಭಾವಗಳು ಕಾಮೋತ್ತೇಜಕವಾಗಿರುತ್ತಿದ್ದವು ಮತ್ತು ಭಂಗಿಗಳು ಅಶ್ಲೀಲವಾಗಿರುತ್ತಿದ್ದವು. ಅವರ ದೇವಾಲಯಗಳ ಚರಿತ್ರೆಯ ಕೆಲವು ಕಾಮ ಕ್ರೀಡೆಗಳನ್ನು ವರ್ಣಿಸುವ ಅಶ್ಲೀಲ ಹಾಡುಗಳನ್ನು ಹಾಡುವುದಕ್ಕಷ್ಟೇ ಅವು ಸೀಮಿತವಾಗಿರಲಿಲ್ಲ. ಅವರ ವೃತ್ತಿ ಅನೇಕ ಸಮಾರಂಭಗಳ ನಂತರ ಸಿಗುವ ಬಿಡುವಿನ ವೇಳೆಯಲ್ಲಿ ಅವರು ಅತ್ಯಂತ ನಾಚಿಕೆಗೆಟ್ಟ ಅಭ್ಯಾಸಗಳಲ್ಲಿ ನಿರಂತರವಾಗಿ ಮುಂದುವರೆಸುತ್ತಿದ್ದರು. ಪವಿತ್ರ ದೇವಾಲಯಗಳು ಕೂಡ ವೇಶ್ಯಾವಾಟಿಕೆಗಳಾಗಿ, ಪರಿವರ್ತನೆಗೊಂಡಿರುವ ದೃಶ್ಯಗಳನ್ನು ಸಾಮಾನ್ಯವಾಗಿ ಕಾಣಬಹುದಾಗಿತ್ತು. ಅವರು

ಚಿಕ್ಕಂದಿನಿಂದ ಈ ಬಗೆಯ ಕೀಳು ಜೀವನದಲ್ಲಿ ಪಳಗಿದವರಾಗಿದ್ದರು. ಅವರ ಪೈಕಿ ಕೆಲವರು ಗೌರವಯುತರಾದ ಕುಟುಂಬಗಳಿಂದಲೂ ಮತ್ತು ಬೇರೆ ಬೇರೆ ಜಾತಿಗಳಿಂದ ಅವರನ್ನು ಸೇರಿಸಿಕೊಳ್ಳಲಾಗಿತ್ತು. ಸುಲಭವಾಗಿ ಹೆರಿಗೆ ಆಗಲೆಂದು, ಹರಿಕೆ ತೀರಿಸಲು, ಹೆಣ್ಣು ಮಗುವಾದರೆ ದೇವಾಲಯದ ಸೇವೆಗೆ ಅರ್ಪಿಸುವೆ"[೩೨] ಎಂದು ಹರಕೆ ಮಾಡಿಕೊಳ್ಳುತ್ತಿದ್ದುದು ಸಾಮಾನ್ಯ ಸಂಗತಿಯಾಗಿತ್ತು.

ಓದಲು, ನರ್ತಿಸಲು ಮತ್ತು ಹಾಡಲು ಭಾರತದಲ್ಲಿ ಈ ಮಹಿಳೆಯರಿಗೆ ಮಾತ್ರ ಅವಕಾಶವಿದ್ದು ಈ ಕಾರಣಕ್ಕಾಗಿಯೇ ಶ್ರೀಮಂತರ ಮೇಲ್ವರ್ಗದ ಮಹಿಳೆಯರು ಈ ಮೇಲ್ಕಂಡ ಅವಕಾಶಗಳನ್ನು ಬಳಸಿಕೊಳ್ಳಲು ಹಿಂಜರಿದರು. ಹೀಗೆ ಭಾರತದ ಮಹಿಳೆಯರಿಗೆ ತಿರಸ್ಕರಿಸಲ್ಪಟ್ಟಿದ್ದ ಈ ಕಲಿಕೆಗಳು ದೇವಾಲಯಗಳಿಗೆ ಅರ್ಪಿತವಾಗುತ್ತಿದ್ದ ಹುಡುಗಿಯರಿಗೆ ಕರಗತವಾಗಿದ್ದವು ಎಂದು ಈ ನಿದರ್ಶನಗಳಿಂದ ಕಂಡುಬರುತ್ತವೆ. ಪುದುಕೋಟೆಯ ಒಂದು ಶಾಸನದಲ್ಲಿ ಒಂದನೆಯ ಕುಲೋತ್ತುಂಗ ಚೋಳನ ಕಾಲದಲ್ಲಿ (೧೦೭೦-೧೧೨೦) ಮಹಾಮಂಗಳಾರತಿ ನಡೆಯುವಾಗ ನರ್ತನ ನಡೆಯಬೇಕೆಂದೂ ಪೂಜೆಗಾಗಿ ಬಂದ ಭಕ್ತಾಧಿಗಳು ಮಾಣಿಕ್ಯ ದೇವದಾಸಿಯ ಹಿಂದೆ ನಿಲ್ಲಬೇಕೆಂದೂ ರಾಜಾಜ್ಞೆಯಿತ್ತು ಎನ್ನಲಾಗಿದೆ.

ಹಿಂದೆ ದಕ್ಷಿಣ ಭಾರತದಲ್ಲಿ 'ಕುಂಚುಕೋತ್ಸಾವ ಹಬ್ಬ'ವನ್ನು ಮುಕ್ತ ಲೈಂಗಿಕತೆಯ ನಿದರ್ಶನದಲ್ಲಿ ದೇವದಾಸಿ ಪದ್ಧತಿಗೆ ಬೆಂಬಲ ನೀಡುವಂತಿದ್ದು, ಈ ಹಬ್ಬದ ದಿವಸ ಊರ ಹೆಣ್ಣು ಮಕ್ಕಳು ದೇವಸ್ಥಾನಕ್ಕೆ ಬಂದು ಪೂಜೆ ಮಾಡಿದ ಅನಂತರ ತಮ್ಮ ರವಿಕೆಗಳನ್ನು ಬಿಚ್ಚಿ ರಾಶಿ ಹಾಕುವರು. ಅನಂತರ ಊರ ಗಂಡಸರು ಒಳಗೆ ಪ್ರವೇಶಿಸಿ ಒಂದೊಂದು ರವಿಕೆಯನ್ನು ತೆಗೆದುಕೊಳ್ಳುವರು. ಆ ರವಿಕೆಯ ಹೆಣ್ಣು ಅಂದು ರಾತ್ರಿ ಅದನ್ನು ತೆಗೆದುಕೊಂಡವನ ಜೊತೆ ಮಲಗಬೇಕು. ಮರುದಿನ ತನ್ನ ಗಂಡನೊಂದಿಗೆ ಹಿಂದಿನಂತೆ ಸಂಸಾರ ಮಾಡುವಳೆನ್ನಲಾಗಿದೆ. ಹಾಗೆಯೇ ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡಿದ 'ಫ್ರಾನ್ಸಿಸ್ ಹ್ಯಾಮಿಲ್ಟನ್' ಎಂಬ ಇನ್ನೊಬ್ಬ ಪ್ರವಾಸಿ ಈ ವ್ಯವಸ್ಥೆಯ ಬಗ್ಗೆ ಕೆಲವು ಅನಿಸಿಕೆಗಳನ್ನು ಬರೆದಿದ್ದಾನೆ. ತುಳುವ ದೇವಾಲಯಗಳ ಬಗ್ಗೆ ಮಾತನಾಡುತ್ತಾ ಅವನು ಹೇಳುತ್ತಾನೆ. "ಮೊಯ್ಲಾರ್ ಎಂಬ ಹೆಸರಿನ ಜಾತಿಗೆ ಮೂಲವಾದ ಒಂದು ಪದ್ಧತಿ ಇದೆ. ತನ್ನ ಗಂಡನಿಂದ ಬೇಸತ್ತ ಮಹಿಳೆ ಅಥವಾ ಕನ್ಯತ್ವದಿಂದ ಬೇಸತ್ತವಳು ವಿಧವೆ ಮತ್ತು ಮದುವೆಯಾಗಲು ಅಸಮರ್ಥಳಾದವಳು ದೇವಾಲಯಕ್ಕೆ ಹೋಗಿ ಪ್ರತಿಮೆಗೆ ಅರ್ಪಿಸಿದ ಅನ್ನದಲ್ಲಿ ಸ್ವಲ್ಪವನ್ನು ತಿನ್ನುವಳು. ಅನಂತರ ಅವಳನ್ನು ಸರ್ಕಾರಿ ಅಧಿಕಾರಿಗಳು ಮುಂದೆ ಕರೆದುಕೊಂಡು ಹೋಗುವರು. ಅವರು ಅವರ ಜಾತಿಯ ಜನರನ್ನು ಸೇರಿಸಿ ಅವಳ ಈ ನಿರ್ಣಯಕ್ಕೆ ಕಾರಣವನ್ನು ಪ್ರಶ್ನಿಸುವರು. ಅವಳು ಬ್ರಾಹ್ಮಣಳಾಗಿದ್ದರೆ, ದೇವಾಲಯದಲ್ಲಿಯೇ ವಾಸಿಸಲು ಇಲ್ಲವೆ ಹೊರಗೆ ವಾಸಿಸಲು ಅವಕಾಶ ಮಾಡಿಕೊಡುವರು. ಅವರು ಮೊದಲನೆಯದನ್ನು ಆಯ್ದುಕೊಂಡರೆ, ಪ್ರತಿದಿನವೂ ಅವಳಿಗೆ ಅಕ್ಕಿ ಮತ್ತು ಉಡಲು ಒಂದಿಷ್ಟು ಬಟ್ಟೆ ಕೊಡುವರು. ಅವಳು ದೇವಾಲಯದ ಕಸ ತೆಗೆಯಬೇಕು, ಬೀಸಣಿಗೆಯಿಂದ ಪ್ರತಿಮೆಗೆ ಗಾಳಿ ಬೀಸಬೇಕು. ಅವಳ ಪ್ರಣಯವೆಲ್ಲವೂ ಬ್ರಾಹ್ಮಣರಿಗೆ ಸೀಮಿತವಾಗಿರಬೇಕು. ದೇವಾಲಯದಲ್ಲಿ ಉಳಿಯಲು ಬಯಸದ ಮಹಿಳೆ ಮತ್ತು ಮೂರು ಕೆಳಜಾತಿಗೆ ಸೇರಿದ ಮಹಿಳೆಯರು ತಾವು ಇಷ್ಟಪಡುವ ಉತ್ತಮ ಮನೆತನದ ಯಾವನೇ ಒಬ್ಬ ವ್ಯಕ್ತಿಯೊಂದಿಗೆ ಅವರು ಇಷ್ಟಪಟ್ಟರೆ ಸೇರಬಹುದು. ಆದರೆ ಅವರು ಪ್ರತಿವರ್ಷವೂ ತಮ್ಮ ಆದಾಯದ

ಹದಿನಾರನೆಯ ಒಂದು ಭಾಗದಿಂದ ಅರ್ಧವನ್ನು ದೇವಾಲಯಕ್ಕೆ ನೀಡಬೇಕು''[೩೮]. ಹೀಗೆ ಕೆಲವು ನಿರ್ಬಂಧ ಮತ್ತು ವಿಶೇಷತೆಗಳೊಂದಿಗೆ ಬ್ರಾಹ್ಮಣ ದೇವದಾಸಿಯರು ಕೆಲವು ವಿಶೇಷ ಸವಲತ್ತುಗಳನ್ನು ಹೊಂದಿದ್ದರು ಎಂದು ದಾಖಲೆ ತಿಳಿಸುತ್ತವೆ.

ಶ್ರೀಪಾದರಾಜರು ತಮ್ಮ ಸಾಹಿತ್ಯ ರಚನೆಯಲ್ಲಿ ದೇವದಾಸಿಯರ ಕುರಿತು ಈ ರೀತಿಯ ನಿಲುವನ್ನು ವ್ಯಕ್ತಪಡಿಸಿದ್ದಾರೆ.

``ಅರಸು ಮುಟ್ಟಲು ದಾಸಿ ರಂಭೆಯಾದಳು ದೇವ
ಪರಶು ಮುಟ್ಟಲು ಲೋಹ ಸ್ವರ್ಣಗೋವಿಂದ''[೩೯]

ಅಂದಿನ ಕಾಲದ ಸಾಮಾಜಿಕ ಜೀವನದಲ್ಲಿ ಹೆಣ್ಣು ದೇವದಾಸಿಯಾಗಿ ಅಥವಾ ವಾರಾಂಗನೆಯಾಗಿ ಜೀವನ ಸಾಗಿಸುತ್ತಿದ್ದುದು ಸಾಮಾನ್ಯವಾಗಿದ್ದ ಸಂಗತಿ ಎಂಬುದು ಇದರಿಂದ ತಿಳಿದುಬರುತ್ತದೆ. ``ದೇವದಾಸಿಯರು ಕುಟುಂಬದ ಸ್ತ್ರೀಯರಂತೆ ಮದುವೆ ಮಾಡಿಕೊಳ್ಳುತ್ತಿರಲಿಲ್ಲ. ಅವರು ದೇವಾಲಯಗಳಲ್ಲಿ ಪೂಜಾ ಸಮಯದಲ್ಲಿ ನೃತ್ಯ ಸೇವೆ ಸಲ್ಲಿಸುತ್ತಿದ್ದರು. ಉನ್ನತ ಜಾತಿಜನರು ಶ್ರೀಮಂತರು ಹಾಗು ಊರಿನ ಗಣ್ಯರೊಂದಿನ ಸಂಪರ್ಕದಲ್ಲಿ ಕಲಾಸೇವೆಯ ಮೂಲಕ ತಮ್ಮ ಜೀವನವನ್ನು ರೂಪಿಸಿಕೊಳ್ಳುತ್ತಿದ್ದರು. ಅಲ್ಲದೇ ಅವರು ಲೈಂಗಿಕ ಕಾರ್ಯಕರ್ತೆಯರು ಆಗಿರುತ್ತಿದ್ದರು. ವಾರಾಂಗನೆಯರು ರಾಜಸಭೆಗಳಲ್ಲಿ ತಮ್ಮ ಕಲಾ ಪ್ರೌಢಿಮೆ ಮೆರೆಯುತ್ತಿದ್ದ ಕಲಾವಿದೆಯರಾಗಿರುತ್ತಿದ್ದದ್ದು, ಸಮಾಜದ ಉನ್ನತ ಸ್ಥಾನದಲ್ಲಿದ್ದ ಅತೃಪ್ತ ಕಾಮಿಗಳನ್ನು ತಣಿಸುವವರು ಆಗಿರುತ್ತಿದ್ದರು''[೪೦].

ಆಂಧ್ರ ಮತ್ತು ತಮಿಳುನಾಡುಗಳಲ್ಲಿ ಈ ಸಂಪ್ರದಾಯವು ಈಗಲೂ ಇದೆ. ತಮಿಳುನಾಡಿನ ರಾಮೇಶ್ವರದ ದೇವಸ್ಥಾನದಲ್ಲಿ ಪ್ರಾಥಃಕಾಲ ಅರ್ಚಕರೊಡನೆ ಒಬ್ಬ ದೇವದಾಸಿಯು ಬ್ರಹ್ಮಣಿಯಂತೆ ವಸ್ತ್ರಗಳನ್ನುಟ್ಟು ರುದ್ರಾಕ್ಷಿಗಳನ್ನು ಧರಿಸಿ ದೇವಸ್ಥಾನಕ್ಕೆ ಬರುತ್ತಾಳೆ. ಅವಳನ್ನು ತಮಿಳಿನಲ್ಲಿ 'ಮುರೈಕಾರಿ' ಎನ್ನುತ್ತಾರೆ. ಉತ್ತರ ಕರ್ನಾಟಕದ ಅಂಚಿನಲ್ಲಿರುವ ಗೋವಾದಲ್ಲಿನ ಮಂಗೇಶ ದೇವಸ್ಥಾನದಲ್ಲಿ ಆರು ಜನ ದೇವದಾಸಿಯರಿದ್ದಾರೆ. ಸೋಮವಾರದ ಪೂಜೆಯ ಸಮಯದಲ್ಲಿಯೂ ಉಳಿದ ಹಬ್ಬದ ಸಮಯದಲ್ಲಿಯೂ ಅವರು ದೇವಸ್ಥಾನಗಳಲ್ಲಿ ನರ್ತನ ಮಾಡುತ್ತಾರೆ. ಗೋವಾದಲ್ಲಿ 'ಮಲ್ಯದ ವಿಷ್ಣುದೇವಸ್ಥಾನ' ದಲ್ಲಿಯೂ ದೇವದಾಸಿಯರಿದ್ದಾರೆ. ಇವರನ್ನು ಭಾವಿನ್ ಎಂದು ಕರೆಯುತ್ತಾರೆ. ದೇವಸ್ಥಾನದಲ್ಲಿ ದೇವದಾಸಿಯಾಗಿ, ಕೆಲಸ ಮಾಡಲು ಒಪ್ಪಿಕೊಂಡ ಸ್ತ್ರೀ ದೇವಸ್ಥಾನಕ್ಕೆ ಹೋಗಿ ದೇವರ ಪೂಜೆಯನಂತರ ದೀಪದಿಂದ ಎಣ್ಣೆಯನ್ನು ತೆಗೆದುಕೊಂಡು ತನ್ನ ತಲೆಗೆ ಹಚ್ಚಿಕೊಳ್ಳುತ್ತಾಳೆ. ಈ ರೀತಿಯ ಸಂಪ್ರದಾಯಗಳು ದಕ್ಷಿಣ ಭಾರತದಲ್ಲಿ ಕಂಡು ಬರುತ್ತವೆ.

ಪರ್ಶಿಯಾದ ರಾಯಭಾರಿ ಅಬ್ದುಲ್ ರಜಾಕನ ವರದಿಯಂತೆ ಪ್ರಬಲರಾದ ವಿಜಯನಗರ ಚಕ್ರವರ್ತಿಗಳ ಕಾಲದಲ್ಲಿ ನರ್ತಕಿಯರ ಸೂಳೆಗಾರಿಕೆ ಈ ಸಾಮ್ರಾಜ್ಯದ ಆದಾಯದ ಮುಖ್ಯ ಆಕರವಾಗಿತ್ತು. ``ನಿಜ ಸಂಗತಿ ಎಂದರೆ, ೧೨೦೦೦ ಪೊಲೀಸ್ ವ್ಯವಸ್ಥೆಯ ಸಮಗ್ರ ನಿರ್ವಹಣೆ ಸೂಳೆಯರ ಆದಾಯದಿಂದ ಬಂದ ಹಣದಿಂದಲೇ ನಡೆಯುತ್ತಿತ್ತು''[೪೧]. ಪೋರ್ಚಗೀಸರ ಪ್ರವಾಸಿಗ ಡೊಮಿಂಗೊಪೆಯಾಸ್‌ನು ದೇವಾಲಯದಲ್ಲಿ ದೇವದಾಸಿಯರ ಕರ್ತವ್ಯಗಳನ್ನು ಹೀಗೆ ವಿವರಿಸಿದ್ದಾನೆ. ದೇವರಿಗೆ ನೈವೇದ್ಯ ಅರ್ಪಿಸುವ ಸಮಯದಲ್ಲಿ ಅವರು

ವಿಗ್ರಹದ ಎದುರು ನರ್ತಿಸುತ್ತಿದ್ದರು. ಆಂಧ್ರಪ್ರದೇಶದ ತಿರುಪತಿಯ ವೆಂಕಟೇಶ್ವರ ದೇವತೆಯ ಅರ್ಚನೆ ನಡೆಯುವಾಗ ದೇವಾಲಯದ ಅನೇಕ ದೇವದಾಸಿಯರು ಗೀತೆಗಳನ್ನು, ನೃತ್ಯವನ್ನು ಮಾಡಲು ನೇಮಿಸಿಕೊಂಡಿದ್ದು ಅಬೆದುಬಾಯಸ್ ವಿವರಿಸುತ್ತಾನೆ(೧೯೨೮, ೬೦೧). ಚಕ್ರವರ್ತಿಗಳಿಗೆ, ಸಾರ್ವಭೌಮರಿಗೆ, ರಾಜ ಮಹಾರಾಜುಗಳಿಗೆ ವಿಶೇಷ ಸಂದರ್ಭಗಳಲ್ಲಿ ಹಾಗೂ ಯುದ್ಧದಲ್ಲಿ ವಿಜಯಿಗಳಾದಾಗ ಸುಂದರ ಕನ್ಯಾಮಣಿಗಳನ್ನು ಕೊಡಲಾಗುತ್ತಿತ್ತು. ಕೆಲವಾರು ಸಂದರ್ಭಗಳಲ್ಲಿ ಆಕರ್ಷಕ ಮೈಮಾಟವಿರುವ ವಿಷಕನ್ಯೆಯರನ್ನು ಉಪಯೋಗಿಸಿ ಶತ್ರುಗಳನ್ನು ಸುಲಭವಾಗಿ ಕೊಲ್ಲುವ ಪರಿಪಾಟವಿತ್ತು.

ದಕ್ಷಿಣ ಭಾರತದಲ್ಲಿ ದೇವದಾಸಿ ಪದ್ಧತಿಯ ಆಚರಣೆ ಮತ್ತು ಪದ್ಧತಿಯ ಮೂಲ ಸ್ವರೂಪವನ್ನು ಹಾಗೂ ಅದಕ್ಕನುಗುಣವಾಗಿ ಸಾಕಷ್ಟು ಪ್ರಮಾಣದಲ್ಲಿ ಪವಿತ್ರ ವೇಶ್ಯಾವೃತ್ತಿ ಇದ್ದುದ್ದನ್ನು ಫುಲ್ಲರ್ ದಾಖಲಿಸಿದ್ದಾಳೆ. ಮದ್ರಾಸ್, ಕೇರಳ ಮತ್ತು ಕರ್ನಾಟಕಗಳಲ್ಲಿ ಪವಿತ್ರ ವೇಶ್ಯಾವೃತ್ತಿಯ ಪದ್ಧತಿಗಳು ಇದ್ದವೆಂಬುದನ್ನು ಈ ಪ್ರದೇಶಗಳಲ್ಲಿ ಬಂದ ಎಲ್ಲಾ ಪ್ರವಾಸಿಗಳ, ಧರ್ಮ ಪ್ರಚಾರಕರ ಬರಹಗಳಿಂದ ನಾವು ತಿಳಿದು ಕೊಳ್ಳಬಹುದಾಗಿದೆ. ಭಾರತವು ಮಧ್ಯಯುಗದಲ್ಲಿ ಮುಸ್ಲಿಮರ ಆಕ್ರಮಣಕ್ಕೆ ತುತ್ತಾದ ಅನಂತರ ದೇವದಾಸಿ ಪದ್ಧತಿಯು ಉತ್ತರ ಭಾರತದಲ್ಲಿ ಇಳಿಮುಖವಾಯ್ತು. ಉದಾಹರಣೆಗೆ ಸೋಮನಾಥ ದೇವಾಲಯಗಳಂತಹ ಅನೇಕ ದೇವಾಲಯಗಳನ್ನು ವಿಗ್ರಹ ಭಂಜಕರು ನಾಶಗೊಳಿಸಿ ಗುಂಪು ಗುಂಪಾಗಿ ಹಿಂದುಗಳನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸಿ, ದೇವಾಲಯಗಳ ಸ್ಥಾನದಲ್ಲಿ ಮಸೀದಿಗಳನ್ನು ನಿರ್ಮಿಸಿದ್ದರಿಂದ ಈ ಪದ್ಧತಿ ಕೊನೆಗೊಂಡಿತೆನ್ನಲಾಗಿದೆ.

ಆದರೆ ದಕ್ಷಿಣ ಭಾರತದಲ್ಲಿ ಮಾತ್ರ ಹಿಂದೂ ರಾಜರುಗಳ ಆಳ್ವಿಕೆಯೇ ಉಳಿದಿತ್ತು. ಈ ಪದ್ಧತಿ ಸಮೃದ್ಧವಾಗಿ, ಶಕ್ತಿಯುತವಾಗಿ ಬೆಳೆದು ಹರಡಲು ಕಾರಣವಾಗಿ, ಇದು ೨೦ನೇ ಶತಮಾನದ ವೇಳೆಗೆ ವೇಶ್ಯಾಪದ್ಧತಿಯಾಗಿ ರೂಪಾಂತರಗೊಂಡು ನೆಲೆಯೂರಿತು. ಕೈಗಾರಿಕೀಕರಣ, ನಗರೀಕರಣ, ವ್ಯಾಪಿಸಿದಂತೆ, ಬ್ರಿಟಿಷರ ಆಳ್ವಿಕೆ ಕಾಲಕ್ಕೆ ಸಂಬಂಧಿಸಿದಂತೆ, ತನ್ನ ಮೊದಲಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಲಕ್ಷಣಗಳನ್ನೆಲ್ಲಾ ಸಂಪೂರ್ಣವಾಗಿ ಬದಲಾಯಿಸಿತು. ಇಲ್ಲಿ 'ಅಬ್ದುಲ್ ರಜಾಕ'ನ ಅಧ್ಯಯನದಿಂದ ವಿಜಯ ನಗರ ಸಾಮ್ರಾಜ್ಯ ತನ್ನ ವೈಭವ ಕಾಲದಲ್ಲಿ ಗೌರವ ಮತ್ತು ಉಚ್ಛ್ರಾಯ ಸ್ಥಿತಿಯಲ್ಲಿದ್ದ ದೇವದಾಸಿಯರ ಸ್ಥಾನಮಾನಗಳು ಸಾಕಷ್ಟು ಸಾಮಾಜಿಕ ಮನ್ನಣೆ ಪಡೆದಿದ್ದವು ಎಂಬುದು ತಿಳಿಯುತ್ತದೆ. ಆದರೆ ನಂತರದ ಕಾಲದಲ್ಲಿ ಅದು ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳಿಂದಾಗಿ, ರೂಪಾಂತರ ಹೊಂದಿ ಹಲವಾರು ಬದಲಾವಣೆಗಳಿಂದ ವಾಣಿಜ್ಯ ವ್ಯವಹಾರಿಕ ಸ್ವರೂಪವನ್ನು ಪಡೆದಿರುವುದನ್ನು ಕೀಳುಸ್ಥಾನ ಅಲಂಕರಿಸಿರುವುದನ್ನು ಜೊತೆಗೆ ದೇವದಾಸಿ ಮಹಿಳೆಯರು ಸಾಕಷ್ಟು ಆಯಾಮಗಳಿಂದ ಶೋಷಣೆಗೆ ಒಳಗಾಗಿರುವುದನ್ನು ನೋಡಬಹುದಾಗಿದೆ.

**೩.೬ ಕರ್ನಾಟಕದಲ್ಲಿ ದೇವದಾಸಿ ಸಂಪ್ರದಾಯ**

ಕರ್ನಾಟಕದಲ್ಲಿಯೂ ಅನಾದಿಕಾಲದಿಂದ ದೇವದಾಸಿ ಪದ್ಧತಿ ಪ್ರಚಲಿತದಲ್ಲಿದ್ದದ್ದು ಶಾಸನಗಳಿಂದ ತಿಳಿಯಬಹುದಾಗಿದ್ದರೂ, ಕನ್ನಡದ ಶಾಸನಗಳಲ್ಲಿ ಎಲ್ಲಿಯೂ 'ದೇವದಾಸಿ' ಎಂಬ ಪದ ಬಂದಿಲ್ಲ. ಅದರ ಬದಲು 'ಸೂಳೆ' ಎಂಬ ಪದ ಬಂದಿರುವುದೇ ಹೆಚ್ಚು. ಸೋಮೇಶ್ವರನ ಅಭಿಲಾಷಿತಾರ್ಥ ಚಿಂತಾಮಣಿಯಲ್ಲಿ (ಕ್ರಿ.ಶ.೧೧೨೯-೩೦) ದೇವಸ್ಥಾನಗಳಿಗೆ ಕೊಡಬೇಕಾದ ವಸ್ತುಗಳಲ್ಲಿ ದೇವದಾಸಿಯರನ್ನು ಹೆಸರಿಸಿದೆ. 'ಗೃಹಂ

ಗ್ರಾಮಸ್ತಥಾ ಭೂಮಿರ್ದಾಸಿಕಾದ್ಯಾ ವಿಭೂಷಣಂ' ಇಲ್ಲಿ 'ದಾಸಿಕ' ಎಂದರೆ 'ದೇವದಾಸಿ' ಎಂದರ್ಥ.

ಕ್ರಿ.ಶ.೭೭೮-೭೯ರ ಪಟ್ಟದಕಲ್ಲಿನ ವಿರುಪಾಕ್ಷ ದೇವಾಲಯದ ಶಾಸನವು "ದೇಗುಲದ ಸೂಳೆಯೊಬ್ಬಳು ದಾನ ಕೊಟ್ಟ ವಿಷಯವನ್ನು ಸೂಚಿಸುತ್ತದೆ. ಲೋಕ ಮಹದೇವಿಯರ ದೇಗುಲದ ಸೂಳೆ ಗೋವಿಂದ ಪೊಡ್ಡಿಯ ಮಗಳು ಬಾದಿ ೪ ಪೊಟ್ಟಿಯೆಂಬೊಳ್ ಉತ್ತಮ ಗೋಸಾಸಮಿಟ್ಟೊಳ್..." ಇಲ್ಲಿ ಪೊಡ್ಡಿ ಎಂಬುದು ಹೊಸಗನ್ನಡದ 'ಬೊಡ್ಡಿ' ಅಂದರೆ ವೇಶ್ಯೆಯಾಗಿರಬಹುದೆಂದು ಊಹಿಸಲಾಗಿದೆ. ಕ್ರಿ.ಶ.೮೦೨ರ ತಾಮ್ರ ಪಟವೊಂದರಲ್ಲಿ ಜಿನಭವನದಲ್ಲಿ ನಡೆಯುವ ವೀರ ವಿಲಾಸಿನೀ ವಿರಚಿತ ವೃತ್ಯಗೀತವಾದ್ಯ ಇತ್ಯಾದಿಗಳಿಗಾಗಿ ದಾನವನ್ನು ಕೊಡಲಾಗಿದೆ.

"ಕ್ರಿ.ಶ.೪೫೦ರಲ್ಲಿ ಶಿಕಾರಿಪುರದ ಬಳಿಯ ತಾಳಗುಂದದ ಶಾಸನದಲ್ಲಿ ಮಹಾದೇವನ ಗುಡಿಯಲ್ಲಿ ಮಂತ್ರ ಘೋಷ, ಗಾಯನಗಳು ಕೇಳಿ ಬರುತ್ತಿದ್ದವೆಂದು ಹೇಳಲಾಗಿದೆ. ಹಾಗೆಯೇ ಆಲನಹಳ್ಳಿಯಲ್ಲಿ ದೊರೆತ ಶಾಸನ ಕ್ರಿ.ಶ.೧೧೧೩ಯ ಇಸವಿಯ 'ದೇವದಾಸಿ' ಪದದ ಉಲ್ಲೇಖವಿರುವುದು. ಇದು ಅತ್ಯಂತ ಪ್ರಾಚೀನ ಶಾಸನ ಎನ್ನಲಾಗಿದ್ದು"[೪೨] ಇದಕ್ಕಿಂತ ಹಿಂದಿನ ಶಾಸನಗಳಲ್ಲೆಲ್ಲ 'ಸೂಳೆ' ಎಂದು ಹೆಸರಿಸಲಾಗಿದೆ. ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ 'ರಾಣಿವಾಸ' 'ಪೆಂಡವಾಸ' 'ಪೆಂಡವಾಸದ ಸೂಳೆಯರು' 'ವರವಧು' 'ಗಣಿಕೆ' ಈ ಬಗೆಯ ಗುಣವಾಚಕಗಳು 'ಸೂಳೆ' ಪದಕ್ಕೆ ಇರುವುದನ್ನು ಗಮನಿಸಬಹುದು. ಅರಮನೆಗಳಿಗೆ ಸಂಬಂಧ ಹೊಂದಿದ್ದ ವೇಶ್ಯೆಯರನ್ನು ಕುರಿತ ಈ ಮೇಲಿನ ಪದಗಳು ಬಳಕೆಯಲ್ಲಿದ್ದವು. 'ರಾಜವೇಶ್ಯೆಯರು' ಎಂದು ಅವರನ್ನು ಕರೆಯಲಾಗುತ್ತಿತ್ತು. ಇವರು ಅರಮನೆಗಳೊಂದಿಗೆ ಸಂಬಂಧ ಹೊಂದಿರುತ್ತಿದ್ದರು. 'ಗೊಂಕ' ಎಂಬ ರಾಜ ತನ್ನ ಸಾಮ್ರಾಜ್ಯದಲ್ಲಿನ ದೇವಾಲಯದ ಒಬ್ಬ ವೇಶ್ಯೆಯನ್ನು ಮದುವೆಯಾಗಿದ್ದರ ಬಗ್ಗೆ ಕ್ರಿ.ಶ.೯ನೇ ಶತಮಾನದ ಒಂದು ಶಾಸನದಲ್ಲಿ ಅದರ ಉಲ್ಲೇಖವಿದೆ. ಶಿಲಾಶಾಸನಗಳ ಪ್ರಕಾರ ರಾಜವೇಶ್ಯೆಯು ಉನ್ನತ ಸ್ಥಾನಗಳನ್ನು ಹೊಂದಿದ್ದನ್ನು ಖಚಿತವಾಗಿ ತಿಳಿಯಬಹುದಾಗಿದೆ.

ಕರ್ನಾಟಕದಲ್ಲಿ ಸೂಳೆಯರನ್ನು ದೇವಾಲಯಕ್ಕೆ ಬಿಡಲು ಪ್ರಾರಂಭಿಸಿದ ಕಾಲ ನಿರ್ದಿಷ್ಟವಾಗಿ ತಿಳಿದಿಲ್ಲ. ಬಾದಾಮಿ ಚಾಲುಕ್ಯ ವಂಶದ ವಿಜಯಾದಿತ್ಯ (ಕ್ರಿ.ಶ.೭೩೩-೩೪) ಗಂಧರ್ವರಿಗೆ ನೀಡಿದ ಪೂರ್ವ ಮರ್ಯಾದೆಯನ್ನು ಪಟ್ಟದಕಲ್ಲಿನ ಶಾಸನ ಹೇಳುತ್ತದೆ. ಅನಂತರ ೮ನೇ ಶತಮಾನದಲ್ಲಿ, ಇದೇ ಪಟ್ಟದಕಲ್ಲಿನ ಶಾಸನದ ಪ್ರಕಾರ ಲೋಕಮಹಾದೇವಿ ನಿರ್ಮಿಸಿದ ಲೋಕೇಶ್ವರ ದೇಗುಲದ ಗೋಯಿನ್ದಪೊಡ್ಡಿ, ಬಾದಿ ಪೊಡ್ಡಿಯರೇ ಕರ್ನಾಟಕದ ಪ್ರಥಮ ದೇವಾಲಯದ ಸೂಳೆಯರು. ಅಂದಿನಿಂದ ವಿಜಾಪುರ ಜಿಲ್ಲೆಯ ಪಟ್ಟದಕಲ್ಲು, ನಾಗಮಂಡಲ ತಾಲೂಕಿನ ಮಂಣೆ, ಹೊನ್ನಾಳಿ ತಾಲೂಕಿನ ನ್ಯಾಮತಿ, ರೋಣ ತಾಲೂಕಿನ ಸೂಡಿ, ಗದಗ ತಾಲೂಕಿನ ಲಕ್ಕುಂಡಿ, ಹರಪನಹಳ್ಳಿ ತಾಲೂಕಿನ ಬಾಗಳಿ, ಹಿರೇಮ್ಯಾಗಳಕೇರಿ, ಹಡಗಲಿ ತಾಲೂಕಿನ ಮೋರಿಗೆರೆ, ಹೂವಿನ ಹಡಗಲಿ, ಹಳಗೊಂಡಿ, ಮುದ್ದೆಬಿಹಾಳ ತಾಲೂಕಿನ ನಾಲತವಾಡ, ಹುನಗುಂದ ತಾಲೂಕಿನ ಅರಸಿ ಬೀದಿ, ನಂದವಡಗಿ, ರಾಣೆಬೆನ್ನೂರು ತಾಲೂಕಿನ ಹೊಳೆ ಆನವೇರಿ, ಹೊಲಿಹಳ್ಳಿ, ಮುಂಡರಗಿ ತಾಲೂಕಿನ ಕೊರಲಹಳ್ಳಿ, ಶಿಗ್ಗಾಂವ ತಾಲೂಕಿನ ಬಂಗಾಪುರ, ದಾವಣಗೆರೆ ತಾಲೂಕಿನ ಬೇತೂರು, ಅದೋನಿ ತಾಲೂಕಿನ ಚಿನ್ನತುಂಬಳ, ಬಳ್ಳಾರಿ ತಾಲೂಕಿನ ಶಿರಗುಪ್ಪಿ, ಕೊಪ್ಪಳ ತಾಲೂಕಿನ ಕುಕನೂರು, ಕಾರೂರು, ರಾಯಚೂರು ತಾಲೂಕಿನ ಇಟಗಿ,

ಹಿರೇಕೆರೂರು ತಾಲೂಕಿನ ಕಾಗಿನೆಲೆ, ಸಿಂದಗಿ ತಾಲೂಕಿನ ದೇವರನಾವದಿಗಿ, ಶಿಕಾರಿಪುರ ತಾಲೂಕಿನ ಬಳ್ಳಿಗಾವೆ, ಬೇಲೂರು ತಾಲೂಕಿನ ಹಳೇಬೀಡು, ಚೆನ್ನರಾಯ ಪಟ್ಟಣ ತಾಲೂಕಿನ ಕೆಂಬಾಳು, ಮಂಡ್ಯ ತಾಲೂಕಿನ ಬಸರಾಳು, ಗುಬ್ಬಿ ತಾಲೂಕಿನ ಸಂಪಿಗೆ, ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ, ಕುಂದಾಪುರ ತಾಲೂಕಿನ ಕೋಟೇಶ್ವರ ಮುಂತಾದ ಗ್ರಾಮಗಳ ದೇವಾಲಯಗಳಲ್ಲಿ ಸೂಳೆಯರಿದ್ದ ಉಲ್ಲೇಖಗಳು ದೊರೆಯುತ್ತವೆ.

೯ನೇ ಶತಮಾನದ ತಾಮ್ರಪಟದಲ್ಲಿ ಜಿನಭವನದ ವಾರವಿಲಾಸಿನೀ ವಿರಚಿತ ನೃತ್ಯಗೀತವಾದ್ಯ ಬಲಿವಿಲೇಪನ ದೇವಪೂಜಾ ನವಕರ್ಮ ಪ್ರದರ್ಶನಾರ್ಥ ದಾನ ಬಿಡಲಾಗಿತ್ತೆಂದು ಹೇಳಲಾಗಿದೆ. ಹಿಂದುಗಳ ಈ ಸಂಪ್ರದಾಯ ಜೈನರ ದೇವಾಲಯಗಳನ್ನು ಪ್ರವೇಶಿಸಬೇಕಾದರೆ, ಕರ್ನಾಟಕದಲ್ಲಿ ಆ ಕಾಲಕ್ಕೆ ದೇವದಾಸಿ ಸಂಪ್ರದಾಯವು ಸ್ಥಿರವಾಗಿ ನಿಂತಿರಬೇಕೆಂದು ಡಾ.ಚಿದಾನಂದಮೂರ್ತಿಯವರು ಅಭಿಪ್ರಾಯ ಪಡುತ್ತಾರೆ. (೧೯೯೬-ಪುಟ-೧೮೨) ಅನಂತರದ ಶಾಸನವೊಂದರಲ್ಲಿ ದೇವಾಲಯಕ್ಕೆ ಹೆಣ್ಣುಗಳನ್ನು ಮತ್ತು ಹಸುಗಳನ್ನು ದಾನ ಕೊಡುತ್ತಿದ್ದುದರ ಬಗ್ಗೆ ಉಲ್ಲೇಖವಿದೆ. ಕ್ರಿ.ಶ.೯೭೪ರ ಶಾಸನದಲ್ಲಿ ದೇವರಿಗೆ ಇಬ್ಬರು ಕನ್ಯೆಯರನ್ನು, ಹನ್ನೆರಡು ಹಸುಗಳನ್ನು ದಾನವಾಗಿ ಕೊಟ್ಟಂತೆ ಹೇಳಿದೆ. ೧೧ನೇ ಶತಮಾನದಿಂದೀಚೆಗೆ ಶಾಸನಗಳಲ್ಲಿ ದೇವದಾಸಿಯಲ್ಲಿ 'ಪಾತ್ರ' ಮತ್ತು 'ಸೂಳೆ' ಎಂದು ಎರಡು ಭಾಗ ಮಾಡುವಂತೆ ತೋರುತ್ತದೆ. ಕ್ರಿ.ಶ.೯೭೫ರ ಶಾಸನವೊಂದರಲ್ಲಿ ಐವರು ಸೂಳೆಯರಿಗೆ ಮತ್ತು ಒಂದು ಪಾತ್ರಕ್ಕೆ ಪ್ರತೀಕವಾಗಿ ದಾನಕೊಟ್ಟಿದೆ. ಮತ್ತೊಂದು ಶಾಸನದಲ್ಲಿ ಹನ್ನೆರಡು ಜನ ಸೂಳೆಯರಿಗೆ ಮತ್ತು ಒಂದು ಪಾತ್ರಕ್ಕೆ ಪ್ರತೀಕ ದಾನಗಳನ್ನು ಕೊಟ್ಟಿದೆ. (ಅದೇ ೧೯೯೬-ಪುಟ-೧೮೨)

ಬಾದಾಮಿ ಚಾಲುಕ್ಯ ಚಕ್ರವರ್ತಿ ವಿಜಯಾದಿತ್ಯನಿಗೆ 'ವನಾಪೋಟಿ' ಎಂಬ ಸೂಳೆಯು ಪ್ರಾಣವಲ್ಲಭೆಯಾಗಿದ್ದಾಳೆಂದು ಶಾಸನದಲ್ಲಿ ತಿಳಿಸಿದೆ. ಹನ್ನೊಂದನೆಯ ಶತಮಾನದ ಶಾಸನಗಳಲ್ಲಿ ಬೆಳ್ಳಿಗಾವಿಯ ತ್ರಿಪುರಾಂತಕ ದೇವರ ಪಾತಕ ಪದುಮಾವತಿ ಸೂಳೆಯ ಹೆಸರಿದೆ. ಇವಳು ದೇವದಾಸಿಯೂ ಹೌದು, ನರ್ತಕಿಯೂ ಹೌದು ಎನ್ನಲಾಗಿದೆ.

"Another inscription records (EI IV P-87, 1050 A.D) that, noted general of Vikramaditya VI Anantaramaiah made a grant for the maintanances of the quaraters of Dancing girls (sulegeri) constructed by him the sulegeri was attached to the temple of someswara at puligeri which has been identified as Laxmeswar today in Dharwad district"[೪೩].

ತಾನು ನಿರ್ಮಿಸಿದ ನರ್ತಕಿಯರ ಸೂಳೆಗೇರಿಯ ಆಡಳಿತ ನಿರ್ವಹಣೆಗಾಗಿ ೬ನೇ ವಿಕ್ರಮಾದಿತ್ಯನ ದಂಡಾಧಿಕಾರಿ ಅನಂತರಾಮಯ್ಯ ದತ್ತಿ ನೀಡಿದನೆಂಬುದು ಇದರ ಸಾರವಾಗಿದೆ. ಹಾಗೆಯೇ ಚಿತ್ರದುರ್ಗದ ಮಾಳಕೆರೆಯ ಒಂದು ಶಿಲಾಶಾಸನದ ಆಧಾರದಿಂದ ಈ ಸಂಗತಿ ತಿಳಿದು ಬರುತ್ತದೆ. ಹಿರಿಯ ಸಚಿವ ಮಣ್ಣೆ ಮತ್ತು ಅನೇಕ ಕರ್ಣಮ್‌ಗಳು ಮಣಳಕೆರೆ ಅಗ್ರಹಾರಕ್ಕೆ ಬಂದು ಅಲ್ಲಿನ ಮೂಲಸ್ಥಾನ ದೇವಾಲಯಕ್ಕೆ ಅನೇಕ ವಸ್ತುಗಳ ಜೊತೆಗೆ ನಾಲ್ಕು ಜನ ಸೂಳೆಯರನ್ನು ನೀಡಿದ ವಿಷಯವಿದೆ.

ಅನಂತರ ೧೨ನೇ ಶತಮಾನವು ಕರ್ನಾಟಕದ ಇತಿಹಾಸದಲ್ಲಿ ಒಂದು ವಿಶಿಷ್ಟ ಕಾಲಘಟ್ಟವಾಗಿದೆ. ಕಾರಣ

ವೀರಶೈವ ಧರ್ಮದ ಹುಟ್ಟು ಮತ್ತು ಹುಟ್ಟಿಗೆ ಕಾರಣರಾದ ಬಸವಣ್ಣನವರ ಪ್ರತಿಪಾದನೆಗಳು. ಸ್ತ್ರೀಪುರುಷರಿಬ್ಬರೂ ಸಮಾಜದಲ್ಲಿ ಸಮಾನರು. ಸಮಾಜದ ದೇವದಾಸಿ ಪದ್ಧತಿಯಂತಹ ಅನಿಷ್ಟಗಳ ವಿರುದ್ಧ, ಪ್ರಗತಿಪರ ಹೋರಾಟಗಳಿಗೆ ಚಾಲನೆ ನೀಡಿದರು. ತಮ್ಮ ಹುಟ್ಟಿನ ಕೀಳರಿಮೆಯನ್ನು ತೊರೆದು ಯಾರ ಹಂಗು ಮತ್ತು ದಾಸ್ಯಕ್ಕೆ ಒಳಗಾಗದ ಸ್ವತಂತ್ರ್ಯ ಕಾಯಕ ಜೀವಿಗಳಾಗಲು ಕರೆಕೊಟ್ಟ ಹಿನ್ನೆಲೆಯಲ್ಲಿ ಅನೇಕ ದೇವದಾಸಿಯರು ಈ ಅನಿಷ್ಟ ಪದ್ಧತಿಯಿಂದ ಹೊರ ಬಂದರು. ಧರ್ಮ ಮತ್ತು ದೇವರ ಹೆಸರಿನಲ್ಲಿ ದೇವದಾಸಿಯರಾಗಿ, ವೇಶ್ಯೆರಾಗಿ, ಸೂಳೆಯರಾಗಿ, ಕಾಮಾಂಧರ ನಿರಂತರ ಅತ್ಯಾಚಾರಕ್ಕೊಳಗಾದ ಮಹಿಳೆಯರ ಮಕ್ಕಳ ಬಗ್ಗೆ ಈ ಯುಗದಲ್ಲಿ ಚಿಂತಿಸಿ, ಅವರುಗಳ ಕಲ್ಯಾಣಕ್ಕಾಗಿ ಶರಣರು ದುಡಿದರು.

ದೇವದಾಸಿಯರು ಧರ್ಮ ಸಂಸ್ಕಾರಕ್ಕೆ ಅರ್ಹರೆಂದು ಸಾರಿದ್ದಲ್ಲದೇ, ಅವರನ್ನು ಸಾಕ್ಷಾತ್ ಶಿವರೂಪಿಗಳು. ಜಂಗಮರೆಂದೇ ಪರಿಗಣಿಸಿ ಗೌರವಿಸಿದ್ದಾರೆ. ನಟುವರ ಜನಾಂಗದಲ್ಲಿ ಜನಿಸಿದ ಅಲ್ಲಮ ಪ್ರಭುವು ಬಸವಣ್ಣನವರ ಧರ್ಮದ ಇಷ್ಟಲಿಂಗ ಸಂಸ್ಕಾರವನ್ನು ಹೊಂದಿ ಷಟ್‌ಸ್ಥಲ ಸಾಧನೆಗೈದು ಲಿಂಗಾಂಗ ಸಾಮರಸ್ಯ ಸಾಧಿಸಿ, ಅರಿವು, ಆಚಾರ, ಅನುಭವದ ಮೂಲಕ ಜಂಗಮನೆನಿಸಿ, ಅನುಭವ ಮಂಟಪದ ಅಧ್ಯಕ್ಷನಾಗಿ, ಶರಣರ ಸಂಕುಲದಲ್ಲಿ ಹಿರಿಯ, ಪೂಜ್ಯನೀಯ ಸ್ಥಾನ ಅಲಂಕರಿಸಿದ್ದು, ಐತಿಹಾಸಿಕ ಸತ್ಯವಾಗಿದೆ. (ಸಿದ್ದಣ್ಣ-೮೦-೯೮೮) ಆರ್.ಸಿ. ಅರ್ತಾಳ್ ರವರು ವೀರಶೈವ ಧರ್ಮ ಮತ್ತು ಬಾಲಕಿಯನ್ನು ಅರ್ಪಿಸುವುದರ ಬಗ್ಗೆ ಹೇಳಿದ್ದಾರೆ. "ಮಠದ ಮುಖ್ಯಸ್ಥನಾದ ಲಿಂಗಾಯಿತ ಜಂಗಮ ಅಥವಾ ಅಯ್ಯಪಟ್ಟದಪ್ಪನವರು ಅಥವಾ ಹಿರೇಮಠದ ಚರಮೂರ್ತಿಗಳು ಹುಡುಗಿಯ ಕತ್ತಿಗೆ ಅದೃಷ್ಟದ ತಾಯಿತವನ್ನು ಕಟ್ಟುತ್ತಾರೆ. ಸಾಮಾನ್ಯವಾಗಿ ಹಿರೇಮಠದಯ್ಯ ಅವರ ಕನ್ಯತ್ವದ ಸೆರೆ ಬಿಡಿಸುವ ಹಕ್ಕನ್ನು ಹೊಂದಿರುತ್ತಾರೆ ಎಂಬ ಅಭಿಪ್ರಾಯವನ್ನು ಅವರು ಲೇಖನದ ಅಡಿ ಟಿಪ್ಪಣಿಯಲ್ಲಿ ತನ್ನ ವಾದವನ್ನು ಈ ರೀತಿ ಸಮರ್ಥಿಸುತ್ತಾರೆ"[೪೫]. "ಲಿಂಗಾಯಿತೇತರ ಹೆಣ್ಣುಗಳನ್ನು ಮುಟ್ಟಲು ಅವಕಾಶವಿಲ್ಲದಿರುವ ಜಂಗಮರು ಅಥವಾ ಲಿಂಗಾಯಿತ ಪೂಜಾರಿಗಳು ತಮ್ಮ ಕಾಮನೆಗಳನ್ನು ಪೂರೈಸಿಕೊಳ್ಳುವ ದೃಷ್ಟಿಯಿಂದಲೇ ಬಸವಿ ಪದ್ಧತಿಯನ್ನು ತಮ್ಮಲ್ಲಿ ಆಚರಣೆಗೆ ತಂದಿರಬಹುದೆಂದು ಆದುದರಿಂದಲೇ ಬಕ್ತರ ಮನೆಯ ಊಟ, ಬಸವಿಮನೆಯಲ್ಲಿ ನಿದ್ದೆ ಎಂಬ ಗಾದೆ ಹುಟ್ಟಿಕೊಂಡಿದೆ ಎನ್ನಲಾಗಿದೆ.

ಬೊಂಬಾಯಿ ಕರ್ನಾಟಕ ಪ್ರಾಂತ್ಯದ ಬಸವಿಯರಲ್ಲಿ 'ಬಾಲಬಸವಿ'ಯರು ಹಾಗೂ 'ಬಟ್ಲ' ಬಸವಿಯರೆಂಬ ಎರಡು ಬಗೆಗಳಲ್ಲಿ ಮೊದಲನೇ ಬಗೆಯವರು ವೀರಶೈವರಲ್ಲಿ ಅಸ್ಪೃಶ್ಯರೆನಿಸಿದ 'ಮೆಹರ್' ಜಾತಿಯಿಂದ ಬಂದವರು. 'ಬಾಲ' ಎಂದರೆ ಚಿಕ್ಕಮಗಳು ಅಥವಾ 'ಕನ್ಯೆ' ಎಂದರ್ಥ. ಆದುದರಿಂದ ಇವರು ಜೀವನವಿಡೀ ಕನ್ಯೆಯರಾಗಿಯೇ ಉಳಿಯಬೇಕಾಗುತ್ತಿತ್ತು. ಈ ಹೆಂಗಸರು ಮೇಲೆ ಬೆಳೆ ಮತ್ತು ಹವಮಾನ ಮುಂತಾದ ವಿಷಯಗಳನ್ನು ಕುರಿತು ಭವಿಷ್ಯ ನುಡಿಯುವ ಕಾಲ ಜ್ಞಾನಿಗಳೆಂಬ ಮನ್ನಣೆ ಪಡೆದಿದ್ದರು. ಎರಡನೇ ಬಗೆಯ 'ಬಟ್ಲೆ' ಬಸವಿಯರು ಅವರಿಗಿಂತ ಭಿನ್ನವಾಗಿದ್ದು, ಇವರ ಸಂಖ್ಯೆ ಅಧಿಕ ಇವರು ವೇಶ್ಯಾಪದ್ಧತಿ ಅನುಸರಿಸುತ್ತಿದ್ದರಾದರೂ ಅದು ತಮ್ಮ ಕರ್ತವ್ಯದ ಭಾಗವೆಂದು ತಿಳಿದು ಹಾಗೆ ಮಾಡುತ್ತಿದ್ದರು. 'ಕಾಯಕವೇ ಕೈಲಾಸ' ಎಂಬ ವೀರಶೈವ ತತ್ವ ನಿಷ್ಠೆಯಲ್ಲಿ ನಂಬಿಕೆ ಹೊಂದಿ ಸಮರ್ಪಣಾ ಭಾವದಿಂದ ತಮ್ಮ ಕಾರ್ಯ ನಿರ್ವಹಿಸಿ ತೃಪ್ತಿ ಪಟ್ಟುಕೊಳ್ಳುತ್ತಿದ್ದರು. ಕ್ರಿ.ಶ.೧೩೩೬ರಲ್ಲಿ ಉದಯವಾದ ವಿಜಯನಗರ ಸಾಮ್ರಾಜ್ಯವು

ಹಿಂದೂ ಸಂಸ್ಕೃತಿ ಮತ್ತು ದೇವಾಲಯಗಳ ರಚನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಈ ಕಾಲದಲ್ಲಿ ದೇವದಾಸಿಯರ ಸ್ಥಾನಮಾನ ಸಮಾಜದಲ್ಲಿ ಉನ್ನತ ಸ್ತರದಲ್ಲಿತ್ತೆಂದು ವಿದೇಶ ಪ್ರವಾಸಿಗರ ಮತ್ತು ಅಂದಿನ ಕಾಲದ ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ.

"ವಿಜಯನಗರದಲ್ಲಿ ಸೂಳೆಯರ ಸಂಖ್ಯೆ ಅಪಾರವಾಗಿತ್ತೆಂದು ಕೃಷ್ಣದೇವರಾಯನಿಗೆ ಆ ಸೂಳೆಗೇರಿ ಚೆನ್ನಾಗಿ ಪರಿಚಿತವಿತ್ತೆಂದು 'ಆಮುಕ್ತ ಮೌಲ್ಯ'ದಲ್ಲಿ ಮೇಲಿಂದ ಮೇಲೆ ಬರುವ ಸೂಳೆಗೇರಿಯ ವರ್ಣನೆಯಿಂದ ತಿಳಿದುಬರುತ್ತದೆ. ಆ ಕಾಲದಲ್ಲಿ ವೇಶ್ಯೆಯರು ಸಂಗೀತ ವಿದ್ಯೆಯಲ್ಲಿ ವಿಶೇಷ ಸಾಧನೆ ಮಾಡುತ್ತಿದ್ದರು. ಅವರು ತಮ್ಮ ಹೆಣ್ಣು ಮಕ್ಕಳಿಗೆ ನೃತ್ಯವಿದ್ಯೆ ಕಲಿಸಿ, ಹತ್ತು ವರ್ಷಗಳಿಗೆ ತಮ್ಮ ಹೆಣ್ಣು ಮಕ್ಕಳನ್ನು ದೇವದಾಸಿಯರನ್ನಾಗಿ ಬಿಡುತ್ತಿದ್ದರು. ವೇಶ್ಯೆಯರೆಂದರೆ, ಸಮಾಜದಲ್ಲಿ ಅವರ ಗೌರವಗಳು ಕಡಿಮೆಯಾಗುತ್ತಿರಲಿಲ್ಲ. ಧನಿಕರು ಅವರನ್ನು ಪೋಷಿಸುತ್ತಿದ್ದರು. ಅವರು ಅಂಗಡಿಗಳಲ್ಲಿ, ಅರಮನೆಗಳಲ್ಲಿ ನಿರಾತಂಕವಾಗಿ ಪ್ರವೇಶಿಸಬಹುದಿತ್ತು. ನವರಾತ್ರಿಯಲ್ಲಿ ವೇಶ್ಯೆಯರ ಕುಸ್ತಿ ಸಹ ನಡೆಯುತ್ತಿದ್ದವು. ವೇಶ್ಯೆಯರಿಗೆ ನೃತ್ಯ ಕಲಿಸುವ ಗುರುಗಳಿಗೆ ರಾಯನು ಅನೇಕ ದತ್ತಿಗಳನ್ನು ಸಹ ಕೊಟ್ಟಿದ್ದನು. ಆ ಕಾಲದಲ್ಲಿ ಗೊಂಡರೆಂಬ ಕಾಡು ಜನಾಂಗದ ನೃತ್ಯ ದೇಶದಲ್ಲೆಲ್ಲಾ ವ್ಯಾಪಿಸಿತ್ತು. ಅದಕ್ಕೆ 'ಗೊಂಡನಿ"[೪೬] ಎನ್ನುತ್ತಿದ್ದರು.

ಹಾಗೆಯೇ 'ಆಮುಕ್ತಮೌಲ್ಯದ' ಕೃತಿಯಲ್ಲಿರುವ ವಾರಾಂಗನೆಯರ ಸುಂದರವಾದ ವರ್ಣನೆಯನ್ನು ಜಿ.ಎಸ್.ದೀಕ್ಷಿತ್ ಅವರು ಹೀಗೆ ಉಲ್ಲೇಖಿಸಿದ್ದಾರೆ. "ವಿಜಯನಗರದ ವಾರನಾರಿಯರು ಅಥವಾ ವೇಶ್ಯೆಯರು ಯತಿಯ ಹೃದಯವನ್ನಾದರೂ ಝಲ್ಲೆನಿಸುವಷ್ಟು ಸೌಂದರ್ಯವತಿಯರು, ಸರಸಿಗಳು, ನರ್ತನ ಕುಶಲರು, ಸದಾ ಶುಚಿರ್ಭೂತರಾಗಿ, ಅಲಂಕೃತರಾಗಿ, ಸುಗಂಧದ್ರವ್ಯಗಳನ್ನು ಪೂಸಿಕೊಂಡಿರುವವರು, ಅರಮನೆಗಳಂತಿರುವ ಸೌಧಗಳಲ್ಲಿ ಅವರ ವಾಸ. ಅವು ರಾಜರ ಹೊರಗಿನ ಅಂತಃಪುರಗಳಂತಿದ್ದವು. ಅವರು ಹಲವು ದೇಶ ಭಾಷೆಗಳಲ್ಲಿ ಮಾತನಾಡುವುದರಲ್ಲಿಯೂ, ಕಾವ್ಯ ವಾಚನದಲ್ಲಿಯೂ ಸಮರ್ಥರು. ಮುತ್ತಿನ ಆಭರಣಗಳು, ತೆಳುವಾದ ನಯವಾದ ವಸ್ತ್ರಗಳು, ಅವರಿಗೆ ಪ್ರಿಯವಾದವು. ಕಸ್ತೂರಿಯೇ ಅವರಿಗೆ ಪ್ರಿಯವಾದ ಲೇಪನ, ಹೂವಿಗಿಂತ ಸುಗಂಧ ಪೂರಿತವಾದ ಧೂಪವೇ ಅವರಿಗೆ ಇಷ್ಟವಾದದ್ದು. ಅವರು ಹಾಡುಗಾರಿಕೆಯಲ್ಲಿಯೂ, ವೀಣಾವಾದನದಲ್ಲಿಯೂ ನಿಪುಣರು. ಅಲ್ಲಿನ ದೇವದಾಸಿಯರು ದೇವಾಲಯಗಳಲ್ಲಿ ಪೂಜಾ ಸಮಯಗಳಲ್ಲಿ ಸೇವೆ ಸಲ್ಲಿಸುವವರು. ದೇವರ ಉತ್ಸವಗಳಲ್ಲಿಯೂ ವೇಶ್ಯೆಯರ ಮೇಳವಿರುತ್ತಿತ್ತು.... ಆ ಕಾಲದಲ್ಲಿ ವಾರನಾರಿಯರಿಗೆ, ದೇವದಾಸಿಯರಿಗೆ, ಸಮಾಜದಲ್ಲಿ ಗೌರವ ಸ್ಥಾನವಿತ್ತು"[೪೭].

ವಿಜಯನಗರಕ್ಕೆ ಬೇಟಿ ಇತ್ತ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕನು ವೇಶ್ಯೆಯರ ಬಗೆಗೆ ಪ್ರಸ್ತಾಪಿಸುತ್ತಾ "ದರಾಬ್ ಖಾನೆಗೆ ಎದುರಾಗಿ ರಾಜ್ಯಪಾಲನ ಮನೆಯಿದೆ. ಇಲ್ಲಿ ಕಾವಲು ಕಾಯುವ ಹನ್ನೆರಡುಸಾವಿರ ಜನ ಸೈನಿಕರಿಗೆ ಪ್ರತಿಯೊಬ್ಬರಿಗೂ ದಿನಕ್ಕೆ ಒಂದು ಫನಂ ಸಂಬಳ. ಈ ಸಂಬಳಕ್ಕೆ ಬೇಕಾದ ಹಣ ವೇಶ್ಯಾಗೃಹಗಳ ಮೇಲೆ ಹಾಕಿದ ತೆರಿಗೆಗಳಿಂದ ಬರುತ್ತದೆ ಎಂದು ಹೇಳಿದ್ದಾನೆ"[೪೮].

ವಿಜಯನಗರ ಸೈನ್ಯವು ೮ ಲಕ್ಷ ಸೈನಿಕರಿಂದ ತುಂಬಿದ ಪ್ರವಾಹದಂತಿತ್ತು. ೪೦,೦೦೦ ಕುದುರೆಗಳು, ೬೦೦ ಆನೆಗಳು, ೩೦೦ ತೋಪುಗಳು ಹೊರಡುತ್ತಿದ್ದವು. ಜೊತೆಗೆ ಬಿಜಾಪುರ ಸುಲ್ತಾನನ ಮೇಲ ಕೃಷ್ಣದೈವರಾಯನ ಈ

ಸೈನ್ಯದೊಂದಿಗೆ ವಿಜಯನಗರದ ಬಹುಮಂದಿ ವ್ಯಾಪಾರಿಗಳು, ಆಟಗಾರರು, ವೇಶ್ಯೆಯರೂ ಗುಂಪು ಗುಂಪಾಗಿ ಹೊರಾಡುತ್ತಿದ್ದರೆನ್ನಲಾಗಿದೆ. ಸೈನ್ಯ ಶಿಬಿರದಲ್ಲಿ ಸುಂದರಿಯರಾದ ವೇಶ್ಯೆಯರು ಎಲ್ಲೆಲ್ಲಿಯೂ ನರ್ತನ ಮಾಡುತ್ತಿದ್ದರು. ಸೈನಿಕರು ಅವರನ್ನು ನೋಡಿ, ಮೋಹಗೊಂಡು ಉತ್ಸಾಹದಿಂದ ವಸ್ತ್ರ ಭೂಷಣಗಳನ್ನು ಕೊಂಡು ಅವರುಗಳಿಗೆ ಸಮರ್ಪಿಸುತ್ತಿದ್ದರು ಎಂದು ಅಭ್ಯುದಯ ಗ್ರಂಥದಲ್ಲಿ ವೀರಕೇಸರಿಯವರು ವಿವರಿಸಿದ್ದಾರೆ.

ರಾಜ ತನ್ನ ದ್ವಾರದೊಳಗೆ ೪೦೦೦ಕ್ಕೂ ಹೆಚ್ಚು ಸ್ತ್ರೀಯರನ್ನು ಹೊಂದಿದ್ದಾನೆ. ಅವರೆಲ್ಲ ಅರಮನೆಯಲ್ಲಿ ಇರುತ್ತಾರೆ. ಅದರಲ್ಲಿ ಕೆಲವರು ನೃತ್ಯ ಗಾರ್ತಿಯರಾಗಿರುತ್ತಾರೆ. ಇನ್ನು ಕೆಲವರು ರಾಜನ ಹೆಂಡಂದಿರನ್ನು ಮತ್ತು ಅರಮನೆಯೊಳಗಡೆ ರಾಜನನ್ನು ತಮ್ಮ ಹೆಗಲ ಮೇಲೆ ಹೋರುವ 'ಬೋಯಿಗಳು' ಆಗಿರುತ್ತಾರೆ. ಕುಸ್ತಿ ಆಡುವ ಸ್ತ್ರೀಯರು ಮತ್ತು ಭವಿಷ್ಯ ಕಣಿ ಹೇಳುವವರು ಇದ್ದಾರೆ. ದ್ವಾರಗಳೊಳಗೆ ಖರ್ಚುಗಳ ಲೆಕ್ಕ ಬರೆಯುವ ಸ್ತ್ರೀಯರು, ಸಂಗೀತಕ್ಕೂ ಸ್ತ್ರೀಯರಿದ್ದಾರೆ. ವಾದ್ಯ ನುಡಿಸುವವರು, ಹಾಡುವವರು, ರಾಜನ ಹೆಂಡಂದಿರೂ ಸಂಗೀತದಲ್ಲಿ ಪರಿಣಿತರಿರುವರು. ರಾಜನಿಗೆ ಊಟಬಡಿಸಲು, ಸ್ತ್ರೀಯರು ಮತ್ತು ಬೀಜವೊಡೆದ ಪುರುಷರಿರುತ್ತಾರೆ. ಕಾರಣ ರಾಜ ತನಗೆ ಬರಹುದಾದ ಅಪಾಯಗಳನ್ನು ಅರಿತು ಅವುಗಳ ನಿವಾರಣೋಪಾಯಕ್ಕಾಗಿ ಈ ರೀತಿಯಲ್ಲಿ ಮಹಿಳೆಯರನ್ನು ನೇಮಿಸಿದ್ದಿರಬಹುದು.

ಕ್ರಿ.ಶ.೧೫೨೦ರಲ್ಲಿ 'ಡೋಮಿಂಗ್ ಪೇಯಸ್' ಎಂಬ ಪೋರ್ಚುಗಲ್ಲಿನ ಪ್ರವಾಸಿ ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿಕೊಟ್ಟ, ಅದು ಬಹು ಐಶ್ವರ್ಯದಿಂದ ತುಂಬಿ ತುಳುಕಾಡುತ್ತಿತ್ತು. ಇಲ್ಲಿ ಹುಡುಗಿಯರನ್ನು ಸಮರ್ಪಿಸುವ ವ್ಯವಸ್ಥೆ ಕುರಿತು ಕೆಳಗಿನಂತೆ ವಿವರಿಸಿದ್ದಾನೆ.

'ಪಗೋಡಗಳೆಂಬ' ಕಟ್ಟಡಗಳಲ್ಲಿ ಅವರು ಪ್ರಾರ್ಥಿಸುತ್ತಿದ್ದರು, ಮತ್ತು ಪ್ರತಿಮೆಗಳನ್ನು ಇರಿಸುತ್ತಿದ್ದರು. ಪ್ರತಿಮೆಗಳು ಅನೇಕ ಬಗೆಯವು. ಪುರುಷರು ಮತ್ತು ಮಹಿಳೆಯರು ವೃಷಭಗಳು, ಕೋಲೆಗಳು ಮತ್ತು ಕೆಲವು ಮಂಡನೆಯ ಆಕಾರದವುಗಳು ಇವನ್ನು ಅವರು ಪೂಜಿಸುತ್ತಿದ್ದರು. ಡಾರ್ಚದ ಈ ದೇವಾಲಯದಲ್ಲಿ ಮನುಷ್ಯನಾಕಾರದ ಒಂದು ಪ್ರತಿಮೆ ಇದೆ. ಅದರ ಮುಖವು ಸೊಂಡಿಲು ಮತ್ತು ದಂತಗಳಿಂದ ಕೂಡಿದ್ದು, ಎರಡೂ ಕಡೆಯೂ ಮೂರು ಮೂರು ತೋಳನ್ನು ಮತ್ತು ಆರು ಕೈಗಳನ್ನು ಹೊಂದಿದೆ. ಆ ಪೈಕಿ ಈಗಾಗಲೇ ನಾಲ್ಕು ಹಾಳಾಗಿವೆ ಮತ್ತು ಎಲ್ಲವೂ ಬಿದ್ದುಹೋದಾಗ, ಜಗತ್ತು ನಾಶ ಹೊಂದುತ್ತದೆ ಎಂದು ಅವರು ಹೇಳುತ್ತಿದ್ದರು. ಅವರು ಇದು ಆಗೇ ಆಗುತ್ತದೆಂಬ ಪ್ರವಾದಿ ಹೇಳಿಕೆಯಂತೆ ನಂಬಿದ್ದರು. ಪ್ರತಿಮೆ ತಿನ್ನುತ್ತದೆ ಎಂದು ನಂಬಿಕೊಂಡು ಪ್ರತಿದಿನವೂ ಅವರು ಪ್ರತಿಮೆಗೆ ನೈವೇದ್ಯ ನೀಡುತ್ತಿದ್ದರು. ಈ ಪಗೋಡಕ್ಕೆ ಸೇರಿದ ಮಹಿಳೆಯರು ನೈವೇದ್ಯ ಅರ್ಪಿಸಿದ ನಂತರ ಪ್ರತಿಮೆಯ ಮುಂದೆ ನರ್ತಿಸುತ್ತಿದ್ದರು ಮತ್ತು ಪ್ರತಿಮೆಗೆ ಆಹಾರ ಮತ್ತು ಅವಶ್ಯಕತೆ ಇರುವ ಎಲ್ಲವನ್ನೂ ಕೊಡುತ್ತಿದ್ದರು. ಈ ಮಹಿಳೆಯರು ಕೀಳು ನಡತೆಯುಳ್ಳವರು ಮತ್ತು ನಗರದ ಪ್ರಮುಖ ಬೀದಿಗಳಲ್ಲಿ ವಾಸಿಸುತ್ತಿದ್ದರು. ಅವರ ಬೀದಿಗಳು ಅತ್ಯುತ್ತಮ ಸಾಲು ಮನೆಗಳಿಂದ ಕೂಡಿದ್ದವು. ಅವರಿಗೆ ತುಂಬಾ ಗೌರವವಿತ್ತು ಮತ್ತು ದಂಡಾಧಿಕಾರಿಗಳ ಹೆಂಡಂದಿರೊಂದಿಗೆ ವರ್ಗೀಕರಿಸಲ್ಪಟ್ಟಿದ್ದರು. ಯಾವುದೇ ನಿಂದೆ, ಬೈಗುಳಗಳಿಲ್ಲದೆ, ಗೌರವಯುತವಾದ ಯಾವ ಮನುಷನಾದರೂ ಅವರ ಮನೆಗಳಿಗೆ ಹೋಗಬಹುದಿತ್ತು. "ರಾಜನ ಹೆಂಡತಿಯರ ಸಮ್ಮುಖದಲ್ಲೇ ಈ ಮಹಿಳೆಯರು ಅರಮನೆ ಪ್ರವೇಶಿಸಿ,

ಅವರೊಂದಿಗೆ ಉಳಿದು ವೀಳ್ಯೆದೆಲೆಯನ್ನು ತಿನ್ನಬಹುದಾಗಿತ್ತು. ಬೇರೆ ಯಾವುದೇ ದರ್ಜೆಯ ಯಾವ ವ್ಯಕ್ತಿಗೂ ಹೀಗೆ ಮಾಡಲು ಅವಕಾಶವಿರಲಿಲ್ಲ''[೪೯] ಎಂದಿದ್ದಾರೆ.

'ಪಾಯೀಸ್'ನು ನರ್ತಕಿಯರು ಧರಿಸುತ್ತಿದ್ದ ಆಭರಣಗಳನ್ನು ಕುರಿತು ''ಈ ನರ್ತಕಿಯರು ಧರಿಸಿರುವ ಆಭರಣಗಳ ಐಸಿರಿಯನ್ನು ವರ್ಣಿಸಲು ಸಾಧ್ಯವಿಲ್ಲ. ವಜ್ರ ವೈಡೂರ್ಯಗಳ, ಮುತ್ತು ಮಾಣಿಕ್ಯಗಳ ಕೊರಳ ಪಟ್ಟಿ, ತೋಳ್ಬಂದಿ, ನಡುಪಟ್ಟಿ, ಕಾಲ್ಗಡಗ ಇವುಗಳನ್ನು ನೋಡಿ ಇವರಿಗೆ ಇಷ್ಟೊಂದು ಐಶ್ವರ್ಯ ಎಲ್ಲಿಂದ ಬಂದಿತ್ತೆಂದು ಆಶ್ಚರ್ಯವಾಗುತ್ತದೆ. ಇವರಲ್ಲಿ ಕೆಲವರಿಗೆ ಆಸ್ತಿ ಪಾಸ್ತಿಗಳಿವೆ''[೫೦] ಎನ್ನುತ್ತಾರೆ. ಹೀಗೆ ಕೆಲ ಸಾಹಿತ್ಯಿಕ ಆಧಾರದ ಮೇಲೆ ವಿಜಯನಗರ ಸಾಮ್ರಾಜ್ಯದಲ್ಲಿ ದೇವದಾಸಿ ಪದ್ಧತಿ ವ್ಯಾಪಕವಾಗಿ ಕಂಡು ಬರುತ್ತಿದ್ದದ್ದು ಉಲ್ಲೇಖಾರ್ಹವಾಗಿದೆ.

''ಕೆಳದಿ ಅರಸರ ಕಾಲದಲ್ಲಿ ದೇವದಾಸಿ ಪದ್ಧತಿಯು ವ್ಯಾಪಕವಾಗಿತ್ತೆಂದು ಅಂದಿನ ಪ್ರಸಿದ್ಧ ದೇವಾಲಯಗಳಲೆಲ್ಲಾ ನರ್ತಕಿಯರಿರುತ್ತಿದ್ದು, ಸಮಾಜದಲ್ಲಿ ಗೌರವಸ್ಥಾನ ಹೊಂದಿ, ಧಾರ್ಮಿಕ ಕಾರ್ಯಗಳಿಗೆ ದಾನ ದತ್ತಿಗಳನ್ನು ನೀಡುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಕೆಳದಿ ಶಾಸನಗಳಲ್ಲಿ ಇವರನ್ನು 'ಹುಜೂರು ಮೇಳ' ದವರೆಂದು ಕರೆಯಲಾಗಿದೆ. ಅಂದು ದೇವದಾಸಿಯರು ನೃತ್ಯದಲ್ಲಿ ಪರಿಣಿತರಿದ್ದು, ಧಾರ್ಮಿಕ ಕಾರ್ಯಗಳಿಗೆ ದಾನ ದತ್ತಿಗಳನ್ನು ಅವರು ನೀಡುತ್ತಿದ್ದರು. ಶಾಸನಗಳಲ್ಲಿ ತಿಳಿದು ಬಂದಂತೆ, ಶಿವಲಿಂಗಿ (ಕೆಳದಿ ಅರಸರ ಶಾಸನ ಸಂಖ್ಯೆ ೧೩೫) ಪುಟ್ಟತಾಯಿ, ಜಮಖಂಡಿ ಚೆನ್ನಿ ಎಂಬುವವರು ಮಠವನ್ನು ನಿರ್ಮಿಸಿದ್ದರು''[೫೧] ಎನ್ನಲಾಗಿದೆ.

ಮೈಸೂರು ಒಡೆಯರ ಕಾಲದಲ್ಲಿ ಲಲಿತ ಕಲೆ ಮತ್ತು ನೃತ್ಯ ಮುಂತಾದವುಗಳಿಗೆ ಪ್ರೋತ್ಸಾಹವಿದ್ದು ಗಣಿಕಾ ಜೀವನಕ್ಕೆ ತಿರಸ್ಕಾರವಿರಲಿಲ್ಲ. ಅದು ಸಮಾಜದಲ್ಲಿ ಅವಶ್ಯಕ ಪರಿಕರವೆಂಬ ಪುರಾತನ ಕಲ್ಪನೆಯೇ ಈ ಕಾಲದಲ್ಲಿ ಪ್ರಚಲಿತವಾಗಿತ್ತು. ಅಂದು ವೇಶ್ಯಾವಾಟಿಕೆಗಳಲ್ಲಿ ಉಚ್ಛವರ್ಗದ ಗಣಿಕೆಯರು ಮತ್ತು ಸಾಮಾನ್ಯ ಸೂಳೆಯರು ಇರುತ್ತಿದ್ದರು. ಗಣಿಕೆಯರು ವಿದ್ಯಾವಿಶಾರದೆಯರಾಗಿದ್ದರು. ದೇವದಾಸಿಯರ ಗುರುಗಳಿಗೆ 'ನಟುವರ್'ಗಳು ಎಂದು ಕರೆಯಲಾಗಿದ್ದು, ಸಂಗೀತಾಭ್ಯಾಸ, ನೃತ್ಯ ಶಿಕ್ಷಣಗಳಿಗೆ ಅವರು ಹೆಚ್ಚಿನ ಗಮನ ನೀಡುತ್ತಿದ್ದರು. ''ಗಣಿಕೆಯಾದವಳು ದೇಹ ಸೌಷ್ಠವಕ್ಕೂ ಬುದ್ಧಿ ಶಕ್ತಿಗೂ ವಿಶೇಷ ಪ್ರಾತಿನಿಧ್ಯ ನೀಡಿ, ಭರತ ನಾಟ್ಯದಲ್ಲಿ ಪ್ರವೀಣೆಯರಾಗಿದ್ದು, ತಂಬೂರಿ, ವೀಣೆ, ತಾಳ, ಮದ್ದಳೆ ಮುಂತಾದ ಸಂಗೀತೋಪಕರಣಗಳ ಹಿನ್ನೆಲೆಯಲ್ಲಿ ಹಾಡುಗಾರಿಕೆಯನ್ನು ಕಲಿಯುತ್ತಿದ್ದರು. ಪಗಡೆಯಾಟ ಚದುರಂಗದಾಟಗಳಲ್ಲಿ ಅವರದು ಎತ್ತಿದ ಕೈಯಾಗಿತ್ತು. ಅವರ ಧೂತ ವಿನೋದಕ್ಕೆ ಪೋಷಕರು (ವಿಟರು) ಮಾರುಹೋಗಿದ್ದರು. ನಗರವಾಸಿಗಳಾದ ಈ ಗಣಿಕೆಯರು ವಿಲಾಸಿ ಬೀದಿಗಳಲ್ಲಿ ವಾಸಿಸುತ್ತಿದ್ದರೆನ್ನಲಾಗಿದೆ''[೫೨].

ಕರ್ನಾಟಕದಲ್ಲಿರುವ ದೇವದಾಸಿಯರಿಗೆ 'ಸವದತ್ತಿಯು ತೊಟ್ಟಿಲಾಗಿದೆ'. ಇಲ್ಲಿ ಕೆಳ ಜಾತಿಯ ಜನರು ಹೆಚ್ಚಾಗಿ ರೇಣುಕಾ ಯಲ್ಲಮ್ಮಳಿಗೆ ನಡೆದುಕೊಳ್ಳುವುದು. ಜೊತೆಗೆ ಬೀದರಿನ, ಬಸವಕಲ್ಯಾಣ ತಾಲೂಕಿನ 'ಬಗದುರಿ' ಎಲ್ಲಮ್ಮ. ಗುಲ್ಬರ್ಗದ ಆಳಂದ ತಾಲೂಕಿನ 'ಚುಂಚುರು ಮಾಪುರ'ತಾಯಿ, ರಾಯಚೂರು ಜಿಲ್ಲೆಯ ಅರೋಲಿ, ಕೊಪ್ಪಳ ತಾಲೂಕಿನ ಹುಲಿಗಿ, ಬಳ್ಳಾರಿಯ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗ, ಶಿವಮೊಗ್ಗ

ಜಿಲ್ಲೆಯ ಸೊರಬ ತಾಲೂಕಿನ ಚಂದ್ರಗುತ್ತಿ ಮುಂದಾತವುಗಳ ಮೂಲ ಒಂದೇ ಆಗಿದ್ದು, ಕೆಲವೊಂದು ಪ್ರಾದೇಶಿಕ ಭೇದದಿಂದ ಜನರ ಅನುಕೂಲತೆಗಾಗಿ, ಕೆಲವೊಂದು ಆಚರಣೆಗಳು, ಬೇರೆ ಬೇರೆ ಇರುವವೇ ಹೊರತು ಮೂಲ ಝರಿ ಮಾತ್ರ ಸವದತ್ತಿ ಯಲ್ಲಮ್ಮಳಾಗಿದ್ದು ಇವೆಲ್ಲವುಗಳು ದೇವದಾಸಿಯರನ್ನು ಹುಟ್ಟಿಸುವ ಕೇಂದ್ರ ಸ್ಥಳಗಳಾಗಿವೆ. ಇವುಗಳ ಚರಿತ್ರೆಯ ಆಳಕ್ಕಿಳಿದಾಗ ತಿಳಿಯುವ ಸಂಗತಿ ಎಂದರೆ ಯಲ್ಲಮ್ಮ ಆದಿ ಮಾನವರ ದೇವತೆ. ಗಿಡ, ಮರ, ಬಳ್ಳಿಗಳಿಂದ ಆಹಾರವನ್ನು ಹೆಕ್ಕಿ ತಿನ್ನುತ್ತಿದ್ದವರ ಆದಿದೇವತೆ. ಈ ಕಾಡು ಜನರ ಬುಟ್ಟಿ, ಮೊರ ಹಿಡಿದು ಕಾಡಿನಲ್ಲಿ ತಿರುಗಿ ಅಲ್ಲಿ ಸಿಗುವ ಹಣ್ಣು ಹಂಪಲುಗಳನ್ನು ತರುತ್ತಿದ್ದರು. ಈ ಬುಟ್ಟಿ ತುಂಬಲಿ, ಎಂಬ ನಂಬಿಕೆಯಲ್ಲಿ ತಮ್ಮ ದೇವತೆ ಅದರಲ್ಲಿದ್ದಾಳೆ ಎಂದು ನಂಬಿದ್ದರು. ಮುಂದೆ ವಾತಾವರಣದಲ್ಲಿ ಆದ ಬದಲಾವಣೆಯಿಂದ ಅವರು ಬುಡಕಟ್ಟಿನವರಾಗಿ, ಪಶುಪಾಲನಾ ವೃತ್ತಿಯವರಾಗಿ ಮುಂದೆ ಗ್ರಾಮೀಣರಾಗಿ, ಕಾಡುಬಿಟ್ಟು ಊರು ಸೇರಿದರು. ತಮಗೆ ಆಹಾರ ಸಿಗದೆ ಕೊರತೆಯಾದ ಕಾರಣ ತಮ್ಮ ದೇವತೆ ಮೈಲಿಗೆಯಾಗಿರುವಳೆಂದು ಬಗೆದು ಇಂಥ ಮೈಲಿಗೆಯಾದ ದೇವತೆಗೆ ಊರೊಳಗೆ ತರುವುದು ಬೇಡವೆಂದು ಆಕೆಗೆ ಗುಡಿಯನ್ನು ಊರ ಗಡಿಯಲ್ಲೆ ಎಲ್ಲೆಯಲ್ಲಿ ಮಾಡಿದ್ದರಿಂದ, ಯಲ್ಲಮ್ಮಳಾದಳು. ಇಂದಿಗೂ ಆಂಧ್ರಪ್ರದೇಶದ 'ಎಲ್ಲೈವಿಡಾರಿ' ಎಂಬ ಹೆಸರಿನಲ್ಲಿ ದೇವತೆ ಈ ಬಗೆಯಲ್ಲಿ ಇರುವಳೆಂದು ಡಾ.ಎಂ.ಚಿದಾನಂದಮೂರ್ತಿಗಳು ಹೇಳಿದ್ದಾರೆ.

ಸವದತ್ತಿಯ ಕಥೆ ಆರಂಭವಾಗುವುದು ಕ್ರಿ.ಶ.೬ನೇ ಶತಮಾನದಲ್ಲಿ ಆಗ ಅಲ್ಲಿನ ಜೈನ ದೊರೆಗಳಾದ ರಟ್ಟರ ಬೆಂಬಲ ಪಡೆದ ಧರ್ಮ ಪ್ರಚಾರಕರು ಸವದತ್ತಿ ಕ್ಷೇತ್ರವನ್ನು ತಮ್ಮ ಆಡಳಿತಕ್ಕೆ ತೆಗೆದುಕೊಂಡು ಆ ದೇವತೆಯನ್ನು ಪದ್ಮಾವತಿಯಾಗಿ ಬದಲಿಸಿದರು. ದೇವತೆಯ ದಾಸಿಯರಾಗಿದ್ದ ಕಪಾಲಿಕರ ಸೇವೆಗಿದ್ದ ಬಸವಿಯರನ್ನು ಮತಾಂತರಿಸಿ, ಜೈನ ಸಂನ್ಯಾಸಿನಿಯನ್ನಾಗಿಸಿದರು ೯ ನೇ ಶತಮಾನದವರೆಗೆ ಆಳಿದ ರಟ್ಟರ ರಾಜ್ಯದಲ್ಲಿ ಪದ್ಮಾವತಿಯ ಭಕ್ತರು ಹೆಚ್ಚಾದರು. ರಟ್ಟರ ರಾಜ್ಯ ಮುಂದೆ ಶಕ್ತಿಗುಂದಿದಂತೆ ಮತ್ತೆ ಕಪಾಲಿಕರು, ಹೆಂಗೂಳಿಗಳಾದ ಬಸವಿಯರು ಪ್ರಭಾವಶಾಲಿಗಳಾಗಿ, ಮಾತೃದೇವತೆಯ ಸಂಪ್ರದಾಯವನ್ನು ಮತ್ತೆ ಈ ಕ್ಷೇತ್ರದಲ್ಲಿ ಪ್ರಚಾರಕ್ಕೆ ತಂದರು. ೧೧ ಮತ್ತು ೧೨ ನೇ ಶತಮಾನದಲ್ಲಿ ವೀರಶೈವ ಧರ್ಮ ಹೆಚ್ಚಿನ ಪ್ರಚಾರಕ್ಕೆ ಬಂದಾಗ. ಕಾಪಾಲಿಕರ ಪ್ರಭಾವ ಕುಗ್ಗಿತು. ಸವದತ್ತಿ ಕ್ಷೇತ್ರದಲ್ಲಿದ್ದ. ಎಕ್ಕಯ್ಯ ಮತ್ತು ಜೋಗಯ್ಯ. ಇವರ ಕೇಂದ್ರಗಳನ್ನಾಗಿ, ಜಂಗಮ ಮಠಗಳನ್ನಾಗಿ ಮಾರ್ಪಡಿಸಿದರು. ಕಾಪಾಲಿಕರನ್ನು ವೀರಶೈವ ಮತ ಪ್ರಚಾರಕರಾದ ಜಂಗಮರನ್ನಾಗಿ, ಅವರೊಡನಿದ್ದ ಬಸವಿಯರನ್ನು ಜೋಗಿಯರನ್ನಾಗಿ ಮಾಡಿದರು. ಹೀಗಾಗಿ ದೇವರಲ್ಲಿ ಭಕ್ತಿ, ಕಾಯಕದಲ್ಲಿ ನಿಷ್ಠೆ ಬೆಳೆಯಿತು. ೧೨ ನೇ ಶತಮಾನದ ಬಸವಾದಿ ಶರಣರ ಪ್ರಭಾವ ಕಡಿಮೆಯಾಗಿ ಮತ್ತು ಶಕ್ತರ ಕಾಪಾಲಿಕರ ಪ್ರಭಾವ ಹೆಚ್ಚಿತು. ಹಳೆಯ ಮಾತೃದೇವರ ಸಂಪ್ರದಾಯ ಮತ್ತೆ ಚಲಾವಣೆಗೆ ಬಂದಿತು. ಇದರ ಹಿಂದೆ ಬಸವಿಯರು ಬಂದರು ಈ ಹೊತ್ತಿಗೆ ಸ್ಥಳೀಯ ಪಾಳೇಗಾರರು ಹೆಚ್ಚಿ ೧೩ ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿ ಅಲ್ಲಿನ ಅರಸರು ವೈಷ್ಣವರಾಗಿದ್ದರಿಂದ ವೈಷ್ಣವದೇವಾ ಸಂಪ್ರದಾಯಗಳು ಬೆಳೆಯಲಾರಂಭಿಸಿತು. ನಂತರ ವಿಜಯನಗರ ಸಾಮ್ರಾಜ್ಯದ ಪತನದ ನಂತರ ಸವದತ್ತಿಯು ಬಿಜಾಪುರದ ಸುಲ್ತಾನನ ಆಳ್ವಿಕೆಗೆ ಒಳಪಟ್ಟಿತು. ಸುಲ್ತಾನನು ಈ ಕ್ಷೇತ್ರವನ್ನು ಗುತ್ತಿಗೆಗೆ ನೀಡಿದನು. ಗುತ್ತಿಗೆ ಪಡೆದವರು

ಹೆಚ್ಚು ಆದಾಯ ತರುವ ಮಾತೃದೇವತಾ ಸಂಪ್ರದಾಯದ ಅಂದರೆ, ಯಲ್ಲಮ್ಮ ಮತ್ತು ಬಸವಿಯರ ಸಂಪ್ರದಾಯಗಳನ್ನು ಪ್ರಚಾರಕ್ಕೆ ತಂದರು. ನಂತರ ಸಾಕಾರದ ಮರಾಠರು ಪ್ರಭಲರಾದಾಗ ಈ ನಾಡನ್ನು ಬಿಜಾಪುರದ ಸುಲ್ತಾನನಿಂದ ಗೆದ್ದುಕೊಂಡು ಈ ಕ್ಷೇತ್ರವು ಹಿಂದೂ ಧರ್ಮದ ನೇರ ಪ್ರಭಾವಕ್ಕೆ ಒಳಪಡಿಸಿ, ಮತ್ತೆ ಶಕ್ತಿದೇವತೆ 'ರೇಣುಕಾ ಯಲ್ಲಮ್ಮ'ಳಾಗಿ ಆರಾಧನೆಗೊಳ್ಳುವುದು ಆರಂಭವಾಯಿತು. ಹೀಗೆ ೧೮ ನೇ ಶತಮಾನದಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಈಗಾಗಲೇ ಸ್ಥಳೀಯ ಅರಸರಿಂದ ಆರಂಭಗೊಂಡಿದ್ದ ಶಕ್ತಿ ದೇವತೆಯ ಆರಾಧನೆ ಹೆಚ್ಚುತ್ತಾ ಹೋಗಿ ಬಸವಿ ಸಂಪ್ರದಾಯ ವ್ಯಾಪಕವಾಗಿ ಬೆಳೆಯಲು ಪ್ರಾರಂಬಿಸಿತು.

ಈ ರೀತಿಯಾಗಿ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದಲಾವಣೆಗಳೊಂದಿಗೆ ಸವದತ್ತಿ ಮತ್ತು ಯಲ್ಲಮ್ಮಳ ಕಥೆ ಬದಲಾಗುತ್ತಾ ಏರಿಳಿತಗಳಿಗೆ ಒಳಗಾಗಿ ಪುರಾಣ ಪುಣ್ಯಕಥೆಗಳ ಕೈಯಲ್ಲಿ ಸಿಲುಕಿ, ರೂಪಾಂತರ ಹೊಂದಿದ್ದು ಇದರಿಂದ ತಿಳಿದುಬರುತ್ತದೆ. ಬರಬರುತ್ತಾ ದೇವದಾಸಿಯರ ನೃತ್ಯ ಪ್ರದರ್ಶನಗಳನ್ನು ದೇವಾಲಯಗಳಿಗಷ್ಟೇ ಸೀಮಿತಗೊಳಿಸಿ ತಮ್ಮ ಧೋರಣೆಗಳನ್ನು ಬದಲಿಸಿಕೊಂಡು ೧೯ ಮತ್ತು ೨೦ ನೇ ಶತಮಾನದಲ್ಲಿ ವೃತ್ತಿನಿರತ ನರ್ತಕಿಯರು ಬೆಳಕಿಗೆ ಬರತೊಡಗಿದರು. ದಕ್ಷಿಣ ಕರ್ನಾಟಕದ ಅದರಲ್ಲೂ ವಿಶೇಷವಾಗಿ ಮೈಸೂರು, ಬೆಂಗಳೂರು, ಕೋಲಾರ, ಜಿಲ್ಲೆಗಳಲ್ಲಿ ಒಂದು ಕಾಲದಲ್ಲಿ ದೇವದಾಸಿಯರನ್ನು ಒದಗಿಸುತ್ತಿದ್ದ 'ನಟುವರ' ಅಥವಾ 'ನಟುವ' ಎಂಬ ವರ್ಗದ ಜನರು ಈಗಲೂ ಇದ್ದಾರೆ. ಇವರು ಮೈಸೂರು, ಬೆಂಗಳೂರು, ಟಿ.ನರಸೀಪುರ, ಮುಳಬಾಗಿಲು ಮುಂತಾದ ಸ್ಥಳಗಳಲ್ಲಿ ಪ್ರಸಿದ್ಧ ನರ್ತಕಿಯರಿದ್ದು, ಇವರೆಲ್ಲ ಬಹುತೇಕ ದೇವದಾಸಿಯರು. ಒಂದೊಂದು ದೇವಾಲಯದ ಸೇವೆಯನ್ನು ಸಲ್ಲಿಸುತ್ತಾ, ಆ ದೇವಾಲಯಗಳ ಸಮೀಪದಲ್ಲಿಯೇ ವಾಸ ಮಾಡುತ್ತಿದ್ದು, ಈ ದೇವಾಲಯಗಳ ಪೂಜಾ ವಿಧಾನಗಳ ಅಂಗವಾಗಿ ೧೯ ನೇ ಶತಮಾನದಿಂದಲೂ ನೃತ್ಯ ಸೇವೆ ಮಾಡುವುದು ಅವರ ವಂಶಪಾರಂಪರ್ಯ ಕರ್ತವ್ಯ ಮತ್ತು ಹಕ್ಕು ಆಗಿತ್ತು. ಈ ನರ್ತಕಿಯರಿಗೆ ಸಂಗೀತ ಮತ್ತು ನೃತ್ಯ ಶಾಸ್ತ್ರಗಳಲ್ಲಿ ಒಳ್ಳೆಯ ಪಾಂಡಿತ್ಯವಿತ್ತು. ಮತ್ತು ರಸಿಕ ಜನರು ಇವರ ಸ್ನೇಹ ಸಹವಾಸಗಳನ್ನು ಅಪೇಕ್ಷಿಸುತ್ತಿದ್ದರು. ಈ ನರ್ತಕಿಯರಿಗೆ ಸಮಾಜದಲ್ಲಿ ಒಂದು ಗೌರವಸ್ಥಾನವಿದ್ದಿತು. ಅವರು ಕಾಲಾನುಕಾಲದಲ್ಲಿ ಈ ನರ್ತಕಿಯರಿಗೆ ಶ್ರೀಮಂತಿಕೆ ಮತ್ತು ಗೌರವಾದರಗಳು ಕುಗ್ಗಿ ನೃತ್ಯಕಲೆ ಹೀನಾಯಕ್ಕೆ ಗುರಿಯಾಗಿ ನಿಷಿದ್ಧವೆನಿಸಿತು. ಇಷ್ಟಾದರೂ ನೃತ್ಯಕಲೆ ಸಂಪೂರ್ಣ ನಾಶವಾಗದೇ ಕೆಲವು ದೇವದಾಸಿಯರು ಮತ್ತು ನಟುವ ಮನೆತನಗಳಲ್ಲಿ ಉಳಿದು ಬಂದಿದ್ದು, ಉದಾಹರಣೆಗೆ ಮುಳಬಾಗಿಲಿನಂತಹ ಊರಿನ ಒಂದೇ ದೇವಾಲಯಕ್ಕೆ ಸೇರಿದಂತೆ ೧೪ ಜನ ನರ್ತಕಿಯರಿದ್ದು ದೇವರಿಗೆ ವಾರಕ್ಕೊಮ್ಮೆ ನೃತ್ಯಸೇವೆ ಸಲ್ಲಿಸುತ್ತಿದ್ದರೆನ್ನಲಾಗಿದೆ.

**ಕನ್ನಡ ಕಾವ್ಯಗಳಲ್ಲಿ**

**ದೇವದಾಸಿಗೆ ಸಂವಾದಿಯಾದ ಪದಗಳು ಬಳಕೆಗೊಂಡಿದ್ದನ್ನು ಕಾಣಬಹುದಾಗಿದೆ.**

೧.ಸೋಮೇಶ್ವರನ ಅಭಿಲಾಷಿತಾರ್ಥ ಚಿಂತಾಮಣಿಯಲ್ಲಿ ದೇವಾಲಯಗಳಿಗೆ ಕೊಡಬೇಕಾದ ವಸ್ತುಗಳಲ್ಲಿ ದಾಸಿಯರನ್ನು ಸೇರಿಸಲಾಗಿದೆ.

೨.ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಗಾಣನಾಯಕಿಯರು, ದೇವದಾಸಿಯರ ನೆನಪು ತರುತ್ತಾರೆ.

೩.ಪಂಪಭಾರತದ ನೀಲಾಂಜನೆ, ದೇವದಾಸಿಯ ಸಂಗತಿ ಇದೆ.

೪.ಕನ್ನಡ ಮಹಾಕಾವ್ಯಗಳಲ್ಲಿ ಬರುವ ಸೂಳೆಗೇರಿಯ ವರ್ಣನೆಯಿಂದ ದೇವದಾಸಿಯರಿದ್ದುದು ಗೊತ್ತಾಗುತ್ತದೆ. ಅಲ್ಲದೇ ಅಷ್ಟಾದಶ ವರ್ಣನೆಗಳಲ್ಲಿ ಇದೂ ಒಂದಾಗಿತ್ತು.

೫.ಸಂಗಮ ವಂಶದವರ ಕಾಲದ ಸಾಹಿತ್ಯದಲ್ಲಿ ದೇವದಾಸಿಯರ ಬಗ್ಗೆ ಉಲ್ಲೇಖಗಳಿವೆ.

೬.ಹನ್ನೆರಡನೇ ಶತಮಾನದ ಶರಣ ಸಾಹಿತ್ಯದಲ್ಲಿ ಈ ಬಗ್ಗೆ ಉಲ್ಲೇಖವಷ್ಟೇ ಅಲ್ಲದೇ ವಿಶ್ಲೇಷಣೆಯೂ ಇದೆ.

೭.ಕನಕದಾಸರ 'ಮೋಹನ ತರಂಗಿಣಿ'ಯಲ್ಲಿಯೂ ದೇವದಾಸಿಯರ ಮಾಹಿತಿಯನ್ನು ತಿಳಿಯಬಹುದಾಗಿದೆ.

**೩.೭ ದೇವದಾಸಿ ಸಂಪ್ರದಾಯದ ಪ್ರಕಾರಗಳು**

ಪ್ರಾಚೀನ ಕಾಲದಿಂದಲೂ ಹಲವಾರು ಸಾಹಿತಿಗಳು ದೇವದಾಸಿಯರ ಸ್ಥಾನಮಾನ ಮತ್ತು ಅವರು ನಿರ್ವಹಿಸುವ ಕರ್ತವ್ಯಗಳ ಆಧಾರದ ಮೇಲೆ ಭಿನ್ನ ಭಿನ್ನ ಬಗೆಗಳಲ್ಲಿ ವರ್ಗೀಕರಿಸುತ್ತಾ ಬಂದಿರುವುದು ಸಾಮಾನ್ಯವಾಗಿದೆ.

ಎಂ.ಎಂ.ಕಲಬುರ್ಗಿಯವರು ಈ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ದೇವದಾಸಿಯರ ವರ್ಗೀಕರಣವನ್ನು ಮಾಡಿದ್ದಾರೆ. ಈ ಪುರುಷ ಪ್ರಧಾನ ಸಮಾಜದಲ್ಲಿ ಪುರುಷರು ಮಹಿಳೆಯರನ್ನು ಶೋಷಣೆಗೆ ಗುರಿಪಡಿಸಿರುವ ವಿವಿಧ ರೀತಿಗಳಲ್ಲಿ ಅವನ ಮೊದಲ ಆಯ್ಕೆ ಎಂದರೆ ಲೈಂಗಿಕತೆ, ಈ ಲೈಂಗಿಕತೆ ಸಮಾಜ ಸಮ್ಮತ ಮತ್ತು ಸಮಾಜ ಅಸಮ್ಮತ ಎಂದು ಎರಡು ತೆರನಾಗಿದ್ದು.

**೧.ಸಮಾಜದ ಅಸಮ್ಮತವು:** ಇದರಲ್ಲಿ ಅತ್ಯಾಚಾರ, ವ್ಯಭಿಚಾರ (ಆಕ್ರಮಣ ಮತ್ತು ರಹಸ್ಯ ಲೈಂಗಿಕತೆ) ಬರುವವು. ಇವು ಸಮಾಜದ ದೃಷ್ಟಿಯಲ್ಲಿ ಅಪರಾಧ.

**೨. ಸಮಾಜ ಸಮ್ಮತ:** ಇವು ಪತ್ನಿ, ಪತ್ನಿಯೇತರ, ಬಹುಪತ್ನಿತ್ವ, ಪತ್ನೇತರ ಸವಲತ್ತುಗಳು- ೧.ವ್ಯಕ್ತಿ ಸೂಳೆ, ೨.ದಾಸಿ, ೩.ದೇವರ ಸೂಳೆ, ೪.ದೇವಾಲಯ ಸೂಳೆ, ೫.ರಾಜಾಲಯ ಸೂಳೆ, ೬.ಅರೆಸೂಳೆ, ೭.ಸಮಾಜ ಸೂಳೆ ಎಂದು ೭ ವಿಧಗಳಲ್ಲಿ ವಿಸ್ತರಿಸಿಕೊಂಡಿದ್ದು. ಇವು ಸಮಾಜ ಸಮ್ಮತ ಲೈಂಗಿಕ ಶೋಷಣೆಗಳಾಗಿವೆ.

**೧. ವ್ಯಕ್ತಿ ಸೂಳೆ:** (ಉಪಪತ್ನಿ) ಪ್ರತಿಷ್ಟಿತ ಪುರುಷರು ರೂಪಿಸಿದ ವ್ಯವಸ್ಥೆ ಇದಾಗಿದ್ದು, ಸಾಮಾನ್ಯವಾಗಿ ಇವಳು ಅವಿವಾಹಿತೆ, ಪತಿತ್ಯಕ್ತ ಇಲ್ಲವೇ ವಿಧವೆಯಾಗಿರಬಹುದು. ಕೆಲ ಸಮಾಜದಲ್ಲಿ ತವರು ಮನೆಯವರು ತಮ್ಮೊಂದಿಗೆ ವಾಸಿಸಲು ಅವಕಾಶ ಮಾಡಿಕೊಡುವ ಮೂಲಕ, ಅವಿವಾಹಿತೆಯಾದ ವ್ಯಕ್ತಿ ಸೂಳೆಯನ್ನು ಆದಾಯದ ಮಾಧ್ಯಮ ಮಾಡಿಕೊಂಡಿರುತ್ತಿದ್ದರು. ಇಂದು ಈ ಪದ್ಧತಿ ನಾಶವಾಗುತ್ತಿದೆ ಎನ್ನಲಾಗಿದೆ.

**೨. ದಾಸಿ:** ದೇವದಾಸಿ ಪದ್ಧತಿ ಪ್ರಾಚೀನಕಾಲದಲ್ಲಿ ರೂಢಿಯಾಗಿದ್ದಿತು. ಇವಳು ಖರೀದಿಸಿದ ಹೆಣ್ಣಾಗಿದ್ದು, ಒಡೆಯ ಇವಳನ್ನು ಭೋಗಿಸಲು ಅಂದಿನ ಸಮಾಜ ಸಮ್ಮತಿ ನೀಡಿದ್ದಿತು. ಈಗ ಈ ಪದ್ಧತಿಯ ನಾಶವಾಗಿದೆ.

**೩. ದೇವರ ಸೂಳೆ:** ಇವರು ಅಲ್ಲಲ್ಲಿಯ ದೇವರ ಹೆಸರಿನಲ್ಲಿ ತಾಳಿಕಟ್ಟಿಕೊಂಡು ಲೈಂಗಿಕ ವ್ಯಾಪಾರಕ್ಕಿಳಿಯುವ ಅವಿವಾಹಿತ ಹೆಣ್ಣುಗಳಾಗಿದ್ದಾರೆ. ಇವರು ಕರ್ನಾಟಕದಲ್ಲಿ ಬಸವಿ, ಜೋಗತಿ, ಮುರುಳಿ, ಲೇಸಿ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿದ್ದಾರೆ. ದೇವರ ಹೆಸರಿನಲ್ಲಿ ಮುದ್ರೆ ಹಾಕಿ ದೇವರಿಗೆ ಬಿಟ್ಟ ಎತ್ತು ಬಸವ ಎನ್ನಿಸಿಕೊಳ್ಳುವಂತೆ ಓಸ್ನೆಲೆಯಲ್ಲಿ ಮುದ್ರೆ ಹಾಕಿ ದೇವರಿಗೆ ಬಿಟ್ಟ ಈ ಹೆಣ್ಣುಗಳಿಗೆ 'ಬಸವಿ' ಎಂದು ಕರೆಯುತ್ತಾರೆ. ಇದು ಯಾವುದೇ

ದೇವರಿಗೆ ಬಿಟ್ಟ ಸೂಳೆಯರಿಗೂ ಬಳಸುವ ಸಾಮಾನ್ಯ ಪದ. ಇಂಥವರನ್ನು ಸವದತ್ತಿ ಯಲ್ಲಮ್ಮನ ಸಂಪ್ರದಾಯದಲ್ಲಿ ಜೋಗತಿ ಎಂದು, ಮಂಗಸೂಳಿ ಮಲ್ಲಯ್ಯನ ಸಂಪ್ರದಾಯದಲ್ಲಿ 'ಮುರುಳಿ' ಎಂದು ಮೈಲಾರ ಸಂಪ್ರದಾಯದಲ್ಲಿ 'ಲೇಸಿ' ಎಂದು ಕರೆಯುತ್ತಾರೆ.

**೪. ದೇವಾಲಯ ಸೂಳೆ:** ದೇವಾಲಯದ ನಿರ್ಮಾಣ ಸಂದರ್ಭದಲ್ಲಿ ಅಂಗಭೋಗ, ರಂಗಭೋಗ ಸೇವೆಗೆ ತಳ್ಳಲ್ಪಟ್ಟ ಅವಿವಾಹಿತೆ ಹೆಣ್ಣು ಮಕ್ಕಳಿರುವವರು ದೇವಾಲಯದ ಆವರಣದಲ್ಲಿ ವಾಸಮಾಡುತ್ತಿದ್ದ ಅಂಗಭೋಗದವರು ದೇವರ ಪೂಜೆ ಆರಂಭವಾಗುತ್ತಲೇ ಶೃಂಗರಿಸಿಕೊಂಡು ಬಂದು ಗರ್ಭಗುಡಿಯಲ್ಲಿ ಗಂಧ ತೇಯುವ, ಮಾಲೆ ಕಟ್ಟುವ, ಪೂಜಾ ಪರಿಕರಗಳನ್ನು ಸಿದ್ಧಪಡಿಸುವ ಕೆಲಸಗಳಲ್ಲಿ ಅರ್ಚಕರಿಗೆ ನೆರವಾಗುತ್ತಿದ್ದರು. ಹಾಗೆಯೇ ರಂಗಭೋಗದವರು ಕೆಲವರು ದೇವಾಲಯದ ಮೆಟ್ಟಿಲು, ಕಂಬ, ಮಾಡಗಳ ಹತ್ತಿರ ವಿಗ್ರಹದ ಹಾಗೆ, ನೃತ್ಯ ಭಂಗಿಯಲ್ಲಿ ನಿಂತುಕೊಳ್ಳುತ್ತಿದ್ದರು. ಇನ್ನು ಕೆಲವರು ನವರಂಗದಲ್ಲಿ ಗೀತ, ವಾದ್ಯ, ನೃತ್ಯಗೋಷ್ಠಿಗಳನ್ನು ಜರುಗಿಸುತ್ತಿದ್ದರು. ಜನಸಾಮಾನ್ಯರನ್ನು ಬಹುಸಂಖ್ಯೆಯಲ್ಲಿ ಆಕರ್ಷಿಸಲು ಲಘು ಪ್ರಸಿದ್ಧ ಪಡೆಯಲು ಮಾಡಿಕೊಂಡ ಹಿಂದೂ ದೇವಾಲಯದ ಈ ವ್ಯವಸ್ಥೆಯಲ್ಲಿ ಜೈನರು ಜಿನಾಲಯಕ್ಕೂ ವರ್ಗಾಯಿಸಿಕೊಂಡಿದ್ದಕ್ಕೆ ಉದಾಹರಣೆಳಿವೆ.

**೫.ರಾಜಾಲಯ ಸೂಳೆಯರು:** ರಾಜನ ಅರಮನೆಯಲ್ಲಿ ದಾಸಿಯರಾಗಿ ಅಂಗಭೋಗದವರಂತೆ, ಆಸ್ಥಾನದಲ್ಲಿ ಕಲಾವಿಧೆಯರಾಗಿ, ರಂಗಭೋಗದವರಂತೆ ಕಾರ್ಯ ನಿರ್ವಹಿಸುತ್ತಿದ್ದರು. ಯಾವುದೇ ಕಾರಣದಿಂದ ಅರಮನೆ ನಾಶವಾಗುತ್ತಲೇ ಅವಿವಾಹಿತರಾದ ಇವರು ಸಮಾಜದ ಪಾಲಾಗುತ್ತಿದ್ದರು. ಇತ್ತೀಚೆಗೆ ಹಾಳಾದ ವಿಜಯನಗರ, ಕೆಳದಿ, ಮೈಸೂರು, ಪರಿಸರದಲ್ಲಿ ಈ ವರ್ಗದವರು ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತಾರೆ.

**೬. ಅರೆ ಸೂಳೆ:** ಕೆಲವೊಮ್ಮೆ ಶ್ರೀಮಂತರ ಸಂತೋಷಕೂಟದಲ್ಲಿ ಸಂಗೀತ, ನೃತ್ಯ, ಪ್ರದರ್ಶಿಸುತ್ತಾ, ರಂಗ ನಟಿಯರಾಗುತ್ತಾ ಜೀವನ ಸಾಗಿಸುತ್ತಿದ್ದವರು ದೇವರ, ದೇವಾಲಯದ, ರಾಜಾಲಯದ ಸೂಳೆಯರೇ ಇರಲಿ, ಭಕ್ತಿಯ ಹೆಸರಿನಲ್ಲಿ ಕಲೆ, ರಾಜಸೇವೆ ಹೆಸರಿನಲ್ಲಿ 'ಸಾರ್ವಜನಿಕ ಹೆಣ್ಣು' ಆಗಿಯೇ ಮುಂದುವರೆಸುವ ನೀಚ ಪದ್ಧತಿ ಇದಾಗಿದೆ. ಇವರುಗಳಿಗೆ ದೈವಿ ಪಾವಿತ್ರ್ಯ, ಕಲಾಪ್ರತಿಷ್ಠೆ. ಆರೋಪಿಸಿದರೂ ಪತಿವಿರಹಿತ ಈ ಹೆಣ್ಣು ಅಂತಿಮದಲ್ಲಿ ಪತಿಷ್ಟಿತ, ಅಪ್ರತಿಷ್ಟಿತ ಸಮಾಜದ ಸೂಳೆಯರಾಗುವುದು ತಪ್ಪುತ್ತಿರಲಿಲ್ಲ.

**೭. ಸಮಾಜ ಸೂಳೆ:** ಲೈಂಗಿಕತೆಯನ್ನು ನೇರವಾಗಿ ಮುಕ್ತ ವ್ಯಾಪಾರಸ್ಥಿತಿಗೆ ಇಳಿಸಿಕೊಂಡವಳಾಗಿದ್ದು, ಪ್ರಾಚೀನಕಾಲದಲ್ಲಿ ಇವರಲ್ಲಿ ಪ್ರತಿಷ್ಟಿತರಾದವರು ನಗರಗಳಲ್ಲಿ ಶಾಶ್ವತವಾಗಿ ವಾಸಿಸುತ್ತಿದ್ದಾರೆ. ಅಪ್ರತಿಷ್ಠಿತರಾದವರು ಹೊರಸು, ಹಾಸಿಗೆ, ಹೊತ್ತುಕೊಂಡು, ಸಂತೆಯಿಂದ ಸಂತೆಗೆ, ಜಾತ್ರೆಯಿಂದ ಜಾತ್ರೆಗೆ ಸಂಚರಿಸುತ್ತಿದ್ದರು. ಈ ದೊಡ್ಡ ನಗರಗಳಲ್ಲಿ ಈ ವೃತ್ತಿ ನಡೆಸುತ್ತಿದ್ದ ಘರವಾಲಿಗಳು ನಡೆಸುವ 'ಸೂಳೆ ಕೇಂದ್ರಗಳು' ಅಲ್ಲಲ್ಲಿ ಅಸ್ತಿತ್ವದಲ್ಲಿರುತ್ತವೆ ಎಂಬುದಾಗಿ ಡಾ.ಎಂ.ಎಂ. ಕಲಬುರ್ಗಿಯವರು ಸಂಶೋಧನಾ ಗ್ರಂಥಮಾಲೆ ೫, ಮುನ್ನುಡಿಯಲ್ಲಿ ಹೇಳಿದ್ದಾರೆ.

ಈ ರೀತಿ ಹೆಣ್ಣುಮಕ್ಕಳು ಸೂಳೆಯರಾಗಲು ಅಜ್ಞಾನ, ಬಡತನಗಳೇ ಕಾರಣವಾಗಿವೆ. ಇವು ಬುಡಕಟ್ಟಿನ ಜನರಲ್ಲಿರುವುದರಿಂದ ಅವರು ಮಾತ್ರ ದೇವರ ಹೆಸರಿನಲ್ಲಿ ಬಲಿಪಶುಗಳಾಗುತ್ತಿರುವುದು ಪ್ರಾಚೀನ ಕಾಲದಿಂದಲೂ

ವ್ಯಾಪಕವಾಗಿ ನೋಡಬಹುದಾಗಿದೆ.

ಕನ್ನಡ ಶಾಸನಗಳಲ್ಲಿ ದೇಶೀಪದ ಬಳಸಲಾಗಿದೆ. ಇಲ್ಲಿಯವರೆಗೆ ಕೇವಲ 'ಸೂಳೆ' ಎಂಬ ಶಬ್ದವನ್ನು ಬಳಸಿಕೊಂಡು ಸಾಮೂಹಿಕವಾಗಿ, ಗೌರವಾನ್ವಿತವಾಗಿ ಬೆಳೆದು ಬಂದ ಈ ಪರಂಪರೆ ೧೦ ನೇ ಶತಮಾನದಲ್ಲಿ ಅಂಗಭೋಗ, ರಂಗಭೋಗವೆಂದು ಕವಲೊಡೆಯಿತೆಂದು ತಿಳಿದು ಬರುತ್ತದೆ. ಇದಕ್ಕೆ ಕ್ರಿ.ಶ.೯೭೫ ರ ಹೆಬ್ಬಾಳಿನ ಒಂದು ಶಾಸನದಲ್ಲರಿ ಭೂಜಬ್ಬರಸಿ ಕಟ್ಟಿಸಿದ ಭೂಜೇಶ್ವರದೇಗುಲಕ್ಕೆ ಸಂಬಂಧಿಸಿದ ಐವರು ಸೂಳೆಯರಿಗೆ ಮತ್ತು ಒಬ್ಬ ಪಾತ್ರದವಳಿಗೆ ಪ್ರತೀಕವಾಗಿ ದಾನಬಿಟ್ಟಿದ್ದು ಉದಾಹರಣೆ ಎನಿಸಿದೆ. ಮುಂದೆ ಈ ಎರಡು ಕವಲು ಸಮೂಹಗಳು ಸಮೃದ್ಧವಾಗಿ ಬೆಳೆದುಬಂದವು.

**೧. ಅಂಗಭೋಗ:** ಹೆಸರೇ ಸೂಚಿಸುವಂತೆ ದೇವರ ಅಂಗಕ್ಕೆ ಸಂಬಂಧಪಟ್ಟ ಅಂದರೆ, ದೇವನ ಗರ್ಭಗೃಹಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡುವ ವರ್ಗದವರಾಗಿದ್ದು, ದೇವರ ಸ್ನಾನ ಅಭಿಷೇಕ ಗಂಧಲೇಪನ, ಧೂಪ, ದೀಪ, ಪುಷ್ಪ,ಪೂಜಾ,ನೈವೇದ್ಯ, ತಾಂಬೂಲಗಳ ಸಮರ್ಪಣಾಕಾರ್ಯ ಅಂಗಭೋಗದವರ ಕರ್ತವ್ಯಗಳಾಗಿವೆ. ಇವರನ್ನು ದೇವರಾರತಿ ಸೂಳೆ, ಸ್ನಾನದ ಸೂಳೆ, ದೀಪದ ಸೂಳೆ, ಗಂಧದಸೂಳೆ, ಹೂವಿನ ಸೂಳೆಯರೆನ್ನುತ್ತಿದ್ದರು. ಇವರನ್ನು 'ಪೆರಿಯರವಾಳ' 'ಪೆರ್ಗಡೆವಾಳ' 'ತೆರೆಯಸೂಳೆ' 'ತೆರೆಯ ಮರೆಯ ಸೂಳೆ' ತೆರೆಯೊಳಗೆ ಬಿಟ್ಟಸೂಳೆ, ಪರುಕೆರಗ ಭೋಗದ ಸೂಳೆಯರೆಂಬ ಪರ್ಯಾಯ ನಾಮಗಳನ್ನು ಶಾಸನಗಳು ಬಳಸಿವೆ.

ರಂಗಭೋಗದ ಸೂಳೆಯರಿಗಿಂತ ಇವರಿಗೆ ಕೊಟ್ಟ ದಾನ ಪ್ರಮಾಣ ಅಧಿಕವಾಗಿರುವುದರಿಂದ ಇವರು ಅವರಿಗಿಂತ ಸ್ವಲ್ಪ ಮೇಲ್ಮಟ್ಟದವರಾಗಿರಬೇಕು. ದೇವಸ್ಥಾನದ ಅಂತಸ್ತು, ಅಲ್ಲಿರುವ ಉಪಗರ್ಭಗಳ ಸಂಖ್ಯೆಗಳಿಗೆ ಅನುಗುಣವಾಗಿ ಈ ಸೂಳೆಯರ ಸಂಖ್ಯೆ ಹೆಚ್ಚು ಕಡಿಮೆಯಾಗುತ್ತಿದ್ದಿತು. ದೇವರ ಗರ್ಭಗೃಹದಲ್ಲಿ ಅಂಗಭೋಗದ ಸೂಳೆಯರಿಗೆ ಮಾತ್ರ ಪ್ರವೇಶವಿದ್ದಂತೆ ಕಂಡು ಬರುತ್ತದೆ.

**೨. ರಂಗಭೋಗದ ಸೂಳೆಯರು:** ಗರ್ಭಗುಡಿಯ ಮುಂದೆ, ನವರಂಗದಲ್ಲಿ ಸುಂದರಿಯರಿಂದ ನಡೆಯುವ ದೇವರ ಸೇವೆಗಿರುವ ಗೀತ ನೃತ್ಯಗಳು ರಂಗಭೋಗಗಳು, ಇವುಗಳನ್ನು ನಡೆಸುವವರಿಗೆ ಮಂತ್ರದ ಸೂಳೆ, ಚಾಮರದ ಸೂಳೆ, ಜಲಗವ ಸೂಳೆ, ಕಂಬದ ಸೂಳೆ, ಎಡಗಂಬದ ಸೂಳೆ, ಬಲಗಂಭದ ಸೂಳೆಯರೆಂದು ಕರೆಯುತ್ತಿದ್ದರು.

**೧. ಕಂಬದ ಸೂಳೆ:** ರಂಗಭೋಗದ ಸೂಳೆಯರಲ್ಲಿ ಬರುವ ಭಿನ್ನ ಕಾರ್ಯಗಳ ಆಧಾರದ ಮೇಲೆ ವರ್ಗೀಕರಿಸಲಾದ ಸೂಳೆಯರಲ್ಲಿ ಕಂಬದ ಸೂಳೆ ಒಂದು ಅಂಗ ಅಥವಾ ಬಗೆಯಾಗಿದ್ದು, ದೇವಸ್ಥಾನದ ರಂಗಮಂಟಪದ ಅಲಂಕಾರಕ್ಕೋಸ್ಕರ ಅಲ್ಲಿಯ ಕಂಬಗಳ ಹತ್ತಿರ ಒಬ್ಬೊಬ್ಬರು ಪೂಜೆ ಮುಗಿಯುವವರೆಗೆ ಅಲಂಕಾರ ಮಾಡಿಕೊಂಡು ನಿಲ್ಲುವುದು ಇವರ ಕಾರ್ಯವಾಗಿರಬೇಕು. ದೇವಸ್ಥಾನಗಳಿಗೆ ಕಂಬಗಳನ್ನು ಮಾಡಿಸಿಕೊಡುತ್ತಿದ್ದ ಪದ್ಧತಿ ಪ್ರಾಚೀನವೆಂದೇ ಹೇಳಬೇಕು. ಕೆಲ ಸೂಳೆಯರು ದೇವಸ್ಥಾನಕ್ಕೆ ಕಂಬಗಳನ್ನು ಮಾಡಿಸಿ ಕೊಟ್ಟಿದ್ದು, ಅದೇ ಕಂಬದ ಹತ್ತಿರ ನಿಂತುಕೊಳ್ಳುತ್ತಿರಲೂಬಹುದು. ಕೆಲವು ದೇವಾಲಯಗಳ ಕಂಬದ ಕೆಳ ಭಾಗದಲ್ಲಿ ಮಹಿಳೆಯರ ಚಿತ್ರಗಳನ್ನು ಕೊರೆದುದು ಕಂಡು ಬರುತ್ತದೆ.

ಕರ್ನಾಟಕದ ಶಾಸನಗಳಲ್ಲಿ ಸಾಮಾನ್ಯವಾಗಿ ನಾಲ್ಕು ಜನ ಕಂಬದ ಸೂಳೆಯರ ಉಲ್ಲೇಖ ಬರುತ್ತದೆ. ಇದು ಬಹುಶಃ ರಂಗಮಂಟಪದ ನಾಲ್ಕು ಕಂಬಗಳ ಹತ್ತಿರ ನಿಲ್ಲುವವರನ್ನು ಸೂಚಿಸುತ್ತಿರಬೇಕು. ಕೆಲವು ಚಾಮರದ

ಸೂಳೆಯರೂ ಈ ಕಂಬದ ಹತ್ತಿರ ನಿಲ್ಲುತ್ತಿದ್ದರೆಂದು ಕಂಡು ಬರುತ್ತದೆ. ಬಲಭಾಗದ, ಎಡಭಾಗದ ಕಂಬದ ಸೂಳೆಯರನ್ನು ಸಮಾನ ಸ್ಥಿತಿಯಲ್ಲಿ ಕಂಡಿದ್ದರೂ ಕೆಲವು ಸಲ ಬಲಭಾಗದ ಮೊದಲ ಕಂಬದ ಸೂಳೆಯರ ಸಂಭಾವನೆ ಅಧಿಕವಾಗಿದ್ದದ್ದು ಅವರ ಮಹತ್ವಕ್ಕೆ ಸಾಕ್ಷಿಯಾಗಿವೆ.

೨. **ಮಾಡದ ಸೂಳೆ:** ಶಾಪಗಳಲ್ಲಿ ಅತ್ಯಂತ ಕ್ವಚಿತ್ತಾಗಿ ಕಂಡುಬರುವವಳು ಮಾಡದ ಸೂಳೆ. ಇಲ್ಲಿಯ 'ಮಾಡ' ಎಂಬ ಪದಕ್ಕೆ 'ಮಹಡಿ' ಎಂಬ ಅರ್ಥವಿರದೇ ದೇವಾಲಯದಲ್ಲಿರುವ 'ಗೂಡು' ಎಂಬ ಅರ್ಥವೇ ಇರಬೇಕು. ದೇವಸ್ಥಾನಗಳ ಗರ್ಭಗೃಹದ ಎಡ, ಬಲ ಪಕ್ಕಗಳಲ್ಲಿ ಈ ಮಾಡಗಳು ಕಂಡುಬರುತ್ತಿದ್ದು ಇವುಗಳ ಹತ್ತಿರ ಅಲಂಕಾರಕ್ಕಾಗಿ ನಿಂತುಕೊಳ್ಳುವ ಸೂಳೆಯರನ್ನು ಶಾಸನಗಳು 'ಮಾಡ'ದ ಸೂಳೆಯರೆಂದು ಕರೆದಿರಬೇಕು.

೩. **ಚಾಮರದ ಸೂಳೆ:** ದೇವರಿಗೆ ಚಾಮರ ಸೇವೆ ಮಾಡುವವಳು ಚಾಮರದಸೂಳೆ. ಇವಳು ರಂಗ ಮಂಟಪದ ಮಿಕ್ಕ ಕಂಬಗಳ ಸಮೀಪದಲ್ಲಿ ನಿಲ್ಲುತ್ತಿದ್ದಳೇ ಅಥವಾ ಗರ್ಭಗೃಹದ ಸಮೀಪದಲ್ಲಿ ನಿಲ್ಲುತ್ತಿದ್ದಳೋ ಹೇಳುವುದು ಕಷ್ಟ. ಸೊಂಡಿಯ ನಾಗೇಶ್ವರ ದೇಗುಲದ ಶಾಸನ ಮಾತ್ರ ಬಲವಕ್ಕೆದೆಡವಕ್ಕದ ಕಂಬದ ಸೂಳೆಯರಂತೆ ಬಲವಕ್ಕದೆಡವಕ್ಕದ ಸೂಳೆಯರನ್ನು ಸೂಚಿಸುತ್ತದೆ. ದೇವರ ಚಾಮರದ ಸೇವೆಗಾಗಿಯೇ ಈ ಸೂಳೆಯರನ್ನು ದತ್ತಿ ನೀಡಿ ನೇಮಿಸಿಕೊಳ್ಳುತ್ತಿದ್ದಂತೆ ತಿಳಿದುಬರುತ್ತದೆ. ಇವರ ಸಂಖ್ಯೆ ಎರಡು ಅಥವಾ ನಾಲ್ಕು ಆಗಿರಬಹುದು. ಇಲ್ಲಿ ಎಷ್ಟೇ ಜನರಿದ್ದರೂ ಸಾಮಾನ್ಯವಾಗಿ ಎಲ್ಲರಿಗೂ ಸಮಾನ ವರಮಾನವಿದ್ದಿತು. ಒಂದೇ ಮನೆತನಕ್ಕೆ ಸಂಬಂಧಿಸಿದ ಇಬ್ಬರು ಹೆಣ್ಣು ಮಕ್ಕಳು ಬೇರೆ ಬೇರೆ ಕಾರ್ಯಗಳನ್ನು ನಿರ್ವಹಿಸಿದುದಕ್ಕೆ ಸೊಂಡಿಯ ಅಕ್ಕೇಶ್ವರ ದೇಗುಲದಲ್ಲಿ ಗುಬ್ಬಿ ಮನೆತನದ ಚಾವುಂಡಬ್ಬೆ ಕಂಬದ ಸೂಳೆಯಾಗಿದ್ದನ್ನು, ಗುಬ್ಬಿಯ ಕೇತಬ್ಬೆ ಎಡದ ದೆಸೆಯ ಕೇರಿಯ ಚಾಮರದ ಸೂಳೆಯಾಗಿ ಸೇವೆಸಲ್ಲಿಸಿದುದ್ದನ್ನು ಇಲ್ಲಿ ನೆನೆಯಬಹುದು.

೪. **ಪಾತ್ರದ ಸೂಳೆ:** ದೇವಸ್ಥಾನದ ಕಾರ್ಯವ್ಯವಸ್ಥೆಯಲ್ಲಿ ರಂಗಭೋಗದವರಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದವಳು ಪಾತ್ರದ ಸೂಳೆ. ವಾರವಿಲಾಸಿನೀ ವಿರಚಿತ ನೃತ್ಯ ಸಂಗೀತವಾದ್ಯವನ್ನು ಉಲ್ಲೇಖಿಸುವ ತಾಮ್ರಪಟ (ಕ್ರಿ.ಶ.೮೦೨) ಈ ಸೂಳೆಯರನ್ನು ಸ್ಪಷ್ಟವಾಗಿ ಸೂಚಿಸುವ ಪ್ರಾಚೀನತಮ ದಾಖಲೆಯಾಗಿದೆ. ಪಾತರದವರು ಉಳಿದೆಲ್ಲರಿಗಿಂತ ಉತ್ತಮ ಜಾತಿವ್ಯವಸ್ಥೆಗೆ ಸೇರಿದವರೆನ್ನಲಾಗಿದೆ. ದೇವರೆದುರಿಗೆ ಆಡುವ ತನ್ನ ಪಾತ್ರಗಳನ್ನು ನೃತ್ಯ ಹಾಡುಗಳ ಮೂಲಕ ಜನಸಮುದಾಯದ ನಿವೇದನೆಯನ್ನು ತಿಳಿಯಪಡಿಸುವವಳು ಪಾತರದವಳು. ಹೀಗಾಗಿ ನಟುವರು ಮತ್ತು ಪಾತರದವರಲ್ಲಿ ವ್ಯತ್ಯಾಸವಿಲ್ಲ. ಪಾತರ ಎಂದರೆ ಕುಣಿತ, ನರ್ತನ, ನಾಟ್ಯವಾಗಿದೆ. ದೇವರ ಪ್ರೀತ್ಯರ್ಥವಾಗಿ ನರ್ತನ, ಸಂಗೀತ ಸಲ್ಲಿಸುವವರಾಗಿದ್ದು ಅಂದರೆ, ಗಂಡು ಹೆಣ್ಣನ್ನು ಆಕರ್ಷಿಸುವುದಕ್ಕಾಗಿ ಉಂಟುಮಾಡುವ ನಾದವೇ ಸಂಗೀತದ ತಳಹದಿಯಾಗಿದ್ದು ಇದು ಪ್ರಣಯಾಸಕ್ತ ಭಾವನೆಯನ್ನುಂಟು ಮಾಡುವಂತಹದಾಗಿದ್ದು, ಇವರ ಹುಟ್ಟಿಗೆ ಕಾರಣಗಳನ್ನು ನೋಡಿದಾಗ, ಪ್ರಾಚೀನ ಮಾನವನು ಧಾರ್ಮಿಕರ ಶ್ರದ್ಧೆಯನ್ನು ತನ್ನ ಗುಹೆಗಳಲ್ಲಿ ಪ್ರಾಣಿ, ದೇವತೆಗಳ ಚಿತ್ರ ಬರೆದು ಕಲ್ಲಿನಲ್ಲಿ ಅವುಗಳ ಮೂರ್ತಿ ಮಾಡಿ, ಪೂಜಿಸಿದ ಅವುಗಳ ತೃಪ್ತಿಗಾಗಿ, ಆವೇಶಗೊಂಡು ಕುಣಿದು ಹಾಡಿದ. ಆ ಮೂಲಕ ಆವೇಶಗೊಂಡು ಕುಣಿದು ಹಾಡಿದ ತೃಪ್ತಿಪಡೆದ. ಹೀಗೆ ಚಿತ್ರ, ಶಿಲ್ಪಕಲೆ, ನೃತ್ಯ ಸಂಗೀತಗಳೆಲ್ಲವೂ ಧರ್ಮದ ಮೂಲವಾಗಿಯೇ ಪರಿಣಮಿಸಿವೆ. ಇವು ಮನಸ್ಸನ್ನು ರಂಜನೆಗೊಳಿಸುವ ಮೂಲಕ ಅವರ ಸ್ವಾಸ್ಥ್ಯವನ್ನು ಕಾಪಾಡುವುದು.

ಕೃಷ್ಣದೇವರಾಯನ ಕಾಲದಲ್ಲಿ ವಿಜಯ ನಗರದ ವೈಭವ ತನ್ನ ಅತ್ಯುನ್ನತ ಶಿಖರವನ್ನು ಮುಟ್ಟಿ ಸಾಹಿತ್ಯ, ಸಂಗೀತ, ಕಲೆಗಳಿಗೆ ಪ್ರೋಷಣೆ, ಪ್ರೋತ್ಸಾಹ ನೀಡಿತ್ತೆನ್ನಲಾಗಿದೆ. ಸಂಗೀತ ಎನ್ನುವುದು ಜನ ಜೀವನದಲ್ಲಿ ಹಾಸು ಹೊಕ್ಕಾಗಿಸಲು ಕಾರಣರಾದ ವಾಗ್ಗೇಯಕಾರರು, ಭಕ್ತರು, ಸಂತರು, ರಾಜರು, ಸತ್ಪುರುಷರು ಒಂದು ಕಡೆ ಅದು ಮನರಂಜನೆಯ ಮಾರ್ಗವಾಗಿ ಇಂತಹ ಪಾತ್ರದ ಸೂಳೆಯರನ್ನು ಆಶ್ರಯಿಸಿ ಬೆಳೆದು ಬಂದರೆ, ಇನ್ನೊಂದು ಕಡೆ ಆಧ್ಯಾತ್ಮರಂಗದಲ್ಲಿ ಪ್ರಧಾನ ಪಾತ್ರವಹಿಸಿತು. ಉದಾಹರಣೆಗೆ, ನಟರಾಜನ ವಿಗ್ರಹದಲ್ಲಿ ಇಡೀ ಸೃಷ್ಟಿ ಚಕ್ರದಲ್ಲಿರುವ ಲಯಬದ್ಧವಾದ ಚಾಲನೆಯ ಸಂಕೇತ ಆತನ ಭರತನಾಟ್ಯ ಎಂಬುದನ್ನು ಸೂಚಿಸಲು ನಟರಾಜನ ವಿಗ್ರಹದ ಸುತ್ತಲೂ ಚಕ್ರಾಕೃತಿ ವ್ಯಾಪಿಸಿರುವುದನ್ನು ಗಮನಿಸಬಹುದು.

ಮಾಯಾ ಭ್ರಾಂತಿಯನ್ನು ತುಳಿದು ಅಸಂಖ್ಯಾತ ಜೀವಾತ್ಮಗಳನ್ನು ಅದರಿಂದ ಬಿಡುಗಡೆಗೊಳಿಸುವುದರ ಸಂಕೇತವಾಗಿ ಕಾಲಿನಿಂದ ಆತ ರಾಕ್ಷಸನನ್ನು ತುಳಿಯುತ್ತಿರುವಂತೆ ಚಿತ್ರಿಸಲಾಗಿದೆ ಮತ್ತು ಸೃಷ್ಟಿ, ಸ್ಥಿತಿ, ಲಯ, ತಿರೋಭಾವ, ಅನುಗ್ರಹ, ಈ ಪಂಚಕ್ರಿಯೆಗಳನ್ನು ಸೂಚಿಸುವಂತಿದೆ. ಮೇಲುಗಡೆಯ ಬಲಗೈಯಲ್ಲಿ ಹಿಡಿದಿರುವ ಡಮರ ಸೃಷ್ಟಿಯ ನಾದ ವಿನ್ಯಾಸದ್ಯೋತಕವಾದುದು. ಅಲ್ಲಿಯೇ ಎಡಗೈಯಲ್ಲಿರುವ ಬೆಂಕಿ, ಲಯಕಾರಕ ಶಕ್ತಿಯ ಸಂಕೇತ. ಕೆಳಭಾಗದ ಬಲಗೈ ವಿಜಯ ಸೂಚಕವಾದ ಮುದ್ರೆಯನ್ನು ಎಡಗೈ ಅನುಗ್ರಹ ಸೂಚಕ ಅಭಯ ಮುದ್ರೆಯನ್ನು ಪಡೆದಿದೆ. ರಾಕ್ಷಸನನ್ನು ತುಳಿಯುತ್ತಾ ಇನ್ನೊಂದನ್ನು ನರ್ತನಾ ಭಂಗಿಯಿಂದ ಮೇಲೆತ್ತಿರುವ ಕಾಲುಗಳು ತಾಮಸವನ್ನು ಕಳೆದು ಜೀವಿಗಳಿಗೆ ನೀಡುವ ಊರ್ದ್ವಗಾಮಿತ್ವವನ್ನು ಸೂಚಿಸುತ್ತವೆ. ಹೀಗೆ ನಟರಾಜನ ವಿಗ್ರಹದ ಕಲ್ಪನೆಯ ಅರ್ಥ ಸೂಚಿಸಬಹುದಾಗಿದ್ದು ದೇವತೆಗಳಿಗೂ ನಾಟ್ಯದ ಸಂಬಂಧವನ್ನು ಪುರಾಣಗಳು ಕಲ್ಪಿಸಿವೆ. ಪಾರ್ವತಿಯ ಲಾಸ್ಯ, ಶಿವನ ತಾಂಡವ ನೃತ್ಯ, ರಾಧಕೃಷ್ಣರ ನರ್ತನ, ಇದು ಸೃಷ್ಟಿ ಶಕ್ತಿಯ ಪ್ರಣಯ ಮುಖವನ್ನು ಪ್ರಧಾನವಾಗಿ ಚಿತ್ರಿಸುವುದು

ಅಪ್ಸರೆಯರು, ಗಂಧರ್ವರು, ಕಿನ್ನರರು, ಯಕ್ಷರು (ಗಣಪತಿಯೂ) ಸಹ ನಾಟ್ಯವಿಶಾರದೆಯರಾಗಿ ಪುರಾಣಗಳಲ್ಲಿದ್ದಾರೆ. ಇದನ್ನು ಪುರುಷ ಪ್ರಧಾನ್ಯತೆಯ ವ್ಯವಸ್ಥೆಯು ತನ್ನ ದೌರ್ಬಲ್ಯಕ್ಕೊಳಗಾಗಿ ಇನ್ನಷ್ಟು ಕಲೆಯನ್ನು ಕಲುಷಿತವಾಗಿರಿಸಿ, ಮುಖ್ಯವಾಗಿ ಅದು ದೇಹ ವಿನ್ಯಾಸ, ಪ್ರದರ್ಶನದ ಕಲೆಯಾದುದರಿಂದ ಭಾವತ್ವದಿಂದ ರಸತ್ವಕ್ಕೇರುವುದು ಕಷ್ಟ. ಭಾವವೇ ಬಲವತ್ತರವಾಗಿ ನೃತ್ಯವೆಂಬುದು ದೇವದಾಸಿಯರ ವಿದ್ಯೆಯನ್ನಾಗಿ ಮಾಡಿ, ಆಲಸಿಗರ ಮನೋವೃತ್ತಿಗಳ ತೃಪ್ತಿಯ ಮಟ್ಟಕ್ಕಿಳಿದಿರುವುದನ್ನು ನೋಡಬಹುದಾಗಿದೆ. ಇದು ಪಾತರದವರ ಜೀವನ ಚರಿತ್ರೆಯಿಂದ ತಿಳಿಯುವಂತಹದ್ದಾಗಿದೆ. ಈ ಪಾತ್ರದವರನ್ನು ಸಾಮಾನ್ಯವಾಗಿ ಊರಿನವರೇ ಆಯ್ಕೆ ಮಾಡುತ್ತಿದ್ದು, ಅವಳ ಜೀವಿತದ ವ್ಯವಸ್ಥೆಯನ್ನು ಆಯಾ ಗ್ರಾಮದವರೇ ನಿರ್ವಹಿಸುತ್ತಿರಬೇಕು. ಉದಾಹರಣೆಗೆ ರಾಮನಾಥದೇವರ ಪಾತ್ರ ಕೇತವ್ವೆಯನ್ನು ನಾಲ್ಕಾರು ಗ್ರಾಮಗಳ ಪ್ರಮುಖರು ಕೂಡಿ ನಿರ್ಣಯಿಸಿ, ಅವಳ ಜೀವನಕ್ಕೆ ಪ್ರತಿ ಗ್ರಾಮದ ಬಡಗಿಗಳು, ಅಕ್ಕಸಾಲಿಗರು, ಕಂಚಗಾರರು, ದತ್ತಿಬಿಟ್ಟುಕೊಡುವಂತೆ ಯೋಜಿಸಿಕೊಳ್ಳಲಾಗಿತ್ತು ಎಂದು (ಗುಂಡ್ಲಪೇಟೆಯ ಶಾಸನ ಕ್ರಿ.ಶ.೧೩೭೨) ಶಾಸನದಲ್ಲಿ ತಿಳಿಸಲಾಗಿದೆ.

**೫. ಓಲಗದ ಸೂಳೆ:** ದೇವನ ಪ್ರೀತ್ಯರ್ಥವಾಗಿ ಸಂಗೀತ ಸೇವೆ ಸಲ್ಲಿಸುವವರನ್ನು ಶಾಸನಗಳು 'ಓಲಗದ ಸೂಳೆ' ಅಥವಾ 'ಪಾಡುವವರು' ಎಂದು ಕರೆದಿವೆ. ದೇವಸ್ಥಾನದ ನರ್ತನ ವರ್ಗದವರಿಗೆ ಹಿಮ್ಮೇಳದ ಸಂಗೀತವನ್ನು

ಒದಗಿಸಲೋ ಅಥವಾ ಸ್ವತಂತ್ರ ಸಂಗೀತ ಸಭೆಗೋ ಈ ಸಮುದಾಯವನ್ನು ನಿಯೋಜಿಸುತ್ತಿರಬೇಕು. ಇವರಲ್ಲಿ ಸೇರ್ಪಡೆಯಾಗುವವರೆಂದರೆ, ವಂಶಿಗ (ಕೊಳಲು ನುಡಿಸುವವ) ಪರೆಕಾರ (ಹಲಗೆ ನುಡಿಸುವವ) ಮದ್ದಳಿಗ (ಮೃದಂಗ ನುಡಿಸುವವ) ಮುಂತಾದವರು. ಮಹಿಳೆಯೋರ್ವಳು ವಾದ್ಯಗಾರ್ತಿಯಾದ ಉಲ್ಲೇಖ ಕರ್ನಾಟಕದ ಯಾವ ಶಾಸನಗಳಲ್ಲಿಯೂ ದೊರೆತಿಲ್ಲ. ಆದರೆ ಕಲಿದೇವರ ತೊತ್ತು ನಾಗೆವ್ವೆಯ ಮಗಳು ಹಾಡುವ ಕಾಮವೆಯ ಉಲ್ಲೇಖ ಬಾಗಳಿ ಶಾಸನದಲ್ಲಿವೆ. ಸಾಮಾನ್ಯವಾಗಿ ದೇಗುಲಗಳಲ್ಲಿ ಹಾಡಲು ಇರುವ ಸಮುದಾಯದ ಜೊತೆಗೆ ವಾದ್ಯಗಾರರಾಗಿರುವ ವಂಶಿಕ, ಪರೆಕಾರ, ಮದ್ದಳಿಗರು ಇರುವುದು ಶಾಸನಗಳಲ್ಲಿ ಕಂಡುಬರುತ್ತದೆ.

೬. **ಬಸವಿ:** ಸೂಳೆ ಎಂಬ ಪದಕ್ಕೆ ಪರ್ಯಾಯವಾಗಿ ಕಾಲಾನಂತರದಲ್ಲಿ ಬಸವಿ ಎಂಬುದಕ್ಕೆ ಬಳಕೆಯಾಗಿವೆ. ಹಳ್ಳಿಗಳಲ್ಲಿ ದೇವರ ಹೆಸರಿನಲ್ಲಿ ಇಂದಿಗೂ ಪರಪುರುಷರೊಂದಿಗೆ ಭೋಗ ಜೀವನ ನಡೆಸುತ್ತಿರುವವರು. ಇದೇ ಸಂಪ್ರದಾಯದವರೆಂದು ಹೇಳಬಹುದು. ಇಲ್ಲಿ ಬಸವಿಯ ಕಾರ್ಯವೆಂದರೆ ಗುಡಿಯಲ್ಲಿ ಕಸಗುಡಿಸುವ ಕಾರ್ಯವಿರುವುದನ್ನು ಗಮನಿಸಬಹುದು.

ಈ ಬಸವಿಯರು ಕೆಳಜಾತಿಗೆ ಸೇರಿದವರಾಗಿದ್ದು ದೇವರ ಹೆಸರಿನಲ್ಲಿ ಹಣಕ್ಕಾಗಿ ಎಲ್ಲರೊಂದಿಗೆ ಮೈಮಾರಿಕೊಳ್ಳುವವಳು ಅದರಿಂದ ಬಂದ ಹಣದಿಂದ ಜೀವನ ನಿರ್ವಹಿಸುವರು. ತಂದೆ, ತಾಯಿಗಳ ಹರಕೆಯಿಂದಾಗಿ ಇವರು ಬಸವಿಯರಾಗಿರುತ್ತಾರೆ. ಇವರು ಸಮಾಜದ ಸ್ಥಾನಮಾನದಲ್ಲಿ ಕೆಳಸ್ತರಕ್ಕೆ ಸೇರಿದವರಾಗಿರುತ್ತಾರೆ.

ಹೀಗೆ ದೇವ ಸೂಳೆಯರಲ್ಲಿ ತೋರುವ ಅಂಗಭೋಗ ಮತ್ತು ರಂಗಭೋಗದವರೆಂದು ಎರಡು ವರ್ಗಗಳನ್ನು ವಿವೇಚಿಸಿದ ಬಳಿಕ ಈ ವರ್ಗಗಳಿಗೆ ಸಂಬಂಧಪಟ್ಟ ಇನ್ನು ಕೆಲವು ಅಂಶಗಳನ್ನು ಇಲ್ಲಿ ಗಮನಿಸಬಹುದಾಗಿದೆ.

**ಸೂಳೆಗೇರಿ:** ದೇವಸ್ಥಾನದ ಕಾರ್ಯಕಲಾಪಗಳಿಗೆ ಅನುಕೂಲವಾಗಲೆಂದು ಅದರ ಸುತ್ತಾ ಗಾಯಕರು, ಸೂಳೆಯರು, ಮೊದಲಾದವರ ವಾಸಸ್ಥಳಗಳನ್ನು ನಿರ್ಮಿಸುತ್ತಿದ್ದರು. ಈ ಪ್ರದೇಶವನ್ನು 'ದೇವರಾಪುರ' ಎಂದು ಶಾಸನಗಳು ಕರೆದಿವೆ. ಈ ಪುರದ ಒಂದು ಭಾಗವೇ ಸೂಳೆಗೇರಿ. ಸಾಮಾನ್ಯವಾಗಿ ದೇವಸ್ಥಾನದ ಯಾತ್ರೋತ್ಸವ ಕಾಲದಲ್ಲಿ ಸೂಳೆಯರು ಒಂದೂರಿನಿಂದ ಮತ್ತೊಂದೂರಿಗೆ ಬರುತ್ತಿರುವುದನ್ನು ಈ ಶಾಸನಗಳು ತಿಳಿಸುತ್ತವೆ. ಸೂಳೆಗೇರಿಗಳು ರಮ್ಯವಾಗಿದ್ದು, ಅಲ್ಲಿ ಚಲುವೆಯರು ವಾಸಿಸುತ್ತಿದ್ದರೆಂದು ಶಾಸನಗಳು ಹೇಳುತ್ತವೆ.

**ನಾಗವಾಸ:** ಸೂಳೆಗೇರಿ ಸೂಳೆಯರ ವಾಸಸ್ಥಳವಾದರೆ ನಾಗವಾಸ ಸೂಳೆಯರ ಕಲಾತರಬೇತಿ ಕೇಂದ್ರವಾಗಿದ್ದಿತು ದೇವರ ಭೋಗದ ನಾಗವಾಸದ ಸೂಳೆಯರ ಉಲ್ಲೇಖ ಬಸರಾಳು ಶಾಸನದಲ್ಲಿದೆ. ಹೀಗೆ ಇನ್ನು ಕೆಲವು ಅಂಶಗಳು ಅಂದರೆ ತೆರಿಗೆಗಳು, ಸೂಳೆಯರ ದಾನ, ಸೂಳೆವಳ ಮುಂತಾದ ಅಂಶಗಳನ್ನು ಒಳಗೊಂಡಿದೆ.

ಒಂದು ಪ್ರದೇಶದ ಪದ್ಧತಿಗಳನ್ನು ಇನ್ನೊಂದು ಪ್ರದೇಶದ ಪದ್ಧತಿಗಳಿಗೆ ಹೋಲಿಸಿದಾಗ, ಪ್ರಾದೇಶಿಕ ವ್ಯತ್ಯಾಸಗಳಿರುವುದು ಸಹಜ. ಪ್ರತಿ ಸಮಾಜವೂ ಕೂಡ ಇನ್ನೊಂದು ಸಮಾಜಕ್ಕಿಂತ ಭಿನ್ನವಾದ ಪರಿಸರ, ಹವಾಮಾನ ಪರಿಸ್ಥಿತಿಯ ಆಧಾರದ ಮೇಲೆ ವ್ಯತ್ಯಾಸಗಳಿಂದ ಕೂಡಿದ ನಾನಾ ತೆರನಾದ ಸಮಾಜಗಳು. ವೈವಿಧ್ಯಮಯವಾದ ಸಂಸ್ಕೃತಿಗಳು, ಜನ ಜೀವನದ ರೀತಿ ನೀತಿಗಳಲ್ಲಿ ತೀರಾ ಭಿನ್ನತೆ ಇರುವುದನ್ನು ಗುರುತಿಸಬಹುದಾಗಿದೆ. ಹಾಗೆಯೇ ಜಗತ್ತಿನ ವಿವಿಧ ಸಮಾಜಗಳಲ್ಲಿ ವಿವಿಧ ರೂಪಗಳಲ್ಲಿ ದೇವದಾಸಿ

ಸಂಪ್ರದಾಯ ಅಸ್ತಿತ್ವದಲ್ಲಿದ್ದದ್ದು ಕಂಡು ಬರುತ್ತದೆ. ಭಾರತದಲ್ಲಿ ದೇವದಾಸಿ ಸಂಪ್ರದಾಯದ ಆರಂಭದ ಬಗ್ಗೆ ಅವಲೋಕಿಸಿದಾಗ ತಿಳಿದು ಬರುವ ಸತ್ಯ ಸಂಗತಿ ಎಂದರೆ, ಸಹಜವಾಗಿ ಹೇಳುವುದಾದರೆ, ಪ್ರತಿ ಸಾಮಾಜಿಕ ವ್ಯವಸ್ಥೆಯೂ ಆ ಸಮಾಜ ಹೊಂದಿದ ಪ್ರಬಲ ಮತ್ತು ಪ್ರಭುತ್ವ ಹೊಂದಿದ ಜನ ಸಮುದಾಯದಂತೆ ರೂಪಿತವಾಗಿರುವುದನ್ನು ಅಂದರೆ, ಪ್ರಬಲ ಮತ್ತು ಪ್ರಭುತ್ವ ಹೊಂದಿದ ವ್ಯಕ್ತಿಗಳ ಮನಸ್ಸು, ಅನುಕೂಲತೆ, ನಂಬಿಕೆ, ಹಿತಾಸಕ್ತಿಗಳ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆ ರೂಪುಗೊಂಡಿರುವುದನ್ನು ನೋಡಬಹುದಾಗಿದೆ. ಉದಾಹರಣೆಗೆ ಡಾ.ಕೆ.ಜಿ.ಗುರುಮೂರ್ತಿಯವರ 'ಧರ್ಮ ಮತ್ತು ರಾಜಕೀಯ' ಎಂಬ ಕೃತಿಯಲ್ಲಿ ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆಯಲ್ಲಿ ಭಗವತ್ ಶರಣ ಉಪಾಧ್ಯಾಯರು ಜೊತೆಗೆ ಮಹಾನ್ ತತ್ವಜ್ಞಾನಿಗಳಾದ ಏಂಗೆಲ್ಸ್, ಕಾರ್ಲ್‌ಮಾರ್ಕ್ಸ್, ಮ್ಯಾಕ್ಸ್‌ವೆಬರ್ ಮೊದಲಾದವರ ತತ್ವಗಳನ್ನು ಹೋಲುವ ಹಾಗೆ ಆಳುವವರ ಅನಿಸಿಕೆ, ಇಷ್ಟ ಹಿತಾಸಕ್ತಿಗಳಿಗನುಗುಣವಾಗಿ, ನಿಯಮಗಳು, ಪದ್ಧತಿಗಳು ಅಭ್ಯಾಸಗಳು, ಸಂಸ್ಕೃತಿ ರೂಪಿತವಾಗುವುದನ್ನು ಗುರುತಿಸಬಹುದಾಗಿದೆ. ಈ ಅಂಶದ ಆಧಾರದ ಮೇಲೆ 'ದೇವದಾಸಿ ಸಂಪ್ರದಾಯದ' ಹುಟ್ಟನ್ನು ವಿಶ್ಲೇಷಿಸಬಹುದಾಗಿದೆ. ಆರಂಭದಲ್ಲಿ ಈ ದೇಶದ ನಿವಾಸಿಗಳಾದ ದ್ರಾವಿಡರ ಜೊತೆಯಲ್ಲಿ ವಲಸೆ ಬಂದ ಆರ್ಯರು ಸೆಣಸಿ ಸೋಲಿಸಿ ಕೆಲ ದ್ರಾವಿಡರನ್ನು ಕೊಲೆಗೈದು, ಇನ್ನು ಕೆಲವರನ್ನು ಸೆರೆಹಿಡಿದು ತಮ್ಮ ಸೇವೆಗೆ ಇಟ್ಟುಕೊಂಡು, ಅವರನ್ನು ದಾಸ ದಾಸಿಯರೆಂದು ಕರೆದು, ಧರ್ಮವನ್ನು ತಮ್ಮ ಹಿತಾಸಕ್ತಿಗನುಗುಣವಾಗಿ ರೂಪಿಸಿ, ಅದರ ಮೂಲಕ ಸೆರೆಹಿಡಿದ ದಾಸ ದಾಸಿಯರನ್ನು ಕೀಳಾಗಿ ಹುಟ್ಟಿದವರು, ಅನಾಗರಿಕರು, ಅಸಂಸ್ಕೃತರು ಎಂದು ಅವರುಗಳ ಸಂಪ್ರದಾಯವನ್ನು ವಿಕೃತಗೊಳಿಸಿ, ಹೀಯಾಳಿಸಿ ತಮ್ಮಗಳ ಸೇವೆಯಿಂದ ಅವರಿಗೆ ಮುಕ್ತಿ ಎನ್ನುವ ಧಾರ್ಮಿಕ ನಂಬಿಕೆ ಹುಟ್ಟಿಸಿ, ಹಿಂದೆ ದ್ರಾವಿಡ ಸಮಾಜದ ಪವಿತ್ರ ಮಾತೃದೇವತೆಯ ಪೂಜಾರಿಣಿಯರನ್ನು ತಮ್ಮ ವಿಕೃತಕಾಮನೆಗಳನ್ನು ಪೂರೈಸುವ ದೇವದಾಸಿಯರನ್ನಾಗಿ ಪರಿವರ್ತಿಸಿ, ಈ ಹುನ್ನಾರಕ್ಕೆ ಪೂರಕವಾಗುವ ಹಾಗೆ ಪುರಾಣ, ಪುಣ್ಯಕತೆಗಳನ್ನು ಸೃಷ್ಟಿಸಲಾಯಿತು.

ಧರ್ಮದ ಹೆಸರಿನಲ್ಲಿ ದೇವರನ್ನು ಸೃಷ್ಟಿಸಿ ಆತನಿಗೆ ಮಾನವನ ಗುಣದೋಷಗಳನ್ನು ಆರೋಪಿಸಿ, ತೋರುಂಬುವ ನೀತಿಯಿಂದ ಹೆಣ್ಣು ದೇಹಗಳನ್ನು ಶೋಷಣೆಗೆ ಒಳಪಡಿಸಿ, ಇದು ಆ ಮುಗ್ಧ, ಮೌಢ್ಯತೆಯಿಂದ ಕೂಡಿದ ಜನತೆಗೆ ತಿಳಿಯದಂತೆ, ನಿತ್ಯ ಸುಮಂಗಳೆಯರು, ದೇವರ ಕೃಪೆಗೆ ಪಾತ್ರರಾದವರೆಂಬ ಹುಸಿ ನಂಬಿಕೆಗಳನ್ನು ಹುಟ್ಟು ಹಾಕಿ, ಆ ಮೂಲಕ ದೇವದಾಸಿ ಸಂಪ್ರದಾಯ ಹಲವಾರು ಕವಲುಗಳಲ್ಲಿ, ಸ್ವರೂಪದಲ್ಲಿ ವ್ಯಾಪಕವಾಗಿ ಬೆಳೆಯಲು ಕಾರಣರಾಗಿದ್ದಾರೆ. ಹಾಗೆಯೇ ಈ ಪದ್ಧತಿ ಇಂದು ಹಲವಾರು ಪರಿವರ್ತನೆಗೆ ಒಳಗಾಗಿರುವುದನ್ನು ತನ್ನ ಸ್ವರೂಪದಲ್ಲಿ ಮಾರ್ಪಾಡಾಗಿರುವುದನ್ನು ಸಹ ಕಾಣಬಹುದಾಗಿದ್ದು ಇದಕ್ಕೆ ಪ್ರಮುಖ ಕಾರಣವೆಂದರೆ, ಅದು ಕೇವಲ ಪ್ರಭುತ್ವ ಮತ್ತು ಪ್ರಾಬಲ್ಯದಲ್ಲಿನ ಏರಿಳಿತಗಳ ಪರಿಣಾಮವೇ ಆಗಿರುತ್ತದೆನ್ನುವುದನ್ನು ಅನಿಸಿಕೆಯಾಗಿದೆ. ವ್ಯಕ್ತಿ ತನ್ನ ಅಸ್ತಿತ್ವಕ್ಕಾಗಿ, ಪ್ರಾಬಲ್ಯ ಸಾಧಿಸುವ ಬಗ್ಗೆ ಭಯ ಕಾಡಿದಾಗೆಲ್ಲಾ ದಮನಕಾರಿ ನೀತಿ, ಆಕ್ರಮಣಶೀಲತೆಯನ್ನು ಅನುಸರಿಸಿದ್ದರ ಮನೋಧರ್ಮವನ್ನು ವಿವಿಧ ಕ್ಷೇತ್ರಗಳಲ್ಲಿ ಯಥೇಚ್ಛವಾಗಿ ವಿಸ್ತರಿಸಿದ್ದಾನೆ. ಈ ವಿಸ್ತರಣೆಯಲ್ಲಿ ದೇವದಾಸಿ ಸಂಪ್ರದಾಯವೂ ಒಂದಾಗಿದೆ ಎನ್ನಬಹುದು.

**ಅಡಿ ಟಿಪ್ಪಣಿಗಳು**

೦೧. ಡಾ.ಕೆ.ಜಿ.ಗುರುಮೂರ್ತಿ, ಧರ್ಮ ಮತ್ತು ರಾಜಕೀಯ ಪು ೧೪, ೧೯೯೬

೦೨. ಚ.ನ.ಶಂಕರ್‌ರಾವ್, ಸಮಾಜಶಾಸ್ತ್ರದ ಪ್ರಾಥಮಿಕ ತತ್ವಗಳು ಮತ್ತು ಸಾಮಾಜಿಕ ಚಿಂತನೆ, ಪು.೩೦೩, ೧೯೯೫

೦೩. ಕೆ.ವೈ.ಸಿ. ಭಾನುಮತಿ, ಮಹಿಳೆ ಮತ್ತು ಫಲವಂತಿಕೆ, ಪು. ೨೬, ಮಹಿಳಾ ಅಧ್ಯಯನ ಜನವರಿ ೨೦೦೦,

೦೪. ಡಾ.ಶೈಲಜಾ ಹಿರೇಮಠ, ಮಾತೃ ಪ್ರಧಾನ ಪರಿಕಲ್ಪನೆ, ಪು.೫, ೨೦೦೪

೦೫. ಪ್ರೇಜರ್ ೧೯೨೮ ಮತ್ತು ಟಾವ್ನಿ ಹಾಗೂ ಪೆಂಜರ್ ೧೯೨೫, ಉಲ್ಲೇಖ: ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೪೩, ೧೯೯೩

೦೬. ವಾರ್ಡ್, ೧೯೧೦: ೧೬೧, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ ಪು.೪೧, ೧೯೯೩

೦೭. ಎಲ್ಲಿಸ್, ೧೮೯೦: ಪು. ೧೪೦, ಉಲ್ಲೇಖ: ಡಾ.ಜೋಗನ್ ಶಂಗರ್, ದೇವದಾಸಿ ಸಂಪ್ರದಾಯ, ಪು.೪೬,೧೯೯೩

೦೮. ಬಾರ್ಟನ್, ೧೯೩೦: ಪು.೬೭೫, ಉಲ್ಲೇಖ: ಚೆನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು ೧೭೦, ೨೦೦೧

೦೯. ಟಾವ್ನಿ ಮತ್ತು ಪೆಂಜರ್ ೧೯೨೪ ಸಂ.೧, ೨೭೫, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ ಪು.೪೪, ೧೯೯೩

೧೦. ಟಾವ್ನಿ ಮತ್ತು ಪೆಂಜರ್: ೨೭೬: ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ ಪು.೪೫, ೧೯೯೩

೧೧. ಪೆನರ್ಝುರ ೧೯೬೮ -೨೩೩ -೨೭೬,ಉಲ್ಲೇಖ: ಚೆನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು ೧೭೦, ೨೦೦೧

೧೨. ಫ್ರೇಜರ್ ೧೯೫೮, ಪು.೧೪೩, ಉಲ್ಲೇಖ: ಚೆನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ,ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೧೬೮, ೨೦೦೧

೧೩. ಬರ್ಟನ್ ೧೯೩೦, ಪು.೬೭೫, ಉಲ್ಲೇಖ: ಚೆನ್ನವಾಲೀಕರ್ ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು. ೧೭೦, ೨೦೦೧

೧೪. ಟಾವ್ನಿ ಮತ್ತು ಪೇಜರ್: ೧೯೨೪: ಸಂ.೧: ೨೭೯, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೪೯, ೧೯೯೩

೧೫. ನಾರ್ಲ ವೆಂಕಟೇಶ್ವರ ರಾವ್, ಅನು: ಡಾ.ಎಚ್.ಎಸ್.ಸುಜಾತ, ಸೀತೆಯ ಭವಿಷ್ಯ ನಾಟಕ, ಪು. ೧೯, ೧೯೮೬

೧೬. ಚೆನ್ನಣ್ಣ ವಾಲೀಕರ್, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೨೭, ೨೦೦೧

೧೭. ಡಾ.ಹೆಚ್.ಆರ್.ಕಮಲಾ ಹಮ್ಮಿಗೆ, ಸವದತ್ತಿ ಎಲಮ್ಮ ಮತ್ತು ದೇವದಾಸಿ ಪದ್ಧತಿ, ಪು.೮೧, ೧೯೯೮

೧೮. ಡಾ.ಶೈಲಜಾ ಹಿರೇಮಠ, ಮಾತೃ ಪ್ರಧಾನ ಪರಿಕಲ್ಪನೆ, ಪು.೨೨ ............

೧೯. ಎಸ್.ಎಸ್.ಹಿರೇಮಠ, ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ, ಭಾಗ ೩, ಪು.೧೫೮, ೧೯೯೩.

೨೦. ಚೆನ್ನಣ್ಣ ವಾಲೀಕರ್, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ನುತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೧೩೧, ೨೦೦೧

೨೧. ಯು.ಆರ್.ಅನಂತಮೂರ್ತಿ, ಬೆತ್ತಲೆ ಪೂಜೆ ಯಾಕೆ ಕೂಡದು, ಪುಟ ೨೩, ೧೯೯೬

೨೨. ವೈ.ಸಿ.ಭಾನುಮತಿ, ಮಹಿಳಾ ಅಧ್ಯಯನ, ಉತ್ತರಾಯಣ ಸಂಚಿಕೆ, ಮಹಿಳಾ ಫಲವಂತಿಕೆ, ಪು.೨೮, ೨೦೦೦

೨೩. ಶ್ರೀಧರರಾವ್ ಪಿಸ್ಸೆ, ಕನ್ನಡ ದಾಸ ಸಾಹಿತ್ಯ ಮತ್ತು ಸಾಂಸ್ಕೃತಿಕ ಪಲ್ಲಟ, ಪು.೨೫೬, ೨೫೭, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ, ೨೦೦೬

೨೪. ಬ್ಲಾಕ್, ೧೯೫೦: ೧೩,ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು. ೫೪, ೫೫, ೧೯೯೩

೨೫. ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ ಪು.೭೩, ೧೯೯೩

೨೬. ಡಾ.ರಮೇಶ್ ಕೆ.ವಿ. ೧೯೭೮, ಪು.೬೯,ಉಲ್ಲೇಖ: ಚೆನ್ನಕ್ಕ ಎಲಿಗಾರ್, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೨೦೫, ೧೯೯೦

೨೭. ಹುಲ್, ದಕ್ಷಿಣ ಭಾರತದ ಶಾಸನಗಳು, ಸಂ.೧೧: ಭಾಗ-೧೧೧,ಉಲ್ಲೇಖ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ.ಚಿದಾನಂದ ಮೂರ್ತಿ, ಪು.೨೦೬, ೧೯೬೬

೨೮. ಎಫಿಗ್ರಾಫಿಯ ಕರ್ನಾಟಕ ೫ ಎ.ಕೆ.೧೦೫, ಕ್ರಿ.ಶ. ೧೧೩೯, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು. ೬೬, ೬೭, ೭೭, ೧೯೯೩

೨೯. ಚೆನ್ನಣ್ಣ ವಾಲೀಕರ್, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೧೭೧, ೨೦೦೧

೩೦. ಪೆನರ್ಝುರ: ೧೯೬೮: ೨೪೭, ಉಲ್ಲೇಖ: ಚೆನ್ನಣ್ಣ ವಾಲೀಕಾರ, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪುಟ ೮೩,೮೮, ೨೦೦೧

೩೧. ಬ್ಲಾಕ್‌ಮನ್ ಮತ್ತು ಜರ್ರೆಟ್: ೧೮೭೩, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೫೭, ೧೯೯೩

೩೨. ಎಲಿಯಟ್: ೧೮೬೭: ೨೮೩, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೫೭, ೧೯೯೩

೩೩. ವಾರ್ಡ್ ೧೮೧೫: ಸಂ-೧: ೩೨೭,ಉಲ್ಲೇಖ: ಡಾ.ಜೋಗನ್ ಶಂಕರ್ ದೇವದಾಸಿ ಸಂಪ್ರದಾಯ, ಪು. ೬೩, ೧೯೯೩

೩೪. ಫುಲ್ಲರ್: ೧೯೦೦: ೧೦೩, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪುಟ ೭೦, ೧೯೯೩

೩೫. ಫುಲ್ಲರ್, ೧೯೦೦- ೧೦೪, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು. ೭೧, ೧೯೯೩

೩೬. ಸಿ.ಎಫ್.ಹೋಲಿಸಿಯೂಲ್ ಮತ್ತು ಗಾರ್ಡಿನರ್ ೧೯೦೫ ಸಂ-೧೧ ೨೩೯, ಉಲ್ಲೇಖ: ಡಾ ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು. ೪೪, ೧೯೯೩

೩೭. ಡುಬಾಯ್ಸ್: ೧೯೦೬: ೫೮೫-೫೮೭: ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೭೫, ೭೬, ೧೯೯೩

೩೮. ಹ್ಯಾಮಿಲ್ಟನ್ ೧೯೦೭: ೨೦೭, ಉಲ್ಲೇಖ: ಡಾ.ಜೋಗನ್ ಶಂಕರ್,ದೇವದಾಸಿ ಸಂಪ್ರದಾಯ, ಪುಟ ೭೭, ೧೯೯೩

೩೯. ಶ್ರೀಧರರಾವ್ ಪಿಸ್ಸೆ, ಕನ್ನಡ ದಾಸಸಾಹಿತ್ಯ ಮತ್ತು ಸಾಂಸ್ಕೃತಿಕ ಪಲ್ಲಟ ಪು.೨೫೬, ಅಪ್ರಕಟಿತ ಪಿಎಚ್‌ಡಿ ಮಹಾಪ್ರಬಂಧ, ೨೦೦೬

೪೦. ಸರಸ್ವತಿ ನಾಣಯ್ಯ ೧೯೯೨ ಪು ೧೫೨, ಉಲ್ಲೇಖ: ಶ್ರೀಧರರಾವ್ ಪಿಸ್ಸೆ ಕನ್ನಡ ದಾಸಸಾಹಿತ್ಯ ಮತ್ತು ಸಾಂಸ್ಕೃತಿಕ ಪಲ್ಲಟ ಪು. ೨೫೬, ೨೦೦೬

೪೧. ಎಡ್ವರ್ಡ್ ೧೯೨೪: ೭೬, ಉಲ್ಲೇಖ: ಚೆನ್ನಣ್ಣ ವಾಲೀಕರ್, ಕರ್ನಾಟಕದ ದೇವದಾಸಿಯರ ಸಮಾಜೋ ಧಾರ್ಮಿಕ,

ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು. ೧೭೧, ೨೦೦೧

೪೨. ಎಫಿಗ್ರಾಫಿಯ ಕರ್ನಾಟಕ ಸಂಖ್ಯೆ ೯೭, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೮೨, ೧೯೯೩

೪೩. ಡಾ.ಕಮಲಾ ಹಮ್ಮಿಗೆ, ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ ಪು. ೮೮, ೧೯೯೮

೪೪. ಸಿದ್ದಣ್ಣ ಲಂಗೋಟಿ,೧೯೮೯, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೮೮, ೧೯೯೩

೪೫. ಅರ್ತಾಳ ೧೯೧೦ ೯೯, ಉಲ್ಲೇಖ: ಡಾ.ಜೋಗನ್ ಶಂಕರ ದೇವದಾಸಿ ಸಂಪ್ರದಾಯ, ಪು.೯೦, ೧೯೯೩

೪೬. ಅಮುಕ್ತ ಮೌಲ್ಯದ ಶ್ರೀ ಕೃಷ್ಣ ದೇವರಾಯ, ಕನ್ನಡಕ್ಕೆ ನಿರುಪಮಾ ಪು. ೩೩,೧೯೯೪

೪೭. ಜಿ.ಎಸ್.ದೀಕ್ಷಿತ್, ೧೯೯೭, ಪು.೮೦, ಉಲ್ಲೇಖ: ಅಮುಕ್ತ ಮೌಲ್ಯದ ಶ್ರೀಕೃಷ್ಣ ದೇವರಾಯ, ಕನ್ನಡಕ್ಕೆ ನಿರುಪಮಾ, ಪು.೧೭೧, ೧೯೯೪

೪೮. ನಾಗೇಗೌಡ, ಹೆಚ್.ಎಲ್. ಉಲ್ಲೇಖ: ವಸಂತಕುಮಾರ್, ಬಸ್ರೂರ್ ದೇವದಾಸಿ ಪದ್ಧತಿ, ಪು ೨೮, ಅಪ್ರಕಟಿತ ಎಂ ಫಿಲ್ ಪ್ರಬಂಧ, ೨೦೦೨

೪೯. ಆರ್.ಸಿವೆಲ್, ೧೯೮೨ ೨೪೧ ೨೪೨, ಉಲ್ಲೇಖ: ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು.೬೭, ೧೯೯೩

೫೦. ನಾಗೇಗೌಡ ಎಚ್.ಎಲ್. ಪ್ರವಾಸಿ ಕಂಡ ಇಂಡಿಯಾ ಪು ೨೬೦, ೧೯೬೬

೫೧. ಕೆ.ಜಿ.ವೆಂಕಟೇಶ ಜೋಯಿಸ್, ಉಲ್ಲೇಖ: ವಸಂತಕುಮಾರ್, ಎಂ.ಫಿಲ್, ಬಸ್ರೂರು ದೇವದಾಸಿ ಪದ್ಧತಿ, ಪು.೨೯, ೨೦೦೨

೫೨. ಕೃಷ್ಣರಾವ್, ಎಂ.ಎ.ಕೇಶವ ಭಟ್ ಎಂ. ಉಲ್ಲೇಖ: ವಸಂತಕುಮಾರ್, ಎಂ.ಫಿಲ್. ಬಸ್ರೂರು ದೇವದಾಸಿ ಪದ್ಧತಿ ಪು.೩೦, ೨೦೦೨

ಅಧ್ಯಾಯ ೪

## ಭಾರತೀಯ ಸಮಾಜ ಮತ್ತು ಸ್ತ್ರೀ

ೆ
೪. ೧ ಭಾರತೀಯ ಸಮಾಜದಲ್ಲಿ ಸ್ತ್ರೀ

೪. ೨ ಪುರುಷ ಪ್ರಧಾನ ವ್ಯವಸ್ಥೆ ಮತ್ತು ಅಸಮಾನತೆಯ ರಾಜಕಾರಣ

೪. ೩ ಧರ್ಮದ ಹಿನ್ನೆಲೆಯಲ್ಲಿ ಸ್ತ್ರೀ

೪. ೪ ಭಾರತೀಯ ಬುಡಕಟ್ಟು ಸ್ತ್ರೀ : ಪ್ರಾಚೀನ ಯುಗದಿಂದ ಆಧುನಿಕ ಯುಗದ ವರೆಗೆ

೪. ೫ ಬೌದ್ಧ ಮತ್ತು ಜೈನ ಧರ್ಮಗಳ ಕಾಲದಲ್ಲಿ ಸ್ತ್ರೀ

೪. ೬ ಮಧ್ಯಕಾಲೀನ ಬುಡಕಟ್ಟು ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು

೪. ೭ ಭಕ್ತಿ ಪಂಥ ಮತ್ತು ಸಮಾಜ ಸುಧಾರಕರ ಪಾತ್ರ

೪. ೮ ಆಧುನಿಕ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನ

೪. ೯ ಸ್ವಾತಂತ್ರ್ಯನಂತರ ಬುಡಕಟ್ಟು ಸ್ತ್ರೀಯರು

## ಭಾರತೀಯ ಸಮಾಜ ಮತ್ತು ಸ್ತ್ರೀ

### ಪೀಠಿಕೆ

ಮಾನವನ ಜೈವಿಕ ಅಂಶದ ಆಧಾರದ ಮೇಲೆ ಸ್ತ್ರೀಯರು ಮತ್ತು ಪುರುಷರು ಎಂಬ ಎರಡು ಸಮೂಹಗಳಾಗಿ ಗುರುತಿಸುತ್ತಾರೆ. ಇವು ಪ್ರಕೃತಿ ದತ್ತವಾಗಿ ಭಿನ್ನತೆಯಿಂದ ಕೂಡಿವೆ. ಈ ಭಿನ್ನತೆಯೇ ಮಾನವನ ಹುಟ್ಟು, ಸಂತತಿಯ ಉಳಿವು ಹಾಗೂ ಸಮಾಜದ ನಿರಂತರತೆಗೆ ಕಾರಣವಾಗಿದೆ. "ಸ್ತ್ರೀ ಪುರುಷರು ಭಿನ್ನರಾಗಿರುವುದು ಪ್ರಕೃತಿಯಲ್ಲಿನ ಒಂದು ಉದ್ದೇಶ ಪೂರ್ವಕ ಕ್ರಿಯೆಗೆ ಅನುಗುಣವಾಗಿ ಇಬ್ಬರ ದೈಹಿಕ ರಚನೆ, ಸ್ನಾಯುಬಲ, ಕೆಲ ಮಟ್ಟಿಗೆ ಮನೋಭಾವ ಎಲ್ಲದರಲ್ಲೂ ಅಂತರವಿರುವುದು ನಿಜ. ಆದರೆ ಅರ್ಥ ಮಾಡಿಕೊಳ್ಳಬೇಕಾದ ಸಂಗತಿ ಎಂದರೆ, ಈ ಇಬ್ಬರಲ್ಲಿ ಮೇಲು, ಕೀಳಿನ ಮಾತು ಇಲ್ಲವೇ ಇಲ್ಲ. ಏಕೆಂದರೆ ಈ ಇಬ್ಬರೂ ಸೇರಿಯೇ ಜೀವನ ಎಂಬುದು ಪರಿಪೂರ್ಣಗೊಳ್ಳುತ್ತದೆ"[1]. ಸುಖಮಯ ಮತ್ತು ಸುಂದರ ಜೀವನಕ್ಕೆ ಇವರಿಬ್ಬರೂ ಪರಸ್ಪರ ಪೂರಕವಾಗಿರುವುದು ಅವಶ್ಯಕ. ಸಮಾಜವೆಂಬ ರಥಕ್ಕೆ ಸ್ತ್ರೀಪುರುಷರಿಬ್ಬರೂ ಎರಡು ಗಾಲಿಗಳಿದ್ದಂತೆ. ಇವು ಸಮತೂಕ, ಸಮ ರಚನೆಯಿಂದ ಸಮತೋಲನವಾಗಿ ಸಾಗಬೇಕು. ಇವರಿಬ್ಬರು ದೇಹದ ಎರಡು ಕಣ್ಣುಗಳಂತೆ, ಒಂದು ನಾಣ್ಯದ ಎರಡು ಮುಖಗಳೋಪಾದಿಯಲ್ಲಿದ್ದು, ನ್ಯಾಯದ ತಕ್ಕಡಿಯಲ್ಲಿ ಇಬ್ಬರೂ ಸರಿಸಮಾನರು. ಅಂದರೆ ಹೆಣ್ಣಿಗೆ ಗಂಡಿನ ಅಗತ್ಯತೆ ಎಷ್ಟಿದೆಯೋ ಅಷ್ಟೇ ಗಂಡಿಗೆ ಹೆಣ್ಣಿನ ಅವಶ್ಯಕತೆ ಇದೆ.

ಸ್ತ್ರೀ ಪುರುಷರೀರ್ವರಲ್ಲಿ ಸಹಧರ್ಮ, ಸಹಯೋಗ, ಸಹಬಾಳ್ವೆ, ಅವಶ್ಯಕವಿದ್ದು, ಅನುಮೋದನೆ, ಪ್ರತಿಪಾದನೆ, ಪರಸ್ಪರ ಅವಲಂಬನೆ, ಸತ್ವಪೂರ್ಣ ಜೀವನಕ್ಕೆ ದಾರಿದೀಪ. ಪ್ರಕೃತಿ ಇಲ್ಲದೆ ಪುರುಷನಿಲ್ಲ, ಅದೇ ರೀತಿ ಪುರುಷನಿಲ್ಲದ ಪ್ರಕೃತಿ ಇಲ್ಲ. ಅರ್ಧನಾರೀಶ್ವರ ರೂಪದ ಈಶ್ವರನ ಸಂದೇಶ ಇಂದಿಗೂ ಪ್ರಸ್ತುತವಿದೆ. ಅರ್ಧನಾರೀಶ್ವರನಾದ ಈಶ್ವರನಿಗೆ ಮೂರು ಕಣ್ಣುಗಳು, ಒಂದು ಕಣ್ಣು ಗಂಡಾದರೆ ಇನ್ನೊಂದು ಕಣ್ಣು ಹೆಣ್ಣು. ಒಬ್ಬ ವ್ಯಕ್ತಿಯೊಳಗೆ ಗಂಡು, ಹೆಣ್ಣುಗಳೆರಡರ ಶಕ್ತಿಯು ಇರುತ್ತದೆ. ತಂದೆ ಮತ್ತು ತಾಯಿ ಈರ್ವರಿಂದಲೂ ಬಳುವಳಿಯಾಗಿ ವಂಶ ಮೂಲದೊಂದಿಗೆ ಬರುವ ಕುಡಿಯೇ ಮಗು. ಈ ಕುಡಿ ಈರ್ವರನ್ನು ಸಮಾನವಾಗಿ ಸ್ವೀಕರಿಸಿ, ಹಂಚಿಕೊಂಡು ಭೂಮಿಗೆ ಬಂದ ಜೀವ. ಇನ್ನು ಈ ಮೂರನೆಯ ಕಣ್ಣು, ಗಂಡು, ಹೆಣ್ಣುಗಳೆರಡಕ್ಕೂ ಯಾವುದೇ ಭೇದ ಭಾವವಿಲ್ಲದೆ ಅರ್ಥವತ್ತತೆ, ಬುದ್ಧಿ, ಅಂತಃಸ್ಫೂರ್ತಿ, ಜ್ಞಾನೋದಯಗಳನ್ನು ನೀಡುವಂತಹದು

ಆಗಿದೆ. ಶಿವ, ಶಕ್ತಿ, ಅವನು, ಅವಳು ಹಾಗೂ ಇಬ್ಬರೂ ಅಸ್ತಿತ್ವ, ಅಂತಸ್ತುಗಳಲ್ಲಿ ಸರಿಸಮಾನವಾಗಿದ್ದು, ಸೃಷ್ಟಿಕಾರ್ಯದಲ್ಲಿ ಸಮಪಾಲು ಹೊಂದಿರುತ್ತಾರೆ. ನಾವು ಈ ದಿಶೆಯಲ್ಲಿ ಯೋಚಿಸಿದಾಗ, ಅತ್ಯುಚ್ಚ ಆಧ್ಯಾತ್ಮಿಕ ಅನುಭವವಾದಾಗ ಅಲ್ಲಿ ಲಿಂಗ ಅಥವಾ ಅಂತಸ್ತುಗಳ ಅಂತರವಿರುವುದಿಲ್ಲ ಎಂಬುದು ಗೋಚರವಾಗುತ್ತದೆ.

ಅವರು ಒಡೆಯರೂ ಅಲ್ಲ, ಸ್ವತಂತ್ರರೂ ಅಲ್ಲ. ಪುರುಷ ಹಾಗೂ ಸ್ತ್ರೀಯರಿಬ್ಬರೂ ಪರಸ್ಪರ ಗುಲಾಮತೆಯಲ್ಲಿ ಸಮಾನರಾಗಿದ್ದಾರೆ. ಅವರವರ ಸಾಮರ್ಥ್ಯದ ವಿಷಯದಲ್ಲಿ ಇಬ್ಬರು ನಿರಂಕುಶ ಪ್ರಭುಗಳಾಗಿದ್ದಾರೆ. ಸ್ತ್ರೀಯು ಪುರುಷನಿಂದ ಸಾಮರ್ಥ್ಯ, ಆಧಾರ, ರಕ್ಷಣೆ, ಭದ್ರತೆ ಹಾಗೂ ತಾಯ್ತನದ ಸಂತೃಪ್ತಿಗಾಗಿ ಅವಲಂಬಿಸಿದರೆ, ಒಡೆತನ ಸಾಧಿಸುವಿಕೆ, ಲೈಂಗಿಕ ಸಂತೃಪ್ತಿ, ಕುಟುಂಬದ ಅಲ್ಪ ಐಷಾರಾಮ, ಆಸೆಗಳ ಪೂರೈಕೆ, ಅನುರಾಗ, ಅವಲಂಬನೆ ಇವುಗಳಿಗಾಗಿ ಪುರುಷನು ಸ್ತ್ರೀಯನ್ನು ಅವಲಂಬಿಸಿರುತ್ತಾನೆ. ಹೀಗೆ ಒಬ್ಬರಿಗೆ ಇನ್ನೊಬ್ಬರು ಬೇಕು. ಈ ಪರಸ್ಪರ ಅವಲಂಬನೆ ಕಡಿದು ಬಿದ್ದಾಗ ಅವರು ಸ್ವತಂತ್ರರಾಗುತ್ತಾರೆ. ಅಲ್ಲಿಯವರೆಗೂ ಸ್ತ್ರೀಯರಾಗಲಿ, ಪುರುಷರಾಗಲಿ, ಗುಲಾಮರೇ ಆಗಿದ್ದು ಈ ಉಚ್ಚ-ನೀಚ ಎಂಬ ಭೇದ ಕೇವಲ ಭ್ರಮೆಯಷ್ಟೇ. ಪುರುಷರಲ್ಲಿ ಒಂದಿಷ್ಟು ಭಾಗ ಸ್ತ್ರೀತನದಿಂದಲೂ, ಸ್ತ್ರೀಯರಲ್ಲಿ ಕೆಲವು ಪುರುಷ ಶಕ್ತಿಗಳೂ ತುಂಬಿ ಕೊಂಡಿರುತ್ತವೆ. ಭೌತಿಕ ಪಾತಳಿಯ ಕೆಳಗೆ ಮೂಲಭೂತವಾದ ಯಾವ ವ್ಯತ್ಯಾಸವೂ ಇಲ್ಲ. ಇಬ್ಬರೂ ಸಮಾನರು. ವಿಕಸಿತರು ಹಾಗೂ ಸಮಾನ ಅವಕಾಶ ಹೊಂದಿದ್ದಾರೆ.

**೪. ೧ ಭಾರತೀಯ ಸಮಾಜದಲ್ಲಿ ಸ್ತ್ರೀ**

ಸ್ತ್ರೀ ಪುರುಷರ ಮಧ್ಯ ಇಷ್ಟೆಲ್ಲಾ ಅವಶ್ಯಕತೆ, ಅನಿವಾರ್ಯತೆ, ಸಮಾನತೆ ಇದ್ದರೂ ವಾಸ್ತವಿಕವಾಗಿ ನೋಡಿದಾಗ, ಕೆಲ ಅನುಭವಗಳು, ಸತ್ಯಸಂಗತಿಗಳು, ಸಂಶೋಧನೆಗಳ ಆಧಾರದ ಮೇಲೆ ಸ್ತ್ರೀಯೇ ಪುರುಷನಿಗಿಂತ ಹೆಚ್ಚು ಶ್ರೇಷ್ಠತೆ ಹೊಂದಿರುವುದನ್ನು ನೋಡಬಹುದಾಗಿದೆ. ಈ ಉದ್ದೇಶಕ್ಕೆ ಪುಷ್ಠಿನೀಡುವ ಕೆಲ ಹೇಳಿಕೆ ನಿದರ್ಶನಗಳು, ಅನುಭವಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ದೇವರ ಸೃಷ್ಟಿಯಲ್ಲಿ ಸ್ತ್ರೀ ಒಂದು ಅಸಂಗತ ಪವಾಡ ಎಂದು ಆಂಗ್ಲ ಕವಿಯೊಬ್ಬರು ನಾರೀತ್ವದ ಮಹತ್ವ ಸಾರಿದ್ದಾರೆ. ಸ್ತ್ರೀಯೇ ಇಲ್ಲಿನ ಮುಖ್ಯ ಜೀವನಾಡಿ. ಅವಳಿಂದಲೇ ಉಳಿವು ಅವಳಿಂದಲೇ ಅಳಿವು. ಅವಳು ಪುರಾಣ ಕಲ್ಪನೆಯ ಬ್ರಹ್ಮ, ವಿಷ್ಣು, ಈಶ್ವರ ಈ ಮೂರು ದೈವಿಕ ಶಕ್ತಿಯನ್ನು ಒಳಗೊಂಡ ನೈಜ ದೇವತೆ. ಹೆಣ್ಣೆ ಇಲ್ಲದಿದ್ದರೆ, ಈ ಜಗತ್ತು ಇಷ್ಟು ಶಾಂತಿಯುತವಾಗಿ, ಇಷ್ಟು ಸಹಜವಾಗಿ ಇರುತ್ತಿರಲಿಲ್ಲ. ಇದನ್ನರಿತ ದಾಸರು ಹೀಗೆಂದಿದ್ದಾರೆ.

ಆದದ್ದೆಲ್ಲ ಒಳಿತೇ ಆಯಿತು
"ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು॥
ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ
ಗೋಪಾಳ ಬುಟ್ಟಿ ಹಿಡಿಯುವುದಕ್ಕೆ

ಭೂಪತಿಯೆಂದು ಗರ್ವಿಸುತ್ತಿದ್ದೆ

ಆ ಪತ್ನಿಕುಲ ಸಾವಿರವಾಗಲಿ

ಗೋಪಾಳ ಬುಟ್ಟಿ ಹಿಡಿಸಿದಳಯ್ಯ" ಎಂದು ಹಾಡಿ ಹೊಗಳಿದ್ದಾರೆ. ಹಾಗೆ,

ಓಶೋ ರಜನೀಶ್‌ರವರ ಹೇಳಿಕೆಯಂತೆ, "ಮೂಲತಃ ಹೆಣ್ಣು ಅದ್ಭುತ ಗುಣಗಳ ಗಣಿ, ಪ್ರೀತಿ ಮಮತೆಯಲ್ಲಿ ಆಕೆಗೆ ಗಂಡಸು ಸಾಟಿಯೆ ಇಲ್ಲ. ಇಲ್ಲವೇ ಇಲ್ಲ, ಪ್ರೀತಿಯಲ್ಲಿ ಹೆಂಗಸರನ್ನು ಮೀರಿಸುವ ಗಂಡಸು ಇಲ್ಲ. ಭಾರತದ ಚರಿತ್ರೆ ತೆಗೆದು ನೋಡಿ, ಗಂಡಿಗಾಗಿ ಪ್ರಾಣತೆತ್ತ ಲಕ್ಷ ಲಕ್ಷ ಹೆಂಗಸರು ಸಿಗುತ್ತಾರೆ. ಹಾಗೆ ಈಕೆ ಶಕ್ತಿಯ ಗಣಿಯಾಗಿದ್ದಾಳೆ. ಗರ್ಭದೊಳಗೆ ಒಂಬತ್ತು ತಿಂಗಳು ಮಗುವನ್ನು ಇಟ್ಟುಕೊಳ್ಳಲು ಅಪರಿಮಿತ ಅಗಣಿತ ಪ್ರೀತಿ, ತಾಕತ್ತು, ಶಕ್ತಿ, ಸೈರಣೆ ಬೇಕು. ಹೆಣ್ಣಿನ ಹೆಚ್ಚುಗಾರಿಕೆ ಮೆರೆಯಲು ಇದೊಂದೇ ಸಾಕು. ಮತ್ತೊಂದು ಜೀವಕ್ಕೆ ಉಸಿರು ಕೊಡುವುದು ಆತ್ಮಕ್ಕೆ ದೇಹ ಕೊಡುವುದು, ಮಿದುಳು ಮತ್ತು ಮನಸ್ಸನ್ನು ದಯಪಾಲಿಸುವುದು ಗಂಡಸಿನ ಊಹೆಗೂ ಮೀರಿದ ಮಾತು. ಇದನ್ನು ಹೆಂಗಸರು ಮಾತ್ರ ಮಾಡಬಲ್ಲರು. ಜಗತ್ತಿನಲ್ಲಿ ಇದರಂಥ ಕಠಿಣ ಕೆಲಸ ಮತ್ತೊಂದಿಲ್ಲ ಒಂದು ಜೀವ ಮತ್ತೊಂದು ಜೀವವನ್ನು ಸೃಷ್ಟಿಸಿ, ಅದನ್ನು ಹೊತ್ತು ಹೆರುವುದು, ಕೆಲಕಾಲ ಪೋಷಿಸುವುದು ಅತ್ಯಂತ ಕಠಿಣತಮ ತಪಸ್ಸು. ಪ್ರೀತಿ, ನಂಬಿಕೆ, ಸಹನೆ, ಪ್ರಾಮಾಣಿಕತೆ, ಸಹೃದಯತೆ, ದಯಾಮಯತೆ, ಹೆಣ್ಣಿನ ಅಸಲಿ ಗುಣ ವೈಶಿಷ್ಟ್ಯಗಳು. ಇವುಗಳ ಮುಂದೆ ಗಂಡಸಿನ ಗುಣಗಳು ಅದ್ಯಾವ ಮರದ ತೊಪ್ಪಲು? ಹೆಂಗಸಿನ ಸಾಮರ್ಥ್ಯದ ಮುಂದೆ ಅವನದು ಏನೇನೂ ಅಲ್ಲ. ಅದಕ್ಕೆ ಒಂದು ಹೆರಿಗೆ ನೋವು ಸಾಕು"[೨]. ಎಂದಿದ್ದಾರೆ.

ಸ್ತ್ರೀ ಪುರುಷರಿಗಿಂತ ಹೆಚ್ಚಿನ ಮನೋ ಸಾಮರ್ಥ್ಯ ಹೊಂದಿದ್ದಾಳೆ ಎನ್ನುವುದನ್ನು ಮನೋವಿಜ್ಞಾನ ಸಾಬೀತು ಮಾಡಿದೆ. ವಿಶಿಷ್ಟ ತಾಳ್ಮೆ, ಜಾಣ್ಮೆ, ಸಹಿಷ್ಣುತೆ, ದೈಹಿಕ ದಣಿವನ್ನು ಗೌಣವಾಗಿಸಿ ಮುನ್ನಡೆಯುವ ದಿಟ್ಟತನ ಅವಳಿಗಿದೆ. ಆದ್ದರಿಂದ ಗಾಂಧಿಜೀಯವರು ಸ್ತ್ರೀಯಲ್ಲಿ ಸುಪ್ತವಾದ ಅದ್ಭುತ ಗುಣ ಇದೆ ಎಂದಿದ್ದಾರೆ. ಹೆಣ್ಣು ಜನ್ಮತಾ ಕ್ರಿಯಾಶೀಲ ವ್ಯಕ್ತಿತ್ವ ಹೊಂದಿದ್ದಾಳೆ. ಸಮಾಜದಲ್ಲಿ ಪುರುಷರಿಗಿಂತ ಹೆಚ್ಚು ಘನತೆ ವೆತ್ತವಳಾಗಿ, ತ್ಯಾಗ, ಮೌಲ್ಯ, ವೇದನಾನುಭವ, ನಮ್ರತೆ, ನಂಬಿಕೆ, ಜ್ಞಾನಗಳಿಂದ ಹೆಚ್ಚಿನವಳಾಗಿದ್ದಾಳೆ. ಸರ್ವಜ್ಞನು ಹೆಣ್ಣಿನಿಂದಲೇ ಇಹವು, ಹೆಣ್ಣಿನಿಂದಲೇ ಪರವು, ಹೆಣ್ಣಿನಿಂದಲೇ ಸಕಲ ಸಂಪದವು ಎಂದು ಕೊಂಡಾಡಿದ್ದಾನೆ. ಸೋಮೇಶ್ವರ ಶತಕದಲ್ಲಿ ಕವಿ ರತುನದೊಳ್ ಸ್ತ್ರೀರತ್ನವೇ ವೆಗ್ಗಳಂ ಎಂದಿದ್ದಾನೆ. ನವರತ್ನಗಳಾದ ಹವಳ, ಮುತ್ತು, ಮಾಣಿಕ್ಯ, ವಜ್ರ, ವೈಡೂರ್ಯ, ಪುಷ್ಯರಾಗ, ನೀಲ, ಮರಕಡ, ಗೋಮೇದಿಕ ಎಂಬುದನ್ನೆಲ್ಲಾ ಮೀರಿದವಳು ಈ ಸ್ತ್ರೀ ಎಂದು ಮಾರ್ಮಿಕವಾಗಿ ವಿವರಿಸಿದ್ದಾನೆ.

ಸೊನ್ನಲಿಗೆಯ ಸಿದ್ಧರಾಮ ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ್ದ ಮಲ್ಲಿಕಾರ್ಜುನ ಎಂದಿದ್ದಾನೆ. ಈ ಅಭಿಪ್ರಾಯದ ಶರಣರ ವಾಣಿ ಹೆಣ್ಣಿನ ವ್ಯಕ್ತಿತಕ್ಕೆ ಘನತೆ ಗೌರವ ತಂದುಕೊಡುವುದು. ಪುರುಷರು ಸಮಾಜದ ಅಸುರ ಶಕ್ತಿಗಳನ್ನು ತಡೆಯಲಾಗದ ಸಂದರ್ಭಗಳಲ್ಲಿ ಸ್ತ್ರೀಶಕ್ತಿ ಅದನ್ನು ಸಮರ್ಥವಾಗಿ ಮಣಿಸಿದ ಉದಾಹರಣೆಗಳಿವೆ. ಹಾಗೆಯೇ ಪುರುಷರಲ್ಲಿನ ದುಷ್ಟ ಗುಣಗಳನ್ನು ನಾಶಗೊಳಿಸುವ ಶಕ್ತಿಸ್ವರೂಪಿಣಿ ಎಂದು ಕರೆದು ಸ್ತ್ರೀ ಶಕ್ತಿ ನಿಶಕ್ತಿಯಲ್ಲ ಅದು ಮಹಾನ್ ಶಕ್ತಿ ಎನ್ನಲಾಗಿದೆ.

ತಾಯಿಯ ಆಶೀರ್ವಾದ, ಸಹ ಧರ್ಮಿಣಿಯ ಒಲವು ಗಂಡಿನ ಅಭ್ಯುದಯಕ್ಕೆ ಕಾರಣ. ಈ ಎರಡನ್ನು ಕಳೆದುಕೊಂಡ ವ್ಯಕ್ತಿಯ ಜೀವನ ಶೂನ್ಯ. ತಾಯಿ ಪೋಷಿಸುವಳು, ಪಾಲಿಸುವಳು, ಪ್ರೀತಿಸುವವಳು, ತಿದ್ದುವವಳು, ಪ್ರೇಮಮಯಿ ಭಾವ ಸಂಪತ್ತು ಸಮೃದ್ಧವಾಗಿ ಹೊರ ಹೊಮ್ಮುವುದು ತಾಯಿಯ ಅವತಾರದಲ್ಲಿ. ಆದ್ದರಿಂದ ತಂದೆಗಿಂತ ತಾಯಿ ಸಾವಿರ ಪಾಲು ಪೂಜ್ಯನೀಯಳು. ಇಂತಹ ತಾಯಿಯ ಪ್ರೀತಿ, ವಾತ್ಸಲ್ಯ, ಮೋಹಗಳಿಂದ ವಂಚಿತರಾದ ಅದೆಷ್ಟೋ ಮಕ್ಕಳು ಬಾಲಾಪರಾಧಕ್ಕೆ ಕಾರಣರಾಗಿದ್ದಾರೆಂದು ಮನೋವಿಜ್ಞಾನಿಗಳು ಹೇಳಿದ್ದಾರೆ.

ಪುರುಷರು ಸ್ತ್ರೀಯೋನಿಜನ್ಯರಾಗಿ, ಆಕೆಯ ದೇಹದ ಸಾರಭೂತರಾಗಿದ್ದು, ಅವರನ್ನು ಹೊತ್ತು ಹೆತ್ತು ಬೆಳೆಸುವ ಹೆಣ್ಣು, ಅವರುಗಳ ವ್ಯಕ್ತಿತ್ವ ರೂಪಿಸುವಲ್ಲಿ ಮೊದಲ ಪಾತ್ರ ವಹಿಸಿ, ತನ್ನ ಕರುಳ ಕುಡಿಗಾಗಿ ತನ್ನ ಸರ್ವಸ್ವವನ್ನು ತ್ಯಾಗ ಮಾಡುವಳು. ಸಂಚಿಹೊನ್ನಮ್ಮ, ಹೆಣ್ಣಲ್ಲವೇ ತಮ್ಮನ್ನೆಲ್ಲ ಪೊರೆದವಳು ಎಂದಿದ್ದಾಳೆ. ಇದರಿಂದ ಸ್ತ್ರೀಯನ್ನು ಮಾತೃದೇವೋಭವ ಎಂದು ಅಗ್ರಸ್ಥಾನವನ್ನು ಕೊಡಲಾಗಿದೆ. ಹಾಗೆ ಮೊದಲ ಗುರು ಎಂದು ಪೂಜ್ಯನೀಯ, ಗೌರವ ಸ್ಥಾನ ನೀಡಲಾಗಿದೆ. ಈಗಿನ ಮಕ್ಕಳು ಮತ್ತು ತರುಣರು ನಮ್ಮ ನಾಳಿನ ಸತ್ಪ್ರಜೆಗಳು ಅವರ ಚಾರಿತ್ರ್ಯದ ಬೆಳವಣಿಗೆಗೆ ಈಗಿನಿಂದಲೇ ಆಗಬೇಕಾದುದು ತೀರಾ ಅವಶ್ಯಕ, ಇದರಲ್ಲಿ ಮಹಿಳೆಯರದು ಮುಖ್ಯ ಪಾತ್ರ. ಮಹಿಳೆ ತನ್ನ ಮಕ್ಕಳಿಗೆ ತಾಯಿ, ಮಾರ್ಗದರ್ಶಿ ಮತ್ತು ತತ್ವಜ್ಞಾನಿ, ಅವಳು ನೀತಿಮತ್ತೆಗಳನ್ನು ಕಲಿಸಿ, ಮಕ್ಕಳ ಮನಸ್ಸನ್ನು ಸರಿಯಾಗಿ ನಿರ್ವಹಿಸಬಹುದು. ಪ್ರತಿ ಯಶಸ್ವಿ ಪುರುಷನ ಜೊತೆಯಲ್ಲಿ ಓರ್ವ ಮಹಿಳೆಯ ಆಶೀರ್ವಾದ, ಮಾರ್ಗದರ್ಶನ, ಸಹಾಯ, ಸಹಕಾರ ಇರುತ್ತದೆ. ಆ ಹೆಣ್ಣು ತಾಯಿ, ಸಹೋದರಿ, ಪತ್ನಿ, ಅಥವಾ ಸ್ನೇಹಿತೆಯಾಗಿರಬಹುದು. ಹೆಣ್ಣು ಕೃಷಿಯನ್ನು ಕಂಡುಹಿಡಿದ ಮೊದಲಿಗರು ಮತ್ತು ಆಹಾರೋತ್ಪಾದನೆಯ ಅನ್ವೇಷಕಿ ಎಂಬ ವಾದವಿದೆ.

ಸ್ತ್ರೀಯರು ದೈಹಿಕವಾಗಿ ದುರ್ಬಲರೇನಲ್ಲ. ಹಿಂದೆ ಬೇಟೆಯಾಡಿ, ಕುಟುಂಬ ಸಾಕುತ್ತಿದ್ದಳು. ಯುದ್ಧ ಹೋರಾಟಗಳಲ್ಲಿ ಭಾಗವಹಿಸುತ್ತಿದ್ದಳೆನ್ನುವುದಕ್ಕೆ ನಿದರ್ಶನಗಳಿವೆ. ಬಲೆ ಬೀಸಿ ಬೇಟೆಯಾಡುವ ಗುಂಪು ಬೇಟೆಯ ವಿಧಾನದಲ್ಲಿ ಬಳಸುತ್ತಿದ್ದಿರಬಹುದಾದ ಬಲೆಯಂತಹುದೊಂದರ ಕುರುಹುಗಳನ್ನು 'ಓಲ್ಗಾಸಾಫರ್' ಎಂಬಾಕೆ ಗುರುತಿಸಿ ಇದನ್ನು ವಿವರಿಸಿದ್ದಾಳೆ. ಬಲೆಬೀಸಿ ಬೇಟೆಯಾಡುವ ಗುಂಪು ಕ್ರಿಯೆಯಲ್ಲಿ ಗಂಡಸಿನ ಶೌರ್ಯ ಮಾತ್ರ ಇರುತ್ತಿರಲಿಲ್ಲ. ಅಲ್ಲಿ ಹೆಂಗಸು ಮಕ್ಕಳು, ಎಲ್ಲರೂ ಪ್ರಧಾನ ಪಾತ್ರವನ್ನು ವಹಿಸುತ್ತಿದ್ದರು. ಹೆಂಗಸು ತಾನೊಬ್ಬಳೇ ಬೇಟೆಯಾಡಲು ಹೋಗುತ್ತಿದ್ದ ಸಂದರ್ಭಗಳಿಗೂ ಸಾಕ್ಷಿಗಳಿವೆ.

ಬೇಟೆಯ ಶೌರ್ಯವನ್ನು ತೋರಿ ಗಂಡಸು ತರುತ್ತಿದ್ದ ಮಾಂಸಹಾರ ಸಮುದಾಯದ ಹೊಟ್ಟೆಗೆ ಸಾಕಾಗುವಷ್ಟೇನೂ ಇರುತ್ತಿರಲಿಲ್ಲ. ಮಾನವ ಸಂತತಿಗೆ ತುತ್ತು ಕೊಟ್ಟು ಸಂಗೋಪನ ಮಾಡಿದವಳು ತಾಯಿಯೇ. ಸ್ವಂತ ರಕ್ಷಣೆಯ ಮಾತು ಬಂದರೆ ಗಂಡಿಗಿಂತಲೂ ಹೆಣ್ಣೆ ಹೆಚ್ಚು ಸ್ವಾವಲಂಬಿಯಾಗಿದ್ದಳು. ಈ ಕಾರ್ಯಗಳ ಜೊತೆಗೆ ಮಗುವಿಗೆ ಮೊಲೆಯುಣಿಸುವ ಕ್ರಿಯೆ ಸರಳವಾದುದಲ್ಲ. ಈ ಕ್ರಿಯೆಗೆ ಅವಳು ಕನಿಷ್ಟ ದಿನವೊಂದಕ್ಕೆ ಐದುನೂರು ಕ್ಯಾಲರಿಗಳನ್ನು ವ್ಯಯ ಮಾಡಬೇಕು. ಹೆಚ್ಚು ಕಡಿಮೆ ೮ ಕಿ.ಮಿ.ಗಳಷ್ಟು ನಡಿಗೆಗೆ ಬೇಕಾಗುವ ಶಕ್ತಿ ಅದು.

ನಮ್ಮ ಸಂಸ್ಕೃತಿಯ ಮಾನಬಿಂದುವಾದ ಸ್ತ್ರೀಯನ್ನು ಸಿರಿ, ಸಂಪತ್ತು, ವಿದ್ಯೆಗಳ ದೇವತೆಗಳನ್ನು ಸ್ತ್ರೀಗೆ ಹೋಲಿಸಿ 'ಲಕ್ಷ್ಮಿ', 'ಸರಸ್ವತಿ' ಎಂದು ಕರೆಯಲಾಗಿದ್ದು, ಪ್ರಕೃತಿಯನ್ನು 'ನಿಸರ್ಗದೇವಿ'. ಕಾಡನ್ನು 'ವನದೇವಿ' ಎಂದು ಹೆಣ್ಣಿನ ಹೆಸರಿನಲ್ಲಿಯೇ ಕರೆಯಲಾಗಿದೆ. ಸ್ತ್ರೀಯ ಹೋಲಿಕೆಯಲ್ಲಿಯೇ 'ಭಾರತ ಮಾತೆ', 'ಕನ್ನಡ ತಾಯಿ', 'ಮಾತೃಭೂಮಿ', 'ಮಾತೃಭಾಷೆ' ಎಂದು ಸ್ತ್ರೀಯನ್ನು ಅಧಿದೇವತೆಯಾಗಿ ಹಿರಿಯ ಪಾತ್ರ ಕೊಡಲಾಗಿದೆ. ಇರುವೆಯ ಶಕ್ತಿ, ಕೋಳಿಯ ಶೌರ್ಯ, ಮತ್ತು ಹೆಣ್ಣಿನ ಧೈರ್ಯ ಈ ಮೂರು ಪ್ರಶ್ನಾತೀತ... ಎಂಬ ಗಾದೆಯೂ ಇದೆ.

ಹಾಗೆಯೇ ಸ್ತ್ರೀಯನ್ನು ಪ್ರಕೃತಿಯಲ್ಲಿ ಹರಿಯುವ ಜಲಧಾರೆ ನೀಡುವ ಪುಣ್ಯ, ಪವಿತ್ರ ನದಿಗಳಿಗೆ ಹೋಲಿಸಿ 'ಗಂಗೆ' ಎಂದು ಸ್ತ್ರೀಯಾಗಿ ಪರಿಗಣಿಸಿದ್ದಾರೆ. ಕಾರಣ ನದಿ ತನ್ನೊಡಲಿನಲ್ಲಿ ಕಲ್ಲು, ಮುಳ್ಳು, ಕೆಸರು, ಉಸುಕು, ಉಬ್ಬು, ತಗ್ಗು, ಏನೆಲ್ಲಾ ಹೊಂದಿದ್ದರೂ, ಅವುಗಳಾವುವನ್ನೂ ಹೊರಗೆ ತೋರ್ಪಡಿಸಿಕೊಳ್ಳದೇ ಹೊರಗೆ ವಿಶಾಲವಾಗಿ ಕಂಗೊಳಿಸುತ್ತದೆ. ಸ್ತ್ರೀಯೂ ಹಾಗೆ, ತನ್ನ ಕುಟುಂಬದಲ್ಲಿನ ಕಷ್ಟ, ನಷ್ಟ, ದುಃಖ ದುಮ್ಮಾನ, ನೋವು, ನಲಿವು, ಸುಖ ಎಲ್ಲವನ್ನೂ ನುಂಗಿಕೊಂಡು ಅವುಗಳಿಂದ ಒಳಗೊಳಗೆ ಕೊರಗಿ ಸೊರಗುತ್ತಿದ್ದರೂ ಹೊರಗೆ ಸುಖವಾಗಿದ್ದೇನೆಂದು ತೋರ್ಪಡಿಸಿಕೊಳ್ಳುವ ಗುಣ ಹೊಂದಿದ್ದಾಳೆ. ಪ್ರತಿ ಕುಟುಂಬವನ್ನು ಬೆಳಗುವ ಜ್ಯೋತಿಯಾಗಿ, ಆ ಮೂಲಕ ಇಡೀ ಜಗತ್ತನ್ನೇ ಜಗಮಗಿಸುತ್ತಾಳೆ. ಇದರಿಂದ ಸ್ತ್ರೀಯನ್ನು ಜಗತ್ತಿನ ಪ್ರಬಲ, ಸಮರ್ಥ ಶಕ್ತಿ ಎನ್ನುವರು. ಇಲ್ಲದಿದ್ದರೆ ಪ್ರತಿಯೊಂದು ಕುಟುಂಬವು ಕುರುಕ್ಷೇತ್ರವಾಗಿ ನಿತ್ಯ ರಣರಂಗವಾಗಿ ಕುಟುಂಬದ ಸಾಮರಸ್ಯ ಒಡೆದು ಕೌಟುಂಬಿಕ ಜೀವನ ತತ್ತರಿಸುತ್ತಿತ್ತು. ಇದನ್ನರಿತೇ ಕುವೆಂಪುರವರು ಸ್ತ್ರೀಯರನ್ನು ಮನೆ, ಮನೆಯ ತಪಸ್ವಿನಿಯರು ಎಂದಿದ್ದಾರೆ. ಕಷ್ಟಸಹಿಷ್ಣತೆ, ಆತ್ಮಸಂಯಮ, ಕ್ಷಮಾಶೀಲಳಾಗಿ, ಸುಖಸಂಸಾರಕ್ಕೆ ದಾರಿಯಾಗಿ, ನಾರಿ ಸ್ವರ್ಗಕ್ಕೆ ದಾರಿ ಎನ್ನುವಂತೆ "ಪುರುಷನೇ ಜಾಣನೇನಲ್ಲ ಎಲ್ಲಾ ಕಾಲದೊಳಗೆ ಹೆಣ್ಣು ಜಾಣೆಯಾಗಿರುತ್ತಾಳೆ. ತುಸು ವೇಗದೊಳಗೆ ಗಂಡೇ ವಿವೇಕಿಯೇನಲ್ಲ. ಎಲ್ಲಾ ಕಾಲಗಳಲ್ಲಿ ಹೆಣ್ಣು ಹಾಗೆನಿಸುವಳು. ಕ್ಷಣ ಕಾಲ ಚಿಂತಿಸಿದಲ್ಲಿ" ಎಂದು ಮಲ್ಲಿಕಾ ಘಂಟಿಯವರು ಸ್ತ್ರೀಯ ಸಾಮರ್ಥ್ಯದ ಬಗ್ಗೆ ಹೇಳಿದ್ದಾರೆ. ಮಾಟ, ಮಂತ್ರದ ಮೂಲಕರ್ತೃ, ವಿಜ್ಞಾನದ ಜನನಿ, ನಿಸ್ಸಂಶಯವಾಗಿ ಸ್ತ್ರೀಯೇ ಆಗಿದ್ದಾಳೆ. ಕೃಷಿ, ಮಾಟ, ಮಂತ್ರ, ವಿಜ್ಞಾನ ಇವುಗಳ ಮೂಲ ಸಂಶೋಧಕಳು ಮಹಿಳೆಯೇ ಆಗಿದ್ದಾಳೆ.

ಸ್ವಾಮಿ ವಿವೇಕಾನಂದರು 'ನಾ ಗೃಹಂ ಗೃಹಂ ಮುಚ್ಛತೆ, ಗೃಹಿಣಿ ಗೃಹಂ ಮುಚ್ಛತೆ' ಎಂದಿದ್ದು ಮನೆಯಲ್ಲಿ ಮೊದಲೇ ಎದ್ದು ದಿನವಿಡೀ ದುಡಿದು ಕೊನೆಯಲ್ಲಿ ಮಲಗುವವಳಾಗಿದ್ದಾಳೆ. ನಮ್ಮ ನಮ್ಮ ಮನೆ, ಊರು, ದೇಶ, ಸರಿಯಾಗಿದ್ದರೆ, ನಮ್ಮ ನಡುಮನೆಯಲ್ಲಿ ಪ್ರೀತಿ ಶಾಂತಿ, ನೆಲೆಸಿದ್ದರೆ, ಅದಕ್ಕೆ ಕಾರಣ ನಿತ್ಯ ತನ್ನ ಗಂಡ, ಮಗ, ಮಗಳು, ಎಂದು ಕಾತರಿಸುವ ಅವರ ಪ್ರೀತಿ ಏಳ್ಗೆಯಲ್ಲಿ ಮೈಮರೆಯುವ ಅವರ ಸುಖದಲ್ಲೇ ತನ್ನ ಸುಖ ಕಾಣುವ ತಾನು ಅನ್ನ, ನೀರು, ಉಂಡು ಅಥವಾ ಉಪವಾಸವಿದ್ದು ಅವರ ಹೊಟ್ಟೆ ಹೊರೆಯುವ ಆ ಮಹಾತಾಯಿಯೇ ಕಾರಣ. ಆಕೆಯ ಮಡಿಲು ಬೆಚ್ಚಗಿರಲಿ ಎಂದು ಓಶೋ ರಜನೀಶರು ಹೇಳಿದ್ದಾರೆ. ತನ್ನ ಬದುಕಿನ ಅಮೂಲ್ಯ ಕ್ಷಣಗಳನ್ನು ತನ್ನ ಸಂಸಾರಕ್ಕಾಗಿ ಮೇಣದ ಬತ್ತಿಯಂತೆ ಉರಿದು ಅದೃಷ್ಯವಾಗುವಳು. ಈ ಕಾರಣಕ್ಕೆ ಹೇಳುವರು ಪುರುಷನೊಬ್ಬ ಕೆಟ್ಟರೆ, ಒಬ್ಬ ವ್ಯಕ್ತಿ ಕೆಟ್ಟಂತೆ. ಹೆಣ್ಣೊಬ್ಬಳು ಕೆಟ್ಟರೆ ಇಡೀ ಕುಟುಂಬವೇ

ಕೆಟ್ಟಂತೆ. ಹಾಗೆಯೇ ಗಂಡೊಂದು ಕಲಿತರೆ, ಒಬ್ಬ ವ್ಯಕ್ತಿ ಕಲಿತಂತೆ. ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ, ಹೀಗೆ ಕುಟುಂಬಕ್ಕೆ ಆಧಾರ ಸ್ಥಂಬವಾಗಿ ಮತ್ತು ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗುವ ಮೂಲಕ ಸ್ವಾಸ್ಥ್ಯ ಸಮಾಜಕ್ಕೂ ಕಾರಣವಾಗಿದ್ದಾಳೆ.

ಹೆಣ್ಣು ಜನ್ಮತಾ ಕ್ರಿಯಾ ಶೀಲ ವ್ಯಕ್ತಿತ್ವವನ್ನು ಹೊಂದಿದ್ದು ಉಳಿತಾಯದ ರೂವಾರಿಯಾಗಿದ್ದಾಳೆ. ಸಮಾಜದಲ್ಲಿ ಪುರುಷರಿಗಿಂತ ಹೆಚ್ಚು ಘನ ವೆತ್ತವಳೂ, ತ್ಯಾಗ, ಮೌಲ್ಯ, ವೇದನಾನುಭವ, ನಮ್ರತೆ, ನಂಬಿಕೆ, ಜ್ಞಾನಗಳಿಂದ ಹೆಚ್ಚಿನವಳಾಗಿದ್ದಾಳೆ. ಪರಿಣಾಮವಾಗಿ ಆಕೆ ಪ್ರವೇಶಿಸುವ ಪ್ರತಿ ಕ್ಷೇತ್ರಕ್ಕೂ ಸಮಗ್ರತೆ ಪರಿಪೂರ್ಣತೆ ಬರುತ್ತದೆ. ಈ ಕಾರಣಕ್ಕಾಗಿಯೇ ಮನಃಶಾಸ್ತ್ರಜ್ಞರು ಹೀಗೆ ಹೇಳಿದ್ದಾರೆ. ಸ್ತ್ರೀಯರಲ್ಲಿ ಜ್ಞಾಪಕ ಶಕ್ತಿ ಅಧಿಕವಿರುತ್ತದೆಂದು ಹಾಗೆಯೇ ಬುದ್ಧಿಶಕ್ತಿಯೂ ಅವರಲ್ಲಿ ಅಧಿಕವಿರುತ್ತದೆಂದು, ದೃಢತೆ ಮತ್ತು ಕ್ಷಮಾಗುಣಗಳಿಂದಾಗಿ ಸ್ತ್ರೀಯರು ಹೆಚ್ಚು ಕಷ್ಟ ಸಹಿಷ್ಣುಗಳೂ ಕ್ರಿಯಾಶೀಲರೂ ಆಗಿರುತ್ತಾರೆ ಎಂದಿದ್ದಾರೆ.

"ಸ್ತ್ರೀಯನ್ನು ಚಂಡಿ, ಮಾರಿ, ಕಾಳಿ ದುರ್ಗಿ, ಚಾಮುಂಡಿ, ಆದಿಶಕ್ತಿ, ಮಹಾಶಕ್ತಿಯ ಕೇಂದ್ರದ ಮೂಲ. ಸೃಷ್ಟಿಯ ನಿಗೂಢತೆಯನ್ನು ಪ್ರತಿನಿಧಿಸುವ ಈಕೆಯನ್ನು ರಾಮಚಂದ್ರರಾವ್ ನೀಡಿರುವ ವಿವರಣೆ ಹೀಗಿದೆ. ತಲೆಯ ಮೇಲೆ ಹಾವಿನ ಸುರಳಿ, ಬಿರಿಗಣ್ಣುಗಳು, ಕೈಯಲ್ಲಿ ಕತ್ತಿ, ಈಟಿ, ಭರ್ಚಿ, ಕಡಿದ ತಲೆ, ನಡುವಿಗೆ ರುಂಡಗಳ ಮಾಲೆ, ವಾಹನಕ್ಕೆ ಸಿಂಹ ಅಥವಾ ಹುಲಿ, ಪುರುಷನ ಅತಿಕ್ರಮಣತೆಯನ್ನು ಮಟ್ಟಹಾಕಿ, ಪಾಪ ಪುರುಷರನ್ನು ತುಳಿಯುವಂತೆ" ಎಂದಿದ್ದಾರೆ. ನಿಸರ್ಗವೇ ಪುರುಷನನ್ನು ಪಳಗಿಸಲು ಸ್ತ್ರೀಯರನ್ನು ಸೃಷ್ಟಿಸಿರಬಹುದೆಂಬ ಭಯ, ಅನುಮಾನವೂ ಇದೆ. ಹೀಗೆ ಸ್ತ್ರೀಯರ ಬಗೆಗಿನ ಈ ಚಿಂತನೆ, ಹಿರಿಮೆ, ಇಷ್ಟೆಲ್ಲಾ ಗೌರವ, ಮಹತ್ವದ ವಿಶೇಷತೆಗಳನ್ನು ಕಂಡ ಕೆಲ ಪ್ರಬಲ ಪುರುಷ ವರ್ಗದಲ್ಲಿ ಆತಂಕ, ತಳಮಳ, ದುಗುಡ ಶುರುವಾಗಿ ಭಯಭರಿತರಾಗಿ, ತಾವೆಲ್ಲ ಸ್ತ್ರೀಯರ ಅಧೀನವಾಗುತ್ತೇವೆಂಬ ಭಯದಲ್ಲಿ ತಮ್ಮ ಅಸ್ತಿತ್ವ ಉಳಿಸಿಕೊಂಡು ತಮ್ಮ ರಕ್ಷಣೆಗಾಗಿ ಹಲವಾರು ಕುತಂತ್ರಗಳ ಬಲೆ ಎಣೆಯ ತೊಡಗಿದರು.

**೪. ೨ ಪುರುಷ ಪ್ರಧಾನ ವ್ಯವಸ್ಥೆ ಮತ್ತು ಅಸಮಾನತೆಯ ರಾಜಕಾರಣ**

ಹೆಣ್ಣಿಗೆ ಅಧೀನವಾಗುವ ಭಯ ಗಂಡಸಿಗೆ ಸದಾ ಕಾಡುತ್ತಿದ್ದುದರ ಪರಿಣಾಮ ಕುತಂತ್ರದ ಬಲೆ ಎಣೆದು ಅದರಲ್ಲಿ ಸ್ತ್ರೀಯನ್ನು ಬಂಧಿಸುವಲ್ಲಿ ಯಶಸ್ವಿಯೂ ಆಗಿ, ಅವರನ್ನು ಪಳಗಿಸುವ ಮಾರ್ಗ ಅನುಸರಿಸತೊಡಗಿದ. ಸ್ತ್ರೀಯ ಶಕ್ತಿ ಸಾಮರ್ಥ್ಯದ ಪೂರ್ಣ ಪರಿಚಯವಾಗಲು ಅವನು ವೇದಗಳ ಕಾಲದ ತನಕ ಸಮಯ ತೆಗೆದುಕೊಂಡ. ಅಂದರೆ, ವೇದಕಾಲದ ತನಕ ಸ್ತ್ರೀಗೆ ಪುರುಷ ಸಮಾನವಾದ ಸ್ವಾತಂತ್ರ್ಯ, ಸಮಾನತೆಗಳಿದ್ದು ಸ್ತ್ರೀ ಶಕ್ತಿ, ಸಾಮರ್ಥ್ಯವನ್ನು ಉಪಯೋಗಿಸಿಕೊಂಡ ಅಂದಿನ ಸಮಾಜ ಆದರ್ಶದಾಯಕ ಕಾಲಘಟ್ಟದ ಹಂತ ತಲುಪಿತ್ತು. "ಪುರಾತನ ಕಾಲದಲ್ಲಿ ಭಾರತೀಯ ಮಹಿಳೆಯರು ಈಗಿನ ಕಾಲಕ್ಕಿಂತ ಮೇಲ್ಮಟ್ಟದ ಸ್ಥಾನಮಾನಗಳನ್ನು ಹೊಂದಿದ್ದರೆಂದು" 'ಹಿಂದೂ ನಾಗರಿಕತೆಯಲ್ಲಿ ಮಹಿಳೆಯರ ಸ್ಥಾನ' ಎಂಬ ಪುಸ್ತಕದಲ್ಲಿ ಎ.ಎಸ್.ಅಲ್ಟೇಕರ್ ತಿಳಿಸಿದ್ದಾರೆ. ಯಾವಾಗ ಪುರುಷನಲ್ಲಿ ಆತಂಕ, ಅಧೀನತೆಯ ಭಯ ಕಾಡಲು ಶುರುವಾಯಿತೋ ಅಂದಿನಿಂದ ಸ್ತ್ರೀ ಏಳಿಗೆಗೆ ತಡೆಹಾಕಿ, ಸ್ತ್ರೀಯ ಜೈವಿಕ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಅಂಶಗಳನ್ನು ಬಳಸಿಕೊಂಡು ಅನ್ಯಾಯ, ಅಸಮಾನತೆ, ಅಧರ್ಮ, ಪಕ್ಷಪಾತದಿಂದ ಕೂಡಿದ ತನ್ನ ಹಿತಾಸಕ್ತಿಗನುಗುಣವಾದ ಸಮಾಜದ

ಕಟ್ಟುಪಾಡುಗಳನ್ನು ರೂಪಿಸಿದ. ಓಶೋ ರಜನೀಶ್ ರವರ ಹೇಳಿಕೆಯಂತೆ, "ಹೆಂಗಸಿನೊಳಗೆ ಕೀಳಿರಿಮೆ ತುಂಬಿ ಅದನ್ನು ನಂಬುವಂತೆ ಬಲವಂತ ಹೇರಿ ಆತನ ಶಾರೀರಿಕ ತಾಕತ್ತೇ ಹೆಚ್ಚುಗಾರಿಕೆ ಗಂಡಸೇ ಶಕ್ತಿಶಾಲಿ, ಗಟ್ಟಿಗ ಎಂದು ತಿಳಿಯುವಂತೆ ಒತ್ತಾಯ ಮಾಡುತ್ತಾನೆ. ಇಲ್ಲಿ ಸ್ವಲ್ಪ ಯಶಸ್ವಿಯೂ ಆಗಿದ್ದಾನೆ. ಮೊದಲಿನಿಂದಲೂ ಆಕೆಯನ್ನು ತನ್ನ ಹದ್ದುಬಸ್ತಿನೊಳಗೆ ಇಡಲು ಏನೇನು ಬೇಕೋ ಆ ಎಲ್ಲ ಕ್ರಮಗಳನ್ನು ಕೈಗೊಂಡಿದ್ದಾನೆ. ಗಂಡನಿಗಿಂತ ಹೆಚ್ಚಿನ ಮನೋಬಲ, ಶಾರೀರಿಕ ಸದೃಢತೆಯಿದ್ದರೂ ಮನೆಯೊಳಗೆ ಕೂಡಿಹಾಕಿ ಆಕೆಯ ಚಟುವಟಿಕೆಗಳನ್ನು ಅಷ್ಟರ ಮಟ್ಟಿಗೆ ಮೊಟಕುಗೊಳಿಸಿ, ಕೀಳಿರಿಮೆ ತುಂಬಿದ್ದಾನೆ. ಗಂಡಸಿನ ಚಾಕರಿಯೇ ಸದ್ಗತಿ ಸದಾ ತಗ್ಗಿ ಬಗ್ಗಿ ನಡೆಯಬೇಕೆಂಬ ಕಿವಿಮಾತು. ಹೆಜ್ಜೆಹೆಜ್ಜೆಗೂ ಉಪದೇಶ, ಹುಟ್ಟುತ್ತಾ ಇರುವಾಗಲೇ ಆಕೆಯಲ್ಲಿ ಕೀಳರಿಮೆ ಬಿತ್ತುವ ತಂತ್ರ, ತಾನೇ ಹೆಂಗಸನ್ನು ರಕ್ಷಣೆ ಮಾಡುತ್ತೇನೆಂಬ ಸೋಗು, ಆಕೆ ತನ್ನ ನಿಯಂತ್ರಣದಲ್ಲಿಯೇ ಇರಲಿ ಎಂಬ ಜಾಣ ಲೆಕ್ಕಚಾರ ಇದು"[5]. ಹಾಗಂತ ಹೆಂಗಸನ್ನು ಕೀಳು, ಬಲಹೀನಳು, ದುರ್ಬಲೆ, ಕೈಯಲಾಗದವಳು, ಲೋಕಜ್ಞಾನ ಗೊತ್ತಿಲ್ಲದವಳು, ಮನೆಯಲ್ಲಿರುವಂತವಳು ಎಂದೆಲ್ಲಾ.... ತನ್ನ ತಂತ್ರದಿಂದ 'ಹೆಣ್ಣಿಗೆ ಹೆಣ್ಣೇ ಶತ್ರು'ವಾಗುವಂತಹ, ಒಡೆದು ಆಳುವ ನೀತಿ ಅನುಸರಿಸತೊಡಗಿದ. ಸ್ತ್ರೀಯರಿಗೆ ಒದಗುವ ನೈಸರ್ಗಿಕ ಕ್ರಿಯೆಗಳಾದ ಋತುಚಕ್ರ, ಗರ್ಭಧರಿಸುವಿಕೆ, ಹೆರಿಗೆ, ಬಾಣಂತನ, ಮುಂತಾದವುಗಳನ್ನು ತನಗೆ ವರದಾನ ಆಗುವಹಾಗೆ ಬಳಸಿಕೊಂಡು, ಸ್ತ್ರೀಯ ದೇಹ ಮತ್ತು ಮನಸ್ಸಿನ ಮೇಲೆ ಸವಾರಿಮಾಡಲು ಪ್ರಾರಂಭಿಸಿದ. ಈ ಬಗ್ಗೆ ತಾರಾಬಾಯಿ ಸಿಂಧೆಯವರು "ಪುರುಷರು ಸೃಷ್ಟಿಸಿದ ಮಿಥ್‌ಗಳ ಹಿನ್ನೆಲೆಯಲ್ಲಿ ಅವನ ಕನಸು, ಭಯಗಳು, ಸ್ವಾರ್ಥಲಾಲಸೆಗಳು, ಸೇರಿ ಕೆಲಸಮಾಡಿವೆ. ಇದರಲ್ಲಿ ಹೆಣ್ಣಿನ ದುರಂತವೂ ಸೇರಿದೆ. ಮಿಥ್‌ಗಳಲ್ಲೇ ಬಾಳಬೇಕಾದ ಅನಿವಾರ್ಯದಲ್ಲಿ ಬಿದ್ದ ಹೆಣ್ಣು ಸ್ವತಃ ಇವೇ ತನ್ನ ವಾಸ್ತವಗಳೆಂದು ಗ್ರಹಿಸಿ, ಅಸಹಾಯಕತೆಯಿಂದ ಬದುಕಲು ಪ್ರಾರಂಭಿಸುತ್ತಾಳೆ"[6] ಎಂಬ ನೋವನ್ನು ವ್ಯಕ್ತಪಡಿಸಿದ್ದಾಳೆ.

ಕುಟುಂಬದಲ್ಲಿ ಹೆಣ್ಣು ಹುಟ್ಟಿದರೆ ಹೊರೆ, ಸಮಸ್ಯೆ ಎಂದು ನೋವನ್ನು ಅನುಭವಿಬೇಕು. ಅದೇ ಗಂಡು ಹುಟ್ಟಿದರೆ ದೊರೆ, ಲಾಭ, ಕೀರ್ತಿವಂತ ಎಂದು ಸಂಭ್ರಮದಿಂದ ಹಬ್ಬ ಆಚರಿಸುವಂತೆ. 'ಸುಪುತ್ರೋಕುಲದೀಪಿಕಃ ಎಂಬ ಭಾವನೆಯಿಂದ ಗಂಡು ಮಗ ಸಂಸಾರದ ಆಶಾಜ್ಯೋತಿ, ತಂದೆ, ತಾಯಿಯನ್ನು ಪೋಷಿಸುವವನು. ಹೆಣ್ಣು ಹೇಗಿದ್ದರೂ ಪರರೊಡವೆ. ಮಗ, ತಮ್ಮ ಸಾವಿನ ನಂತರ ತಮಗೂ ತಮ್ಮ ಪಿತೃಗಳಿಗೂ ಪಿಂಡವನ್ನು ಹಾಕುವ ಅಧಿಕಾರ ಹೊಂದಿದ್ದು, ಕುಟುಂಬದ ಯಜಮಾನನಾಗುತ್ತಾನೆ. 'ಪುತ್' ಎಂಬ ನರಕದಿಂದ ರಕ್ಷಿಸುವವನು. ಆದ್ದರಿಂದ ಅನೇಕ ಶಾಸನಗಳು ಗಂಡು ಮಕ್ಕಳಿಗಾಗಿ ಹಂಬಲಿಸಿ ದೇವರಿಗೆ ಹರಕೆ ಹೊತ್ತ ವಿಷಯವನ್ನು ಹೇಳುತ್ತವೆ.

ವಾಸ್ತವವಾಗಿ ಸ್ತ್ರೀ ಪುರುಷರಲ್ಲಿ ದೈಹಿಕ ವ್ಯತ್ಯಾಸಗಳಿವೆ. ಆದರೆ ನೂರಾರು, ಸಾವಿರಾರು ವ್ಯತ್ಯಾಸಗಳನ್ನು ಪುರುಷ ಪ್ರಧಾನ ಸಮಾಜ ಬೆಳೆಸುತ್ತಾ ಬಂದಿದೆ. ಮನುಷ್ಯನ ಎರಡೂ ಕೈಗಳಲ್ಲಿ ಬಲಗೈಯನ್ನು ಹೆಚ್ಚು ಉಪಯೋಗಿಸಿದ್ದರಿಂದ ಅದು ಹೆಚ್ಚು ಬಲಶಾಲಿಯಾಗಿದೆ. ಎಡಗೈ ಬಳಕೆ ಕಡಿಮೆಯಾದಾಗ, ಅದು ಬಲಗೈಗಿಂತ ಅಶಕ್ತವೆನಿಸುವುದು ಸಹಜ. ಪರಿಣಾಮ ಸಮಾಜದಲ್ಲಿ ಹೆಣ್ಣಿಗೊಂದು ನೀತಿ ನಿಯಮವಾದರೆ, ಗಂಡಿಗೊಂದು ನೀತಿ ನಿಯಮ. ಇಲ್ಲಿ ಪುರುಷನೇ ಪ್ರಧಾನ, ಪ್ರಥಮ, ಪ್ರಬಲಶಕ್ತಿ, ಪ್ರಧಾನ ತಿಳಿ, ಪ್ರಧಾನ ಲಿಂಗನಾದರೆ, ಸ್ತ್ರೀ

ದ್ವಿತೀಯ ಲಿಂಗವಾಗಿ, ಪುರುಷರ ಆಲೋಚನೆಗಳಿಗೆ ತಕ್ಕಂತೆ ಸ್ತ್ರೀಯರ ಬದುಕು, ಜೀವನ ರಚನೆಯಾಗಿರುವುದು ಅನೇಕ ಸಂಶೋಧನೆಗಳಿಂದ ಸಾಬೀತಾದ ವಿಷಯವಾಗಿದೆ.

ಒಂದು ಕಾಲಕ್ಕೆ ಪೂಜ್ಯತೆಯ ಸ್ಥಾನದಲ್ಲಿದ್ದ ಸ್ತ್ರೀ ದಿನ ಕಳೆದ ಹಾಗೆ ಅವಳು ತ್ಯಾಜ್ಯ ವಸ್ತುವಿನಂತಾಗಿರುವುದು ದುರದೃಷ್ಟಕರ ಸಂಗತಿಯಾಗಿದೆ. ವಿದ್ಯೆಗೆ ಅಧಿದೇವತೆಯಾದ ಶಾರದೆಯ ಬೀಡಿನಲ್ಲೇ ಅವಳು ಅನಕ್ಷರಸ್ಥಳಾಗಬೇಕಾಯಿತು. ಐಶ್ವರ್ಯದೇವಿಯ ಲಕ್ಷ್ಮೀ ರೂಪ ಎಂದು ಕರೆಯಲಾಗುತ್ತಿದ್ದ ನಾಡಿನಲ್ಲಿ ಆರ್ಥಿಕ ಸ್ವಾತಂತ್ರ್ಯವಿಲ್ಲದೇ ಪರಾವಲಂಬಿಯಾಗಬೇಕಾಯಿತು. ಅಜ್ಞಾನ, ಅಂಧಕಾರದಲ್ಲಿ ಮುಳುಗಿದಳು. ಶಕ್ತಿ ದೇವತೆ ಎಂದು ಬಿಂಬಿಸಿಲ್ಪಟ್ಟ ಸಮಾಜದಲ್ಲಿ ದೌರ್ಜನ್ಯಕ್ಕೆ, ಶೋಷಣೆಗೆ ಒಳಗಾಗಿರುವುದು ವಿಪರ್ಯಾಸವಾಗಿದೆ. ಪುರುಷ ಸಂಸ್ಕೃತಿಯ ಪರಿಣಾಮ ಹೆಣ್ಣಿನ ಬಲೆಗೆ ಹೆಣ್ಣೆ ಜೇಡರ ಹುಳುವಿನ ಹಾಗೆ ಬಲಿಯಾಗುತ್ತಿರುವ ಘಟನೆಗಳು, ತಮ್ಮನ್ನು ತಾವೇ ಬಂಧಿಸಿಕೊಂಡು ಬಳಲುತ್ತಾ, ಬಿಡುವಿಲ್ಲದೇ ನರಳುತ್ತಿರುವ ಅವಸ್ಥೆ ತಲುಪಿ ಜೊತೆಗೆ ಪುರುಷರ ಅತಿರೇಕದ ನಡವಳಿಕೆಯಿಂದಾಗಿ ಪಾಪ ಜೀವನಕ್ಕಾಗಿಯೇ ಹುಟ್ಟಿದವಳಾಗಿ ಜೀವನ ಸಾಗಿಸಬೇಕಾಗಿದೆ. ಈ ವ್ಯವಸ್ಥೆ ಆಕೆಯನ್ನು ಆಕ್ಟೋಪಸ್‌ನಂತೆ ಹಿಡಿದು ರಕ್ತಹೀರುವ ಕೆಲಸ ಮಾಡುತ್ತಿದೆ ಪರಿಣಾಮವಾಗಿ ಸ್ತ್ರೀ ಪುರುಷರ ಮಧ್ಯ ತರತಮ ಸಂಬಂಧಗಳು ರೂಪುಗೊಂಡಿವೆ.

ಧರ್ಮಗಳು, ಮಹಾಕಾವ್ಯಗಳು, ಪುರಾಣಗಳು, ಇತಿಹಾಸ, ಧರ್ಮಶಾಸ್ತ್ರಗಳು, ತತ್ವಜ್ಞಾನಿಗಳು ಗಂಡು ಹೆಣ್ಣಿಗೆ ಭಿನ್ನವಾದ ಸಾಮಾಜಿಕ ನೈತಿಕ ಮಾನದಂಡಗಳಿಂದ ನೋಡಿ, ಪುರುಷರಿಗೆ ಬೆನ್ನೆಲುಬಾಗಿ ನಿಂತು, ಪುರುಷ ಪ್ರಾಧಾನ್ಯತೆಯನ್ನು ಎತ್ತಿ ಹಿಡಿದ, ಈ ಪರಿಣಾಮ ಸ್ತ್ರೀ ಅನುಭವಿಸಬೇಕಾಗಿ ಬಂದ ಸಮಸ್ಯೆಗಳು ಹಲವು. ಈ ಎಲ್ಲಾ ಕಾರಣಗಳಿಂದಾಗಿ ಸ್ತ್ರೀ ಪುರುಷರ ನಡುವೆ ಅಮಾನುಷತೆಯಿಂದ ಕೂಡಿದ ಕೆಲ ಅಂತರ ತಾರತಮ್ಯಗಳು ಉದ್ಭವವಾಗಿವೆ. ಹುಟ್ಟಿನಿಂದಲೇ ಹೆಣ್ಣಿಗೆ ತಲೆಯೊಳಗೆ ಗಂಡು ಶ್ರೇಷ್ಠ, ನೀನು ಗಂಡು ಹೇಳಿದಂತೆ ಕೇಳಿ ಕೊಂಡಿರಬೇಕಾದವಳು, ನೀನು ಹುಟ್ಟಿರುವುದೇ ಗಂಡಿಗಾಗಿ, ಗಂಡನನ್ನು ಸಂತೋಷಪಡಿಸುವುದಕ್ಕಾಗಿ, ಮತ್ತು ತನ್ನ ಹವ್ಯಾಸ, ಆಸೆ, ಆಕಾಂಕ್ಷೆ, ಭಾವನೆ, ಮನಸ್ಸುಗಳಿಗೆ ಅರ್ಥವಿಲ್ಲ ಆಕೆಗೆ ವ್ಯಕ್ತಿತ್ವ ಇಲ್ಲ, ಪುರುಷ ಬಳಸುವ ವಸ್ತುವಾಗಿದ್ದಾಳೆ. ಇವಳ ವ್ಯಾಪ್ತಿ, ಮದುವೆ, ಮಕ್ಕಳು, ಸಂಸಾರ, ಪುರುಷರು ಎಂದರೇ ಘನವ್ಯಕ್ತಿ, ವಿದ್ಯೆ ಉದ್ಯೋಗ, ವಂಶೋದ್ಧಾರಕ. ದುಡಿಯುವವ ಗಂಡು, ಅಂದರೆ ಹೊಲಕ್ಕೆ ಗಂಡು, ಒಲೆಗೆ ಹೆಣ್ಣು ಅಥವಾ ಬೇಯಿಸಲು ಹೆಣ್ಣು. ಹೆಣ್ಣಿಗೆ ಸದ್ಗುಣಗಳ ಸಂಕೋಲೆಗಳಾದ ಮೂರು ಇರಬೇಕು. ಗಂಡಿಗೆ ಆರು ಇಲ್ಲದಿದ್ದರೂ ನಡೆಯುವುದು ಸ್ತ್ರೀ ಮುಕ್ತಿಗೆ ಅನರ್ಹಳು. ಸ್ತ್ರೀ ಯುದ್ಧದಲ್ಲಿ ಗೆಲ್ಲುವ ವಸ್ತುವಿನ ಹಾಗೆ ಧಾನ್ಯ ಬೆಳೆಯುವ ಕ್ಷೇತ್ರದಂತೆ, ಪುರುಷನಿಗೆ ಸುಖ ಕೊಡುವ ಆಸ್ತಿಯಾದಳು. ಗಂಡಿನ ಒಡೆತನಕ್ಕೆ ಒಳಗಾಗಿ, ಆಳು ಯಜಮಾನರ ಸಂಬಂಧದಂತೆ ಪ್ರಖರವಾಗಿ ಪ್ರಜ್ವಲಿಸಲಾರಂಭಿಸಿದೆ. ಸೊಸೆ ಸತ್ತರೆ, ಮನೆಗೆ ಏನೂ ನಷ್ಟವಿಲ್ಲ. ಹೆಂಡತಿಗೆ ಬದಲು ಇನ್ನೊಬ್ಬ ಹೆಂಡತಿಯನ್ನು, ಕುದುರೆಗೆ ಬದಲು ಇನ್ನೊಂದು ಕುದುರೆ ಕೊಂಡಂತೆ. ಮನೆಯೊಡತಿಗೆ ಬದಲು ಮತ್ತೊಬ್ಬಳು ಮಗುವನ್ನು ಮಲಗಿಸುವ ಮಡಿಲಿನವಳಾಗುವಳು. ತೊಟ್ಟಿಲನ್ನು ತೂಗುವ ಕೈಗಳು ಎಲ್ಲ ತಾಯಂದಿರಂತೆಯೇ ಇರುವಳು.

'ಮನೆ ಮಗ ಸತ್ತರೆ ಮನೆಯಾಳು, ಸೊಸೆ ಸತ್ತರೆ ಸೋಬಾನ' ಎಂಬ ಗಾದೆ ಇದ್ದು, ಇಲ್ಲಿ ಹೆಣ್ಣೊಬ್ಬಳ

ಕಣ್ಮರೆ ಅಥವಾ ಸಾವು ಒಂದು ಸಾಮಾಜಿಕ ಬಿಕ್ಕಟ್ಟನ್ನುಂಟುಮಾಡುವುದು ತೀರಾ ವಿರಳ. ಹೆಣ್ಣೊಬ್ಬಳು ಸತ್ತಾಗ ಆಕೆಯ ಸಾವಿಗಾಗಿ, ಶೋಕಿಸುವುದಕ್ಕಿಂತ ಗಂಡಿಗೆ ಆದ ನಷ್ಟಕ್ಕಾಗಿ ಮರುಕ ಪಡುವುದೇ ಸಮಾಜದ ರೀತಿಯಾಗಿದೆ. ಅವನಿಗೆ ಅಡುಗೆ ಮಾಡುವವರು ಯಾರು? ಮಕ್ಕಳನ್ನು ನೋಡಿಕೊಳ್ಳುವವರು ಯಾರು? ಹೀಗೆ ಚಿಂತನ ಲಹರಿ ಹರಿದು, ಆದಷ್ಟು ಬೇಗ ಅವನಿಗೆ ಇನ್ನೊಂದು ಮದುವೆ ಮಾಡುವರು. ಕುಟುಂಬ ಮೂಲದಲ್ಲಿ ಯಜಮಾನ ಸಂಸ್ಕೃತಿಯ ಕ್ರೌರ್ಯ, ದಬ್ಬಾಳಿಕೆಗಳು, ಬಿಚ್ಚಿಕೊಳ್ಳುವ ಸತ್ಯಗಳು, ಅಕ್ಷರಸ್ಥ ಲೋಕವಿರಬಹುದು. ಅನಕ್ಷರಸ್ಥ ಲೋಕವಿರಬಹುದು. 'ಶೋಷಣೆ' ಎಂಬುದು ಸಾಮಾಜಿಕ ಮೌಲ್ಯವಾಗಿದೆ. ಬದುಕಿನಲ್ಲಿ ಹೆಣ್ಣಿನ ಆಯ್ಕೆ ಸರಿಯಾಗಿ ಆಗದೆ ಇದ್ದಾಗ ಕಳೆದುಕೊಳ್ಳುವುದೆಲ್ಲಾ ಹೆಣ್ಣೇ ಹೊರತು ಗಂಡಸಾದವನಲ್ಲ. ಬಹುಪತ್ನಿತ್ವದ ಸುಭೋಗಗಳನ್ನು ಗಂಡಸಾದವನು ಸಾಮಾಜಿಕ ಗೌರವಗಳೊಂದಿಗೆ ಅನುಭವಿಸುತ್ತಿದ್ದರೆ, ಹೆಣ್ಣಾದವಳು ಆರ್ಥಿಕ ಭದ್ರತೆ, ಬೌದ್ಧಿಕ ಮಾನಸಿಕ ಪ್ರಬಲತೆಯನ್ನೆಲ್ಲಾ ಇಟ್ಟುಕೊಂಡು ಗಂಡಸಿನ ಸಹಚರ್ಯಕ್ಕಾಗಿ ನಿರಂತರ ಹಂಬಲಿಸಬೇಕಾಗುತ್ತದೆ. ತ್ಯಾಗಕ್ಕಾಗಿ ಹೆಣ್ಣು ಹುಟ್ಟಿದವಳೆಂಬಂತೆ, ಅದನ್ನು ಸಾಯುವವರೆಗೂ ಮಾಡುತ್ತಲೇ ಇರಬೇಕಾಗುತ್ತದೆ. ಗಂಡ, ಮಕ್ಕಳು, ಮನೆ ಎಂದು ಹಲಬುವ ಹಲವು ಮನಸ್ಸುಗಳು ಮುಕ್ತವಾಗಿ ಬಿಚ್ಚಿಕೊಳ್ಳುವುದಿಲ್ಲ. ಬಿಚ್ಚಿಕೊಂಡರೆ ಮಕ್ಕಳ ಭವಿಷ್ಯದ ಭಯ ಕಾಡುವುದು. ಹಾಡುಹಗಲೇ ಹೆಣ್ಣನ್ನು ಬೆತ್ತಲೆಗೊಳಿಸುವ, ಲೈಂಗಿಕ ಕಿರುಕುಳ ನೀಡುವ ಗಂಡಸರು ನಾಡಿನುದ್ದಕ್ಕೂ ಪಸರಿಸಿಕೊಂಡಿರುವಾಗ, ಅಂತಹ ಘಟನೆಗಳಾಗಲಿ, ಅಥವಾ ಹೆಣ್ಣು ಅದರಲ್ಲಿಯೂ ದಲಿತ ಲೋಕದ ಹೆಣ್ಣು ಹೊರಬಂದಾಗ ಈ ಸಾಮಾಜದ ಅನುಕೂಲ ಸಿಂಧುತ್ವತನವನ್ನು ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರದಲ್ಲಿಯೂ ಬಳಸಿಕೊಂಡಿರುವುದನ್ನು ನೋಡಬಹುದಾಗಿದೆ.

'ಹೆಂಗಸು ಗಂಡಸಿನ ಆಸ್ತಿ' ಎನಿಸುವುದು, ಈ ಪ್ರಕ್ರಿಯೆಯ ತಾರ್ಕಿಕ ಫಲಿತಾಂಶವಾಗಿದೆ. ಇದು ಹೆಣ್ಣಿನ ಲೈಂಗಿಕತೆಗೆ ಒದಗಿದ ಬಹುದೊಡ್ಡ ಚಾರಿತ್ರಿಕ ದಮನ. ಗಂಡಸು ಮಾತ್ರ ಸ್ವಚ್ಛಂದ ಲೈಂಗಿಕತೆಯಲ್ಲಿ ಲೋಲುಪನಾಗುತ್ತಾನೆ. ಬಹುಪತ್ನಿತ್ವದಿಂದ ಹಿಡಿದು, ಸೇವಕ ವರ್ಗದ ಹೆಣ್ಣುಗಳು ಅನುಭೋಗ ವೇಶ್ಯೆಯರ ಕುಲವನ್ನೇ ಸೃಷ್ಟಿಸುವವರೆಗೂ ಅವನ ಈ ಲೈಂಗಿಕ ಅಪರಾಧಗಳು ಸಾಗುತ್ತವೆ. ಪ್ರತಿಯಾಗಿ ಪೂರ್ಣ ಸಾಮಾಜಿಕ ಮನ್ನಣೆ, ಗೌರವಗಳನ್ನೇ ಅವನು ಪಡೆಯುತ್ತಾನೆ ಎಂಬುದು ಇಲ್ಲಿನ ವಿಶೇಷತೆ. ಆರ್ಥಿಕವಾಗಿ ದಮನಕ್ಕೆ ಒಳಗಾದ ಹೆಣ್ಣು ಸಾಮಾಜಿಕ ದಮನಕ್ಕೂ ಒಳಗಾಗುವುದೂ ಸಹಜವೆನಿಸಿಬಿಡುತ್ತದೆ. ಇದು ಎಷ್ಟರ ಮಟ್ಟಿಗೆ ನ್ಯಾಯಯುತವಾದುದೆಂಬುದು, ಹಾಗೂ ಇದಕ್ಕೆ ಪರಿಹಾರವೇ ಇಲ್ಲವೇ? ಎಂಬುದು ಒಂದು ಪ್ರಶ್ನೆಯಾಗಿದೆ.

ಏಂಗಲ್ಸ್‌ರವರು "ಮಹಿಳೆಯ ಇಂತಹ ಅಸಮಾನತೆಗೆ ಮುಖ್ಯ ಕಾರಣ ಅವರನ್ನು ಸಾಮಾಜಿಕ ಉತ್ಪಾದನಾ ಕಾರ್ಯದಿಂದ ದೂರ ಸರಿಸಿದ್ದೇ ಆಗಿದೆ"[5] ಎಂದಿದ್ದಾರೆ. ಸ್ತ್ರೀಗೆ ಗೃಹಕೃತ್ಯಗಳೇ ಅವಳ ಜೀವನದ ಗುರಿ. ಗೃಹ ಕೃತ್ಯಗಳೇ ಅವಳಿಗೆ ಸರ್ವಸ್ವ. ಗೃಹಕೃತ್ಯವಿಲ್ಲದೇ ಅವಳ ಬದುಕು ಶೂನ್ಯಕ್ಕೆ ಸಮ ಎಂದೆಲ್ಲಾ ಪುರುಷ ಪ್ರಾಧಾನ್ಯತೆಯು ನಂಬಿಸುತ್ತಾ ಬಂದಿದೆ. ಸಮಾಜದಲ್ಲಿ ಮಹಿಳೆಯರ ಸ್ಥಿತಿಗತಿಗಳ ಆಧಾರದ ಮೇಲೆ ಡಚೆಸ್‌ದ ನ್ಯೂಕ್ಯಾಸಲ್‌ನ ಮಾರ್ಗರೇಟ್‌ರವರು "ಮಹಿಳೆಯರು ಗೂಬೆಗಳಂತೆ ಬದುಕುತ್ತಿದ್ದಾರೆ. ಪ್ರಾಣಿಗಳಂತೆ ಬದುಕುತ್ತಿದ್ದಾರೆ ಮತ್ತು ಹುಳುಗಳಂತೆ ಸಾಯುತ್ತಿದ್ದಾರೆ"[6] ಎಂದಿದ್ದಾರೆ. ನಮ್ಮ ಸಮಾಜದಲ್ಲಿ ಯಾವುದೇ

ಸ್ಥಳದಲ್ಲಿ ಸ್ತ್ರೀ ಸುರಕ್ಷಿತಳಾಗಿಲ್ಲ. ಭೀತಿಯ ನೆರಳು ಆಕೆ ಹೋದೆಡೆಯಲ್ಲೆಲ್ಲಾ ಅಟ್ಟಸಿಕೊಂಡು ಬರುತ್ತದೆ. ಸಾರ್ವಜನಿಕ ಸ್ಥಳಗಳಲ್ಲಾಗಲಿ, ಕಾನೂನು ಮತ್ತು ಸುವ್ಯವಸ್ಥೆಯ ರಕ್ಷಕರೆನಿಸಿಕೊಂಡವರ ಆಶ್ರಯದಲ್ಲಿಯೇ ಆಗಲಿ, ಮಹಿಳೆ ಸುರಕ್ಷಿತವಾಗಿಲ್ಲ. ಸ್ತ್ರೀಯರ ಮೇಲಿನ ದೌರ್ಜನ್ಯದ ಕುರಿತು ದಾಖಲಾದ ಅಪರಾಧಗಳ ಸಂಖ್ಯೆಯು ಒಂದು ವರ್ಷದಲ್ಲಿ ೧೪೪೦೦೦ ವನ್ನು ಮೀರಲಿದೆ ಎನ್ನಲಾಗಿದೆ. ಸ್ತ್ರೀಯರನ್ನು ಕೇವಲ ಒಂದು ಭೋಗದ ವಸ್ತುವನ್ನಾಗಿ ನೋಡುವ ಪ್ರವೃತ್ತಿ ಬೆಳೆಯುತ್ತಿದೆ. ಈ ನಿಟ್ಟಿನಲ್ಲಿ ಮಾಧ್ಯಮಗಳು ಬೆಂಕಿಗೆ ತುಪ್ಪ ಸುರಿಯುವ ಕೆಲಸವನ್ನು ಮಾಡುತ್ತಿರುವುದರಿಂದ ಎಲ್ಲೆಡೆ ಮಹಿಳೆಯ ಮೇಲಿನ ಆಕ್ರಮಣಗಳು ಏರುತ್ತಿವೆ.

ಫ್ರಾನ್ಸಿನ ತತ್ವಜ್ಞಾನಿ ಮತ್ತು ಕಾದಂಬರಿಕಾರ್ತಿ ಸಿಮೊನ್ ದಬುವಾ ತನ್ನ ಪುಸ್ತಕ 'The second sex'ದಲ್ಲಿ ಲಿಂಗಬೇದದ ಬಗ್ಗೆ ತನ್ನ ಆಕ್ರೋಶವನ್ನೇ ವ್ಯಕ್ತಪಡಿಸಿದ್ದಾಳೆ. ಅವಳು 'ಸ್ತ್ರೀಯೆಂದು ಕರೆಯಿಸಿಕೊಳ್ಳುವುದೇ ಅತ್ಯಂತ ಅವಹೇಳನಾಸ್ಪದವಾದುದು'. ಎಂಬ ಒಂದೇ ಒಂದು ವಿಚಾರವನ್ನು ಒತ್ತಿ ಒತ್ತಿ ಹೇಳುವ ಪ್ರಯತ್ನ ಮಾಡಿದ್ದಾಳೆ. ಎಲ್ಲೆಡೆಯಲ್ಲಿಯೂ ಸ್ತ್ರೀಯರು ಆಳ್ವಿಕೆಗೆ ಮತ್ತು ದಾಸ್ಯತೆಗೆ ಒಳಗಾಗಿದ್ದಾರೆ. ಪುರುಷರು ಆಳರಸರಾಗಿ, ಮತ್ತು ಮಾಲಿಕರಾಗಿ ಮೆರೆಯುತ್ತಿದ್ದಾರೆ. ಸ್ತ್ರೀಯು ಯಾವಾಗಲೂ ಗುಲಾಮಳು, ಆಕೆಯೊಂದು ಆಶ್ರಯ ಸ್ಥಾನವಿದ್ದಂತೆ, ಒಂದು ಉಪಕರಣವಿದ್ದಂತೆ. ಆಕೆಯನ್ನು ಯಾವಾಗಲೂ ಗೆಲ್ಲಲಾಗಿದೆ. ಸೋಲಿಸಲಾಗಿದೆ ವಶವರ್ತಿಯನ್ನಾಗಿಸಲಾಗಿದೆ. ಲೈಂಗಿಕ ಕ್ರಿಯೆಯಲ್ಲಿ ಹೇಗೋ ಹಾಗೆ ನಿಜ ಜೀವನದಲೂ ಆಕೆಯನ್ನು ಅಡಿಯಾಳಾಗಿಸಲಾಗಿದೆ. ಪುರುಷನು ನೀಡುವುದು, ಸ್ತ್ರೀಯಾದವಳು ಸ್ವೀಕರಿಸುವುದು, ಪುರುಷನು ಕ್ರಿಯಾಶೀಲನಾಗಿ ವರ್ತಿಸುವುದು, ಸ್ತ್ರೀಯಾದವಳು ಪ್ರತೀಕ್ಷೆಯಲ್ಲಿಯೇ ಇರುವುದು, ಪ್ರಕೃತಿ ಧರ್ಮವಾಗಿ ಹೋಗಿದೆ. ಮುಂತಾಗಿ ಆಕೆ ಭಾವವೇಷದಿಂದ ಬರೆದಿದ್ದಾಳೆ.

ಜನಸಂಖ್ಯಾ ನಿಯಂತ್ರಣದ ಯೋಜನೆಗಳು ಮಹಿಳೆಯರ ಮೇಲೆ ದೌರ್ಜನ್ಯವನ್ನು ನಡೆಸಿವೆ. ಇದಕ್ಕೆ ಮಹಿಳೆಯೇ ಮೊದಲು ಗುರಿಯಾಗುವವಳು ಆಕೆಯ ಬೇಕು, ಬೇಡ, ಒತ್ತಡ, ಮಾನಸಿಕ ತಯಾರಿ, ಯಾವುದಕ್ಕೂ ಗಮನಕೊಡದೇ ಆಕೆಯ ಗರ್ಭದ ಮೇಲೆ ಆಕ್ರಮಣವನ್ನು ಮಾಡಲಾಗಿದೆ. ಸ್ತ್ರೀ ಹುಟ್ಟಿನೊಂದಿಗೆ ಬೆಸೆದುಕೊಂಡ ಬದುಕನ್ನು ಕಸಿದುಕೊಂಡ ತವರು ಮನೆಯಿಂದ ಹೊರದೂಡುವುದು, ಇದೊಂದು ಸಮಾಜದ ನಿರ್ದಯ ನಿರ್ಧಾರ. ತನ್ನ ಹುಟ್ಟು ಪರಿಸರದೊಂದಿಗೆ ತನ್ನ ಬದುಕು ಎಂಬ ಅವಳ ಜನ್ಮಸಿದ್ಧ ಹಕ್ಕಿಗೆ ಬಿದ್ದ ಕೊಡಲಿ ಪೆಟ್ಟು, ಎರಡು ದಶಕಗಳಷ್ಟು ಬದುಕಿದ ರೀತಿ ನೀತಿಯಿಂದ ಹೊರ ಬಂದು, ಅಪರಿಚಿತ ನೆಲೆಯಲ್ಲಿ ಬಾಳಬೇಕಾದ ಅನಿವಾರ್ಯತೆ. ಅವಳಿಗಿದೆಯೆ? ಹೀಗೆ ಪ್ರಶ್ನಿಸಲು ಅವಕಾಶವಿಲ್ಲದಂತೆ, ಅದಕ್ಕೊಂದು ಭಾವನಾತ್ಮಕ ನೆಲೆ, ಬೆಲೆ ಸೃಷ್ಟಿಸಿ ಮೌಲಿಕ ಚೌಕಟ್ಟಿನಲ್ಲಿ ಇಡಲಾಗಿದೆ. ಇದು ಸ್ತ್ರೀ ಸಂವೇದನೆಯಿಂದ ಹೊರಹೊಮ್ಮಿದ ವೇದನೆ ನಿವೇದನೆ ಆಗಿದೆ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಮನೋರೋಧನೆಗೆ ವಿವಿಧ ಮುಖಗಳ ವ್ಯಕ್ತಿತ್ವ ರೂಪಿಸುವಲ್ಲಿ ಸ್ತ್ರೀಯು ಮೊದಲ ಪಾತ್ರ ವಹಿಸುವಳು. "ಒಂದು ಕಡೆ ದುಡ್ಡು ಮನುಷ್ಯ ಮನುಷ್ಯರನ್ನು ತಿನ್ನಲು ಹಚ್ಚಿದರೆ, ಇನ್ನೊಂದು ಕಡೆ ವ್ಯವಸ್ಥೆಯ ಪರಿಣಾಮವಾಗಿ ಪುರುಷವರ್ಗ ಮಹಿಳೆಯನ್ನು ಹರಿದು ತಿನ್ನಹತ್ತಿದೆ. ಶತ ಶತಮಾನಗಳಿಂದ ಯಜಮಾನ ಸಂಸ್ಕೃತಿಗೆ ಬಲಿಯಾಗಿ ಮಹಿಳೆ ತನ್ನ ಅಸ್ತಿತ್ವದ ಹುಡುಕಾಟದಲ್ಲಿಯೇ ಕಾಲ ಕಳೆದಿದ್ದಾಳೆ. ಧರ್ಮ ಕವಚದ ಹೊರೆಹೊತ್ತು ಪಾಪಬೇರು ಪ್ರಜ್ಞೆಯಾದವಳು. ಅನಕ್ಷರಸ್ಥಳಾಗಿಯೇ ಉಳಿದು

ಎಲ್ಲವನ್ನು ಮಾರಕವಾಗಿಯೇ ಅನುಭವಿಸುತ್ತಾ ಬಂದುದಕ್ಕೆ ಎಣೆಯೇ ಇಲ್ಲ"[೭].

ಇಂತಹ ಸಂದರ್ಭಗಳನ್ನು ನೋಡಿ, ಅನುಭವಿಸಿದ ಕವಯಿತ್ರಿ ಗೀತಾ ವಸಂತ್‌ರ ಕವಿತೆ

"ನಾವು ಅಪ್ಪಟ ನಾರಿಯರು.

ತತ್ವಗಳಲಿ, ದೇವಿಯಾದವರು

ಭ್ರೂಣವಾಗಿರುವಾಗಲೇ ಬೇಡವಾದವರು

ಬೆಳೆಯುತ್ತ ಹೊರೆಯಾದವರು

ಮದುವೆ ಮಾರುಕಟ್ಟೆಯಲ್ಲಿ ಸರಕಾದವರು

ಬದುಕಿಡೀ ಯಾರದೋ

ದಯೆಗೆ ಕೈಯೊಡ್ಡಿ ಒಗ್ಗಿ ಹೋದವರು

ನಾವು ಮಗಳಾದೆವು, ಹೆಂಡತಿಯಾದೆವು, ತಾಯಿಯಾದೆವು

ಬದುಕಿಡೀ ಯಾರದೋ ನೆರಳಾದೆವು

ಕೊನೆಗೂ ನಾವು ನಾವಾಗಲೇ ಇಲ್ಲ"[೮].

ಕಾಮ ಪುರುಷಾರ್ಥ ಸಾಧನೆಗಾಗಿ ಹೆಣ್ಣನ್ನು ಸ್ವಂತ, ಅನ್ಯ ಮತ್ತು ಸಾಮಾನ್ಯವೆಂದು ವರ್ಗೀಕರಿಸಿ ಈ ಎಲ್ಲಾ ವರ್ಗಗಳ ಹೆಣ್ಣನ್ನು ಉಪಭೋಗಿಸಲು ಬೇರೆ ಬೇರೆ ಉಪಾಯಗಳನ್ನು ಹೂಡಿರುವುದರ ಬಗೆಗೂ ಕನಕದಾಸರ ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ.

ಮಹಿಳೆಯನ್ನು ಕೀಳು ಬಗೆಯ ಜೀವಿಗಳೆಂದು ಪುರುಷನಿಗಿಂತಲೂ ಹೀನಳೆಂದು, ಯಾವುದೇ ಬಗೆಯ ಪ್ರಾಮುಖ್ಯತೆಯಾಗಲಿ, ವ್ಯಕ್ತಿತ್ವವಾಗಲಿ, ಇಲ್ಲದವಳೆಂದು ಪರಿಗಣಿಸಲಾಗಿತ್ತು. ಸಾಮಾಜಿಕವಾಗಿ, ಮಹತ್ವ ಇಲ್ಲದವಳೆಂದು ಪರಿಗಣಿಸಲಾಗಿತ್ತು. ಕಾಮರಹಿತ ಜೀವನವನ್ನು ಆದರ್ಶೀಕರಿಸುವ ಅತಿರೇಕಕ್ಕೆ ಹೋಗದೆ ಕಾಮ ಜೀವನವು ಲಂಪಟ ಜೀವನವಾಗದ ಹಾಗೆ ಸಂಯಮದಿಂದ ನಡೆದುಕೊಳ್ಳುವುದನ್ನು ಆದರ್ಶವಾಗಿರಿಸಿಕೊಳ್ಳುವಂತೆ ಕನಕದಾಸರು ಬೋಧಿಸಿದ್ದಾರೆ. ಕಾಮ ಪುರುಷಾರ್ಥ ಸಾಧನೆಯ ತಂದೀಯ್ಯುವ ವಿಷಯ ಲಂಪಟ ಜೀವನಕ್ರಮ ಅನೀತಿಯುತವಾದುದೆಂದು ಮನದಟ್ಟು ಮಾಡಿಕೊಡಲು ಪ್ರಯತ್ನಿಸಿದ್ದಾರೆ. ಅಲ್ಲದೇ ಹೆಣ್ಣನ್ನು ಪುರುಷರ ಭೋಗದ ವಸ್ತುವೆಂದು ನೋಡುವುದೂ ಕೂಡ ಅನೈತಿಕ ಮನಸ್ಸಿನ ವಿಕಾರವೆಂಬ ನಿಲುವು ಪ್ರಕಟಿಸಿದ್ದಾರೆ.

ಏಂಗೆಲ್ಸ್ ರವರು "ಮಾತೃ ಪ್ರಾಧಾನ್ಯತೆಯ ಆರಂಭಿಕ ಸಮಾಜದಲ್ಲಿ ಸ್ತ್ರೀಗೆ ಉನ್ನತ ಸ್ಥಾನಗಳಿದ್ದವು. ನಂತರ ಪಿತೃಪ್ರಾಧಾನ್ಯತೆಗೆ ಎಡೆಕೊಟ್ಟ ಚಾರಿತ್ರಿಕ ಹಂತವೇ ಸ್ತ್ರೀಯರ ಪಾಲಿನ ದೊಡ್ಡ ಸೋಲು, ದುರಂತ"[೯] ಎಂದು ವ್ಯಾಖ್ಯಾನಿಸಿದ್ದಾರೆ. ಇದು ಪುರುಷ ಪ್ರಧಾನ ಸಮಾಜಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಮಹಿಳೆ ಪುರುಷರಿಗಿಂತ ಹೆಚ್ಚು ಸಂವೇದನಾ ಶೀಲಳಾಗಿದ್ದು ಅವಳಿಗೆ ವಿಸ್ತಾರವಾದ ಅನುಭವಗಳ ಸಂಗ್ರಹಕ್ಕೆ ಅವಕಾಶಗಳು ಸಿಗದೇ ಹೋದ ಕಾರಣ, ತನ್ನ ಸೀಮಿತ ಪರದಿಯಲ್ಲಿಯೇ ಸುತ್ತು ಹಾಕುತ್ತಾ, ಬದುಕಿನಲ್ಲಿ ಹಲವಾರು ಮಿತಿಗಳ ಗೆರೆ ಕೊರೆದುಕೊಂಡು, ಪೂರ್ವಜನ್ಮದ ಕರ್ಮ, ಧರ್ಮನಿಷ್ಠೆ, ಪಾಪ, ಪುಣ್ಯಗಳ ಪ್ರಜ್ಞೆ, ಹಣೆಬರಹ, ಕೀಳರಿಮೆ, ದೇವರು ದಿಂಡರುಗಳ ಒತ್ತಡದಲ್ಲಿಯೇ ಸಿಲುಕಿ, ಪಾಲಿಗೆ ಬಂದದ್ದು ಪಂಚಾಮೃತವೆಂದು ಸ್ವೀಕರಿಸಿ, ಅದನ್ನು ಪ್ರಶ್ನಿಸದೇ ಪರಿಸರದೊಂದಿಗಿನ ಪರಿಮಿತವಾದ ಅನುಭವದಿಂದಾಗಿ, ಹೆಣ್ಣಿನ ಬುದ್ಧಿ

ಮೊಣಕಾಲ ಕೆಳಗೆ, ಚಂಚಲೆ, ವಂಚಕಿ, ಕುಟಿಲೆ ಎಂಬ ಬಿರುದುಗಳನ್ನು ಮೌನವಾಗಿ ಒಪ್ಪಿಕೊಂಡು ಅಂದಿನಿಂದ ಅವುಗಳನ್ನು ಪ್ರಶ್ನಿಸದೇ ಪೋಷಿಸಿಕೊಂಡು ಅವುಗಳೊಂದಿಗೆ ರಾಜಿ ಮಾಡಿಕೊಂಡು ಹೋಗುವುದು ಅನಿವಾರ್ಯವಾಗಿದೆ ಆದರೆ ಪುರುಷರು ಸಾಹಸ, ಮುತ್ಸದ್ದಿತನ, ಉತ್ಸಾಹ, ವೀರ ಶೌರ್ಯ ಎನ್ನುವಂತಹ ಗುಣ ಸ್ವಭಾವಗಳ ಗುತ್ತಿಗೆದಾರನಾಗಿ, ಸಮಾಜದಲ್ಲಿ ಮುಕ್ತ ಪ್ರವೇಶವನ್ನು ತನ್ನ ಹಕ್ಕುಗಳನ್ನಾಗಿ ಮಾಡಿಕೊಂಡು ಎಲ್ಲಾ ರಂಗಗಳಲ್ಲಿಯೂ ಲೀಲಾಜಾಲವಾಗಿ ಹರಿದಾಡತೊಡಗಿದ ಕಾರಣ, ಅವನ ಅನುಭವದ ಆಳ ಅಗಲಗಳು ಹಿಗ್ಗಿದವು. ಜೊತೆಗೆ ಅವನ ಆಸೆ ಆಕಾಂಕ್ಷೆಗಳಿಗೆ ಸಾಮಾಜಿಕ ಒಪ್ಪಿಗೆ ದೊರೆಯಿತು. ಈ ಸ್ವಚ್ಛಂದ ಮುಕ್ತ ಬದುಕಿನ ಅವಕಾಶಗಳಿಂದ ಅವನಿಗೆ ಸ್ವ-ಅನುಭವ, ಲೋಕಾನುಭವ, ಗಳಿಸಿಕೊಳ್ಳಲು ಸಾಧ್ಯವಾಯಿತು. ಸಹಜವಾಗಿಯೇ ಸಾಮಾಜಿಕ, ಸಾಹಿತ್ಯಿಕ, ಸಾಂಸ್ಕೃತಿಕ, ವೈಚಾರಿಕ, ಬೌದ್ಧಿಕತೆಗಳು ಗಣನೀಯವಾಗಿ ಬೆಳೆದು ಗಂಭೀರವಾದ ಸೃಜನ ಕ್ರಿಯೆಗಳಿಗೆ ಆಸ್ಪದ ಮಾಡಿಕೊಟ್ಟವು. ಆದರೆ ಮಹಿಳೆಯ ಬದುಕು ಇದಕ್ಕೆ ವ್ಯತಿರಿಕ್ತವಾಗಿದ್ದರಿಂದ ಅಸ್ತಿತ್ವ, ವ್ಯಕ್ತಿತ್ವ, ಬುದ್ಧಿ ಶಕ್ತಿ, ವೈಚಾರಿಕತೆ, ಇವುಗಳಿಂದ ವಂಚಿತಳಾದಳು. ಇಂತಹ ಕ್ರಿಯಾಶೀಲತೆಗೆ ನಾವು ಮತ್ತೆ ಈ ಪುರುಷಪ್ರಧಾನ ವ್ಯವಸ್ಥೆಯ ಕಡೆಗೆ ಕೈ ತೋರಿಸಬೇಕಾಗುತ್ತದೆ. ಹೀಗೆ ಮಹಿಳೆ ಅಜ್ಞಾನ ಮೂಢ ನಂಬಿಕೆಗಳಿಂದ ದಾಸಾನುದಾಸರಾಗಿ ಭೀಕರ ಸ್ವರೂಪದ ಶೋಷಣೆಯ ಬದುಕಿನಲ್ಲಿ ಸ್ಪಂದನವಿಲ್ಲದೇ ಸಂವೇದನೆಗಳಿಲ್ಲದೇ ತನ್ನದೇ ಆದ ಭಾವ ಲಯಗಳಿಲ್ಲದೇ ಅಭಿರುಚಿಗಳಿಲ್ಲದೇ ಬದುಕು ಜಿಡ್ಡುಗಟ್ಟಿದ ವ್ಯವಸ್ಥೆಯ ಅಡಿ ನಿಂತ ನೀರಾಗಿ ಮಲೀನಗೊಂಡು ನಾರುತ್ತಿದೆ.

ಹೆಣ್ಣಿನಲ್ಲಿ ಅಂತಃಕರಣ, ಅಭಿಮಾನ, ಸೌಜನ್ಯ, ಔದಾರ್ಯ, ತ್ಯಾಗ ಮುಂತಾದ ಉದಾತ್ತ ಗುಣಗಳಿಗೆ ಪ್ರತಿಯಾಗಿ ಪುರುಷರು ತೋರಿಸುವ ತಾತ್ಸಾರ, ದ್ರೋಹ, ವಂಚನೆಗಳನ್ನು ಸಾಮಾಜಿಕ ವ್ಯವಸ್ಥೆಯ ಅಪಸ್ವರದಂತಿರುವ ಈ ಅಂಶಗಳು ಸಮಾಜ ಒಪ್ಪಿತವಾಗಿವೆ. ಮಹಿಳೆ ಗಂಡಿನ ಇಚ್ಛೆಗೆ, ಅವನ ಸ್ವಬಾವಕ್ಕೆ ಅವನ ಆಗುಹೋಗುಗಳಿಗೆ ಬದ್ಧಳಾಗಿ ನಡೆದುಕೊಳ್ಳಬೇಕು. ಹೆಣ್ಣು ಗಂಡಿನ ಸುಖಕ್ಕಾಗಿ, ಸಂತೋಷಕ್ಕಾಗಿ, ಎಷ್ಟೇ ತನ್ನನ್ನು ಹೊಂದಿಸಿಕೊಂಡರೂ ಒಂದಲ್ಲ ಒಂದು ನೆಪದಿಂದ ಹೆಣ್ಣುಗಳನ್ನು ಪೀಡಿಸದ ಗಂಡಸರಿಲ್ಲ. ಇಂತಹ ಗಂಡಸರಿಗೆ ಹೆಣ್ಣು ಮಾಡುವ ಕೆಲಸಗಳನ್ನು ಎಂಟು ದಿನ ಮಾಡಲೇಳಿದರೆ, ಅಥವಾ ಅವರಿಗೆ ಆ ಕೆಲಸಗಳನ್ನು ಒದಗಿಸಿ ಕೊಟ್ಟರೆ, ಹುಚ್ಚರಾಗಿ ಓಡಿ ಹೋಗುವುದರಲ್ಲಿ ಅನುಮಾನವಿಲ್ಲ. ಸ್ತ್ರೀ ಪುರುಷರ ಮಧ್ಯ ಘೋರವಾದ ತಾರತಮ್ಯದಿಂದಾಗಿ ಸ್ತ್ರೀ ಸಮಸ್ಯೆಗಳು ಭ್ರೂಣದಿಂದ ಹಿಡಿದು ಮಸಣದವರೆಗೂ ಬೆನ್ನಟ್ಟುತ್ತಲಿವೆ.

ಈ ಬಗ್ಗೆ ಭಾರತೀಯ ಸ್ತ್ರೀವಾದದ ಆದಿ ಚಿಂತಕಿ ತಾರಾಬಾಯಿ ಶಿಂಧೆ (೧೮೫೦-೧೯೧೦) ಅವರು, ಸ್ತ್ರೀ ಪುರುಷರ ತುಲನೆ ಮಾಡುತ್ತಾ, ತಾರಾಬಾಯಿ ತಾನೊಬ್ಬ ಅಶಕ್ತ ಮುಗ್ಧ, ಮಂಕು ಹೆಣ್ಣು. ಪುರುಷರ ದಬ್ಬಾಳಿಕೆ, ದ್ವಂದ್ವ, ವಿಶ್ವಾಸ ದ್ರೋಹಗಳು ನನ್ನನ್ನು ಒರಟಳನ್ನಾಗಿ, ಮೊಂಡಳನ್ನಾಗಿ ಮಾಡಿಬಿಟ್ಟಿದೆ. ನಾನು ಹೇಳಬೇಕಾದುದ್ದನ್ನು ನಯನಾಜೂಕಾಗಿ ಹೇಳುವಷ್ಟು ತಾಳ್ಮೆ ಸಾಧ್ಯವಿಲ್ಲವಾಗಿದೆ ಎನ್ನುತ್ತಾರೆ.

ತಾರಾಬಾಯಿ ದೇವರನ್ನು ನೆಪವಾಗಿಟ್ಟುಕೊಂಡು, ಮಾತನಾಡುತ್ತಾ ಮಾನವ ಸಹಜವಾದ ಎಲ್ಲಾ ದೋಷಗಳನ್ನು, ಪಾಪಗಳನ್ನು ಒಂದೊಂದಾಗಿ ವಿಂಗಡಿಸಿ ಹೇಳುತ್ತಾರೆ. "ಹೆಂಗಸಿನ ಮಾತಿಗೆ ಬಂದಾಗ ಮಾತ್ರ ಸಮಾಜ ದೋಷಗಳನ್ನು, ಪಾಪಗಳನ್ನು ಅಪರಾಧಗಳೆಂದು ಪರಿಗಣಿಸಿ ಶಿಕ್ಷೆಗಳನ್ನು ನಿರ್ಣಯಿಸುತ್ತದೆ. ಗಂಡಸಿನ ಮಾತಿಗೆ ಬಂದರೆ, ಮಾತ್ರ ಇವು ಅಪರಾಧಗಳೇ ಅನಿಸುವುದಿಲ್ಲ. ಎಷ್ಟೋ ವೇಳೆ ಈ ದೋಷ ಪಾಪಗಳಿಗೆ

ಹೊಗಳಿಕೆ, ಪುರಸ್ಕಾರಗಳು ಸಿಗಬಹುದು''[೧೦]. ಹೆಂಗಸರು ಗಂಡಸಿಗಿಂತ ಧೈರ್ಯಸ್ಥರು, ಪ್ರತಿದಿನ ಗಂಡಸಿನ ಕ್ರೌರ್ಯ, ದುಷ್ಟತನ, ಕುಟಿಲತೆ, ಭಯಂಕರವಾಗಿ ಅನುಭವಿಸುವುದನ್ನು ಕಾಣುತ್ತೇವೆ. ಇದರ ಬಗ್ಗೆ ಲಕ್ಷ್ಯಕೊಡುವುದಿಲ್ಲ. ಆದರೂ ಸಮಾಜದಲ್ಲಿ ಹೆಂಗಸರ ಮೇಲೆ ಗೂಬೆ ಕೂಡಿಸುತ್ತಾರೆ. ದೇವರು, ಧರ್ಮಗಳ ಕಲ್ಪನೆ ಸಮಾಜ ನಿಯಂತ್ರಣದಲ್ಲಿ ಪ್ರಮುಖ ಪಾತ್ರವಹಿಸುವ ಸಾಧನಗಳು. ಅದಕ್ಕೆ ತಾರಾಬಾಯಿ ಮೊದಲಿಗೆ ದೇವರನ್ನೇ ತರಾಟೆಗೆ ತೆಗೆದುಕೊಂಡರು. ಸರ್ವಶಕ್ತನೂ ಸಕಲ ಜೀವಿಗಳನ್ನು ಸಮಾನವಾಗಿ ಸೃಷ್ಟಿಸಿದವನೂ ನೀನೇ ಅಲ್ಲವೇ ಹಾಗಾದರೆ, ಪುರುಷರಿಗೆ ಸುಖಗಳು ಸ್ತ್ರೀಯರಿಗೆಲ್ಲಾ ದುಃಖ ಎಂಬಂತೆ ಹಂಚಿದೆ ಏಕೆ ಎಂದು ಪ್ರಶ್ನಿಸುತ್ತಾರೆ. ಎಂದಿನಂತೆ ಮಹಿಳೆಯರ ಬದುಕು ಪುರುಷರ ನಿಯಂತ್ರಣದ ಸಮಾಜದಲ್ಲಿ ಉಸಿರಾಡುತ್ತಾ ಶಿಕ್ಷಣದ ಸೌಲಭ್ಯದ ಮಾತಿರಲಿ, ಚಲನವಲನಗಳ ಸ್ವಾತಂತ್ರ್ಯವೂ ಇಲ್ಲದ ಸ್ಥಿತಿಯಲ್ಲಿ ಸಾಗಿ ಬಂದಿದೆ ಎಂಬುದನ್ನು ಲಕ್ಷಿಸಬೇಕು. ದೊರಕಿರುವಷ್ಟೇ ಮಹಿಳಾ ಸಾಮರ್ಥ್ಯವನ್ನು ಕುರಿತು ಅಪಹಾಸ್ಯ, ಮಾಡುವುದಾಗಿದೆ.

''ಹೆಂಗಸರನ್ನು ಪತಿತೆಯರು. ವಂಚಕಿಯರು, ಎನ್ನುತ್ತಾರೆ. ಆದರೆ ಅಪವಿತ್ರ ಕೆಲಸಗಳಲ್ಲಿ ತೊಡಗುವಲ್ಲಿ ವಿಶ್ವಾಸ ದ್ರೋಹ ಮಾಡಿ ಬೆನ್ನಿಗೆ ಇರಿಯುವಲ್ಲಿ ಗಂಡಸರು ಹೆಂಗಸರನ್ನು ಮೀರಿಸಿ ಮೆರೆಯುತ್ತಾರೆ ಎಂಬುದು ವಾಸ್ತವ ಸಂಗತಿ. ಹೀಗಿದ್ದರೂ ಗಂಡಸು ಭಗವಂತನೇ ಆಗಿ ಪುರುಷೋತ್ತಮನೆನಿಸುತ್ತಾನೆ.

ಇನ್ನೂ ಹೆಂಗಸರನ್ನು ವ್ಯಭಿಚಾರಿಗಳೆಂದು ಯಾರ ಪ್ರೇರಣೆಯಿಂದ ಅವರು ಈ ಪಾಪದಲ್ಲಿ ತೊಡಗುತ್ತಾರೆ, ಇದಕ್ಕೆ ಮುಂದಾದವರು ಗಂಡಸರು ತಾನೇ, ಹೆಂಗಸು ತನ್ನಷ್ಟಕ್ಕೆ ತಾನೇ ಈ ಲೀಲೆಯಲ್ಲಿ ತೊಡಗುವುದಿಲ್ಲ ವಾಸ್ತವವಾಗಿ ಕಟ್ಟಿ ಕೊಂಡವನ ಪ್ರಭಾವವುಂಟು. ಕುಟುಂಬದಲ್ಲಿ ಸೌಖ್ಯದ ಕೊರತೆ, ಈ ವಿಚಾರದಲ್ಲಿ ಗಂಡಸಿನ ನಿರೀಕ್ಷೆಗಳೇ ಬೇರೆ''[೧೧]. ತನ್ನ ದೇಹ ಸುಖಕ್ಕಾಗಿ, ನೀತಿ ನಿಯಮಗಳನ್ನು, ಧರ್ಮಶಾಸ್ತ್ರ ಪಲ್ಲಟಗೊಳಿಸಿ ವೈವಿಧ್ಯಕ್ಕಾಗಿ ಪ್ರಯೋಗಗಳನ್ನು ನಡೆಸುತ್ತಾನೆ. ಹೆಂಗಸು ಒಬ್ಬ ಗಂಡಸಿಗೆ ಮೀಸಲಾಗಿರುವ ಶಾಸ್ತ್ರವನ್ನು ಹೇಳುತ್ತಲೇ ಸಂತಾನ ಪ್ರಾಪ್ತಿಗಾಗಿ 'ನಿಯೋಗ ಪದ್ಧತಿ'ಯನ್ನು ಹೇಳುತ್ತಾನೆ. ಇದು ಮಾತ್ರ ವ್ಯಭಿಚಾರವಲ್ಲ. ಇದಕ್ಕೆ ಬದಲಾಗಿ 'ವಿಧವಾ ವಿವಾಹ' ಅನುಮೋದಿಸಲಿಲ್ಲ ಹೆಣ್ಣಿನ ಸುತ್ತ ಹೆಣೆದ ಪುರಾಣಗಳು, ಐತಿಹ್ಯಗಳು, ಸಮೃದ್ಧವಾಗಿವೆಯೇ ಹೊರತು ಅಲ್ಲೆಲ್ಲಾ ಅವಳ ವಸ್ತುಸ್ಥಿತಿಯ ದಾಖಲೆಗಳ ಸುಳಿವೇ ಇಲ್ಲ ಎಂಬುದು ನಮ್ಮ ಬದುಕಿನ ವಾಸ್ತವಗಳ ಅನುಭವಗಳನ್ನೇ ಆಧರಿಸಿ, ಈ ಮಿಥ್‌ಗಳು ಸೃಷ್ಟಿಸಿರುವ ಮಹಿಳಾ ಜಗತ್ತಿನ ರಹಸ್ಯವನ್ನು ಭೇದಿಸಬೇಕಷ್ಟೇ ಎಂದಿದ್ದಾರೆ. ''ಹೆಣ್ಣಿನ ಬದುಕನ್ನು ಅವಳ ಜೈವಿಕತೆ, ಮಾನಸಿಕ ವಿಶ್ಲೇಷಣೆ ಮತ್ತು ಚಾರಿತ್ರಿಕ ವಸ್ತುಸ್ಥಿತಿಗಳ ಸಂದರ್ಭದಲ್ಲಿಟ್ಟೇ ಗ್ರಹಿಸಬೇಕೆಂಬುದು''[೧೨] ಚಿಂತಕಿ ಸಿಮಾನ್ ದಬುವಾ ಹೇಳಿದ್ದಾರೆ. ಈಕೆ ಸ್ತ್ರೀವಾದಿ ಚಿಂತನೆಗಳನ್ನು ಮಂಡಿಸಿದ ಆದಿ ಪ್ರವರ್ತಕಿ. ಸಿಮಾನ್ ದಬುವಾ ಪುರುಷ ಸಮಾಜ ತನ್ನ ಅನುಕೂಲಕ್ಕೆ ತಕ್ಕಂತೆ ಸ್ತ್ರೀ ಮಾದರಿಗಳನ್ನು ನಿರ್ಮಿಸಿದೆ ಎಂಬುದನ್ನು ಆಕೆ ತನ್ನ 'The second sex' ಎಂಬ ಕೃತಿಯಲ್ಲಿ ಸವಿಸ್ತಾರವಾಗಿ ಪ್ರತಿಪಾದಿಸಿದ್ದಾಳೆ. ಅಲೆಮಾರಿ ಬದುಕಿನ ಪ್ರಾಚೀನ ಸಮಾಜಗಳಿಂದ ಹಿಡಿದು ಅದು ಕೃಷಿ ಹಾಗೂ ಪಶುಪಾಲನಾ ಸಮುದಾಯಗಳಾಗಿ ನೆಲೆನಿಂತ ಹಂತಗಳವರೆಗೆ ದಾಟಿ ಮಧ್ಯಕಾಲೀನ ಯುಗದ ವೇಳೆಗೆ ಪಿತೃಪ್ರಧಾನ ಗುಣ ಲಕ್ಷಣಗಳನ್ನು ಕೂಡಿಸಿ ಕೊಂಡ ಹಂತದವರೆಗೂ ಮನುಜ ಕುಲವು ನಡೆದು ಬಂದ ಚಾರಿತ್ರಿಕ ವಸ್ತು ಸ್ಥಿತಿಯನ್ನು ಅವಲೋಕಿಸಿ ಮಹಿಳೆಯ ಬದುಕನ್ನು ಗುರುತಿಸಿ ಕೊಳ್ಳಬೇಕು. ಅವಳ ಹೆಜ್ಜೆಯ ಗುರುತುಗಳನ್ನು ಅಳಿಸಿ ಹಾಕುವ ಪ್ರಯತ್ನಗಳು ನಿರಂತರವಾಗಿ ಜಾರಿಯಲ್ಲಿದೆ. ಇದನ್ನು ಪುರಾಣ, ಐತಿಹ್ಯಗಳಲ್ಲಿ

ಹುದುಗಿರುವ ಮಿಥ್‌ಗಳನ್ನು ಅಧ್ಯಯನ ಮಾಡುವ ಮೂಲಕವೇ ಈ ಸೂಕ್ಷ್ಮತೆ ಅರಿತು ಪುರುಷ ನಿರ್ಮಿತ ಚರಿತ್ರೆಯಲ್ಲಿ ಕಳೆದು ಹೋಗಿದ್ದ ಮಹಿಳೆಯು ಕಾಣಿಸ ತೊಡಗುತ್ತಾಳೆ. ಪುರುಷ ವ್ಯವಸ್ಥೆ ಅವಳನ್ನು ಕಣ್ಮರೆಯಾಗಿಸಿಟ್ಟಿದ್ದರ ಹಿನ್ನೆಲೆಯಲ್ಲಿ ಅನಾವರಣಗೊಳ್ಳುತ್ತದೆ.

ಪುರುಷ ವರ್ಗವು ವರ್ಣ, ಜಾತಿ, ವೈಷಮ್ಯಗಳಿಗಾಗಿ ಹೋರಾಡಿ, ಬಡಿದಾಡಿ ಸತ್ತರೆ, ಹೆಣ್ಣು ಆಶ್ರಯಕ್ಕಾಗಿ, ಬಡಿದಾಡಬೇಕಾಗಿ ಬಂದಿರುವುದು. ಪುರುಷ-ಹಿತಾಸಕ್ತಿ ಕಾಪಾಡುವ ಸಾಂಸ್ಕೃತಿಕ ಅಂಶಗಳು ಕಲುಷಿತವಾಗಿ ನಾರುತ್ತಿವೆ. ಆರೋಗ್ಯಪೂರ್ಣ ಮನಸ್ಸುಗಳು ಇದರಿಂದ ಕದಡುತ್ತಿವೆ. ಇದು ಸಾಮಾಜಿಕ ಸ್ವಾಸ್ಥ್ಯ ನಾಶವಾಗಲು ಕಾರಣವಾಗಿದೆ. ಲಿಂಗ ತಾರತಮ್ಯತೆಯು ವ್ಯಂಗ್ಯ, ದುರಂತ, ವಿಪರ್ಯಾಸ ಮತ್ತು ಭಯಾನಕವಾದ ರೂಪ ಪಡೆದಿದ್ದು, ಪರಿಣಾಮವಾಗಿ ಹಸುಳೆಯಿಂದ ಹಿಡಿದು ವೃದ್ಧೆಯವರೆಗೆ ಮಹಿಳೆ ಮೇಲಿನ ದೌರ್ಜನ್ಯಗಳು ಭೀಕರವಾಗಿ ನಡೆಯುತ್ತಿವೆ. ದೇಶದಲ್ಲಿ ಸುಮಾರು ೪೯ ಕೋಟಿಗಿಂತ ಹೆಚ್ಚು ಮಹಿಳೆಯರಿದ್ದಾರೆ. ಮಹಿಳೆಯರ ಮೇಲೆ ನಡೆಯುವ ಕಿರುಕುಳಗಳಲ್ಲಿ ಯುರೋಪ ರಾಷ್ಟ್ರಗಳನ್ನು ಬಿಟ್ಟರೇ ಭಾರತವೇ ಮುಂಚೂಣಿಯಲ್ಲಿರುವುದು ತಿಳಿದು ಬಂದಿದೆ. ನಮ್ಮ ದೇಶದಲ್ಲಿ ಅತ್ಯಾಚಾರ, ಅಪಹರಣ, ವರದಕ್ಷಿಣೆ ಸಾವು, ಹಿಂಸೆ, ಲೈಂಗಿಕ ಕಿರುಕುಳಗಳಂತಹ ಮುಂತಾದ ಅಪರಾಧಗಳನ್ನು ಈ ಕೆಳಗಿನ ಕೋಷ್ಟಕದ ಸಹಾಯದಿಂದ ತಿಳಿದು ಕೊಳ್ಳಬಹುದಾಗಿದೆ.

**ಕೋಷ್ಟಕ ೬**

**ಭಾರತದಲ್ಲಿ ನಡೆದ ಅಪರಾಧಗಳು**

| ಕ್ರ.ಸಂ. | ಅಪರಾಧಗಳ ಪ್ರಕರಣಗಳು | ಪ್ರಕರಣಗಳ ಸಂಖ್ಯೆ | | |
|---|---|---|---|---|
| | | ೧೯೯೮ | ೧೯೯೯ | ೨೦೦೦ |
| ೧ | ಅತ್ಯಾಚಾರಗಳು | ೧೫,೧೫೧ | ೧೫,೪೬೮ | ೧೬,೪೬೯ |
| | | (೧೨.೭೪) | (೧೨.೫೯) | (೧೨.೮೬) |
| ೨ | ಅಪಹರಣಗಳು | ೧೬,೩೫೧ | ೧೫,೯೬೨ | ೧೫,೦೨೩ |
| | | (೧೩.೭೫) | (೧೨.೯೬) | (೧೧.೭೧) |
| ೩ | ವರದಕ್ಷಿಣೆ ಸಾವು | ೬,೯೭೫ | ೬,೬೯೯ | ೬,೯೯೫ |
| | | (೫.೮೭) | (೫.೪೪) | (೫.೪೫) |
| ೪ | ಚಿತ್ರಹಿಂಸೆಗಳು | ೪೧,೩೭೬ | ೪೩,೮೨೩ | ೪೫,೭೭೮ |
| | | (೩೪.೮೧) | (೩೫.೬೦೧) | (೩೫.೭೦) |
| ೫ | ಕಾಡಿಸುವುದು, ಪೀಡಿಸಪವುದು | ೩೦,೯೫೯ | ೩೨,೩೧೧ | ೩೨,೯೪೦ |
| | | (೨೬.೦೪) | (೨೬.೨೪) | (೨೫.೯೮) |
| ೬ | ಲೈಂಗಿಕ ಕಿರುಕುಳಗಳು | ೮,೦೫೪ | ೮,೮೫೮ | ೧೧,೦೨೪ |
| | | (೬.೭೯) | (೭.೨೦) | (೮.೬೦) |
| | ಒಟ್ಟು | ೧೧೮೮೬೬ | ೧೨೩೧೨೧ | ೧೨೮೨೫೬ |

Note: Figure in brackets shows the percentage of respective heads in that years.

Source: Crime in India, 2002, National crime records Bureau, Ministry of Home Affair.

ಈ ಮೇಲಿನ ಕೋಷ್ಠಕದಲ್ಲಿರುವ ಅಂಕಿ ಅಂಶಗಳನ್ನು ನೋಡಿದಾಗ ಯಾವುದೇ ನಾಗರಿಕ ಸಮಾಜ ತಲೆ ತಗ್ಗಿಸದೆ ಇರುವುದಿಲ್ಲ. ಹಾಗೆ ೨೦೦೧ರ ಜನಗಣತಿ ಪ್ರಕಾರ ೧೦೦೦ ಗಂಡು ಮಕ್ಕಳಿಗೆ ಪ್ರತಿಯಾಗಿ ೯೩೩ ಹೆಣ್ಣುಮಕ್ಕಳಿದ್ದಾರೆ. "ಆರ್ಥಿಕವಾಗಿ ಪ್ರಗತಿಯ ಹಾದಿಯಲ್ಲಿರುವ ಭಾರತದಲ್ಲಿ ಇನ್ನೂ ಹೆಣ್ಣುಮಕ್ಕಳನ್ನು ಕೊಲ್ಲಲಾಗುತ್ತಿದೆ ಎನ್ನುವುದು ರಾಷ್ಟ್ರ ಮತ್ತು ಅಂತರಾಷ್ಟ್ರಮಟ್ಟದಲ್ಲಿ ತಲೆ ತಗ್ಗಿಸುವ ವಿಚಾರ"[೨೫] ಎಂದು ಕೇಂದ್ರ ಸರ್ಕಾರದ ಮಹಿಳಾ ಮತ್ತು ಮಕ್ಕಳ ಸಚಿವೆ ರೇಣುಕಾ ಚೌಧರಿ ಹೇಳಿದ್ದಾರೆ. (ವಿಜಯ ಕರ್ನಾಟಕ ೧೯.೨.೦೭)

### ೪. ೨ ಧರ್ಮದ ಹಿನ್ನೆಲೆಯಲ್ಲಿ ಮಹಿಳೆ

ಧರ್ಮವು ಪ್ರಬಲ ಪುರುಷ ವರ್ಗದ ಪಟ್ಟಭದ್ರ ಹಿತಾಸಕ್ತಿಗಳ ರಕ್ಷಣೆಯ ಸುಲಿಗೆಯ ಸಾಧನವಾಗಿದೆ. ಓರ್ವ ವಿದ್ವಾಂಸನ ಪ್ರಕಾರ ಧರ್ಮ, ಜ್ಞಾನಿಯಲ್ಲಿ ಜನಿಸಿ, ಅನುಭವಿಯಲ್ಲಿ ಬೆಳೆದು, ಪುರೋಹಿತಶಾಹಿಯಲ್ಲಿ ಅವಸಾನವಾಗುತ್ತವೆ. ಧರ್ಮ ಧರ್ಮಗಳಲ್ಲಿ ಬೇಧ ಉಂಟಾಗಿ ಅಂದಾಭಿಮಾನಿಗಳಾಗಿ ಕೋಮು ಗಲಭೆಗೆ ಕಾರಣವಾಗಿರುವುದು ನಿರ್ಗತಿಕರನ್ನು, ಬಡವರನ್ನು, ದುರ್ಬಲರನ್ನು ಶೋಷಣೆಗೆ ಒಳಪಡಿಸುವ ಅಸ್ತ್ರವಾಗಿದೆ. ಧಾರ್ಮಿಕ ಸಂಸ್ಥೆಗಳು ಪುರುಷರಿಂದಲೇ ರೂಪುಗೊಂಡು ಪುರುಷರ ಪರವಾಗಿಯೇ ಇರುವ ಸಂಸ್ಥೆಗಳಾಗಿದ್ದು, ಮಹಿಳೆಯರ ಸ್ಥಾನಮಾನಗಳು ಧರ್ಮಕ್ಕನುಸಾರವಾಗಿ ವ್ಯತ್ಯಾಸವಾಗುವುದನ್ನು ಸಾರ್ವತ್ರಿಕವಾಗಿ ಗಮನಿಸಬಹುದು. ವಿಶೇಷವಾಗಿ ಮಹಿಳೆಯರ ಸಹನಶಕ್ತಿ, ದೌರ್ಬಲ್ಯಗಳು, ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಇರುವ ನಂಬಿಕೆಗಳನ್ನು ಕುರಿತು ಧರ್ಮವು ಸ್ಥಾನಮಾನಗಳನ್ನು ಗೊತ್ತು ಪಡಿಸುತ್ತದೆ. ಇಂತಹ ಧರ್ಮದ ನಿಜವಾದ ಮೂಲ ಅರ್ಥ, ಉದ್ದೇಶ, ಸ್ವರೂಪ ಈ ಕೆಳಗಿನಂತೆ ನೋಡ ಬಹುದಾಗಿದೆ.

ಮಾನವನು ಧಾರ್ಮಿಕ ಜೀವಿ, ಆತನ ಧಾರ್ಮಿಕ ಪ್ರವೃತ್ತಿಯು ಆತನನ್ನು ಪ್ರಾಣಿಗಳಿಂದ ಪ್ರತ್ಯೇಕಿಸಿದೆ. ಈ ಧರ್ಮ ವ್ಯಕ್ತಿಯ ಚಟುವಟಿಕೆಗಳು, ಸಂಸ್ಥೆಗಳು. ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ವೈಜ್ಞಾನಿಕ ಮುಂತಾದವುಗಳ ಮೇಲೆ ತನ್ನದೇ ಆದ ಛಾಪನ್ನು ಮೂಡಿಸಿದೆ.

'ಧರ್ಮ' ಎಂದರೆ 'ಧರಿಸುವುದು' ಇದರ ಶಬ್ದಾರ್ಥ 'ಎಲ್ಲಾ ಕಾಲದಲ್ಲಿ ಜೀವನವನ್ನು ಉತ್ತಮವಾದ ನಡೆವಳಿಕೆಯೊಂದಿಗೆ ಧರಿಸಿಕೊಂಡು ಹೋಗುವದೆಂದರ್ಥ'. ವ್ಯಕ್ತಿಯನ್ನು ಸಾಮಾನ್ಯ ಮಟ್ಟದಿಂದ ಮೇಲ್ಮಟ್ಟಕ್ಕೆತ್ತುವುದೇ ಧರ್ಮವಾಗಿದೆ. ಸೃಷ್ಟಿಯಲ್ಲಿರುವ ಸಮಸ್ತ ಜೀವಿಗಳ ಕಲ್ಯಾಣದ ದೃಷ್ಟಿಯಿಂದ ಧರ್ಮ ಹುಟ್ಟಿದೆ. ಲೋಕ ಕಲ್ಯಾಣಕ್ಕಾಗಿ ಸಾಧಕವಾಗುವ ಶುದ್ಧ ಮೌಲ್ಯಗಳ ವಿಚಾರವೇ ಧರ್ಮ. ವ್ಯಕ್ತಿ ತನ್ನ ಜೀವನದಲ್ಲಿ ಸಾಧಿಸಬೇಕಾದ ನಾಲ್ಕು ಪುರುಷಾರ್ಥಗಳಲ್ಲಿ ಧರ್ಮವೂ ಒಂದು. ಕಾಮಾರ್ಥಗಳು ಧರ್ಮಕ್ಕನುಗುಣವಾಗಿದ್ದರೆ ಮೋಕ್ಷ ಲಭ್ಯವಾಗುವುದು. ಇದೊಂದು ಶ್ರೇಷ್ಠವಾದ ನಡತೆಯ ಶಿಸ್ತಿನ ಮಾನವೀಯ ಮೌಲ್ಯಗಳನ್ನು ಹೊಂದಿ ಪ್ರೀತಿ, ಸೌಹಾರ್ದತೆ, ಸದ್ಭಾವನೆಯಿಂದ ಬದುಕುವುದನ್ನು ಕಲಿಸುತ್ತದೆ. ಸಮಾಜದಲ್ಲಿ ಮಾನವೀಯ ಮೌಲ್ಯಗಳ ಪುನರುಜ್ಜೀವನಕ್ಕೆ ಧರ್ಮ ಇರುವುದು. ಐಕ್ಯತೆ, ಸುವ್ಯವಸ್ಥೆ, ಸುಭದ್ರತೆಯನ್ನು ತಂದು, ಜನತೆಯಲ್ಲಿ ತ್ಯಾಗ, ಅನುಕಂಪ, ಸಹನ ಶೀಲತೆ, ಸೇವಾ ಭಾವನೆ, ವಿಧೆಯತೆಯ ಗುಣಗಳನ್ನು ಬೆಳೆಸುವುದು. ವ್ಯಕ್ತಿಯ ಸ್ವತಂತ್ರ್ಯ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸುವುದು. ಧರ್ಮವನ್ನು

ರಕ್ಷಿಸಿದವರಿಗೆ ಧರ್ಮ ರಕ್ಷಿಸುತ್ತದೆ. ಧರ್ಮವು ವ್ಯಕ್ತಿಯನ್ನು ಮೃಗತ್ವದಿಂದ ಮಾನವತ್ವದ ಕಡೆಗೆ ಸಾಗಿಸಬಲ್ಲಂತಹದ್ದು ಆಗಿದೆ. ಇದು ಶ್ರೇಷ್ಠವಾದುದು, ಆದರ್ಶ ಹಾಗೂ ನೈತಿಕವಾದುದಾಗಿದೆ.

**ಮನು ಸ್ಮೃತಿಯಲ್ಲಿ**

ಧರ್ಮದ ಹತ್ತು ಲಕ್ಷಣಗಳನ್ನು ಹೇಳಲಾಗಿದ್ದು ಧೃಢತೆ, ಕ್ಷಮೆ, ಮನೋನಿಗ್ರಹ, ಆಸ್ತೀಯ, (ಕಳ್ಳತನ ಮಾಡದಿರುವುದು) ಅಂತರಂಗ ಬಹಿರಂಗ ಶುದ್ಧತೆ, ಇಂದ್ರಿಯಾ ನಿಗ್ರಹ, ಬುದ್ಧಿಯನ್ನು ಬೆಳೆಸುವಿಕೆ, ವಿದ್ಯೆ, ಸತ್ಯಶೀಲತೆ, ಮತ್ತು ಅಕ್ರೋಶ, ಈ ಹತ್ತು ಗುಣಗಳ ನಿರಂತರ ಸಾಧನೆಯಿಂದ ಧರ್ಮದ ಸಾಧನೆಯಾಗುತ್ತದೆ. ಇದರಂದ ವ್ಯಕ್ತಿ ಅರಿಷಡ್ವರ್ಗಗಳಿಂದ ದೂರವಾಗುತ್ತಾನೆ. ತನ್ನ ಅಸ್ತಿತ್ವವನ್ನು ಕೆಲವೊಂದು ಆಚರಣೆಗಳು, ವಿಚಾರ ಪದ್ಧತಿಗಳು, ನಂಬಿಕೆ, ತತ್ವ ಸಿದ್ಧಾಂತ, ನಿಯಮ ರೂಪಿಸುವ ಕೃತಿಗಳು. ಪುರಾಣ ಕತೆಗಳ ಮೂಲಕ ಪ್ರತಿಪಾದನೆ ಮಾಡಿ, ಜಗತ್ತಿನ ಸೃಷ್ಟಿಯ ಬಗ್ಗೆ ತನ್ನದೇ ಆದ ಪ್ರತೀತ ಕಲ್ಪನೆಯನ್ನು ಕಟ್ಟುತ್ತದೆ. ಪ್ರತಿ ಸಮಾಜದ ಪ್ರಮುಖಧಾರೆ ಧರ್ಮವಾಗಿದ್ದು, ಭಾರತೀಯರು ಧರ್ಮಕ್ಕಾಗಿ ಏನೆಲ್ಲಾ ಮಾಡುತ್ತಾರೆ. ಧರ್ಮ ಹೀಗೆ ಹೇಳಿದೆ ಎಂದರೆ ತೀರಿತು ಅದರಂತೆ ನಡೆಯುವವರು, ಆದ್ದರಿಂದಲೇ ಮಾರ್ಕ್ಸ್‌ರವರು "ಧರ್ಮವು ಮಂದಿಯನ್ನು ಮರಳುಗೊಳಿಸುವ ಅಫೀಮು " ಎಂದಿದ್ದಾರೆ.

ಜಗತ್ತಿನಲ್ಲಿ ಹಲವಾರು ತರಹದ ಧರ್ಮಗಳು ಹುಟ್ಟಿಕೊಂಡಿವೆ. ಎಲ್ಲಾ ಧರ್ಮಗಳ ಮೂಲ ಸಕಲರಿಗೆ ಲೇಸನ್ನೇ ಬಯಸುವುದು. ಮಾನವೀಯ ಮೌಲ್ಯಗಳನ್ನು ಹೊಂದಿ, ಗೌರವಿಸುವುದು, ಆಧರಿಸುವುದು, ಆದರ್ಶಿಸುವುದು, ಪಾಲಿಸುವುದು, ಪರಸ್ಪರ ಸಹಿಷ್ಣುತೆ, ಸಹಬಾಳ್ವೆ, ಗೌರವದಿಂದ ಬಾಳುವುದಾಗಿದೆ. ಇಂತಹ ಮಾನವೀಯ ಮೌಲ್ಯಗಳಿಂದ, ಕಲ್ಯಾಣ ದೃಷ್ಟಿಯಿಂದ ಹುಟ್ಟಿದ ಧರ್ಮದ ಅರ್ಥ, ಉದ್ದೇಶ, ಸ್ವರೂಪವನ್ನು ಪುರುಷ ಪ್ರಧಾನ ಸಮಾಜ, ತನ್ನ ಸ್ವಾರ್ಥ ಸಾಧನೆಗಾಗಿ ಅದರ ಅರ್ಥ, ಉದ್ದೇಶ, ಸ್ವರೂಪವನ್ನೇ ತಿರುಚಿ ದಾರಿ ತಪ್ಪಿಸಿ ವಿಕಾರಗೊಳಿಸಿದೆ. ತನ್ನ ಪಟ್ಟಭದ್ರ ಹಿತಾಸಕ್ತಿಗಳಿಗಾಗಿ ಸುಲಿಗೆಯ ಸಾಧನವಾಗಿ ಮಾಡಿಕೊಂಡು ನಿರ್ಗತಿಕರನ್ನು, ಬಡವರನ್ನು ದುರ್ಬಲರನ್ನು ಶೋಷಣೆಗೆ ಒಳಪಡಿಸುವ ಅಸ್ತ್ರವನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದ ಧಾರ್ಮಿಕ ಸಂಸ್ಥೆಗಳನ್ನು ತನ್ನಿಂದಲೇ ರೂಪುಗೊಂಡು, ತನ್ನ ಪರವಾಗಿಯೇ ಇರುವ ಸಂಸ್ಥೆಗಳಾಗುವಂತೆ ಮಾಡಲಾಗಿದೆ. ದರ್ಮವನ್ನು ಹೊಟ್ಟೆ ಹೊರೆಯುವ, ವೈಯಕ್ತಿಕ ಹಿತ ಸಾಧಿಸುವ, ಬಲಿಷ್ಠ ಪುರುಷ ವ್ಯವಸ್ಥೆಯ ಹಿಂದೆ ಬೀಳುವಂತೆ ಮಾಡಿ, ಪುರುಷ ಪ್ರಧಾನ ವ್ಯವಸ್ಥೆ, ಇದನ್ನು ಶೋಷಣೆಯ ಸಾಧನವಾಗಿ ಲೀಲಾಜಾಲವಾಗಿ ಬಳಸುತ್ತಿದೆ. ಪರಿಣಾಮವಾಗಿ ಧರ್ಮ ಪುರುಷ ರಾಜಕಾರಣಕ್ಕೆ ಬೆನ್ನೆಲುಬಾಗಿ ತನ್ನ ಪಾತ್ರವನ್ನು ನಿರ್ವಹಿಸುತ್ತಾ, ಸ್ತ್ರೀ ವಿರೋಧಿ ತತ್ವಗಳಿಂದ ಕೂಡಿ, ಸ್ತ್ರೀ ವರ್ಗವನ್ನು ಅಮಾನವೀಯವಾಗಿ ಶೋಷಿಸುತ್ತಿದೆ.

**ಸ್ತ್ರೀ ವಿರೋಧಿ ಧರ್ಮದ ನಿಲುವುಗಳು**

ಧರ್ಮವು ಪುರುಷನನ್ನು ದೈವತ್ವಕ್ಕೇರಿಸಿ, ಸ್ತ್ರೀಯರನ್ನು ದಾಸ್ಯತ್ವಕ್ಕೆ ನೂಕಿದೆ. ಪರಿಣಾಮ ಸ್ತ್ರೀ ಸಂಬಂಧಿತ ಹಲವಾರು ದುಷ್ಟ ಆಚರಣೆಗಳ ಪ್ರೇರಣೆಗೆ ಕಾರಣವಾಗಿದೆ. ಉದಾ. ಬೆತ್ತಲೆಸೇವೆ, ದೇವದಾಸಿಪದ್ಧತಿ, ಬಾಲ್ಯವಿವಾಹ, ಬಹುಪತ್ನಿತ್ವ, ಸತಿಪದ್ಧತಿ, ಗುಲಾಮಗಿರಿ, ಅಸ್ಪೃಶ್ಯತೆ, ಆತ್ಮಹತ್ಯೆ ಮುಂತಾದವುಗಳು.

ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯ ಅಭಿವ್ಯಕ್ತಿಯು ಪುರುಷರ ಸುಖ ಸಂತೋಷಗಳಿಗೆ ಬಳಕೆಗೊಳ್ಳಬೇಕೆಂಬ

ಸ್ವಾರ್ಥದಲ್ಲಿ ದೇವರು ಧರ್ಮಗಳ ಹೆಸರಿನಲ್ಲಿ ಸ್ತ್ರೀಯರ ಮೇಲೆ ಸುಲಭ ನಿಯಂತ್ರಣವನ್ನು ಜಾರಿಗೆ ತಂದು, ಕೆಲವು ಸಲ ಪುರುಷ ವರ್ಗ ಸ್ತ್ರೀಯರನ್ನು ದುರ್ಮಾರ್ಗಕ್ಕೆ ಎಳೆಯುತ್ತಿದ್ದುದು, ಶಾಸನಗಳಲ್ಲಿ ವ್ಯಕ್ತವಾಗಿದೆ. ಧರ್ಮದ ಹೆಸರಿನಲ್ಲಿ ಕೆಲವು ಜನ (ನೈಷ್ಠಿತ ತಪೋಧನರೂ) ಇಂಥ ಕೀಳು ಕೃತ್ಯ ಅನುಸರಿಸುತ್ತಿದ್ದುದನ್ನು 'ಚಿಕ್ಕನಾಯಕನ ಹಳ್ಳಿಯ ಶಾಸನ'ವೊಂದು ತಿಳಿಸುತ್ತದೆ. ಅಂದಿನ ಸಮಾಜದಲ್ಲಿ ಸ್ತ್ರೀಯರು ತಪಸ್ವಿಗಳ ಕಪಟಕ್ಕೆ ಬಲಿಯಾಗುತ್ತಿದ್ದ ಬಗೆಯನ್ನು ಪರೋಕ್ಷವಾಗಿ ಗಮನಕ್ಕೆ ತರುತ್ತದೆ.

ಮನುಷ್ಯ ಭೋಗಲಾಲಸೆ, ವಿಲಾಸದಲ್ಲಿ, ಆಸಕ್ತಿ ಹೊಂದಿದಂತೆ, ಧರ್ಮದ ಮಾರ್ಗವನ್ನು ತ್ಯಜಿಸುತ್ತಿದ್ದಾನೆ. ನೈತಿಕ ಅಧಃಪತನದತ್ತ ಸಾಗುತ್ತಿದ್ದಾನೆ. ಧರ್ಮವನ್ನು ದೂರ ತಳ್ಳಿ ಕಾಮಾರ್ಥಗಳ ಪೋಷಣೆಯಲ್ಲಿ ನಿರತನಾಗಿದ್ದಾನೆ. ಧರ್ಮದ ಪರಿಜ್ಞಾನವಿಲ್ಲದೇ ಮನುಷ್ಯ ತನ್ನೊಳಗಿನ ಮೃಗೀಯ ಭಾವನೆಗಳಿಂದ ವರ್ತಿಸುತ್ತಾ ಪರಮ ಮೌಲ್ಯ ಮತ್ತು ಪಾವಿತ್ರತೆಯೆಲ್ಲವನ್ನು ಹೆಣ್ಣಿಗೆ ಮಾತ್ರ ಸೀಮಿತಗೊಳಿಸಿ, ಧರ್ಮದ ಹೆಸರಿನಲ್ಲಿ, ಸ್ತ್ರೀ ತನ್ನ ಬದುಕನ್ನು ಕಳೆದುಕೊಂಡು ಜೀವನವಿಡೀ ಶವದಂತೆ ಬದುಕುವ ಹಾಗೆ ಮಾಡಿದ್ದಾನೆ. ಪರಿಣಾಮ ಭಾರತೀಯ ಮಹಿಳೆಯರ ನಿಟ್ಟುಸಿರು ದಟ್ಟೈಸಿದೆ. ಧರ್ಮದ ನಿಯಮಗಳೆಲ್ಲವೂ ಸ್ತ್ರೀಯರ ಶೋಷಣೆಗಾಗಿಯೇ ರೂಪಿಸಲ್ಪಟ್ಟಿವೆಯೇ ಎಂಬಂತೆ, ಅಧಾರ್ಮಿಕ ನಿಯಮಗಳು ಧರ್ಮದ ಹೆಸರಿನಲ್ಲಿ ಮಹಿಳೆಯ ಮೇಲೆ ಹೇರಿ ಆಕೆ ಸಮಾಜದಲ್ಲಿ ಘನತೆ, ಗೌರವದಿಂದ ಬದುಕು ಸಾಗಿಸಲಾರದಂತೆ ಮಾಡಲಾಗುತ್ತಿದೆ. ಇದನ್ನರಿತು "ಹಿಂದೂ ಧರ್ಮವು ಯಾಜ್ಞಿಕ, ಸಾಮಾಜಿಕ, ರಾಜಕೀಯ ಮತ್ತು ಆರೋಗ್ಯ ರಕ್ಷಣಾತ್ಮಕ ನಿಯಮಗಳ ಒಂದು ಕಲಸುಮೇಲೋಗರ. ವಿಧಿ ನಿಷೇಧಗಳ ಧರ್ಮವೆಂಬರ್ಥ ಬರುವಂತೆ ವೇದ ಸ್ಮೃತಿಗಳಲ್ಲಿ ಧರ್ಮವೆಂಬ ಪದವನ್ನು ನಿರ್ವಚಿಸಲಾಗಿದೆ. ಇಂತಹ ಧರ್ಮವನ್ನು ನಾಶಪಡಿಸುವುದರಿಂದ ತಪ್ಪೇನು ಇಲ್ಲ"[೪೯]ವೆಂದು ಅಂಬೇಡ್ಕರ್ ಹೇಳುತ್ತಾರೆ.

ಈ ಧರ್ಮದ ಜೊತೆಗೆ ಧರ್ಮಶಾಸ್ತ್ರಗಳು, ನ್ಯಾಯ ಶಾಸ್ತ್ರಗಳು ಕೆಲ ತತ್ವಜ್ಞಾನಿಗಳು ಪುರುಷ ಪ್ರಾಧಾನ್ಯತೆಯ ತತ್ವವನ್ನು ಎತ್ತಿ ಹಿಡಿದಿವೆ. ಇದರಿಂದ ಸ್ತ್ರೀ ಸಂಬಂಧಿತ ಬಹು ಸಮಸ್ಯೆಗಳು ಕವಲೊಡೆದು ಹಲವಾರು ಶಾಖೋಪಶಾಖೆಗಳಾಗಿ ನಿಂತಿವೆ. ಮೊದಲಿಗೆ ನಾವು ಧರ್ಮಗಳನ್ನು ತೆಗೆದು ಕೊಂಡಾಗ, ಅವುಗಳು ಹೇಗೆ ಸ್ತ್ರೀಯ ವ್ಯಕ್ತಿತ್ವವನ್ನು ಹತ್ತಿಕ್ಕಿ, ಹೆಣ್ಣುತನವನ್ನು ವಿರೂಪಗೊಳಿಸಿ, ಪುರುಷರ ಚಕ್ರಾಧಿಪತ್ಯ, ದೌರ್ಜನ್ಯಗಳಿಗೆ ಕಾರಣವಾದ ಬಗೆಯನ್ನು ಈ ರೀತಿ ತಿಳಿಯಬಹುದಾಗಿದೆ.

**೧. ಕ್ರೈಸ್ತ ಧರ್ಮ**

ತತ್ವಜ್ಞಾನಿ 'ನಿಮಾಷೆ' ಸ್ತ್ರೀಯ ಸೃಷ್ಟಿಯನ್ನು ದೇವರ ೨ನೇ ತಪ್ಪು ಎಂದಿದ್ದಾರೆ.

'ಸಂತಪಾಲನು' ವ್ಯಭಿಚಾರವನ್ನು ತಪ್ಪಿಸಲು ಪ್ರತಿಯೊಬ್ಬನು ಒಬ್ಬ ಹೆಂಡತಿಯನ್ನು, ಪ್ರತಿಯೊಬ್ಬಳು ಒಬ್ಬ ಗಂಡನನ್ನು ಹೊಂದುವುದು ಉತ್ತಮ ಎಂದು ಹೇಳಿದ್ದಾನೆ.

'ಟರ್ಟುಲಿಯನ್' ಸ್ತ್ರೀಯನ್ನು ಸೈತಾನನ ಪ್ರವೇಶ ದ್ವಾರ ಎಂದು ಕರೆದಿದ್ದಾರೆ.

ಪೋಪ್ ಗ್ರೆಗೋರಿ 'ಸ್ತ್ರೀಯನ್ನು ನರಕದ ಮಹಾದ್ವಾರ' ಎಂದಿದ್ದಾರೆ. ಹೀಗೆ ಸ್ತ್ರೀ ಸಂಬಂಧಿತ ಕಲ್ಪನೆಗಳಿವೆ.

ವೈದಿಕ ಧರ್ಮಕ್ಕಿಂತಲೂ ಜೈನ ಮತ್ತು ಬೌದ್ಧಧರ್ಮಗಳು ಹೆಚ್ಚಿನ ಸ್ವಾತಂತ್ರವನ್ನು ಸ್ತ್ರೀಯರಿಗೆ ನೀಡಿದ್ದರೂ,

ಮಹಾವೀರ ಮತ್ತು ಗೌತಮ ಬುದ್ಧ ಇಬ್ಬರಿಗೂ ಸ್ತ್ರೀಯರ ಬಗ್ಗೆ ವಿಶ್ವಾಸವಿರಲಿಲ್ಲ.

**೨. ಜೈನ ಧರ್ಮವು ಮತ್ತು ಬೌದ್ಧ ಧರ್ಮ**

ಸಾಧನೆಯ ಮಾರ್ಗದಲ್ಲಿ ಮುಂದುವರೆಯುತ್ತಿದ್ದ ಜೈನ ಸಾಧಕರ ಪಾಲಿಗೆ ಸ್ತ್ರೀ ತೊಡಕಾದಳು. ಬಾಲ್ಯವಿವಾಹ ಪದ್ಧತಿ ಜಾರಿಗೆ ಬಂದಂತೆ, ಹೆಣ್ಣಿನ ಪಾಲಿಗೆ ದೊರೆತದ್ದು ವಿದ್ಯೆ ಮರೆಯಾಗುವಂತೆ ಮಾಡಿತು. ಬುದ್ಧನು ದಿಗಂಬರತ್ವವನ್ನು ಸ್ತ್ರೀಯರಿಗೆ ಬೋಧಿಸಲೇ ಇಲ್ಲ. ಸನ್ಯಾಸತ್ವ ನೀಡಲು ಸಿದ್ಧನಿರಲಿಲ್ಲ. ಸ್ತ್ರೀಯರು ಶೀಘ್ರ ಕೋಪಿಗಳು. ಸ್ತ್ರೀಯರು ಅತೀ ಸುಲಭದಲ್ಲಿ ಭಾವಾವೇಶಕ್ಕೆ ಒಳಗಾಗುವರು. ಸ್ತ್ರೀಯರು ಅಸೂಯಪರರು, ಮಂದಮತಿಗಳು ಎಂಬೀ ಕಾರಣದಿಂದಲೇ ಅವರಿಗೆ ಜವಾಬ್ದಾರಿ ಕೊಡಲಾಗದು ಎಂದು ಆತನ ಪರಮ ಶಿಷ್ಯ ಆನಂದನಿಗೆ ತಿಳಿಸಿದ್ದ ಮಾತ್ರವಲ್ಲ ಹೆಂಗಸಿನ ಹೇಳಿಕೆ, ಆಳಿಕೆಯಂತೆ ನಡೆಯುತ್ತಿರುವ ರಾಜ್ಯವು ಅಪಖ್ಯಾತಿಯನ್ನು, ಹೆಂಗಸಿನ ಪ್ರಾಬಲ್ಯಕ್ಕೆ ತಲೆಬಾಗಿದ ಗಂಡಸರು ಅಪಖ್ಯಾತಿಯುಳ್ಳವರು ಎಂದು ಕೂಡ ಬೋಧಿಸತ್ವನ ಜಾತಕ ಕಥೆಗಳಲ್ಲಿ ಹೇಳಲಾಗಿದೆ.

ಪ್ರಾಚೀನ ಹಿಬ್ರೂಗಳ ಪ್ರಾರ್ಥನೆಯೊಂದು ದೈವ ಕೃಪೆ ನನ್ನ ಮೇಲಾಗಿದೆ.... ಆತ ನನ್ನನ್ನು ಹೆಂಗಸಾಗಿ ಸೃಷ್ಟಿಸಲಿಲ್ಲ ಎಂಬುದಾಗಿದೆ. ಗ್ರೀಕ್ ದಾರ್ಶನಿಕ ಪ್ಲೇಟೋ ದೇವರು ನನಗೆ ಸ್ತ್ರೀಯಾಗಿ ಮಾಡದೇ ಪುರುಷರನನ್ನಾಗಿ ಸೃಷ್ಟಿಸಿದ್ದಕ್ಕಾಗಿ, ನಿನಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ ಎಂದಿದ್ದಾನೆ.

ಅರಿಸ್ಟಾಟಲ್ 'ಸ್ತ್ರೀಯರು ಪ್ರಕೃತಿ ಸಹಜ ದೋಷ ದುರ್ಬಲತೆಗೆ ಒಳಗಾದವರು' ಎಂದು ಹೇಳಿದ್ದಾನೆ

ಪ್ರತಿಧರ್ಮವು ಸ್ತ್ರೀಯನ್ನು ಸಾಧನೆಗೆ ಹಿನ್ನಡೆ ಎಂದು ಭಾವಿಸಿ ಧರ್ಮದಿಂದ ದೂರವಿರಿಸಿದರು.

**೩. ಇಸ್ಲಾಂ ಧರ್ಮ:** ನಾವು ಅತ್ಯಂತ ಅಮೂಲ್ಯವಾದ ವಸ್ತುಗಳನ್ನು ಬಚ್ಚಿಡುವೆವು. ಮಹಿಳೆಯರು ಕೂಡ ಒಂದು ಬಗೆಯ ಖಜಾನೆ ಇದ್ದಂತೆ, ಕಾರಣ ಅವಳನ್ನು ಕಾಮುಕ, ನೀಚ, ಅಪಾಯಕಾರಿ ಕಣ್ಣುಗಳಿಂದ ರಕ್ಷಿಸಬೇಕು ಜೊತೆಗೆ ಇತಿಹಾಸದುದ್ದಕ್ಕೂ ಸ್ತ್ರೀಯನ್ನು ದ್ವಿತೀಯ ದರ್ಜೆಯ ಪ್ರಜೆಯಾಗಿ ನಡೆಸಿಕೊಂಡಿದೆ. ಬಹುಪತ್ನಿತ್ವಕ್ಕೆ ಅವಕಾಶಕೊಟ್ಟು ಉಪಪತ್ನಿಯರನ್ನಾಗಿ ಲೆಕ್ಕವಿಲ್ಲದಷ್ಟು ಮಂದಿ ಸ್ತ್ರೀಯರನ್ನು ಇಟ್ಟುಕೊಳ್ಳುವುದಕ್ಕೆ ಪತ್ನಿಯರನ್ನು 'ತಲಾಕ್' ಮೂಲಕ ಯಾವುದೇ ಕ್ಷಣದಲ್ಲಿಯೂ ಹೊರ ನೂಕುವುದಕ್ಕೆ ಪುರುಷರಿಗೆ ಅಧಿಕಾರ ನೀಡಿ ಅದಕ್ಕೆ ಧರ್ಮಸಮ್ಮತ ಮುದ್ರೆಯೊತ್ತಿದಾಗಲೇ ಸ್ತ್ರೀಯರ ಶೋಷಣೆಗೆ ಸಾಕಷ್ಟು ಅವಕಾಶ ನೀಡಿದಂತಾಗಿತ್ತು.

**೪. ಹಿಂದೂ ಧರ್ಮ:** ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರಿಗೆ ಉತ್ತಮ ಸ್ಥಾನ ನೀಡಿದೆ ಎನ್ನಬಹುದಾದರೂ, ಅವರನ್ನು ಪುರುಷರಿಗಿಂತ ಕೀಳಾಗಿ ಕಂಡಿರುವುದಕ್ಕೆ ಹಿಂದೂ ಧರ್ಮ ಆಧಾರಿತ ನಮ್ಮ ಪವಿತ್ರ ಗ್ರಂಥಗಳನ್ನು ಧರ್ಮಶಾಸ್ತ್ರಗಳನ್ನು, ಪುರಾಣಗಳನ್ನು ಮೊದಲಾದವುಗಳನ್ನು ತೆಗೆದುಕೊಳ್ಳಬಹುದು.

ಹಿಂಧೂಧರ್ಮದ ಸಿದ್ಧಾಂತಗಳೆಲ್ಲವೂ ಬಹುಮಟ್ಟಿಗೆ ಸ್ತ್ರೀ ವಿರೋಧಿ ಸಿದ್ಧಾಂತಗಳೇ ಆಗಿವೆ. 'ಹೆಂಗಸು ಎಲ್ಲ ವಿನಾಶಗಳ ಮೂಲ' ಎಂದು ಆರೋಪಿಸಲಾಗಿದೆ. ಭೀಷ್ಮ, ಯುದಿಷ್ಟರರ ಮಾತುಕತೆಗಳಲ್ಲಿ ರಾಮಾಯಣದ ಪಾತ್ರಗಳಲ್ಲಿ ಇಂತಹ ಆರೋಪಗಳು ಅಸಂಖ್ಯಾತವಾಗಿವೆ. ಆದಿಶೇಷನು ತನ್ನ ಸಹಸ್ರ ನಾಲಿಗೆಗಳನ್ನು ಬಳಸಿ ನಿರಂತರ ೧೦೦ ವರ್ಷಗಳ ಕಾಲ ಶಪಿಸುತ್ತಾ ಹೋದರೂ ಮುಗಿಯದಷ್ಟು ಪಾಪಗಳು ಹೆಂಗಸರದು ಎಂಬಂತೆ ಹೇಳಲಾಗಿದೆ. ವಿಷ್ಣುಪುರಾಣದಲ್ಲಿ 'ಗಂಡಿನ ವಯಸ್ಸಿನ ಮೂರನೇ ಒಂದು ಭಾಗದಷ್ಟು

ಹೆಣ್ಣಿಗೆ ವಯಸ್ಸಿರಬೇಕು' ಎಂದು ಹೇಳಿದೆ.

**ವೇದಗಳು :** ಧರ್ಮಕ್ಕೆ ಪೂರಕವಾಗಿದೆ, ಅಥವಾ ವಿರುದ್ಧವಾಗಿದೆ ಎಂಬ ಗೊಡವೆಗೆ ಹೋಗದೆ, 'ತನ್ನ ಗಂಡನು ಹೇಳಿದಂತೆ ಪತ್ನಿಯಾದವಳು ನಡೆದುಕೊಳ್ಳಬೇಕು' ಎಂಬ ಉಕ್ತಿ ಇದೆ. 'ಹೇಳುವುದು ವೇದ, ಹಾಕುವುದು ಗಾಳ' ಎನ್ನುವಂತೆ ದೇವಿಭಾಗವತದಲ್ಲಿ 'ಸ್ತ್ರೀಯರು ಎಂದಿಗೂ ಸ್ನೇಹಿತೆಯರಲ್ಲ ಅಥವಾ ಶತ್ರುಗಳಲ್ಲ, ಅವರು ಯಾವಾಗಲೂ ಹೊಸ ಪುರುಷರಿಗಾಗಿ ಹಾತೊರೆಯುತ್ತಿರುತ್ತಾರೆ... ಎಂಬ ಮಾತು ಬರುವುದು'.

**ಮಹಾಭಾರತ :** ಅನುಶಾಸನ ಪರ್ವದಲ್ಲಿ ಒಳ್ಳೆಯ ಕುಟುಂಬದಿಂದ ಬಂದದ್ದು, ಸುಂದರಿಯರಾಗಿದ್ದು, ವಿವಾಹವಾಗಿದ್ದರೂ ಅವಕಾಶ ಸಿಕ್ಕಿತೆಂದರೆ, ನೈತಿಕತೆಯನ್ನು ಉಲ್ಲಂಘಿಸಲು ಸ್ತ್ರೀಯರು ಹಿಂದೆಗೆಯುವವರಲ್ಲ ಎನ್ನಲಾಗಿದೆ. ಹೆಂಗಸರು ತುಂಬಾ ಅಪಾಯಕಾರಿ ಎಂದು ಚಾತುರ್ವರ್ಣ ಗುರುತಿಸಿತು. ಅವರನ್ನು ನಿಯಂತ್ರಿಸುವ ಸಲುವಾಗಿ ಸತಿ ಮತ್ತು ವೈಧವ್ಯದ ಜೊತೆಗೆ ಬಾಲ್ಯವಿವಾಹವನ್ನು ರೂಪಿಸಲಾಗಿದೆ ಎಂದಿದೆ. ಹೀಗೆ ಚಾತುರ್ವರ್ಣ್ಯ ಪದ್ಧತಿಯು ಮಹಿಳೆಯರಿಗೆ ಆಘಾತಕಾರಿಯಾಗಿ ಪರಿಣಮಿಸಿತು. ಭೀಷ್ಮಾಚಾರ್ಯರು ಮಹಾಭಾರತದಲ್ಲಿ ಒಂದು ಕಡೆ ಹೀಗೆ ಹೇಳುವರು, 'ಗಂಡ, ಹೆಂಡತಿಯನ್ನು ತಾನು ಗಳಿಸಿದ ಸಂಪತ್ತು' ಎಂದು ಪರಿಗಣಿಸಬಹುದು.

**ರಾಮಾಯಣದಲ್ಲಿ :** ರಾಮನು 'ತನ್ನೆಲ್ಲಾ ರಾಜ್ಯಾಸ್ತಿ, ನನ್ನ ಹೆಂಡತಿಯ ಸಮೇತ ಮನಃಪೂರ್ವಕವಾಗಿ ಭರತನಿಗೆ ನೀಡಲು ಸಿದ್ದ' ಎಂದು ಹೇಳಿದ್ದಾನೆ. "ಲಂಕಾ ಯುದ್ಧದಲ್ಲಿ ಲಕ್ಷ್ಮಣನು ಮೂರ್ಛೆ ಹೋದಾಗ, ಅವನು ಮರಣಿಸಿದನೆಂಬ ಭ್ರಮೆಯಿಂದ ರೋಧಿಸಿ ರಾಮನೆಂದ ಮಾತುಗಳು, ಇನ್ನು ನನಗೆ ಯುದ್ಧದಿಂದಾಗಲಿ, ಪ್ರಾಣದಿಂದಾಗಲಿ, ಕಡೆಗೆ ಸೀತೆಯಿಂದಗಾಲಿ, ಕೆಲಸವೇನಿದೆ ದೇಶ, ದೇಶಗಳಲ್ಲಿ ಬೇಕಾದಷ್ಟು ಪತ್ನಿಯರು ದೊರಕುತ್ತಾರೆ. ಬಂಧುಗಳು ದೊರಕುತ್ತಾರೆ. ಆದರೆ ಒಬ್ಬ ಸಹೋದರನು ದೊರಕುವುದು ಎಲ್ಲಿಯೂ ಇಲ್ಲ"[೧೫]. ಹೀಗೆ ಸೀತೆಯನ್ನು ಕುರಿತು ಹಗುರವಾಗಿ, ನಿಕೃಷ್ಟವಾಗಿ ಮಾತನಾಡುವುದನ್ನು ನೋಡಬಹುದಾಗಿದೆ.

**ನ್ಯಾಯ ಗ್ರಂಥಗಳು :** ಮಹಿಳೆಯರ ಹಕ್ಕುಗಳು ಶೂದ್ರ, ಗುಲಾಮರ ಮತ್ತು ಮಕ್ಕಳ ಹಕ್ಕುಗಳಿಗೆ ಸಮವೆಂದು ಪರಿಗಣಿಸಿವೆ.

**ಧರ್ಮ ಶಾಸ್ತ್ರಗಳ ಸ್ತ್ರೀ ವಿರೋಧಿ ನಿಲುವುಗಳು**

ಧರ್ಮಶಾಸ್ತ್ರಗಳು ಸಮಾಜಕ್ಕೆ ಅಸಂಖ್ಯಾತ ನೀತಿ ನಿಯಮಗಳನ್ನು ಕೊಟ್ಟವು. ಶೂದ್ರರು ಮತ್ತು ಸ್ತ್ರೀಯರನ್ನು ಸೊತ್ತುಗಳಿಂದ ವಂಚಿಸಿ ಅವರನ್ನು 'ಗುಲಾಮ' ವರ್ಗಕ್ಕೆ ದೂಡಿದವು.

ಸ್ಮೃತಿಕಾರರುಗಳಾದ ಯಜ್ಞವಲ್ಕ್ಯ ಮತ್ತು ವಶಿಷ್ಠರು :ಸ್ತ್ರೀಯರನ್ನು ಸುಳ್ಳಿನ ಪ್ರತಿ ಮೂರ್ತಿಗಳಿದ್ದಂತೆ ಎಂದು ಪರಿಗಣಿಸಿದ್ದಾರೆ.

ಶುಕ್ರ ಮತ್ತು ಚಾಣಕ್ಯರ ಪ್ರಕಾರ 'ಯಾವುದೇ ಜವಾಬ್ದಾರಿಗಳನ್ನು ನಿಭಾಯಿಸಲು ಅರ್ಹರಲ್ಲ' ಎಂದಿದ್ದಾರೆ.

**ಮಹರ್ಷಿ ಮನು :** (ಕ್ರಿ.ಪೂ.೨೦೦ ರಿಂದ ೩೦೦) ಭಾರತದ ಪ್ರಪ್ರಥಮ ಶ್ರೇಷ್ಠ ಶಾಸನಕಾರನಾಗಿದ್ದು, ಈತ ರಚಿಸಿದ ಸ್ಮೃತಿ ಹಿಂದೂ ಸಂಸ್ಕೃತಿ, ಜೀವನ ಪದ್ಧತಿ, ನಂಬಿಕೆ ಮತ್ತು ಮೌಲ್ಯಗಳ ಮೇಲೆ ಅಪಾರ ಪ್ರಭಾವ ಬೀರಿದೆ. ಹಿಂದೂ ಧರ್ಮಕ್ಕೆ ಬುನಾದಿಯಾಗಿದೆ. ಈತನ ಹೇಳಿಕೆಗಳು ಸ್ತ್ರೀ ಸಂಬಂಧಿತ ಸಮಸ್ಯೆಗಳ ಉದ್ಭವಕ್ಕೆ

ಕಾರಣವಾದವು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

**ಮನು:** "ರಾತ್ರಿಗೆ ಚಂದ್ರನು ದೀಪಿಕ, ಪ್ರಾತಃಕಾಲಕ್ಕೆ ಸೂರ್ಯನು ದೀಪಿಕ, ಮೂರು ಲೋಕಗಳಿಗೂ ಧರ್ಮವು ದೀಪಿಕ, ಕುಲಕ್ಕೆ ಸುಪುತ್ರನು ದೀಪಿಕ" "ಪತ್ನಿಯರು ಗಂಡು ಮಗುವಿಗೋಸ್ಕರಬೇಕು"[೯].

'ಬ್ರಾಹ್ಮಣನಾದವನು ತನ್ನ ಧರ್ಮಪತ್ನಿಯಲ್ಲದೇ ಕೆಳಗಿನ ವರ್ಣಗಳಿಂದ ಮೂವರನ್ನು, ಕ್ಷತ್ರಿಯರು ಇಬ್ಬರನ್ನು, ವೈಶ್ಯನು ಒಬ್ಬಳನ್ನು, ಶೂದ್ರನು ಎರಡನೇ ಪತ್ನಿ ಪಡಯಲು ಅವಕಾಶವಿಲ್ಲ' ಎಂದು ಹೇಳಿದ್ದಾನೆ.

'ಸ್ತ್ರೀಯರಿಗೆ ಪುರುಷ ಮೋಕ್ಷತ್ವವು ಜನ್ಮಸಿದ್ಧವು, ಆದುದರಿಂದ ಬುದ್ಧಿವಂತರು ಸ್ತ್ರೀಯರ ವಿಷಯದಲ್ಲಿ ಅಜಾಗರೂಕತೆ ವಹಿಸಬಾರದೆಂದು'

'ಸ್ತ್ರೀಯು ಅಲಂಕೃತಳಾಗಿ, ಗಂಡನಿಗೆ ಮನೋಹರಳಾಗಿರದಿದ್ದರೆ, ಮನೆಯವರಿಗೂ ತನಗೂ ಸುಖವಿಲ್ಲ, ಸಂತೋಷವಿಲ್ಲ, ಪರಪುರುಷ ಸಂಕ್ರಾಂತಳಾದರೆ, ಪಾವಿತ್ರತೆಯೇ ಇಲ್ಲದವಳಾಗುತ್ತಾಳೆ ಎನ್ನಲಾಗಿದೆ. ಹಾಗೆ ಬಹು ಪುರುಷರನ್ನು ಸೇವಿಸಿದ ಸ್ತ್ರೀ ಪಾಪ ಕೃತ್ಯದಿಂದ ಭಯಂಕರ ರೋಗವನ್ನು, ದುಃಖವನ್ನು ತಪ್ಪದೇ ಅನುಭವಿಸುವಳು'. ಹೆಣ್ಣಿಗೆ ಸರಿಯಾದ ವರ ಸಿಕ್ಕದಿದ್ದರೂ ಚಿಂತೆಯಿಲ್ಲ, ಹುಡುಗಿ ಪ್ರಾಯಕ್ಕೆ ಬರುವ ಮುನ್ನವೇ ಸಿಕ್ಕಿದ ವರನಿಗೆ ಕೊಟ್ಟು ಮದುವೆ ಮಾಡಬೇಕು.

ಮದುವೆಯಾಗದ ಯುವತಿಯನ್ನು, ಭ್ರಷ್ಟಗೊಂಡ ಹೆಂಗಸನ್ನು ಕೂಡಲೇ ತಲೆ ಬೋಳಿಸಬೇಕು. ಅಥವಾ ಎರಡು ಬೆರಳುಗಳನ್ನು ಕತ್ತರಿಸಬೇಕು ಮತ್ತು ಕತ್ತೆಯ ಮೇಲೆ ಕೂಡಿಸಬೇಕು. ಊರಲ್ಲೆಲ್ಲಾ ಮೆರೆಸಬೇಕು ಜೊತೆಗೆ ಹೆಂಗಸು ತನ್ನ ಪಿತೃ ಪಕ್ಷದ ಧನಬಲಾದಿಗಳಿಂದ ಮತ್ತು ತನ್ನ ಸೌಂದರ್ಯದಿಂದ ಗರ್ವಿತಳಾಗಿ ಗಂಡನನ್ನು ಮೀರಿ ಪರ ಪುರುಷರ ಸಂಗ ಮಾಡಿದರೆ, ರಾಜನು ಅವಳನ್ನು ಬಹುಜನರ ಸಮ್ಮುಖದಲ್ಲಿ ನಾಯಿಗಳಿಂದ ತಿನ್ನಿಸಬೇಕು. ಸ್ತ್ರೀಯರ ಕಾಮುಕತನವು ಸೌಂದರ್ಯ, ವಯಸ್ಸು, ಒಂದನ್ನು ಪರಿಗಣಿಸುವುದಿಲ್ಲ. ಕುರೂಪಿಗೂ, ಮುದುಕನಿಗೂ, ಹುಡಗನಿಗೂ ಒಲಿಯುತ್ತಾರೆ. ಗಂಡನು ಪುನರ್‌ವಿವಾಹವಾದಾಗ ಮೊದಲಿನ ಹೆಂಡತಿ ಸಿಟ್ಟುಗೊಂಡು ಓಡುತ್ತಾಳಾದರೆ, ಅವಳನ್ನು ಹಗ್ಗದಿಂದ ಬಿಗಿಯಬೇಕು. ಅಥವಾ ತವರು ಮನೆಯಲ್ಲಿ ಬಿಡಬೇಕು. ಮದುವೆಯಾಗಲು ಬುದ್ಧಿಯಲ್ಲಿ ಕಿರಿಯವಳು, ಗಂಡನನ್ನು ಮನಃಪೂರ್ವಕವಾಗಿ ಅನುವರ್ತಿಸುವವಳು, ಸಮವಯಸ್ಕರಾದರೆ, ಹೆಣ್ಣು ಗಂಡಸನ್ನು ಹೀಯಾಳಿಸುವ ಪ್ರಸಂಗ ಹೆಚ್ಚು ಆದ್ದರಿಂದ ವಯಸ್ಸಿನ ಅಂತರ ಬಹಳವಿರಬೇಕು ಎಂದಿದ್ದಾನೆ.

ಲಂಚ ಪಡೆಯುವವರು ಹೆದರಿಸಿ ಹಣ ಪಡೆಯುವವರು, ಚಿನ್ನ, ಹಾಲು ಕಲಬೆರಕೆದಾರರು, ಜೂಜುಕೋರರು, ಶಕುನಹೇಳಿ ಹಣ ತಿನ್ನುವವರು, ಸಾಮುದ್ರಿಕರು, ಆನೆ ಮಾವಟಿಗರು, ಚಿಕತ್ಸಕರು ಕಪಟಿಗಳಾದರೆ ಅವರು ಚಿತ್ರಾದಿಕಲಾವಿದರು, ಸೂಳೆಯರು ಇವೆರೆಲ್ಲರನ್ನೂ ಮರಳು ಮಾಡಿ, ಹಣ ಪಡೆಯುವರು ಎಂದಿದ್ದಾರೆ.

'ಪುರುಷರು ತಮ್ಮ ಮುಪ್ಪಿನಲ್ಲಿ ಮದುವೆಯಾಗುವುದರಿಂದ ಒಂದು ಅವನ ಹೆಂಡತಿ ಬೇಗ ವಿಧವೆಯಾಗುತ್ತಾಳೆ. ಎರಡು ಗಂಡನಿಂದ ಸಂತೃಪ್ತಳಾಗದೇ ಅನ್ಯ ಪುರುಷರ ಸಂಪರ್ಕ ಸಾಧಿಸುವ ಸಾಧ್ಯತೆ ಹೆಚ್ಚಿರುತ್ತದೆ. ಇದು ಪುರುಷರು ಹೆಣ್ಣನ್ನು ತಮ್ಮ ಅಧೀನದಲ್ಲಿರಿಸಿಕೊಳ್ಳಲಾರದೆ ಹೋಗುವ ಸಂದರ್ಭಗಳಾಗಿವೆ.

'ಮಹಿಳೆಯರು ಅಪಮಾನಕ್ಕೆ ಪಾತ್ರರಾದವರು. ಮನು ಧರ್ಮವು ಮಹಿಳೆಯರಿಗೆ ಸಂಕೋಲೆಯನ್ನು

ತೊಡಿಸಿದೆ. ಹಾಗೆಯೇ ಅವುಗಳಿಂದ ಬಿಡಿಸಿಕೊಳ್ಳಲಾರದಂತಹ ಬಂಧನವನ್ನು ಭದ್ರಗೊಳಿಸಿದೆ. ಸ್ತ್ರೀಯನ್ನು ಮಾತ್ರ ಜಾದೂಗಾರನ ಬೊಂಬೆಯಂತೆ ಆಟವಾಡಿಸುತ್ತಾ ಸ್ತ್ರೀಯರನ್ನು ಬಾಲ್ಯ, ಯೌವನ, ಮುಪ್ಪುಗಳಲ್ಲಿ ಪುರುಷನ ಅಧೀನಕ್ಕೆ ಒಳಪಡಿಸಿದ್ದಾನೆ.

ಈತನ ತತ್ವಗಳನ್ನು ಅನುಸರಿಸುವ ಪುರುಷರು, ಮನೆಯಿಂದ ಹೊರಗೆ ಏನು ಬೇಕಾದರೂ ಮಾಡಿ ಸುಖ ಅನುಭವಿಸಿ, ಸಾಚಾಗಳಾಗಿ ಬರಬಹುದು. ಆದರೆ ಅವರುಗಳ ಹೆಂಡತಿ ಮಕ್ಕಳು ಮಾತ್ರ ಅಪರಂಜಿಗಳಂತೆ ಮನೆಯೊಳಗೆ ಇರಬೇಕೆನ್ನುವರು. ಎಷ್ಟೋ ಪುರುಷರು ಮಹಿಳೆಯರನ್ನು ಶಂಕಿತ ದೃಷ್ಟಿಯಿಂದ ನೋಡುತ್ತಾ, ಸುಳ್ಳು ಆಪಾದನೆ ಹೊರಸಿ, ಮಾನಸಿಕ ನೋವು ಕೊಡುವ ಆಧುನಿಕ ಮನುಗಳು ಈ ಸಮಾಜದಲ್ಲಿ ಕಡಿಮೆ ಇಲ್ಲ.

ಪುರುಷ ಪ್ರಾಧಾನ್ಯತೆಯು ಯಾವುದೇ ನಿರ್ಬಂಧ ಇಲ್ಲದೇ ಕಾಮಕ್ಕಾಗಿ ಯಾವ ಜಾತಿ, ವಯಸ್ಸು, ಬಣ್ಣ, ಅಗತ್ಯವಿಲ್ಲದೇ ಅವಳೊಬ್ಬ ಸ್ತ್ರೀ ಆಗಿದ್ದರೆ ಸಾಕು. ಆದರೆ ವಿವಾಹ ಮಾತ್ರ ತನ್ನ ಜಾತಿಯವರಲ್ಲಿಯೇ ನಡೆಯಬೇಕೆಂಬ ನೀತಿ ರೂಪಿಸಿದೆ.

ಹೆಂಡತಿಗೆ ಗಂಡ ಬೇಡವೆನಿಸಿದರೆ, ಅಷ್ಟು ಸರಳವಾಗಿ ಬಿಡುವ ದಾರಿಯನ್ನು ಧರ್ಮಶಾಸ್ತ್ರಗಳು ತೋರಿಲ್ಲ. ಅದೇ ಗಂಡಸಿಗೆ ತಕ್ಷಣ ಬಿಡುವ, ನಿಂತ ಸ್ಥಳದಲ್ಲಿಯೇ ಮಾರುವ, ಅಡವಿಡುವ, ಬಿಡದೇ ಕಾಲಿನ ಕೆಳಗಿಟ್ಟುಕೊಳ್ಳಬಹುದಾದ, ಮಾರ್ಗ ಧರ್ಮ ಸಮ್ಮತವಾದುದಾಗಿದೆ. ವಿಧುರನಿಗೆ ಯಾವ ನಿಯಮವೂ ಇಲ್ಲ, ಮರು ಮದುವೆಗೆ, ಅದರಲ್ಲೂ ಬ್ರಾಹ್ಮಣನು ನೂರಕ್ಕೂ ಹೆಚ್ಚು ಬಾರಿ ಮದುವೆಯಾಗಬಹುದಿತ್ತು. ಈಗಲೂ ಎಷ್ಟೋ ಕಡೆ ಮಹಿಳೆಯರು ಗಂಡನ ಇತರ ಪತ್ನಿಯರೊಡನೆ ಇರಬೇಕಾಗುತ್ತದೆ, ಇದ್ದಾರೆ. ಹಾಗೆಯೇ ಹೆಣ್ಣು ತನ್ನ ಅತ್ತೆ ಮನೆಯಲ್ಲಿ ದುಡುಕುತನ, ಅಸಹನೆಯ ಗುಣವನ್ನು ಬಿಟ್ಟುಕೊಡಬೇಕು. ಅದು ತಾನು ಹುಟ್ಟಿದ ಮನೆಯಲ್ಲಿ ನಡೆಯುವ ಗುಣಗಳೇ ಹೊರತು ತಾನು ತಲುಪಿದ ಮನೆಯಲ್ಲಿ ಚಲಾವಣೆಯಾಗದ ಗುಣಗಳಾಗಿವೆ.

ಶಾಸ್ತ್ರಕಾರರಾದ ಮನುವನ್ನು ಕುರಿತು ಅಂಬೇಡ್ಕರ್‌ರು (ಕಾರ್ಮಿಕರು ಮತ್ತು ಮಹಿಳೆಯರು ಎಂಬ ಕೃತಿಯಲ್ಲಿ) “ಆತ ಮಾನಸಿಕ ಅಸ್ತಿತ್ವವನ್ನು ಕಳೆದುಕೊಂಡ ವಿಕೃತ ಮನುಷ್ಯ. ದನಗಳನ್ನು ಕಾಯುತ್ತಾ ಬಂದ ಆರ್ಯರು ಇಂಡಿಯಾದ ಮೂಲ ನಿವಾಸಿಗಳ ಸರ್ವಸ್ವವನ್ನು ಮೋಸದಿಂದ ಲಪಟಾಯಿಸಿ ಅನುಭವಿಸಿದ್ದಲ್ಲದೇ, ಇಂತಹ ಸ್ತ್ರೀ ಶೋಷಣಾ ತಂತ್ರಗಳನ್ನು ಹುಟ್ಟು ಹಾಕಿದರು”[೮೭] ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಗೌತಮ, ನಾರದ, ಮನು, ಯಜ್ಞಾವಲ್ಕ ಮುಂತಾದ ಶಾಸ್ತ್ರಕಾರರು ಸ್ತ್ರೀಯರು ಸ್ವಭಾವತಃ ಸುಳ್ಳು ಹೇಳುವವರಾಗಿದ್ದರಿಂದ ಅವರನ್ನು ಯಾವುದಕ್ಕೂ ಸಾಕ್ಷಿಗಳಾಗಿ ಅಂಗೀಕರಿಸಬಾರದೆಂದು ಸಾಕ್ಷಿಗೆ ಅನರ್ಹರಾಗಿ ಮಾಡಿ, ಅವರನ್ನು ಕೊಲೆಗಡುಕರು, ಹಾವಾಡಿಗರು, ಹುಚ್ಚರು, ಬಾಲಕರ ಪಟ್ಟಿಯಲ್ಲಿ ಸ್ತ್ರೀಯರೂ ಸೇರಿದ್ದಾರೆ

‘ಸ್ತ್ರೀ ಸ್ವಾತಂತ್ರ್ಯಕ್ಕೆ ಅರ್ಹಳಲ್ಲ’ ಎನ್ನುವ ಹೇಳಿಕೆ ಸ್ತ್ರೀ ಆಸ್ತಿಯ ಅಲಂಕಾರ ಪಟ್ಟಿಗೆಗೆ ಸೇರಿಹೋದಳು. ಯಾವಾಗ ಮನು ಸ್ಮೃತಿಯು ‘ನಸ್ತ್ರೀ ಸ್ವಾತಂತ್ರ್ಯಮರ್ಹತಿ’ ಎಂದು ಹೇಳಿ, ಅವಳು ಹುಟ್ಟಿದಾರಭ್ಯ ತಂದೆ, ಗಂಡ, ಮಗ ಎಂಬ ಪುರುಷರ ಆಶ್ರಯದಲ್ಲಿಯೇ ಉಳಿಯಬೇಕೆಂಬುದು ನಿಯಮ ಏಕೆ ಮಾಡಿತೋ ತಿಳಿಯದು.

‘ಸಂಪಾದಿಸುವವನು ಗಂಡಸು’ ಎನ್ನುವ ಮಾತಿನಲ್ಲಿರುವ ಸತ್ಯವೆಷ್ಟು? ಸಂಪಾದನೆ ಸಾಧ್ಯವಾಗುವುದು

ದುಡಿಯುವುದರಿಂದ ಎನ್ನುವುದಾದರೆ, ಹೆಂಗಸಿನ ದುಡಿಮೆಯ ದೊಡ್ಡ ಪುರಾಣವೇ ಇದೆ. ಕಣ್ಣುಬಿಟ್ಟು ನೋಡಿದರೆ, ಅದು ಕಂಡೇ ಕಾಣುತ್ತದೆ. ಮನೆ ಮಂದಿಯ ಎಲ್ಲರ ಸೇವೆಯನ್ನು ಮಾಡುತ್ತಾಳೆ. ಸದಾಕಾಲ ಗಂಡಸಿನ ಎಲ್ಲಾ ಅಗತ್ಯಗಳನ್ನು ಪೂರೈಸುವ ಸೇವಕಿಯಾಗಿರುವುದೇ ವಾಸ್ತವ. ಆದರೆ, ಇವುಗಳಿಗೆ ಸಂಬಳ, ಸಾರಿಗೆ ಕೊಡುವವರಿಲ್ಲ ಅಷ್ಟೇ, ಅವಳು ದುಡಿಯುವುದೆಲ್ಲವನ್ನೂ ಪ್ರೇಮ, ಪ್ರೀತಿ, ತ್ಯಾಗ, ಕರ್ತವ್ಯಗಳೆಂಬ ಭಾವನಾತ್ಮಕ ಬಲೆಯಲ್ಲಿ ಸೆರೆ ಮಾಡಲಾಗುತ್ತದೆ. ಈ ಭಾವನೆಗಳ ಬಲೆ ತಿಂದು ಬದುಕುವುದಂತೂ ಸಾಧ್ಯವಿಲ್ಲ. ಆಗ ಅನ್ನಕ್ಕೆ ಆಶ್ರಯಕ್ಕೆ ಅವಳು ಗಂಡಿನ ಅಧೀನದಲ್ಲಿ ಬೀಳಬೇಕು. ಸ್ತ್ರೀಯರು ತನ್ನ ಮನೆಯಲ್ಲಿ ಯಾವ ಕೆಲಸವನ್ನು ಸ್ವಾತಂತ್ರ್ಯವಾಗಿ ಮಾಡ ಕೂಡದೆಂದು ಮನುಸ್ಮೃತಿ ವಿಧಿಸಿದೆ.

"ಸ್ತ್ರೀಯರಿಗೆ ವೇದಾಧ್ಯಯನದ ಹಕ್ಕಿಲ್ಲ... ಆದ್ದರಿಂದ ಅವರಿಗೆ ಧರ್ಮ ಜ್ಞಾನವಿಲ್ಲ. ಸ್ತ್ರೀಯರು ವೇದ ಮಂತ್ರಗಳನ್ನು ಉಚ್ಚರಿಸುವುದಿಲ್ಲವಾದ್ದರಿಂದ ಅವರು ಸುಳ್ಳಿನಷ್ಟೇ ಅಶುದ್ಧರಾಗಿದ್ದಾರೆ" ಎಂದು ಹಾಗೆಯೇ,

"ಗಂಡ ಹೆಂಡತಿ ಅವಿಭಾಜ್ಯವಾಗಿರತಕ್ಕದ್ದು, ಒಮ್ಮೆ ಮದುವೆಯಾದ ಮೇಲೆ ಹೆಣ್ಣಿಗೆ ವಿಚ್ಛೇದನವಿಲ್ಲ. ಗಂಡ ಮಾರಾಟ ಮಾಡಿದರೂ, ತ್ಯಜಿಸಿದರೂ, ಹೆಂಡತಿಗೆ ವಿಮೋಚನೆ ಇಲ್ಲ".

"ಎಲ್ಲಾ ವರ್ಣಗಳ ಪರಮಧರ್ಮವೆಂದರೆ, ದುರ್ಬಲಪತಿಯಾದವನೂ ಕೂಡ ತಮ್ಮ ಹೆಂಡಂದಿರನ್ನು ರಕ್ಷಿಸಬೇಕು". "ಗಂಡನು ಕೋಪಗೊಂಡರೂ ನೀನು ಕೋಪಗೊಳ್ಳಬೇಡ, ಗಂಡನ ಮನೆಯಲ್ಲಿ ದಾಸಿಯಾಗಿದ್ದರೂ ಸರಿಯೇ ನಿನ್ನ ಮೇಲಿನ ಒಡೆತನವನ್ನು ಅವನಿಗೆ ಒಪ್ಪಿಸಬೇಕು".

'ಸ್ತ್ರೀಯರು ಚಂಚಲ ಮನಸ್ಕರು', ಸಣ್ಣ ಪುಟ್ಟ ಆಮಿಷಗಳಿಗೂ ಅವರು ಬಲಿ ಬೀಳುತ್ತಾರೆ. ಪುರುಷರನ್ನು ಮೋಹಗೊಳಿಸುವುದೇ ಸ್ತ್ರೀಯ ಸ್ವಭಾವ ಆದ್ದರಿಂದಲೇ ವಿವೇಕಿಗಳು ಹೆಣ್ಣಿನ ಜೊತೆ ಏಕಾಂಗಿಗಳಾಗಿರುವುದಿಲ್ಲ. ಮೂರ್ಖನಷ್ಟೇ ಅಲ್ಲ, ವಿದ್ವಾಂಸನನ್ನು ಕೂಡ ಸ್ತ್ರೀಯರು ಅಡ್ಡ ದಾರಿಗೆಳೆಯಬಲ್ಲರು. ಕಾಮಕ್ರೋಧವಶವನ್ನಾಗಿ ಮಾಡಬಲ್ಲರು. ಮಲಗುವುದು, ಕುಳಿತುಕೊಳ್ಳುವುದು, ಅಲಂಕಾರಗಳಲ್ಲಿ ಪ್ರೀತಿ, ಕಾಮ, ಕ್ರೋಧ, ಕಪಟ, ದ್ರೋಹ, ದುರ್ವರ್ತನೆ, ಮನೋವಿಕಾರಗಳು ಸ್ತ್ರೀಯರಿಗೆ ಜನ್ಮಸಿದ್ಧವಾದವುಗಳು.

ಹೀಗೆ ಮನುಧರ್ಮವು ಮಹಿಳೆಯರಿಗೆ ತೊಡಿಸಿದ ಸಂಕೋಲೆಗಳಿಂದ ಬಿಡಿಸಿಕೊಳ್ಳಲಾಗದಂತಹ ಬಂಧನವನ್ನು ಭದ್ರಗೊಳಿಸಿದೆ. ತದನಂತರ ಬಂದ ಸ್ಮೃತಿಕಾರರೆಲ್ಲಾ ಮನುವನ್ನೇ ಆದರ್ಶವಾಗಿಟ್ಟುಕೊಂಡು ಆತನನ್ನೇ ಅನುಸರಿಸಿದ್ದನ್ನು ಕಾಣಬಹುದಾಗಿದೆ.

**ದಕ್ಷ ಶಾಸ್ತ್ರಕಾರ:** ಪತಿ ಪಾನಾಸಕ್ತ, ವ್ಯಭಿಚಾರಿಯಾಗಿದ್ದರೂ, ಪತ್ನಿ ಆತನನ್ನು ಸೇರಬೇಕು. ಸಣ್ಣ ಜಿಗಣೆ ಕೇವಲ ರಕ್ತಹೀರುತ್ತದೆ. ಆದರೆ ಸ್ತ್ರೀ ಒಬ್ಬ ಪುರುಷನ ಆಸ್ತಿ, ಸತ್ವ, ಶಕ್ತಿ, ಸುಖ, ಎಲ್ಲಾ ಹೀರುತ್ತಾಳೆ ಎಂದಿದ್ದಾರೆ.

**ಅತ್ರಿ ಸ್ಮೃತಿಕಾರ:** ತನ್ನ ಪತಿ ಜೀವಂತವಿರುವಾಗ, ಯಾವಾಕೆ ಉಪವಾಸಮಾಡುತ್ತಾಳೋ, ಸಂಸ್ಕಾರ ಕರ್ಮಗಳಲ್ಲಿ ತೊಡಗುವಳೋ, ಆಕೆ ತನ್ನ ಪತಿಯ ಜೀವನದಿಂದ ಬೇರ್ಪಟ್ಟಂತೆ, ಆಕೆ ನರಕಕ್ಕೆ ಹೋಗುತ್ತಾಳೆ. ಪವಿತ್ರ ಜಲವನ್ನು ಬಯಸುವಾಕೆ ತನ್ನ ಪತಿಯ ಪಾದ ಮತ್ತು ಶರೀರವನ್ನು ತೊಳೆದು ಅದನ್ನು ಕುಡಿಯಬೇಕು. ಇದರಿಂದ ಆಕೆಗೆ ಪರಮಪದ ದೊರೆಯುತ್ತದೆ. ಪತ್ನಿ ಪುಣ್ಯ ಸಂಪಾದಿಸಲು ತನ್ನ ಗಂಡನ ಪಾದಗಳನ್ನು ತೊಳೆದು ಆ ನೀರನ್ನು ಕುಡಿಯಬೇಕಷ್ಟೇ. ಸಮಾಜದ ಮಹಿಳೆಯರಿಗೆ ಮಾದರಿಗಳೆಂದು, ಆದರ್ಶ ಸತಿಯರೆಂದು ಸೀತೆ,

ಸಾವಿತ್ರಿ, ಪಾರ್ವತಿಯರನ್ನು ಅಂದರೆ ತಮ್ಮ ಪತಿರಾಯ 'ಅಗ್ನಿಗೆ ಹಾರು' ಎಂದರೆ ಹಾರಿದವರು, ಆತ ಸತ್ತನೆಂದರೆ ಯಮರಾಯನ ಬೆನ್ನು ಹಿಡಿದೇ ಹೊರಟವರು, ಪತಿಯ ಮರ್ಯಾದೆಯನ್ನು ಉಳಿಸಲು ಭಸ್ಮವಾಗಿ ಹೋದವರು. ಇವರುಗಳನ್ನು ಧರ್ಮ ಆದರ್ಶ ನಾರಿಯರೆಂದು ಎತ್ತಿ ಹಿಡಿಯುವುದು ಈ ರೀತಿಯ ಧರ್ಮ ಶಾಸ್ತ್ರಗಳ ಬಿಗಿ ನಿಲುವಿನಿಂದಾಗಿ, ಸ್ತ್ರೀ ಸ್ವಾತಂತ್ರ್ಯ ಅವನತಿಗೊಂಡು, ಧರ್ಮ ಶಾಸ್ತ್ರಗಳು ವಿಧಿಸಿದ ಸ್ತ್ರೀ ಅನರ್ಹತೆಗಳಿಂದ ಈ ರೀತಿ ಸ್ತ್ರೀಯರ ಅನರ್ಹತೆಗಳನ್ನು ಕುರಿತು ವ್ಯಕ್ತಪಡಿಸಲಾದ ಧರ್ಮ ಶಾಸ್ತ್ರಕಾರರ ಅಭಿಪ್ರಾಯಗಳ ಈ ಪಟ್ಟಿ ಇನ್ನೂ ಉದ್ದವಾಗಿ ಬೆಳೆಸುವುದು ಸಾಧ್ಯವಿದ್ದು, ಈ ಬಗ್ಗೆ ಪಾಶ್ಚಾತ್ಯ ವಿದ್ವಾಂಸರು ಈ ರೀತಿ ಹೇಳಿದ್ದಾರೆ. ನಮ್ಮ ಅಭಿಪ್ರಾಯದಲ್ಲಿ ಈ ಧರ್ಮಶಾಸ್ತ್ರದ ಅನುಯಾಯಿಗಳು ಮೂಢರಾಗಿದ್ದುದಕ್ಕಿಂತ ಹೆಚ್ಚಾಗಿ ಮೋಸಗಾರರಾಗಿದ್ದರು. ನಿರಾಧಾರವೂ ಕೇವಲ ವೈಯಕ್ತಿಕ ಕಲ್ಪನಾಮಯವೂ ಆದ ಈ ಉಕ್ತಿಗಳನ್ನು ವಿಮರ್ಶೆ ಮಾಡುವ ಅಗತ್ಯವಿಲ್ಲ ಎಂದಿದ್ದಾರೆ.

ಹೆಣ್ಣು ಮೈನೆರೆಯುವುದು ಪರಿಪೂರ್ಣತೆ ಪಡೆದ ಕಲ್ಪನೆಯಾಗಿದ್ದರೆ ಧರ್ಮ ಇದಕ್ಕೆ ವಿರುದ್ಧ ಸೂತಕಗಳ ಆಚರಣೆಗಳನ್ನು ರೂಢಿಗೆ ತಂದಿದೆ. ಮಾಸಿಕ ಋತುಚರ್ಯೆಯಲ್ಲಿ ಸಾವಿರಾರು ರೋಗಾಣುಗಳಿಗೆ ಜನ್ಮ ನೀಡುತ್ತಾಳೆ ಹಾಗೂ ಅವುಗಳ ಸಾವಿಗೂ ಇವಳೇ ಕಾರಣಳಾಗುತ್ತಾಳೆ. ಮನುಷ್ಯನ ದೇಹವನ್ನು ಪ್ರಧಾನವಾಗಿಟ್ಟುಕೊಂಡು ಆರೋಪಿಸಿದ ಸಾಮಾಜಿಕ ಸ್ಥಾನಮಾನಗಳು ಜಾರಿಯಲ್ಲಿವೆ. ಸ್ತ್ರೀ ಶರೀರ ಕುರಿತು ಪ್ರಬಲವಾಗಿ ಆರೋಪಿಸಿದ ಸಾಂಸ್ಕೃತಿಕ ಮೌಲ್ಯಗಳು ಜೀವಶಾಸ್ತ್ರೀಯ ಆಗಿರದೇ ಸಾಮಾಜಿಕ ರಚನೆಗಳಾಗಿವೆ. ಚರಿತ್ರೆಯ ಒಂದು ಘಟ್ಟದಲ್ಲಿ ಮಾತೃಪ್ರಧಾನ ವ್ಯವಸ್ಥೆಯನ್ನು ಗಮನದಲ್ಲಿರಿಸಿಕೊಂಡಾಗ ಮಾತ್ರ ಮಹಿಳಾ ಬೆಲೆಗಳನ್ನು ವ್ಯಾಖ್ಯಾನಿಸಲು ನಿರ್ವಚಿಸಲು ಸಾಧ್ಯ. ಒಟ್ಟಾರೆ ಮಹಿಳೆಯೇ 'ಪ್ರಮಾದ' ಎನ್ನುವ ಇವರು ಮಹಿಳೆ ವಕ್ರ ವಕ್ರ ನಡೆವಳಿಕೆಯುಳ್ಳವಳು, ದ್ವೇಷ, ಭಯ, ದುಗುಡ, ಸುಖಾಪೇಕ್ಷೆ, ಬಲಿಷ್ಠವಾದ ಮನಸ್ಸಿಲ್ಲದವಳು ಎಂದು ಮೂದಲಿಕೆಯಿಂದ ಹೀಯಾಳಿಸುತ್ತಾರೆ. ಪುರುಷ ಯಾವುದೇ ಕಷ್ಟಗಳಿಗೆ ಒಳಗಾಗದೇ ಸುಖ ಆನಂದಗಳಿಗಷ್ಟೇ ತನ್ನ ಹಕ್ಕು ಎಂದು ಹೆಚ್ಚುವರಿ ಸೌಲಭ್ಯಗಳನ್ನು ಪಡೆಯುತ್ತಿದ್ದಾನೆ.

ಈ ಎಲ್ಲಾ ಅಭಿಪ್ರಾಯಗಳು ತಿಳಿಸುವುದಾದರೂ ಏನನ್ನು? ಮಾನವನ ಇದುವರೆಗಿನ ಇತಿಹಾಸವು ಪುರುಷ ಪ್ರಾಧಾನ್ಯತೆಯ ಇತಿಹಾಸವೇ ಆಗಿದೆ. ಪುರುಷರು ತಮ್ಮ ಪ್ರಾಬಲ್ಯತೆಯನ್ನು ಮೆರೆಯುವ ದೃಷ್ಟಿಯಿಂದ ಸ್ತ್ರೀಯರ ಅನರ್ಹತೆಗಳನ್ನು ಎತ್ತಿ ತೋರಿಸುತ್ತಾ, ಅವುಗಳನ್ನು ಹೀಗೆಳೆಯುತ್ತಾ ಖಂಡಿಸುತ್ತಾ, ಹೋಗಿದ್ದಾರೆ. ಸ್ತ್ರೀಯರು ಪರಿಸ್ಥಿತಿಯ ಅನಿವಾರ್ಯತೆಯಿಂದಾಗಿ, ತಮಗೆ ದೈವದತ್ತವಾದ, ಅಥವಾ ಪ್ರಕೃತಿ ಸಹಜವಾದ ಇತಿಮಿತಿಗಳಿಂದಾಗಿ, ತಮಗೆ ನೀಡಲಾದ ದ್ವಿತೀಯ ದರ್ಜೆಯ ಸ್ಥಾನವನ್ನು ಸ್ವೀಕರಿಸಲು ಅಲ್ಲಲ್ಲಿ ಕೆಲ ಮಹಿಳೆಯರು ಪ್ರತಿಭಟಿಸಿದರೂ, ಅಂಥವರು ಎದುರಿಸಬೇಕಾಗಿ ಬಂದ ಸಮಸ್ಯೆಗಳು, ಆಘಾತಗಳನ್ನು ಕಂಡ ಇತರ ಸ್ತ್ರೀಯರು ತಿರುಗಿ ಬೀಳದಂತೆ ಎಚ್ಚರಿಕೆ ವಹಿಸಿ, ವ್ಯವಸ್ಥೆಯಂತೆ ಜೀವನವನ್ನು ನಡೆಸಲು ಪ್ರಾರಂಭಿಸಿದರು ಈ ಪರಿಣಾಮವಾಗಿ ಹುಟ್ಟಿದ ಸ್ತ್ರೀ ಸಂಬಂಧಿತ ಸಮಸ್ಯೆಗಳು ಈ ಕೆಳಗಿನಂತಿವೆ.

೧.**ಬಾಲ್ಯವಿವಾಹ:** ಆಚರಣೆಗೆ ಬಂದು ವೈಯಕ್ತಿಕವಾಗಿ ಹೆಚ್ಚು ದುಷ್ಪರಿಣಾಮಗಳನ್ನು ಬೀರುತ್ತಿದ್ದರೂ ಅಸ್ತಿತ್ವಕ್ಕೆ ಬರುವುದು ಅನಿವಾರ್ಯವಾಯಿತು.

೨.ವಿವಾಹವು ಕಡ್ಡಾಯ :ತಂದೆಯಾದವನು ತನ್ನ ಮಗಳಿಗೆ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಮಾಡಬೇಕು ಇಲ್ಲದಿದ್ದರೆ ಸದ್ಗತಿ ಇಲ್ಲ ಎಂಬ ನಂಬಿಕೆ ಬೇರೂರಿದ ಪರಿಣಾಮ ವ್ಯಾಪಕವಾಗಿ ಬಾಲ್ಯವಿವಾಹ ಜಾರಿಗೆ ಬಂದಿತು. ವಿವಾಹ ಅನಿವಾರ್ಯವಾಗಿ ಪರಿಣಮಿಸಿದ್ದರಿಂದ ಹಣವನ್ನು ಕೊಟ್ಟು ಆಸೆ ಹುಟ್ಟಿಸಿಯಾದರೂ ವಿವಾಹ ಮಾಡಬೇಕೆಂಬ ಒತ್ತಡ ಉಂಟಾಗಿ, ವರದಕ್ಷಿಣಾ ಪದ್ಧತಿಯ ಪಿಡುಗಾಗಿ ಆಚರಣೆಗೆ ಬರಲಾರಂಭಿಸಿತು.

೩.ಪತಿವ್ರತ್ಯದ ವೈಭವೀಕರಣ: ಪತಿಯೇ ಪರ ದೈವವೆಂಬ ನಂಬಿಕೆಯಿಂದಾಗಿ, ಪತಿಯು ತಮಗಿಂತ ಮುಂಚೆ ಸಾಯುವುದಾದಲ್ಲಿ ಅವರೊಂದಿಗೆ ತಾವೂ ಕೂಡ ಸಾಯುವುದರಿಂದಲೇ ಶ್ರೇಯಸ್ಸು ಲಭಿಸುವುದೆಂದು ಮುಗ್ಧ ಸ್ತ್ರೀಯರು ಭಾವಿಸುವಂತೆ ಮಾಡಿ, ಅಮಾನುಷವಾದ ಸತೀ ಆಚರಣೆ ಅಸ್ತಿತ್ವಕ್ಕೆ ಬಂದಿತು ಜೊತೆಗೆ ಮುಸ್ಲಿಂ ಧಾಳಿಕೋರರಿಂದ ತಮ್ಮ ಹೆಣ್ಣು ಮಕ್ಕಳ ಶೀಲ ರಕ್ಷಿಸಿಕೊಳ್ಳಲು ಈ ಆಚರಣೆಗೆ ಮುಂದಾದರು.

೪. ವಿಧವಾ ಸಮಸ್ಯೆ: ಸತಿ ಹೋಗದ ಬಾಲ ವಿಧವೆಯರು ಎಲ್ಲರ ಅವಹೇಳನ, ದುರ್ವರ್ತನೆ ಕ್ರೂರತೆಗಳಿಗೆ ಒಳಗಾಗಿ ವೈಧವ್ಯದ ಬೀಭತ್ಸ ಜೀವನವನ್ನು ನಡೆಸಬೇಕಾಯಿತು.

೫. ದೇವದಾಸಿ ಸಮಸ್ಯೆ: ದೊಡ್ಡ ದೊಡ್ಡ ದೇವಾಲಯಗಳ ಸ್ಥಾಪನೆಯೊಂದಿಗೆ ಭಕ್ತಜನರ ದೈವಿಕ ಭಾವನೆಯ ಪ್ರೇರಣೆಗಾಗಿ ಹಾಗೂ ದೇವ ದೇವತೆಗಳ ಸಂತೃಪ್ತಿಗಾಗಿ ನೃತ್ಯ, ಸಂಗೀತಗಳ ವ್ಯಾಪಕ ಬಳಕೆ ಆರಂಭವಾದ ಮೇಲೆ ದೇವರ ಸೇವೆಗೆಂದು ದೇವಾಂಗನೆಯರು ದೇವದಾಸಿಯರು ಎಂಬ ಸ್ತ್ರೀಯರ ವಿಶಿಷ್ಟ ಸಮೂಹವೊಂದನ್ನು ನಿರ್ಮಿಸಲಾಯಿತು. ಆರಂಭದಲ್ಲಿದ್ದ ಉದ್ದೇಶಗಳು ಮರೆಯಾಗಿ, ಕ್ರಮೇಣ ಈ ಸಮೂಹವನ್ನು ಶ್ರೀಮಂತರ, ರಾಜರುಗಳ, ಆಮೋದ, ಪ್ರಮೋದ ಮತ್ತು ಸುಖ ಭೋಗಗಳಿಗೆ ಒಂದು ಸಾಧನವಾಗಿ ಬಳಸಲಾಯಿತು. ಈ ಸಮಸ್ಯೆಗಳು ಮೊದಲಿಗೆ ಜೇಡರ ಬಲೆಯ ನೂಲಿನಂತಿದ್ದು ಬರಬರುತ್ತಾ ಕಬ್ಬಿಣದ ತಂತಿಗಳಂತೆ ಸ್ತ್ರೀಯರನ್ನು ಬಲವಾಗಿ ಹಿಡಿದು ಉಸಿರುಗಟ್ಟುವಂತೆ ಮಾಡಿದವು.

ಹೀಗೆ ಧರ್ಮ ಶಾಸ್ತ್ರಗಳು ಸ್ತ್ರೀಯರ ಬಗೆಗೆ ತಳೆದಿದ್ದ ಬಿಗುವಾದ ನಿಲುವನ್ನು ಕುರಿತು ಪ್ರಸ್ತಾಪಿಸುತ್ತಾ, ಪಿ.ಹೆಚ್. ಪ್ರಭು ರವರು ಹೀಗೆ ತಿಳಿಸುತ್ತಾರೆ, "ಸ್ತ್ರೀಯರ ನಡತೆ ಮೇಲಣ ಕೆಲವು ಬಗೆಯ ನಿಯಂತ್ರಣ ನಿಷೇಧಗಳಿಗೆ ಸಮರ್ಥನೆ ನೀಡಬಹುದಾಗಿದ್ದರೂ, ಮತ್ತೆ ಕೆಲವಕ್ಕೆ ಯಾವುದೇ ವೈಚಾರಿಕ ನೆಲೆ ಇದ್ದಂತೆ ಕಾಣಿಸದು. ಬ್ರಹ್ಮಚರ್ಯಾಶ್ರಮವನ್ನು ಸ್ತ್ರೀಯರಿಗೆ ನಿರಾಕರಿಸಿದ್ದೇಕೆ? ಸ್ತ್ರೀ ಪುರುಷರ ನಡುವಣ ಲಿಂಗ ಭೇದವೆಂಬುದನ್ನು ಅಧ್ಯಯನ ಶೀಲತೆಗೆ ಸಂಬಂಧಿಸಿದಂತೆ ಸ್ತ್ರೀಯರ ಅನರ್ಹತೆ ಎಂದೇ ಪರಿಗಣಿಸಬೇಕೆ? ಅದಿಲ್ಲವಾದಲ್ಲಿ ವೇದಗಳ ಆರಂಭದ ಹಂತದಲ್ಲಿ ಆ ಹಕ್ಕನ್ನು ಅನಂತರ ಕಸಿದು ಕೊಂಡಿದ್ದಾದರೂ ಏಕೆ? ಕುಟುಂಬವೇ ಸ್ತ್ರೀಯರ ಕಲಿಯುವಿಕೆಯ ತಾಣ. ಕುಟುಂಬ ಹೊಣೆಗಾರಿಕೆಗೆ ತಾಯ್ತನದ ಜವಾಬ್ದಾರಿಗಳಿಂದ ಕೂಡಿದ ಸ್ತ್ರೀಯರಿಗೆ ಗೃಹಸ್ಥಾಶ್ರಮವನ್ನು ಬಿಟ್ಟು ಬೇರೆ ಆಶ್ರಮಗಳ ಅಗತ್ಯವಿಲ್ಲ ಎನ್ನುವುದಾದರೆ, ಅದನ್ನು ನಿರ್ಣಯಿಸಬೇಕಾದ್ದು ಯಾರು? ಉಪನಯನದಂತಹ ಮುಖ್ಯ ಸಂಸ್ಕಾರವನ್ನು ಸ್ತ್ರೀಗೆ ನಿರಾಕರಿಸಿ, ವಿವಾಹದಿಂದಲೇ ಸ್ತ್ರೀಯರು 'ದ್ವಿಜತ್ವ' ವನ್ನು ಪಡೆಯುತ್ತಾರೆ ಎಂದಿದ್ದಾರೆ."[೧೮] ಅಂದರೆ ಸೂತ್ರಾಂಧರಾದ ಬ್ರಾಹ್ಮಣ ಶಾಸ್ತ್ರಕಾರರ ಕಠೋರ ದೃಷ್ಟಿ ಅವರತ್ತ ಹೊರಳಿತು. ಪರಿಣಾಮ ಸ್ತ್ರೀಯರ ಸ್ವಾತಂತ್ರ್ಯ, ಹಕ್ಕು, ಸಮಾನ ಅವಕಾಶಗಳಿಗೆ ಚ್ಯುತಿ ಬಂದಿತು ಎನ್ನುವ ಅರ್ಥದಲ್ಲಿ ವಿಮರ್ಶಿಸಿದ್ದಾರೆ.

ಇಲ್ಲಿ ಪಿ.ಥಾಮಸ್ ಅವರು ತಿಳಿಸುವಂತೆ "ಸ್ತ್ರೀಯರ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲಾಯಿತು. ಅವರ ಅಕ್ಷರಾಭ್ಯಾಸಕ್ಕೆ ಅವಕಾಶವಿಲ್ಲದಾಯಿತು ಶಾಸ್ತ್ರಗಳ ಬಗ್ಗೆ ಜ್ಞಾನ ಹೆಚ್ಚಿಸಿಕೊಳ್ಳುವುದಿರಲಿ, ಮತ್ತು ಸ್ತ್ರೀಯರ ಅಂತಸ್ತು ಎಂಬುದು ಪುರುಷರ ಅನುಬಂಧವೆಂಬಂತಹ ಸ್ಥಿತಿಗೆ ಬಂದಿತು"[೧೯] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಅಲ್ಟೇಕರ್‌ರವರು ತಿಳಿಸುವಂತೆ "ಹೆತ್ತವರ ಮಮತೆಯಲ್ಲಿ ಬೆಳೆದಿದ್ದರೂ, ಗಂಡಂದಿರಿಂದ ಪ್ರೀತಿಸ್ಪಟ್ಟಿದ್ದರೂ ಮತ್ತು ಮಕ್ಕಳಿಂದ ಗೌರವಿಸಲ್ಪಟ್ಟಿದ್ದರೂ, ಕ್ರಿ.ಪೂ.೨೦ ರಿಂದ ಕ್ರಿ.ಶ.೧೮೦೦ರ ವರೆಗೆ ಸುಮಾರು ೨೦೦೦ ವರ್ಷಗಳ ಕಾಲ ಭಾರತೀಯ ಸ್ತ್ರೀಯರ ಸ್ಥಾನಮಾನ ನಿರಂತರವಾಗಿ ಅವನತಿಗೊಳ್ಳುತ್ತಲೇ ಹೋಯಿತು. ಸತಿ ಆಚರಣೆಯ ಪುನರುಜ್ಜೀವನಗೊಳಿಸುವಿಕೆ, ಪುನರ್‌ವಿವಾಹದ ಮೇಲಿನ ನಿಷೇಧಗಳು, ಪರದಾ ಪದ್ಧತಿಯ ವ್ಯಾಪಕತೆ ಮತ್ತು ಬಹುಪತ್ನಿತ್ವದ ಆಚರಣೆ ಇವು ಆಕೆಯ ಸ್ಥಾನವನ್ನು ಮತ್ತಷ್ಟು ಹಾಳುಗೆಡವಿದವು "[೨೦]ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಹಿಂದೂ ಧರ್ಮದ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಲು ಸಾಧ್ಯವಾಗದೇ, ಧರ್ಮದ ಹೆಸರಿನಲ್ಲಿ ತಮ್ಮ ಬದುಕನ್ನು ಕಳೆದುಕೊಂಡ ಸ್ತ್ರೀಯರು ಜೀವಂತ ಶವದಂತೆ ಬದುಕುತ್ತಿದ್ದಾರೆ.

ಇದರಿಂದ ಡಾ.ಬಿ.ಕೃಷ್ಣಮೂರ್ತಿಯವರು ಹೀಗೆ ಹೇಳಿದ್ದಾರೆ ವಿಜ್ಞಾನ ಮನುಷ್ಯನನ್ನು ಮುಂದಕ್ಕೆ ಒಯ್ಯುತ್ತವೆ. ಧರ್ಮ ಮನುಷ್ಯನನ್ನು ಪಶುವನ್ನಾಗಿ ಮಾಡುತ್ತದೆ ಎಂದಿದ್ದಾರೆ.

ಧರ್ಮವು ಪ್ರಬಲರ ಹೊಟ್ಟೆ ಹೊರೆಯುವುದಾಗಿದೆ. ಅದು ವೈಯಕ್ತಿಕ ಹಿತ ಸಾಧಿಸುವ ಧರ್ಮವನ್ನು ಅವಲಂಬಿಸಿದೆ. ಆದಕಾರಣ ಸಿರಿವಂತರ ಬೆನ್ನು ಬಿದ್ದಿದೆ ಎಂದು ಬಿಂಬಿಸಲಾಗಿದೆ. ಇದು ಧೀನರು, ದಲಿತರು, ದಮನಕ್ಕೊಳಗಾದ ಸ್ತ್ರೀಯರು, ಬಡವರ ವಿರೋಧಿ ಎಂಬುದನ್ನು ಪ್ರತಿಪಾದಿಸುವುದಷ್ಟೇ ಅಲ್ಲದೆ ಅವರನ್ನು ಶೋಷಣೆಗೆ ಒಳಪಡಿಸುವ ಶೋಷಕನೂ ಆಗಿದೆ ಎಂಬ ವಾದವನ್ನು ಹೂಡಿ, ಅದು ಅಫೀಮು ಅಥವಾ ಮಧ್ಯಪಾನವಾಗಿ ಮನುಷ್ಯನ ಮತಿ ಭ್ರಷ್ಟತೆಗೆ ಕಾರಣವಾಗಿರುವುದನ್ನು ಪ್ರಸ್ತಾಪಿಸಿದೆ.

ಗಾಂಧೀಜಿಯವರು ಹಿಂದು ಧರ್ಮ ದ್ವಂದ್ವ ನೀತಿಯನ್ನು ಈ ರೀತಿ ಹೇಳಿದ್ದಾರೆ. "ಸ್ತ್ರೀ ಒಮ್ಮೆ ವಿವಾಹಿತಳಾದರೆ ತನ್ನ ಯಜಮಾನನ ಪೂರ್ಣ ಕೃಪಾಶ್ರಯದಲ್ಲಿರಬೇಕು. ಸಹಸ್ರಾರು ಸ್ತ್ರೀಯರು ಈ ರೀತಿಯಲ್ಲಿ ನಿಟ್ಟುಸಿರು ಬಿಡುತ್ತಾ ಕಂಬನಿಗೆರೆಯುತ್ತಾರೆ. ಈ ಬಗೆಯ ದುಷ್ಟ ಅಂಶಗಳಿಂದ ಹಿಂದೂ ಧರ್ಮ ಪಾರಾಗದ ಹೊರತು ಪ್ರಗತಿಯ ಭರವಸೆ ಎಂಬುದೇ ಇಲ್ಲ. ಇದು ಪತ್ನಿಯನ್ನು ಪತಿಗೆ ಅಧೀನಳನ್ನಾಗಿಯೂ ಆತನಲ್ಲಿ ಪೂರ್ಣವಾಗಿ ಲೀನಳನ್ನಾಗಿಯೂ ಪತಿ ಆಗಾಗ ಪತ್ನಿಯ ಮೇಲೆ ಅಧಿಕಾರ ನಡೆಸುವುದಲ್ಲದೇ ಮೃಗವರ್ತನೆಗೂ ಇಳಿದಿದ್ದಾನೆ"[೨೧] ಎಂದಿದ್ದಾರೆ.

ಶೃಂಗೇರಿ ಮಠದ ಕಡತಗಳಲ್ಲಿರುವ ಹೆಣ್ಣಿನ ಕ್ರಯ ಚೀಟಿಗಳನ್ನು ಪ್ರಕಟಿಸಿದ್ದಾರೆ. ಶೃಂಗೇರಿ ಧರ್ಮ ಸಂಸ್ಥಾಪನದ ಅಧಿಕಾರ ವ್ಯಾಪ್ತಿಗೆ ಬರುತ್ತಿದ್ದ ಊರುಗಳಲ್ಲಿ ಶೀಲಗೆಟ್ಟ ಹೆಣ್ಣುಗಳನ್ನು ಮಠದ ಚಾವಡಿಗೆ ತರಿಸಿ ಅವರನ್ನು ಮಾರುತ್ತಿದ್ದರೆಂಬ ವಿಷಯ ಆ ಕ್ರಯ ಚೀಟಿಗಳಲ್ಲಿವೆ. ಅನ್ಯರು ಬಂದು ಅವಳನ್ನು ನೋಡಿಕೊಂಡು ಹೋಗಿ ಅಲ್ಲಿ ತನ್ನ ತಂಗಿಯು ಬವಣೆಪಡದಿರಲೆಂದು ಅಣ್ಣ ತಾನೇ ಅವಳನ್ನು ೧೨ ವರಹಕ್ಕೆ ಕೊಂಡು ಕೊಂಡ

ವಿಷಯವಿದೆ.

ಹೆಣ್ಣುಗಳನ್ನು ಮಾರಾಟದಲ್ಲಿ ಹಣಕೊಟ್ಟು ಕೊಂಡು ಕೊಂಡವರು ತಮ್ಮ ಹೊಲ ಮನೆಗಳಲ್ಲಿ ಆಳುಗಳಾಗಿ ಕೆಲಸ ಮಾಡಲು ನೇಮಿಸುತ್ತಿದ್ದಿರಬಹುದು ಕೆಲವು ಹೆಣ್ಣುಗಳು ತಮ್ಮ ಯಜಮಾನನ ಹಾಸಿಗೆಯನ್ನು ಸೇರುತ್ತಿದ್ದರು. ಶೃಂಗೇರಿ ಮಠ ಆ ಬಗ್ಗೆ ಅಷ್ಟು ಲಕ್ಷಿಸಿರಲಾರದು. ಹೆಣ್ಣು ವ್ಯಭಿಚಾರ ಮಾಡಿದ್ದರಿಂದ ಅವಳನ್ನು ಮಾರಾಟ ಮಾಡುವುದು, ಆ ಮೂಲಕ ಶಿಕ್ಷೆಕೊಟ್ಟು ಧರ್ಮಪಾಲನೆ ಮಾಡುವ, ಸಮಾಧಾನ, ಆ ಮಠಕ್ಕೆ ಹಲವು ಶತಮಾನಗಳ ಕಾಲ ಹಲವಾರು ಹೆಣ್ಣುಗಳನ್ನು ಮಾರಿದ್ದರಿಂದ ಮಠಕ್ಕೆ ಬಂದ ಆದಾಯವು ಕಡಿಮೆಯದಲ್ಲ. ಮಾರಾಟವಾಗದ ಹೆಣ್ಣುಗಳು ಮಠದಲ್ಲಿ ಕೆಲಸಕ್ಕೆ ನೇಮಕಗೊಳ್ಳುತ್ತಿದ್ದರು.

ಈ ಸಂದರ್ಭದಲ್ಲಿ ಉರ್‌ಸುಲಕಿಂಗ್ ಮಾಡಿರುವ ಟೀಕೆಗಳು ಬಹಳ ಸ್ಪಷ್ಟವಾಗಿದೆ. "ಪುರುಷನಿಗೆ ಕೆಳಸ್ಥಾನದಲ್ಲಿ ಇಲ್ಲವೇ ಎರಡನೇ ದರ್ಜೆಯವಳಾಗಿ ಮಹಿಳೆಯನ್ನು ನಿರ್ಧರಿಸುವ ಪವಿತ್ರ ಗ್ರಂಥಗಳು ನಮ್ಮಲ್ಲಿವೆ. ಮಹಿಳೆಯರ ಸ್ಥಾನವನ್ನು ಶಾಸನಬದ್ಧವಾಗಿ ಕೆಳಸ್ತರದಲ್ಲಿರಿಸಲು ಈ ಪವಿತ್ರ ಗ್ರಂಥಗಳನ್ನು ಶತ ಶತಮಾನಗಳಿಂದಲೂ ಆಗಿಂದಾಗ್ಗೆ ಬಳಸಿಕೊಳ್ಳಲಾಗುತ್ತಿದೆ. ಮಹಿಳೆಯರ ಸ್ಥಾನವು ಪುರುಷರಿಗಿಂತ ಯಾವತ್ತು ಕೆಳಮಟ್ಟದ್ದು ಎಂಬುದಕ್ಕೆ ಈ ಗ್ರಂಥಗಳು ಪವಿತ್ರ ಆಧಾರಗಳಾಗಿವೆ. ಇವುಗಳ ಜೊತೆಗೆ ಕೆಲವು ಧಾರ್ಮಿಕ ಭೋಧನೆಗಳಲ್ಲಿ ತಾಯಿ ಮತ್ತು ಹೆಂಡತಿಯ ಪಾತ್ರದಲ್ಲಿ ಆದರ್ಶೀಕೃತ ಮಹಿಳೆಯಾಗಿ ಅವಳನ್ನು ವೈಭವೀಕರಿಸಿರುವ ವಿರೋದಾಭಾಸ ಪ್ರಸಂಗಗಳು ನಮಗೆ ದೊರಕುತ್ತವೆ"[೨] ಎಂದಿದ್ದಾರೆ.

"ಧರ್ಮಸಮ್ಮತವಾಗಿ ಅರ್ಥಕಾಮಗಳಲ್ಲಿ ಒಬ್ಬರನ್ನೊಬ್ಬರು ಅತಿಕ್ರಮಿಸುವುದಿಲ್ಲವೆಂದು ವಾಗ್ದಾನ ಮಾಡಿ ಮದುವೆಯಾದ ಗಂಡ ಹೆಂಡಿರು ವಾಗ್ದಾನವನ್ನು ಉಳಿಸಿಕೊಳ್ಳುತ್ತಾರೆಯೇ? ಹೆಣ್ಣು ಇವುಗಳನ್ನು ಅತಿಕ್ರಮಿಸಿದರೆ ಸಮಾಜ ಆಕೆಯನ್ನು 'ಕುಟಿಲೆ' ಎನ್ನುವುದಷ್ಟೇ ಅಲ್ಲ ಆಕೆಯನ್ನು ಚುಚ್ಚಿ ಚುಚ್ಚಿ ಸಾಯಿಸುತ್ತದೆ. ಹೀಗೆ ಅತಿಕ್ರಮಿಸುವ ಹೆಣ್ಣನ್ನು ಕ್ಷಮಿಸಿದ ಗಂಡಸರ ಉದಾಹರಣೆಗಳಿವೆಯೇ? ಆದರೆ ಹೆಣ್ಣು ಇದನ್ನೆಲ್ಲಾ ಗಂಡು ಅತಿಕ್ರಮಿಸಿದರೂ ಏನೂ ಮಾಡುವ ಸ್ಥಿತಿಯಲ್ಲಿಲ್ಲ. ಅಷ್ಟೇ ಅಲ್ಲ ನಮ್ಮ ಸಮಾಜ 'ಆಳುವವನಿಗೆ ಅರವತ್ತು ಸಾವಿರ ಹೆಂಡಂದಿರು ಎಂದಿಲ್ಲವೇ?' ಹೀಗಾಗಿ ಹೆಣ್ಣು ಆಳಾಗಿ ಗಂಡು ಒಡೆಯನಾಗಿಯೂ ಪರಿಗಣಿಸಲ್ಪಟ್ಟ ಈ ಸಮಾಜದಲ್ಲಿ ಹೆಣ್ಣಿನ ದೌರ್ಬಲ್ಯ ಗಂಡಿಗೆ ಲಾಭದಾಯಕವಾಗಿದೆ ಎನ್ನಬಹುದು"[೨೩].

ಹೀಗೆ ಧರ್ಮದ ಮುಖವಾಡದಲ್ಲಿ ಸ್ತ್ರೀಯರನ್ನು ಹೆದರಿಸುತ್ತಾ, ಪುರುಷ ಹಿತ ಸಾಧಿಸುವ ಬ್ರಾಹ್ಮಣ ಮತದ ಮೂಲಾಂಶವಾದ ಬ್ರಾಹ್ಮಣತ್ವದ ಪುರುಷಶಾಹಿ ಮತ್ತು ಪುರೋಹಿತಶಾಹಿ ಅಂಶಗಳನ್ನು ಒಳಗೊಂಡು ತಮ್ಮ ಸ್ವಾರ್ಥಸಾಧಿಸಿದೆ. ಹೆಣ್ಣಿನ ಬದುಕಿನಲ್ಲಿ ಶೋಷಣೆ ಅಗತ್ಯ, ಅನಿವಾರ್ಯ ಎನ್ನುವಂತೆ, ಭೀಭತ್ಸವೆನಿಸುವ ಕರಾಳ ಪದ್ಧತಿಗಳು ಪುರೋಹಿತಶಾಹಿಯ ಅಧಿಕಾರಶಾಹಿಯ, ಅಟ್ಟಹಾಸಗಳು ಮುಗ್ಧಹೆಣ್ಣುಗಳ, ದಲಿತ ಸ್ತ್ರೀ ಪುರುಷರ ಆಕ್ರಂದನ ನೋವು, ನರಳಾಟಗಳು ಚಿತ್ಕಾರಿಸುತ್ತಲೇ ಇರುವಂತೆ ಮಾಡಿವೆ. ಆತ್ಮ ಹೇಗೆ ಸಹಜವಾಗಿ ಶುದ್ಧ ಸ್ವರೂಪದಲ್ಲಿದ್ದರೂ ಇಂದ್ರಿಯ ಮೂಲ ಶರೀರ ಸಂಪರ್ಕದಿಂದ ಕಲುಷಿತಗೊಳ್ಳುವುದೋ ಹಾಗೆ ಹಿಂದೂ ಧರ್ಮವು ಸ್ವಾರ್ಥಸಾಧಕ, ವಿಷಯ ಲಂಪಟ ಅಧಿಕಾರಶಾಹಿ ಜನರಿಂದ ಕಳಂಕಯುತವಾಗಿದೆ. ಮಹಿಳೆಯರ ಬಗೆಗಿನ ಕೀಳು ಭಾವನೆಯಾಗಲಿ, ಅಸ್ಪೃಶ್ಯರ ಬಗೆಗಿನ ತಿರಸ್ಕೃತ ಧೋರಣೆಯಾಗಲಿ, ಹಿಂದೂ ಧರ್ಮದ

ಕಳಂಕಯುಕ್ತ ಭಾಗಗಳು ವೈಯಕ್ತಿಕ ಸಾಧನೆಯ ಮೂಲಕ ಹೇಗೆ ಆತ್ಮ ತನ್ನ ಕಳಂಕವನ್ನು ಕಳೆದುಕಂಡು ಶುದ್ಧ ನಿರಂಜನ ಸ್ಥಿತಿಯಲ್ಲಿರುತ್ತದೆಯೋ ಅಂತೆಯೇ ಸ್ತ್ರೀ ಅಸ್ಪೃಶ್ಯ ಶೋಷಣೆಯ ಕಳಂಕವನ್ನು ನೀಗಿಕೊಂಡು ಹಿಂದೂ ಧರ್ಮ ಶುದ್ಧವಾಗಬೇಕೆಂಬ ಆದರ್ಶವನ್ನು ಗಾಂಧಿ ವ್ಯಕ್ತಪಡಿಸಿದ್ದಾರೆ. ಹಾಗೆಯೇ ಧರ್ಮದ ದುರುಪಯೋಗ ಹಾಗೂ ಅಧೋಗತಿ ಗಳಿಸಿದ್ದನ್ನು ಸಾಯಣಚಾರ್ಯರು ಸುಭಾಷಿತ ಸುಧಾನಿಧಿಯಲ್ಲಿ ಹೀಗೆಂದಿದ್ದಾರೆ. "ಪೃಥ್ವಿ ನಿರ್ವೀರ್ಯವೂ, ಅದರಲ್ಲಿ ಬೆಳೆಯುವ ಔಷಧಗಳು ರಸವಿಲ್ಲದಾಗಿಯೂ ಆಗಿವೆ. ನೀಚರು ಮಹತ್ವವನ್ನು ಹೊಂದಿದ್ದಾರೆ. ರಾಜರು ಕೇವಲ ದ್ರವ್ಯ ಚಿಂತಕರಾಗಿದ್ದಾರೆ. ಬ್ರಾಹ್ಮಣರು ಪ್ರತಿದಿನ ಕೆಟ್ಟ ಕೆಲಸವನ್ನು ಮಾಡುತ್ತಿದ್ದಾರೆ. ಸ್ತ್ರೀಯರು ತಮ್ಮ ಗಂಡಂದಿರಲ್ಲಿ ವೈರತ್ವವನ್ನು ಇಟ್ಟು ಕೊಂಡಿರುವರು, ಮಕ್ಕಳು ತಂದೆಯನ್ನು ದ್ವೇಷಿಸುವರು. ಹೀಗೆ ಕಲಿಯುಗದಲ್ಲಿ ಜಗತ್ತು ಕೆಟ್ಟು ಹೋಗಿರುವುದು. ಆದಿಕಾಲದಲ್ಲಿ ಪ್ರಜೆಗಳನ್ನು ರಕ್ಷಿಸುತ್ತಿದ್ದ ಧರ್ಮ ಕಲಿಯುಗದಲ್ಲಿ ಕಾಡಿಗೆ ಹೋಗುತ್ತಾ ಇದೆ ಎಂದು ತಮ್ಮ ಅಭಿಪ್ರಾಯ ಪಟ್ಟಿದ್ದಾರೆ. ಈ ಬಗ್ಗೆ ಚೆನ್ನಣ್ಣ ವಾಲೀಕಾರರವರು"[೨೪] ದೇವರು ಧರ್ಮದ ಹೆಸರಿನಲ್ಲಿ ದುಡಿಯದೇ ಪುಕ್ಕಟೆ ಸುಖಿಸಬೇಕೆಂದು ಪುರೋಹಿತ ಶಾಹಿ ಜನ ಸುಳ್ಳಿಗೆ ಸೂಡುಕಟ್ಟಿ ಆಕಾಶಕ್ಕೆ ಉರಿ ಹಚ್ಚುವ ಸ್ಮೃತಿ, ಶಾಸ್ತ್ರಗ್ರಂಥಗಳನ್ನು ಪೌರಾಣಿಕ ಸುಳ್ಳು ಸೃಷ್ಟಿಸಿದ್ದಾರೆ ಎನ್ನುತ್ತಾರೆ.

"ಬಾಯಿಲೊಂದಾಡ್ತಾರ, ಮನಸಿನಾಗೊಂಡು ಮಾಡ್ತಾರ

ಬರೆದಟದೋದಿಕೊಂಡು ಬದಿಗಿಟ್ಟು ಹೋಗ್ತಾರ"[೨೫]

ಕೂಡಲೂರ ಬಸವಲಿಂಗ ಹೇಳಿದ್ದು ಸುಳ್ಳು ದೇವರ ಧರ್ಮಗಳನ್ನು ಕಂಡು ಎನ್ನುವಂತೆ ದಲಿತರ ದಣಿವನ್ನು ತಮ್ಮ ನಿಲುವಿಗೆ ಬಳಸಿಕೊಂಡು, ಅಂದಿನಿಂದ ಇಂದಿನ ತನಕ ಕೆಳವರ್ಗದ ಹೆಣ್ಣು ಗಂಡುಗಳ ಶೋಷಣೆ ಮಾಡುತ್ತಾ ಬಂದಿದ್ದು, ಘನ ಘೋರವಾದ ಕ್ರೌರ್ಯವಾಗಿದೆ. ಈ ಸ್ವಾರ್ಥ ಪುರುಷನ ಪುರೋಹಿತಶಾಹಿ ಮನೋಭಾವದ ಕುತಂತ್ರ ಕರಾಳ ಚಿತ್ರದ ಆಧಾರದ ಮೇಲೆ ಪಾಪಕೃತ್ಯದ ಫಲವಾಗಿ ಬಹು ವಿಧದ ಶೋಷಣೆಯ ಬಲೆಯಲ್ಲಿ ಅತ್ಯಂತ ಸಂಕೀರ್ಣವಾಗಿ ಸಿಲುಕಿಸಿರುವ ಕಾರಣ ಹಲವಾರು ಭಿನ್ನ ಸ್ವರೂಪದ ಸಮಸ್ಯೆಗಳುಟ್ಟಿವೆ ಎಂದಿದ್ದಾರೆ.

ಹಾಗೆಯೇ ಬ್ರಾಹ್ಮಣ ಮತದ ವಿಚಾರಧಾರೆಗಳಾದ ಕಪಟತನ, ಕುಟಿಲತನ, ವ್ಯಕ್ತಿ, ಧರ್ಮ, ದ್ವಿಮುಖ ನೀತಿ, ಸ್ತ್ರೀ ಕುರಿತ ವಿಷಯ ಲಂಪಟ ನೀತಿ ಹಾಗೂ ಧಾರ್ಮಿಕ ವ್ರತಾಚರಣೆಗಳನ್ನು ಸಂಪೂರ್ಣವಾಗಿ ನಿರಾಕರಣೆಗೆ ಒಳಪಡಿಸುತ್ತಾ, ಕನಕದಾಸರ ಸಾಹಿತ್ಯ ರಚನೆಗಳಲ್ಲಿ ಪ್ರತಿಪಾದಿತವಾದ ವಿವೇಚನಾಯುಕ್ತವಾದ ಪರಿಕಲ್ಪನೆಯು ಸಮುದಾಯದ ಹಿತಾಸಕ್ತಿ, ಬಡವನ ಪರವಾದ ದೃಷ್ಟಿಕೋನ, ಸ್ತ್ರೀಯರಿಗೆ ಕುಟುಂಬದ ಗೌರವ ಸ್ಥಾನ, ವಿವೇಚನಾ ಪೂರ್ಣ ಜೀವನ ಕ್ರಮ, ಮೊದಲಾದ ವಿಚಾರಗಳನ್ನು ಅಳವಡಿಸಿಕೊಳ್ಳುವಂತೆ ಅವರು ಹೇಳಿದ್ದಾರೆ.

ಯಾವ ಧರ್ಮಗಳು ಕೂಡ ಮಹಿಳೆಯನ್ನು ಮನುಷ್ಯಳಾಗಿ ನೋಡಿಯೇ ಇಲ್ಲ. ಅವಳು ತನ್ನದೇ ಆದ ಬದುಕು ಕಟ್ಟಿಕೊಳ್ಳಲು ಅವಳನ್ನು ವ್ಯಕ್ತಿಯಾಗಿ ರೂಪಿಸಿಯೇ ಇಲ್ಲ. ಅವಳನ್ನು ಭೋಗದ ವಸ್ತುವಾಗಿಯೇ ಮಕ್ಕಳನ್ನು ಹೇರುವ ಯಂತ್ರವಾಗಿಯೋ, ದಾಸಿಯಾಗಿಯೋ, ಪುರುಷನ ಮುಕ್ತಿಗೆ ಸಂತೋಷಕ್ಕೆ ಕ್ರಿಯಾಶೀಲಳಾಗಿ, ಎರಡನೇ ದರ್ಜೆಯವಳಾಗಿ, ಅವಳ ವ್ಯಕ್ತಿತ್ವವನ್ನು ಅಡಗಿಸಿರುವುದು ಪ್ರಮುಖವಾಗಿ ಧರ್ಮಗಳಾಗಿದ್ದು

ಅದರಲ್ಲೂ ಹಿಂದೂ ಧರ್ಮ ಎನ್ನುವುದು ಕಟು ಸತ್ಯ. ಮನುವಿನಂತಹ ಮನಸ್ಸುಗಳು ಇಂತಹ ಮನೋಭಾವನೆಗಳನ್ನು ಇರಿಸಿಕೊಂಡು ಈ ನಿಟ್ಟಿನಲ್ಲಿ ಹಿಂದೂ ಧರ್ಮದಲ್ಲಿ ಮಹಿಳೆಯನ್ನು ಪರಿಭಾವಿಸುವ ಮೂಲ ಬೇರುಗಳನ್ನು ಹುಡುಕುತ್ತಾ ಹೊರಟಾಗ ಅಲ್ಲಿ ಬಹು ಮುಖ್ಯವಾದ ನಾಲ್ಕು ಮಾದರಿಗಳನ್ನು ವಿಶ್ಲೇಷಿಸಬಹುದಾಗಿದೆ.

೧. ಬೀಜ ಕ್ಷೇತ್ರ ನ್ಯಾಯ ಮಾದರಿ

೨. ಪುರುಷ ಪ್ರಕೃತಿ ಮಾದರಿ

೩. ಬ್ರಹ್ಮ ಮಾಯಾ ಮಾದರಿ

೪. ಶಿವ ಶಕ್ತಿ ಮಾದರಿ

೧. ಬೀಜ ಕ್ಷೇತ್ರ ನ್ಯಾಯ ಮಾದರಿ

ಬೀಜ ಕ್ಷೇತ್ರದಂತಹ ಒಂದು ಸಿದ್ಧಾಂತವನ್ನು ಮನು ಪರಿಕಲ್ಪಿಸುವಾಗಲೇ ಅಂದಿನ ಸಮಾಜ ಮಹಿಳೆಯನ್ನು ಬಲಿ ತೆಗೆದುಕೊಳ್ಳುವ ಹುನ್ನಾರ ಅದರೊಂದಿಗಿತ್ತು. ಹಾಗೆಯೇ ಮುಂದುವರಿದು ಹಿಂದೂ ಧರ್ಮವಾದಿಗಳು ಮನುವಿನಷ್ಟೆ ಅಥವಾ ಇನ್ನೂ ವಿಕೃತವಾದಂತಹ ಒರಟು ಮನೋಭಾವದ ಪರಿಣಾಮ ಬೀಜ ಕ್ಷೇತ್ರ ಮಾದರಿಯು ವಿಶ್ಲೇಷಣೆ ಹೀಗಿದೆ, ಮಾತೃಪ್ರಧಾನತೆಯನ್ನು ಹೊಂದಿದ್ದ ಸಮಾಜದಲ್ಲಿ ಮಹಿಳೆ ಹೆರುವುದನ್ನು ಅಂದಿನ ಪುರುಷ ಸಮುದಾಯ ತಮ್ಮ ಪುರ್ವಜರು ಮತ್ತೆ ಜನ್ಮವೆತ್ತಿ ಬರುತ್ತಿದ್ದಾರೆ ಎಂದು ಭಾವಿಸುತ್ತಿದ್ದರು. ಇದರಿಂದ ಬೀಜ ಅತಿಯಾದ ಪ್ರಾಮುಖ್ಯತೆ ಪಡೆಯುತ್ತಾ ಬಂದು ಕ್ಷೇತ್ರಕ್ಕೆ ಒಂದು ಅಧೀನ ಪ್ರಜ್ಞೆಯನ್ನು ಪ್ರತಿಪಾದಿಸುತ್ತಾ ಬಂದರು. ಪುರುಷ ತನಗೂ ತನ್ನ ಪ್ರಜ್ಞೆಯನ್ನು ಪ್ರತಿಪಾದಿಸುತ್ತಾ ಬಂದರು. ಪುರುಷ ತನಗೂ ತನ್ನ ಮಗುವಿಗೂ ಜೈವಿಕ ಸಂಬಂಧವಿರುವುದು ತಿಳಿದು, ಇದರಿಂದ ತನ್ನ ಹೆಂಡತಿ ಇತರರೊಂದಿಗೆ ಲೈಂಗಿಕ ಸಂಬಂಧ ಹೊಂದುವುದನ್ನು ನಿಷೇಧಿಸುವ ದೊಡ್ಡ ಉಕ್ಕಿನ ಕೋಟೆಯನ್ನು ನಿರ್ಮಿಸಿದ. ಅಂದರೆ ಹೆಂಡತಿಯ ಶೀಲಕ್ಕೆ ಬೇಲಿ ಹಾಕಲು ಶುರು ಮಾಡಿದರು.

ಬೀಜ ಕ್ಷೇತ್ರದ ನ್ಯಾಯ ಅವರದ್ದೇ, ಒಂದು ವಿಶ್ಲೇಷಣೆ ಪ್ರಕಾರ ಕೆಟ್ಟ ಬೀಜವನ್ನು ಉತ್ಕೃಷ್ಟವಾದ ಕ್ಷೇತ್ರದಲ್ಲಿ ಹಾಕಿದರೂ ಹಾಗೆಯೇ ಕೆಟ್ಟ ಕ್ಷೇತ್ರದಲ್ಲಿ ಒಳ್ಳೆಯ ಬೀಜವನ್ನು ಹಾಕಿದರೂ ಪ್ರಯೋಜನವಿಲ್ಲ. ಯಾವ ಬೀಜ ಬಿತ್ತುತ್ತೇವೆಯೋ ಅಂಥ ಫಲ ಪಡೆಯುತ್ತೇವೆ. ಅನ್ನೋ ಮನುವಿನ ಅಭಿಪ್ರಾಯದಂತೆ ಬೀಜದ ಪ್ರಾಮುಖ್ಯತೆ ಸ್ಥಾಪಿತವಾಯಿತು. ಇದಕ್ಕೆ ವಿರೋಧ ಒಡ್ಡುವ ನಿಟ್ಟಿನಲ್ಲಿ ಮಾತೆ ಮಹದೇವಿಯವರು ಬೀಜವೇ ಮುಖ್ಯವಲ್ಲ... ಬೀಜವಿಲ್ಲದ ಎಷ್ಟೋ ಗಿಡಗಳಿವೆ. ಉದಾ.ಕಬ್ಬು, ಬಾಳೆ...ಎಂದಿದ್ದಾರೆ.

ಹೀಗೆ ಪುರುಷ ಆಸ್ತಿ ಮತ್ತು ಹೆಣ್ಣಿನ ಒಡೆಯನಾದನು. ಹೀಗೆ ಮಾಲಿಕನಾಗಿ ಬಂದ ಬೆಳೆಯಲ್ಲವೂ ಅವನಿಗೆ ಸೇರತಕ್ಕದ್ದು ಎಂಬುದು ಅಲಿಖಿತ ನಿಯಮವಾಯಿತು. ಇದರಿಂದ ಮಹಿಳೆ ಒಂದು ಸರಕಾಗಿ, ಅಥವಾ ಉಡುಗೊರೆಯಾಗಿ ಕೊಡುವ, ಸ್ವೀಕರಿಸುವ, ವಸ್ತುವಾದಳು. ಆಸ್ತಿ ರಕ್ಷಣೆಯ ಹಾಗೆ ಹೆಣ್ಣಿನ ರಕ್ಷಣೆಯ ಹೊಣೆಯು ಕೂಡ ಪುರುಷನಿಗೆ ಸೇರಿದ್ದು ಎಂದಾಯಿತು. ತಂದೆ, ಗಂಡ, ಮಗನ ರಕ್ಷಣೆಯಲ್ಲಿರತಕ್ಕವಳಾಗಿ ಜೊತೆಗೆ ಅನುಲೋಮ ಮತ್ತು ಪ್ರತಿಲೋಮ ವಿವಾಹದಲ್ಲೂ ಬೀಜ ಕ್ಷೇತ್ರದ ಸಿದ್ಧಾಂತ ಪ್ರತಿಬಿಂಬಿಸಿತು. ಹೆಣ್ಣು ಪುರುಷನ ಕಾಮ ಜೀವನಕ್ಕೆ ಸೀಮಿತವಾದಳು. ಆಕೆಯ ಶಾರೀರಿಕ ಅಸ್ತಿತ್ವ ಮಾತ್ರ ಇಲ್ಲಿ ಪ್ರಧಾನ. ಆಕೆಯ

ಮಾನಸಿಕ ಬೌದ್ಧಿಕ ಅಸ್ತಿತ್ವವನ್ನು ನಿರಾಕರಣೆಗೆ ಗುರಿಮಾಡಿ, ವೈಯಕ್ತಿಕ ಆಸ್ತಿಯಾದ ಹೆಣ್ಣನ್ನು ಕುರಿತು ಪುರುಷ ಸಂಕುಚಿತ ದೃಷ್ಟಿಕೋನವನ್ನು, ಅಂದರೆ, ಆಕೆಯನ್ನು ಕ್ಷೇತ್ರದ ಕಲ್ಪನೆಯಿಂದಲೇ ನೋಡುವ ಪುರುಷರ ಮನಸ್ಥಿತಿಯು ನಿರ್ಬಂಧಿತ ಮನೋಭಾವ ಇದರಿಂದ ವ್ಯಕ್ತವಾಗುತ್ತದೆ. ಎಂದು ವಿವರಿಸಲಾಗಿದೆ.ಬ್ರಾಹ್ಮಣ ಶ್ರೇಷ್ಠತೆಯ ಪ್ರತಿಪಾದನೆಯ ಹಾದಿಯಲ್ಲಿ ಬ್ರಾಹ್ಮಣ ಕುಲದ 'ಶುದ್ಧ ತಳಿ' ಕಲ್ಪನೆಯನ್ನು ಹುಟ್ಟುಹಾಕುವ ಪ್ರಯತ್ನದ ತರ್ಕ ಮಾತ್ರವಾಗಿರುತ್ತದೆ.

"ಪುರುಷರ ಕ್ರೋಮೋಸೋಂನಿಂದ ಮಗುವಿಗೆ ಲಿಂಗ ನಿರ್ಧರಿತವಾಗುತ್ತದೆ ಎಂಬುದು ವೈಜ್ಞಾನಿಕವಾಗಿದ್ದರೂ, ಇದನ್ನು ತಿಳಿದವರೂ ಪದೇ ಪದೇ ಹೆಣ್ಣು ಮಕ್ಕಳನ್ನು ಹಡೆಯುವವಳನ್ನು ದೂಷಿಸಿ, ಹೀಯಾಳಿಸಿ, ಚಿತ್ರಹಿಂಸೆ ಕೊಡುತ್ತಿರುವ ಆಧುನಿಕ ಮನುಗಳು ಬೀಜಕ್ಷೇತ್ರದ ನಂಬಿಕೆಯೊಂದಿಗೆ ಬದುಕುತ್ತಿದ್ದಾರೆ. ತಮ್ಮ ನಿರೀಕ್ಷೆಗೆ ಅನುಗುಣವಾಗಿ ಸಂತಾನ ಪ್ರಾಪ್ತಿ ಆಗದಿದ್ದಾಗ, 'ನಿಯೋಗ ಪದ್ಧತಿ'ಯನ್ನು ಹೇಳಲಾಗುತ್ತದೆ. ಇದು ಮಾತ್ರ ವ್ಯಭಿಚಾರವಲ್ಲ. ಇದಕ್ಕೆ ಬದಲಾಗಿ ವಿಧವಾ ವಿವಾಹ ಅನುಮೋದಿಸುವುದಿಲ್ಲ. ಹೀಗೆ ಮಹಿಳೆಯನ್ನು ಅಮಾನವೀಯವಾಗಿ ನಡೆಸುತ್ತಾ ಧರ್ಮದ ಮುಖವಾಡದಲ್ಲಿ ಸ್ತ್ರೀಯರನ್ನು ಹೆದರಿಸುತ್ತಾ, ಪುರುಷ ಪ್ರಧಾನ ವ್ಯವಸ್ಥೆ ತನ್ನ ಸ್ವಾರ್ಥದ ಮೇಲುಗೈ ಸಾಧಿಸಿದೆ"[೨೬] ಎನ್ನಲಾಗಿದೆ.

ಹಿಂದೆ ಪ್ರಖರವಾಗಿ ಪ್ರಚಲಿತದಲ್ಲಿದ್ದ ದೇವದಾಸಿ ಪರಂಪರೆ, ಇಂದಿಗೂ ಹಲವಾರು ಕಾನೂನು ನಿಷೇಧಗಳ ಮಧ್ಯದಲ್ಲಿ ಅಲ್ಲಲ್ಲಿ ಜೀವಂತವಾಗಿರುವುದು ಇದು ಸ್ತ್ರೀಯರ ಮೇಲಿನ ಲೈಂಗಿಕ ದೌರ್ಜನ್ಯವನ್ನು ಬೆತ್ತಲೆಗೊಳಿಸುತ್ತದೆ.

**೨. ಪುರುಷ ಮತ್ತು ಪ್ರಕೃತಿ ಮಾದರಿ**

'ಪುರುಷ' ಶಾಶ್ವತವಾಗಿರುವವನು ಪುರುಷನ ಮೂಲ ಸ್ವರೂಪವಾದ ಅವನು ಸ್ಥಾಯೀರೂಪನಾಗಿ ಎಲ್ಲರ ವೀಕ್ಷಣೆ ಮಾಡುತ್ತಾನೆ. ಅವನಿಗೆ ನಿರ್ಗುಣ ನೋವು ನಲಿವುಗಳಿಲ್ಲ. ತಟಸ್ಥ, ನಿರಾಸಕ್ತ, ಬಂಧನದಿಂದ ಮುಕ್ತನಾಗಿರುತ್ತಾನೆ. ಸ್ಥಾಯಿರೂಪದಿಂದ ಹೊರಬಂದ ದೇಹ ಮತ್ತು ಮನಸ್ಸಿನ ರೂಪದೊಳಗೆ ಅವನು ಪ್ರಕೃತಿಗೆ ಬಂದು ಸೇರುತ್ತಾನೆ. ಪ್ರಕೃತಿಯೊಂದಿಗೆ ಸುಖ, ದುಃಖ ಅನುಭವಿಸುತ್ತಾನೆ. ಪ್ರಕೃತಿಯ ಒಡನಾಟಕ್ಕೆ ಬಂದಾಗ ಪುರುಷ ಬೇರೆಯಾಗಿ ಕಾಣುತ್ತಾನೆ.

'ಪ್ರಕೃತಿ' ಇದಕ್ಕೆ ಪ್ರಜ್ಞೆ ಇಲ್ಲ, ಆದರೂ ಅವುಗಳಿಗೆ ಹುಟ್ಟು ಸಾವು ಇದೆ. ಪುರುಷನ ಆನಂದಕ್ಕೋಸ್ಕರ ಮುಕ್ತಿಗೊಳಗಾದ ಪದ್ಧತಿ. ಸ್ತ್ರೀ ಕ್ರಿಯಾಶೀಲವಾಗುತ್ತಾಳೆ. ಪುರುಷ ತನ್ನ ಸುಖಕ್ಕಾಗಿ ಪ್ರಕೃತಿಯನ್ನು ಪ್ರಚೋದಿಸುತ್ತಾನೆ. ಈ ಕಾರಣಕ್ಕಾಗಿಯೇ ಗಾಂಧೀಜೀಯವರು ಹೀಗೆ ಹೇಳಿದ್ದಾರೆ. "ಪುರುಷರು ತಮ್ಮಲ್ಲಿ ಕಾಮೋದ್ರೇಕ ಉಂಟಾಗಲೆಂಬ ಉದ್ದೇಶದಿಂದ ಸ್ತ್ರೀಯರಿಗೆ ಆಭರಣಗಳ ಲಾಲಸೆಯನ್ನು, ಸೊಗಸುಗಾರಿಕೆಯನ್ನು ಕಲಿಸುತ್ತಾರೆ. ಇದರಿಂದ ತಾವು ಗುಲಾಮರಾಗುತ್ತೇವೆಂದು ಮಹಿಳೆಯರಿಗೆ ತಿಳಿಯದು, ಇದರಿಂದ ಮೂಗು, ಕಿವಿ, ಕೈ, ಕಾಲು ಎಲ್ಲವುಗಳ ಮೇಲೆ ಆಭರಣಗಳನ್ನು ಹೇರಿಕೊಂಡು ಜಡೆ, ಅದಕ್ಕೆ ಘಮ ಘಮಿಸುವ ಹೂ ಮುಡಿಯುವುದು, ಕೈಗೆ ಬಳೆಗಳ ಘಲ್, ಘಲ್ ಎನ್ನುವ ಸಂಗೀತದ ನಾದ, ಇವು ಮಹಿಳೆಯರ ಅಧೋಗತಿಗೆ ಕಾರಣವಾಗುವ ವಸ್ತುಗಳಾಗಿವೆ. ಇವನ್ನು ಧರಿಸುವಲ್ಲಿ ಅರ್ಥವಿಲ್ಲ. ಪ್ರಾಣಿಗಳಂತೆ ಮೂಗು ಚುಚ್ಚುವುದು ಎಂಥ

ವಿಪರ್ಯಾಸ"[೨೬] ಎಂದಿದ್ದಾರೆ.

ಇದನ್ನು ಗಮನಿಸಿಯೇ 'ಜಾಗೃತ ಮಹಿಳೆಯರು', ನಾವು ಸ್ವರ್ಗ ಸುಂದರಿಯರಲ್ಲ, ಆಟಿಕೆಗಳಲ್ಲ, ಭಾವೋದ್ರೇಕದ ಆಗರ ಅಲ್ಲ, ಪುರುಷರಂತೆ, ಮಾನವೀಯ ಸ್ವಭಾವದ ಮತ್ತು ಪುರುಷರಷ್ಟೇ ಸ್ವಾತಂತ್ರ್ಯಾಭಿಲಾಷೆಗಳು ಎಂದು ತಮ್ಮ ಕೊರಗನ್ನು ತೋಡಿಕೊಳ್ಳುತ್ತಾರೆ.

ಇಲ್ಲಿ ಪುರುಷನ ನಿರ್ದಿಷ್ಟವಾದ ಮತ್ತು ವಿಶೇಷವಾದ ಸ್ವಭಾವ 'ಜ್ಞಾನ' ಪ್ರಕೃತಿಯ ನಿರ್ದಿಷ್ಟವಾದ ಮತ್ತು ವಿಶೇಷವಾದ ಸ್ವಭಾವ 'ಕ್ರಿಯೆ'

**೩. ಬ್ರಹ್ಮ ಮಾಯಾ ಮಾದರಿ**

ಇದು ಪುರುಷ ಪ್ರಕೃತಿ ಮಾದರಿಗಿಂತ ಸ್ವಲ್ಪ ಭಿನ್ನವಾಗಿದ್ದು, ಈ ಮಾದರಿಯಲ್ಲಿ ಪ್ರಕೃತಿಯನ್ನು ಮಾಯೆಯಷ್ಟು ಕೀಳಾಗಿ ಕಾಣುವುದಿಲ್ಲ. ಆದರೂ ಮೇಲ್ನೋಟಕ್ಕೆ ಇಬ್ಬರೂ ಸಮಾನರು ಎನ್ನಿಸಿದರೂ, ಮಹಿಳೆಗೆ ಆರೋಪಿಸಿರುವ ಗುಣಗಳನ್ನು ನೋಡಿದಾಗ, ಮಂಡಳಿಯ ಆದೇಶಗಳನ್ನು ಪಾಲಿಸುವ, ಜಾರಿಗೊಳಿಸುವ, ಒಬ್ಬ ಕಾರ್ಯ ನಿರ್ವಾಹಕಗಳ ಪಾತ್ರವನ್ನು ಮಹಿಳೆ ವಹಿಸುತ್ತಾಳೆ.

**೪. ಶಿವ ಶಕ್ತಿ ಮಾದರಿ**

ಶಾಕ್ತಾ ತತ್ವದ ಪ್ರತಿಪಾದನೆ ಇದಾಗಿದ್ದು, ಶಿವ ಭಕ್ತಿ ಮಾದರಿಯ ಪರಿಕಲ್ಪನೆಯನ್ನು ಇದು ವಿವರಿಸುತ್ತದೆ.

'ಶಿವ' ಪರಿಶುದ್ಧ ಪ್ರಜ್ಞೆಯುಳ್ಳವನು, ಸರ್ವಾಂತರ್ಯಾಮಿ ಗ್ರಹಿಕೆಗೆ ಮೀರಿದವನು. ಶಿವನ ಗ್ರಹಿಕೆ ಪದಗಳಿಂದ, ಆಲೋಚನೆಗಳಿಂದ ಸಾಧ್ಯವಿಲ್ಲದ್ದು. ಅವನನ್ನು ನಿರೂಪಿಸುವ ಚಿಹ್ನೆಯು ಯಾವುದೇ ಮನುಷ್ಯನ ಬುದ್ಧಿಶಕ್ತಿಗೆ ನಿಲುಕದಿರುವುದು.

'ಶಕ್ತಿ' ಈಶ್ವರನ ಅವಿಭಾಜ್ಯತೆಯ ಅಂಗ. ಶಕ್ತಿ ಪ್ರೀತಿ ದೇವತೆ, ಇವಳಿಗೊಂದು ಸ್ವತಂತ್ರವಾದ ಅಸ್ತಿತ್ವವೇನು ಕೊಡುವುದಿಲ್ಲ. ಸಜೀವವಾದ ಶಿವನ ಚೈತನ್ಯ ಎಂದು ಭಾವಿಸುತ್ತಾರೆ. ಶಿವನ ಜ್ಞಾನ, ಕ್ರಿಯೆ, ಅಪೇಕ್ಷೆಯಾಗಿ ಶಕ್ತಿ ಗೋಚರಿಸುತ್ತಾಳೆ. ಕೆಲವೊಮ್ಮೆ ಸ್ಥೈರ್ಯ, ಅರಿವಿನ ಶಕ್ತಿ ಪಡೆಯುವುದು ದೇವರನ್ನು ತಿಳಿಯುವ ಮಾರ್ಗ. ಅವಳು ಕ್ರಿಯೆಯೇ ಚೈತನ್ಯ, ಆ ಕ್ರಿಯೆಯ ಮೂಲಕವೇ ಇಡೀ ಜಗತ್ತು ಜೀವಂತವಾಗಿ ಬೆಳೆಯುತ್ತಿರುವುದು ಶಕ್ತಿ, ಬಂಧನ ಮತ್ತು ಮುಕ್ತಿ ಎರಡಕ್ಕೂ ಕಾರಣಳು. ಈ ಶಕ್ತಿಯ ಮಾಧ್ಯಮದ ಮೂಲಕ ಶಿವ ಸೃಷ್ಟಿ, ಶಿವ ಸೃಷ್ಟಿಕರ್ತನಾಗುತ್ತಾನೆ ಮತ್ತು ಪಾಲಕನಾಗುತ್ತಾನೆ. ಇಡೀ ಜಗತ್ತು ಶಕ್ತಿಯಿಂದ ರೂಪಿತವಾಗಿದೆ. ಶಿವಶಕ್ತಿ ಇಬ್ಬರೂ ಪರಸ್ಪರ ರೂಪಿಸಲ್ಪಟ್ಟಿದ್ದಾರೆ. ಅವೆರಡೂ ವಿಭಿನ್ನ ಹೆಸರುಗಳನ್ನು ಹೇಳುವ ಪಾತ್ರಗಳು ಆದರೆ ಅವರಿಬ್ಬರೂ ಒಂದೇ.

ಈ ಮಾದರಿಯಲ್ಲಿ 'ಶಿವ' ಪುರುಷನಾಗಿ ಒಂದು ವಸ್ತುವಾಗುತ್ತಾನೆ. 'ಶಕ್ತಿ' ಸ್ತ್ರೀಯಾಗಿ ಅವನ ಕ್ರಿಯೆಯಾಗುತ್ತಾಳೆ. ಇಡೀ ಜಗತ್ತು ಶಿವಶಕ್ತಿಯ ಆಟದ ರಂಗಭೂಮಿ ಎನ್ನುವ ಪರಿಕಲ್ಪನೆಯನ್ನು ಇಲ್ಲಿ ತರಲಾಗಿದ್ದು, ಶಕ್ತಿಗೆ ಶಿವನ ಕ್ರಿಯೆಯನ್ನು ನೋಡುವ ಬಯಕೆಯಾದಾಗ ಜಗತ್ತು ಸೃಷ್ಟಿಯಾಗುವುದು.

ಇಲ್ಲಿಯ ವಿಶೇಷತೆ ಎಂದರೆ ಎಲ್ಲ ಮಹಿಳೆಯರಿಗೆ 'ತಾಯಿ' ಎಂದು ಹೇಳಿ 'ಮಾತೃ ಸ್ವರೂಪ' ನೀಡಿದ್ದಾರೆ. ಇವಳು ಚತುರಶೀಲೆ, ಬೇರೆ ಮಾದರಿಗಳಂತೆ ಭೋಗದ ವಸ್ತುವಲ್ಲ. ಇವಳೂ ಕೂಡ ಒಬ್ಬ ಭೋಗಿ, ಪುರುಷ

ಅನುಭವಿಸುವ ಸುಖವನ್ನು ಇಲ್ಲಿ ಮಹಿಳೆಯೂ ಅನುಭವಿಸುತ್ತಾಳೆ. ಹಾಗೂ ಇಲ್ಲಿಯ ಮಹಿಳೆ ಶಕ್ತಿ 'ಕುಂಡಲಿನಿ' ಕೇವಲ ಜನ್ಮಕೊಡುವವಳಷ್ಟೇ ಅಲ್ಲ. ರೂಪಿಸುತ್ತಾಳೆ. ಬೆಳೆಸುತ್ತಾಳೆ. ಆದ್ದರಿಂದ ಮಾತೃರೂಪವಾಗಿ ಶಕ್ತಿ ಗೌರವಿಸಲ್ಪಡುತ್ತಾಳೆ. ಈ ರೀತಿ ಆರ್ಯೇತರವಾದ ಕೆಲವು ಧರ್ಮಗಳು ಸ್ತ್ರೀಪರವಾಗಿ ನಿಲ್ಲುತ್ತವೆ. ಅವಳನ್ನು ಒಬ್ಬ ವ್ಯಕ್ತಿಯಾಗಿ ಬದುಕುಗಳನ್ನು ಕಟ್ಟುವ ಪ್ರಕ್ರಿಯೆಯನ್ನು ಸಮಪಾಲುದಾರಳು ಎಂದು ವಿಶ್ಲೇಷಿಸಿರುವುದು ಕಾಣಬಹುದಾಗಿದೆ.

**೪. ೪ ಭಾರತೀಯ ಬುಡಕಟ್ಟು ಸ್ತ್ರೀ : ಪ್ರಾಚೀನ ಯುಗದಿಂದ ಆಧುನಿಕ ಯುಗದ ವರೆಗೆ**

ಹಲವಾರು ಧರ್ಮಗಳು, ವಿಭಿನ್ನ ಸಂಸ್ಕೃತಿ, ನೂರಾರು ಜಾತಿ, ಸಾವಿರಾರು ಉಪಜಾತಿಗಳನ್ನು ಹೊಂದಿರುವ ಭಾರತದಂತಹ ರಾಷ್ಟ್ರದಲ್ಲಿ ಮಹಿಳೆಯರ ಚಾರಿತ್ರಿಕ ಹಿನ್ನೋಟವನ್ನು ಒಂದೇ ದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ. ಬದಲಿಗೆ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿ ಹಾಗೂ ಅವರು ವಾಸಿಸುವ ಪರಿಸರವನ್ನು ಪರಿಗಣಿಸುವುದು ಅಗತ್ಯ. ಬುಡಕಟ್ಟು ಮಹಿಳೆಯರು ಸಾಂಪ್ರದಾಯಿಕ ಬದುಕನ್ನು ಬಿಟ್ಟುಕೊಡದೆ ಅರಣ್ಯದಲ್ಲಿರುವವರು ಮತ್ತು ಆಧುನಿಕ ಬದುಕನ್ನು ಒಪ್ಪಿಕೊಂಡ ಗ್ರಾಮೀಣ ಅಥವಾ ನಗರವಾಸಿಗಳು ಎಂದು ಪ್ರತ್ಯೇಕಿಸಿ ನೋಡುವುದು ಸೂಕ್ತ.

"ಮಹಿಳೆಯರನ್ನು ಸ್ಥೂಲವಾಗಿ ಎರಡು ನೆಲೆಗಳಲ್ಲಿ ವಿಂಗಡಿಸಿಕೊಳ್ಳಬಹುದು. ೧. ಪೌರ ಸಮಾಜದ ಹೊರಗಿದ್ದವರು ೨. ಪೌರ ಸಮಾಜದ ಒಳಗಿದ್ದವರು. ಪೌರ ಸಮಾಜದ ಹೊರಗಿರುವ ಮಹಿಳೆಯರು ಬುಡಕಟ್ಟು ಮಹಿಳೆಯರಾಗಿರುವರು. ಬುಡಕಟ್ಟು ಮಹಿಳೆಯರನ್ನು ಕೂಡ ಏಕ ಘಟಕವಾಗಿ ಗುರುತಿಸಲಾಗುವುದಿಲ್ಲ. ಏಕೆಂದರೆ ಭಿನ್ನ ಭಿನ್ನ ಬುಡಕಟ್ಟು ಸಮಾಜಗಳಿಗೆ ಅನುಗುಣವಾಗಿ ಆಯಾ ಬಡುಕಟ್ಟು ಮಹಿಳೆಯಿಂದ ಶೋಷಣೆ ಸಹಜ ಸ್ವರೂಪವೂ ಕೂಡ ಭಿನ್ನಾಗಿರುತ್ತದೆ. ಪೌರ ಸಮಾಜದ ಒಳಗಿರುವ ಮಹಿಳೆಯರು ವರ್ಣ, ಜಾತಿ ಮತ್ತು ವರ್ಗ ಹೀಗೆ ಅನೇಕ ಸ್ತರಗಳಲ್ಲಿ ಹಂಚಿಹೋಗಿದ್ದು, ಈ ಎಲ್ಲಾ ಮಹಿಳೆಯರ ನಡುವೆ ಅಪಾರವಾದ ಕಂದಕಗಳಿವೆ. ಅನೇಕ ಬುಡಕಟ್ಟು ಸಮುದಾಯಗಳು ಪೌರಸಮಾಜದ ಒಳಗಡೆ ಬಂದು ಸೇರಿಕೊಂಡಿವೆ. ಈ ಸಮುದಾಯದ ಮಹಿಳೆಯರು ದಲಿತ ವರ್ಗಕ್ಕೆ ಸೇರಿದಂತೆ ನಡೆಸಿಕೊಳ್ಳಲಾಗುತ್ತಿವೆ."[೨೮]

ಹಾಗೆಯೇ, ವರ್ಣಾಶ್ರಮ ಮೌಲ್ಯಗಳೆಲ್ಲವು ಜಾತಿಯ ಹಾಗೂ ಪುರುಷ ಸೂಚಕದಿಂದಲೇ ಮಹಿಳೆಯರನ್ನು ಅಸ್ಪೃಶ್ಯರನ್ನಾಗಿಸಿವೆ. ದಲಿತ ಮಹಿಳೆಯರನ್ನು ಇನ್ನೂ ಕ್ರೂರವಾಗಿ ದಂಡಿಸಿದೆ. ಮೇಲುಜಾತಿಯ ಮಹಿಳೆಯರನ್ನು ಪುರುಷಶಾಹಿಯು ತನ್ನ 'ಖಾಸಗಿ ಆಸ್ತಿ' ಎಂಬಂತೆ ರಕ್ಷಣೆ ಕೊಡಬಲ್ಲವು. ಇದೇ ಅವರಿಗೆ ರಕ್ಷಣೆಯ ಬೇಲಿ. ಎಲ್ಲಾ ಪುರುಷರಿಂದ ಶೋಷಣೆಯಾಗಲಾರದು. ದಲಿತ ಮಹಿಳೆಯರ ಮೇಲೆ ಸಮಾಜದ ಎಲ್ಲಾ ಮೇಲ್ಜಾತಿಗಳು ಅಧಿಕಾರ ಚಲಾಯಿಸಬಲ್ಲವು. ಊಳಿಗಮಾನ್ಯ ಸಮಾಜದ ಹಳೆಯ ಮೌಲ್ಯಗಳು ಜಾತಿ ಪದ್ಧತಿಯಲ್ಲಿ ಆಳವಾಗಿ ಬೇರುಬಿಟ್ಟ ಕಾರಣದಿಂದಲೂ ದಲಿತ ಮಹಿಳೆಯ ಅಸ್ತಿತ್ವವನ್ನು ಮೇಲುಜಾತಿಯ ಸ್ತ್ರೀಯರ ಮೂಲಕ ಗುರುತಿಸಿಕೊಳ್ಳಲು ಬರುವುದಿಲ್ಲ. ಲೈಂಗಿಕವಾಗಿ ನಿರಂತರ ಶೋಷಣೆಗಾಗಿಯೇ ಕೆಲವೊಂದು ಸಮುದಾಯಗಳ ಸ್ತ್ರೀಲೋಕವನ್ನೇ ದೇವದಾಸಿಯರನ್ನಾಗಿಸಿಕೊಂಡ ಊಳಿಗಮಾನ್ಯ ಸಮಾಜವು ದೇವರ ಹೆಸರಿನಲ್ಲಿ ಲೈಂಗಿಕ ಆಕ್ರಮಣಗಳನ್ನು ನಡೆಸುತ್ತದೆ. ಮೇಲುಜಾತಿಯ ಸ್ತ್ರೀಯರಿಗೆ ಕೌಟುಂಬಿಕ ಒಳಾವರಣದಲ್ಲಿ ಲೈಂಗಿಕ ಶೋಷಣೆಗೆ

ಹಚ್ಚಿದರೆ, "ದಲಿತ ಮಹಿಳೆಯರ ಮೇಲಿನ ಲೈಂಗಿಕ ಹಲ್ಲೆಗಳಿಗೆ ಇಡೀ ಪುರುಷ ಸಮಾಜವೇ ಪೈಪೋಟಿ ನೆಡೆಸಬಲ್ಲದು, ಹಾಗೂ ದಿಗ್ವಿಜಯ ಪಡೆದು ಬೀಗಬಲ್ಲದು. ಸ್ತ್ರೀ ದೈವಗಳನ್ನು ಲೈಂಗಿಕ ಶೋಷಣೆಗೆ ಸೃಷ್ಟಿಸಿಕೊಂಡ ಊಳಿಗಮಾನ್ಯ ಪುರುಷ ಸಮಾಜವು ವೈದಿಕ ಧರ್ಮದಷ್ಟೇ ಕ್ರೂರವಾಗಿ ದಲಿತ ಮಹಿಳೆಯರನ್ನು ಹಿಂಸಿಸಿದೆ. ಇಂತಹ ಮೌಲ್ಯಗಳು ಈ ಕಾಲದಲ್ಲಿ ಜೀವಂತವಾಗಿವೆ. ಅಧಿಕಾರದ ತಡೆಗೋಡೆಗಳು ಆಕೆಯನ್ನು ನಿರ್ಣಾಯಕವಾಗಿ ಕೆಳಗುರುಳಿಸಬಲ್ಲವು. ಹೀಗೆ ದಲಿತ ಮಹಿಳೆ ಎದುರಿಸಬೇಕಾದ ಸವಾಲುಗಳು ಬೇರೆ ಬೇರೆಯಾಗಿದ್ದು. ಶೋಷಣೆಯ ಪ್ರಮಾಣದಲ್ಲೂ ಮೇಲ್ಜಾತಿ ಮಹಿಳೆಯರಿಗೆ ಅಂತರವಿದೆ."[೨೫]

ಬುಡಕಟ್ಟು ಸ್ತ್ರೀಯರ ಜೀವನದ ಸಂಗತಿಗಳನ್ನು ಅಧ್ಯಯನ ಮಾಡಿದಾಗ ಇದಕ್ಕೆ ಸಂಬಂಧಿಸಿದಂತೆ ನಮಗೆ ಕೆಲವು ವಿಪರ್ಯಾಸಗಳು ಹಾಗೂ ವಿಲಕ್ಷಣಗಳು, ದ್ವಂದ್ವತೆಗಳು ನಮ್ಮ ಗಮನವನ್ನು ಸೆಳೆಯುವವು.

ಆರಂಭದಲ್ಲಿ ಸ್ತ್ರೀಯನ್ನು ಪೂಜ್ಯತೆಯಿಂದ ಗೌರವಭಾವದಿಂದ ಕಾಣುತ್ತಾ ಅವರನ್ನು ದೈವೀ ಸ್ವರೂಪವೆಂದು ಕಂಡುಕೊಂಡು, ನಂತರದ ಕಾಲದಲ್ಲಿ ಸ್ತ್ರೀಯನ್ನು ಪರಾಧೀನವಾಗಿ ಮಾಡಿ, ಸ್ವಾತಂತ್ರ, ಸಮಾನತೆಗೆ ಅನರ್ಹರನ್ನಾಗಿಸಿ ಇದಕ್ಕೆ ಪೂರಕವಾಗುವ ತರಹ ಧರ್ಮಗಳ ಬೆಂಬಲವನ್ನು ಪಡೆದು, ಸ್ತ್ರೀ ಸಂಬಂಧಿತ ಹಲವಾರು ಬಗೆಯ ದೌರ್ಬಲ್ಯಗಳು ಪೀಡನೆ ಅಥವಾ ಸಮಸ್ಯೆಗಳು ಹುಟ್ಟಲು ಕಾರಣವಾದವು ವೇದಗಳ ಕಾಲಾನಂತರದಿಂದ ಹಿಡಿದು, ಮಧ್ಯಕಾಲೀನ ಯುಗವನ್ನೊಳಗೊಂಡಂತೆ, ಆಧುನಿಕ ಯುಗದವರೆಗೂ ಮಹಿಳೆಯರ ಜೀವನ ಬಹು ಯಾತನಾಮಯವಾದ ಮತ್ತು ನೋವು ನರಳಾಟದಿಂದ ಸಮಸ್ಯೆ ಸವಾಲುಗಳಿಂದ ಕೂಡಿದ ಅವಧಿಯಾಗಿದ್ದು, ಮಹಿಳೆ ಪುರುಷನಿಂದ ಶೋಷಿತವಾಗುವ ಅಂಶಗಳನ್ನಲ್ಲದೇ, ವಿಧವೆಯಾಗಿ, ಮಹಾಸತಿಯಾಗಿ, ದೇವದಾಸಿಯಾಗಿ ಇಲ್ಲಿ ದೇವಾಲಯದ ಸೂಳೆಯಾಗಿ, ವ್ಯಕ್ತಿ ಸಮಾಜದ ಸೂಳೆಯಾಗಿ, ದಾಸಿ ಅಥವಾ ಗುಲಾಮಳಾಗಿ, ಅನುಭವಿಸಿದ ಹಿಂಸೆಯನ್ನು ಈ ಮುಂದಿನಂತೆ ನೋಡಬಹುದಾಗಿದೆ.

**ಪ್ರಾಚೀನ ಭಾರತದಲ್ಲಿ ಬುಡಕಟ್ಟು ಸ್ತ್ರೀ**

ಭಾರತದಲ್ಲಿ ವಿವಿಧ ಪ್ರದೇಶಗಳ ಬೆಟ್ಟಗುಡ್ಡಗಳಲ್ಲಿ ಮತ್ತು ಬಯಲು ಪ್ರದೇಶಗಳಲ್ಲಿ, ಹಲವಾರು ಬುಡಕಟ್ಟುಗಳು ಚದುರಿದ್ದು, ಹಿಂದಿನ ಕಾಲದಲ್ಲಿ ಈ ಬುಡಕಟ್ಟು ಸಮುದಾಯ ತಮ್ಮ ದಿನನಿತ್ಯದ ಉಪಜೀವನಕ್ಕಾಗಿ, ಬೇಟೆಯಾಡುವುದು, ಕಾಡಿನಲ್ಲಿಯ ಗೆಡ್ಡೆಗೆಣಸು ಪಡೆಯಲು ಸ್ತ್ರೀಯರು ಪುರುಷರಿಗೆ ಸಹಾಯ ಮಾಡುವುದು ಸಾಮಾನ್ಯವಾಗಿತ್ತು. ಬಲೆ ಬೀಸಿ ಬೇಟೆಯಾಡುವ ಗುಂಪು ಬೇಟೆಯ ವಿಧಾನದಲ್ಲಿ ಗಂಡಸಿನ ಜೊತೆ ಹೆಂಗಸರು, ಮಕ್ಕಳು ಪ್ರಧಾನ ಪಾತ್ರ ವಹಿಸುತ್ತಿದ್ದರು. ಹೆಂಗಸು ತಾನೊಬ್ಬಳೇ ಬೇಟೆಯಾಡಲು ಹೋಗುತ್ತಿದ್ದ ಸಂದರ್ಭಗಳಿಗೂ ಸಾಕ್ಷಿಗಳಿವೆ. ಒಂದು ನಿರ್ದಿಷ್ಟ ಭೌಗೋಳಿಕ ನೆಲೆಯಲ್ಲಿ ವಾಸಿಸುತ್ತಿದ್ದ, ಒಂದೇ ಭಾಷೆ, ಧರ್ಮ, ಜೀವನ ರೀತಿ, ನಂಬಿಕೆ, ತತ್ವ ಇದ್ದು ನಾಕರಿಕತೆಯ ಅರಿವಿರಲಿಲ್ಲ. ಮಹಿಳೆಯರು ಗಂಡಂದಿರ ಜೊತೆ ಅಲೆದು ಬಹಳ ಪರಿಶ್ರಮ ಪಡುತ್ತಿದ್ದರು. ಅನೇಕ ಸ್ತ್ರೀವಾದಿ ಚಿಂತಕಿಯರು ಕೂಡ ಬುಡಕಟ್ಟು ಸಂಸ್ಥೆಗಳಲ್ಲಿ ಸ್ತ್ರೀ ಶಕ್ತಿ ಪ್ರತಿಮೆ ಆಕೃತಿಗಳಿವೆ ಎಂದು ನಂಬುತ್ತಾರೆ. ಗಾಯಿತ್ರಿ ನಾಡವ ಅವರು "ಭಾರತೀಯ ಸ್ತ್ರೀವಾದಿ ಚಿಂತನೆಗಳು ಜಾನಪದ ಅಥವಾ ಮೌಖಿಕ ಪರಂಪರೆ ಮತ್ತು ಮಾತೃಪ್ರಧಾನ ಬುಡಕಟ್ಟು ಸಂಸ್ಕೃತಿಗಳು ಪ್ರಕಟಿಸುವ ಸ್ತ್ರೀ ಶಕ್ತಿ ಪ್ರತಿಮೆ ಆಕೃತಿಗಳನ್ನು ಶೋಧಿಸಬೇಕಾಗಿವೆ. ಈ ಬಗೆಯ ಭಿನ್ನ ಸ್ತ್ರೀ ಕಥನ ಮಾದರಿಗಳನ್ನು

ಅರ್ಥಮಾಡಿಕೊಳ್ಳುವುದರ ಮೂಲಕವೇ ಭಾರತೀಯ ಸ್ತ್ರೀವಾದವನ್ನು ಕಟ್ಟಬೇಕಾಗಿವೆ"೨೦. ಎಂದು ಹೇಳುವರು. ಬಹಳಷ್ಟು ಸ್ತ್ರೀವಾದಿಗಳು ಮಹಿಳೆ ಅಬಲೆಯಲ್ಲ, ಅವಳು ಒಂದು ಕಾಲದಲ್ಲಿ ಸಬಲಳಿದ್ದಳು. ಎಂದು ದೃಢಪಡಿಸುವುದಕ್ಕೆ ಬುಡಕಟ್ಟು ಮಹಿಳೆಯರ ಕುರಿತಿರುವ ಆಕಾರಗಳ ಬಗೆಗೆ ಆಸಕ್ತಿ ತೋರುತ್ತಾರೆ. ಮಹಿಳೆಯರ ಸ್ಥಿತಿಗತಿ ಕುರಿತು ಚರ್ಚಿಸುವಾಗ ಎರಡು ವಿಷಯಗಳು ನಮಗೆ ಮುಖ್ಯವಾಗುತ್ತವೆ.

ಆರ್ಯರು ನಮ್ಮ ದೇಶಕ್ಕೆ ಬರುವ ಮೊದಲು ಭಾರತದಲ್ಲಿ ಹೆಣ್ಣಿನ ಈ ಪಾರಮ್ಯ ಮತ್ತು ಸ್ವಾತಂತ್ರ್ಯ ಸುಮಾರು ಕ್ರಿ.ಪೂ.೧೫೦ ರ ವರೆಗೂ ಅಭಾದಿತವಾಗಿತ್ತು. ಆದರೆ ಅಲ್ಲಿಂದೀಚೆಗೆ ಆರ್ಯರು ಭಾರತದಲ್ಲಿ ತಮ್ಮ ಭೂ ಸ್ವಾಮ್ಯವನ್ನು ವಿಸ್ತರಿಸುತ್ತಾ ಹೋದ ಹಾಗೆಲ್ಲಾ ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರಿಗೂ, ಅವರಿಗೂ ಘರ್ಷಣೆಗಳು ಹೆಚ್ಚುತ್ತಾ ಹೋದವಷ್ಟೇ ಅಲ್ಲ, ಆರ್ಯ ಸಂಸ್ಕೃತಿಯ ಪ್ರಾಬಲ್ಯವೂ ಬೆಳೆಯುತ್ತಾ ಹೋಯಿತು. ಭಾರತೀಯ ಸಮಾಜದ ವಿಭಜನೆ ಮತ್ತು ಮಾತೃ ಪ್ರಧಾನದಂತಹ ಮೌಲ್ಯಗಳ ಮತ್ತು ಆಚರಣೆಗಳ ನಶಿಸುವಿಕೆ ಈ ಯುಗದಲ್ಲಿ ಆರಂಭವಾಗಿ, ಆಗ ಆರಂಭವಾದ ಲಿಂಗ ವ್ಯವಸ್ಥೆಯ ಅಸಮಾನತೆಯು ಇಂದಿಗೂ ಹೊಸ, ಹೊಸ ರೂಪಗಳನ್ನು ತಾಳಿ ಮುಂದುವರೆದುಕೊಂಡು ಬಂದಿದೆ ಎಂಬುದು ಗಮನಾರ್ಹವಾದ ವಿಷಯ. ಒಂದೆಡೆ ಕುಟುಂಬದ ಒಳಗೆ ಮತ್ತೊಂದೆಡೆಗೆ ಕುಟುಂಬದ ಹೊರಗೆ ಮಹಿಳೆಯರ ಸ್ಥಾನ ಕ್ಷೀಣಿಸುತ್ತಾ ಹೋಯಿತು. ನೇಗಿಲು ಪ್ರಧಾನ ಕೃಷಿ ವ್ಯವಸ್ಥೆಯಿಂದ ಸ್ತ್ರೀಯರನ್ನು ಗೃಹ ಬಂಧಿಯನ್ನಾಗಿಸಿತು.

ಹೀಗೆ ಮೂಲತಃ ದ್ರಾವಿಡ ಪರಂಪರೆಯ ಜೀವನ ವಿಧಾನದಿಂದ ಆರಂಭದಲ್ಲಿ ರೂಪು ತಳೆದ ಭಾರತೀಯ ಸಂಸ್ಕೃತಿ ಆರ್ಯರ ಆಗಮನದಿಂದ ಅನೇಕ ಬದಲಾವಣೆಗೆ ಒಳಗಾಗಬೇಕಾಯಿತು. ಇದೇ ಸಮಯದಲ್ಲಿ ವೇದ ಧರ್ಮವು ಬೆಳೆದು ತನ್ನ ಪ್ರಾಬಲ್ಯವನ್ನು ಪಡೆದು ಅಸ್ತಿತ್ವಕ್ಕೆ ಬಂದಿತು. ಅಧ್ಯಯನದ ಹಿತ ದೃಷ್ಟಿಯಿಂದ ಪ್ರಾಚೀನ ಯುಗದಿಂದ ಆಧುನಿಕ ಯುಗದವರೆಗೆ ಸ್ತ್ರೀಯ ಸ್ಥಿತಿಗತಿಯನ್ನು ಇತಿಹಾಸಕಾರರು ಹಲವಾರು ಹಂತಗಳಾಗಿ ವಿಂಗಡಿಸಿ ಅಧ್ಯಯನಿಸಿದ್ದಾರೆ. ಅವುಗಳಲ್ಲಿ ಮೊದಲನೆಯದು ವೇದಗಳ ಕಾಲ.

**ವೇದಗಳ ಕಾಲವನ್ನು:** ಕ್ರಿ.ಪೂ.೨೫೦೦-೧೫೦೦ ರವರೆಗೆ ಗುರುತಿಸಬಹುದಾಗಿದ್ದು. ಇಲ್ಲಿ ಲಿಂಗ ತಾರತಮ್ಯವಿರಲಿಲ್ಲ. ಧಾರ್ಮಿಕ ಮತ್ತು ಸಾಮಾಜಿಕವಾಗಿ ಸ್ತ್ರೀಯರಿಗೆ ಪುರುಷರಷ್ಟೇ ಸ್ವಾತಂತ್ರ್ಯ ಇದ್ದು. ಕುಟುಂಬದಲ್ಲಿ ಪೂರ್ಣ ಸ್ವಾತಂತ್ರ್ಯವಿದ್ದು 'ಅರ್ಧಾಂಗಿನಿ' ಎಂದು ಕರೆಯಿಸಿಕೊಂಡು, ಸ್ತ್ರೀ ಇಲ್ಲದ ಪುರುಷ ಮತ್ತು ಪುರುಷರಿಲ್ಲದ ಸ್ತ್ರೀ ಅಪರಿಪೂರ್ಣರು ಎಂದು ಹೇಳಲಾಗುತ್ತಿತ್ತು. ಶಿಕ್ಷಣದಲ್ಲಿ ಸ್ತ್ರೀಗೆ ಸಮಾನ ಅವಕಾಶವಿದ್ದು ಬಾಲಕಿಗೂ ಉಪನಯನ ಸಂಸ್ಕಾರ, ವೇದಗಳ ಬಗ್ಗೆ ಶಿಕ್ಷಣ ನೀಡಲಾಗುತ್ತಿತ್ತು. ಆದ್ದರಿಂದ ಈ ಕಾಲದಲ್ಲಿ ವೇದ ಸಾಹಿತ್ಯದಲ್ಲಿ ಅಸಾಧಾರಣ ಪಾಂಡಿತ್ಯವುಳ್ಳ ಸ್ತ್ರೀಯರನ್ನು ಗುರುತಿಸಬಹುದಾಗಿದೆ.

ವಿವಾಹವನ್ನು ಸ್ತ್ರೀಯರ ಮೇಲೆ ಕಡ್ಡಾಯವಾಗಿ ಹೇರಿರಲಿಲ್ಲ. ಬಾಲ್ಯವಿವಾಹ ಪದ್ಧತಿ ಇರಲಿಲ್ಲ. ಸಂಗಾತಿಯ ಆಯ್ಕೆಯಲ್ಲಿ ಸ್ವಾತಂತ್ರ್ಯವಿತ್ತು ಏಕಪತ್ನಿತ್ವ ವಿವಾಹವು ಸಾಧಾರಣ ನಿಯಮವಾಗಿತ್ತು. ನಿಯೋಗ ಪದ್ಧತಿಗೆ ಅವಕಾಶವಿದ್ದು, ವಿಧವಾ ವಿವಾಹ ಆಚರಣೆಯಲ್ಲಿತ್ತು. ಸತಿಸಹಗಮನ ಪದ್ಧತಿ ಇರಲಿಲ್ಲ.

ಆರ್ಥಿಕ ಉತ್ಪಾದನೆಯಲ್ಲಿ ಪುರುಷನಿಗೆ ನೆರವು ನೀಡಿ, ಬಟ್ಟೆ ನೇಯುವುದು, ಕೃಷಿಕಾರ್ಯ, ಪಶುಸಂಗೋಪನೆ ಮುಂತಾದ ಕಾರ್ಯಗಳಲ್ಲಿ ಗಂಡನಿಗೆ ಸಹಕರಿಸಿ, ಅಧ್ಯಾಪನ ಕಾರ್ಯಗಳಲ್ಲಿ ತೊಡಗುತ್ತಿದ್ದುದು ಇದೆ.

ಈ ಕಾಲದಲ್ಲಿ ಸ್ತ್ರೀಯರು ನಾಗರೀಕ, ಸುಸಂಸ್ಕೃತ ಬದುಕನ್ನು ಮತ್ತು ಬದುಕಿನ ಪ್ರಥಮ ನೆಲೆ ಕಂಡು ಕಂಡುಕೊಂಡಿದ್ದು ವೇದಗಳಲ್ಲಿ, ಈ ಕಾಲವು ಮಹಿಳೆಯರ ಪಾಲಿಗೆ ಸರ್ವತೋಮುಖ ಅಭಿವೃದ್ಧಿಯ ಸಮಯವೆನಿಸಿದ್ದಿತು. ಸ್ವತಂತ್ರ ಜೀವನ, ವಿಶಾಲ ದೃಷ್ಟಿಕೋನ, ತತ್ವ ಜ್ಞಾನದಂತಹ ಗಂಭೀರ ವಿಷಯಗಳಿಗೆ ಅವಕಾಶ ಸಿಕ್ಕು ಪುರುಷರೊಂದಿಗೆ ಸಮಾನ ಸ್ಥಾನ ಪಡೆದಿದ್ದಳು. ಜಿಜ್ಞಾಸುಗಳು, ದಿವ್ಯಜ್ಞಾನದ ಬೆಳಕಿನಲ್ಲಿ ಮಂತ್ರ ರಚನೆ ಮಾಡಿ ತಾತ್ವಿಕ ವಿಷಯದ ಪ್ರತಿಪಾದಕಳೂ, ತತ್ವಜ್ಞಾನಿಯೂ ಆಗಿದ್ದಳು.

ಇದರ ತರುವಾಯ ಮಹಾಕಾವ್ಯಗಳು, ಪುರಾಣಗಳು ಮತ್ತು ಧರ್ಮಶಾಸ್ತ್ರಗಳ ಕಾಲವು ಮಹಿಳೆಯರ ಪಾಲಿಗೆ ಕತ್ತಲೆಯ ಯುಗವಾಗಿ ಸ್ವಾತಂತ್ರ್ಯ, ಸಮಾನತೆಗಳ ಕೊರತೆ, ಶಿಕ್ಷಣ, ಸಂಸ್ಕಾರಗಳ ಕೊರತೆಗಳು ಮಹಿಳೆಯ ಮಟ್ಟವನ್ನು ಅವನತಿಯತ್ತ ಕೊಂಡೊಯ್ದವು. ಇದಕ್ಕೆ ಕಾರಣಗಳನ್ನು ಕೆದಕಿದಾಗ, ವೇದಗಳ ಆರಂಭದಲ್ಲಿ ಆರ್ಯರ ಪ್ರಭುತ್ವದ ಹಿಡಿತ ಸಡಿಲವಿದ್ದು, ಬರುಬರುತ್ತಾ ತನ್ನ ಪ್ರಭುತ್ವ ಪ್ರಬಲವಾಗಿ ಸ್ಥಾಪಿಸಲು ಸಮರ್ಥವಾಗಿದ್ದನ್ನು ಕಾಣಬಹುದಾಗಿದೆ.

**ಪುರಾಣ ಮತ್ತು ಮಹಾಕಾವ್ಯಗಳಲ್ಲಿ ಸ್ತ್ರೀ**

ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು, ಇವುಗಳ ಕೇಂದ್ರ ಬಿಂದುಗಳು ಸ್ತ್ರೀಯರೇ ಆಗಿದ್ದಾರೆ. ಇಲ್ಲಿನ ಸೀತೆ ಹಾಗೂ ದ್ರೌಪದಿಯ ಪಾತ್ರಗಳು ಭಾರತೀಯ ಸ್ತ್ರೀಯರ ಬದುಕನ್ನು ಇಂದಿಗೂ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವಿಸುತ್ತಿವೆ. ರಾಮಾಯಣದ ಸೀತೆ ಪುರುಷ ಪ್ರಾಧಾನ್ಯತೆಯನ್ನು, ಸ್ತ್ರೀಯ ಪರಾಧೀನತೆಯನ್ನು ಎತ್ತಿ ಹಿಡಿಯುವಂತಹ ಒಂದು ಸ್ತ್ರೀ ಪಾತ್ರ ತನ್ನ ಪತಿ ರಾಮನ ಆಸೆ, ಆಸಕ್ತಿಗಳನ್ನು ಪಾಲಿಸುವುದರಲ್ಲಿಯೇ ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುವ ಸೀತೆಗೆ ಸ್ವತಂತ್ರವಾದ ವ್ಯಕ್ತಿತ್ವವೇ ಇಲ್ಲವೇನೋ ಎನಿಸದಿರುವುದಿಲ್ಲ.

ಪ್ರಜೆಯೊಬ್ಬರ ಟೀಕೆಗೆ ಅತಿ ಪ್ರಾಶಸ್ತ್ಯ ನೀಡಿದ ರಾಮ ತನ್ನ ಪತ್ನಿಯ ಚಾರಿತ್ರ್ಯ ಶುದ್ಧತೆಯನ್ನು ಪರೀಕ್ಷೆಗೆ ಒಳಪಡಿಸುವಂತಹ ಪರಿಸ್ಥಿತಿ ಒದಗಿ ಬಂತು. ಸ್ತ್ರೀಗೆ ಶೀಲ ಹಾಗೂ ಪಾತಿವ್ರತ್ಯದಂತಹ ಗುಣಗಳೇ ಪರಮ ಶ್ರೇಷ್ಠವೆಂದು ನಂಬಿದ ಸೀತೆ ತನ್ನ ಪತಿಯ ಪ್ರಜಾನಿಷ್ಠೆ ಎತ್ತಿ ಹಿಡಿಯಲು ಅಗ್ನಿ ಪ್ರವೇಶವನ್ನು ಮಾಡುತ್ತಾಳೆ. ರಾಮನು ಸೀತೆಯಿಂದ ದೂರವಿದ್ದಂಥ ದೀರ್ಘಕಾಲದಲ್ಲಿ ಆತನ ಚಾರಿತ್ರ್ಯ ಶುದ್ಧತೆಯನ್ನು ಪ್ರಶ್ನಿಸುವಂತಹ ಯಾವುದೇ ಪ್ರಸಂಗ ಕಂಡುಬರುವುದಿಲ್ಲ. ಹೀಗೆ ಒಂದು ಕಡೆ ಸ್ತ್ರೀಯ ಪರಾಧೀನತೆಯನ್ನು ಮತ್ತೊಂದೆಡೆ ಪುರುಷನ ಪ್ರಾಬಲ್ಯವನ್ನು ಎತ್ತಿ ಹಿಡಿಯುವಂತಹ ಮೌಲ್ಯಗಳನ್ನು ಪ್ರತಿಪಾದಿಸುವುದು.

ಮಹಾಭಾರತದ ಸಮಯದ ಸಮಾಜದಲ್ಲಿ ಬಹುಪತ್ನಿತ್ವ ಮತ್ತು ಬಹುಪತಿತ್ವ ವಿವಾಹಗಳಿಗೆ ಮತ್ತು ವಿವಾಹೇತರ ಸಂಬಂಧಗಳಿಗೆ ಮನ್ನಣೆಯಿತ್ತು ಎಂಬುದು ತಿಳಿದುಬರುತ್ತದೆ. ಗಂಡು ಸಂತಾನಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದ್ದು, 'ನಿಯೋಗ ಪದ್ಧತಿ' ಆಚರಣೆಯಲ್ಲಿತ್ತೆಂದು ತಿಳಿದು ಬರುತ್ತದೆ. ದ್ರೌಪದಿಯ ಪಾತ್ರ ಸ್ವಾಭಿಮಾನ, ಸ್ವಗೌರವಗಳ ಸಂಕೇತವಾಗಿ ಮೂಡಿ ಬಂದಿದ್ದರೂ, ಮಹಾಭಾರತದ ಉದ್ಯೋಗ ಪರ್ವದ ೧೧೬ ರಿಂದ ತೊಡಗಿ ೧೨೦ ನೇ ಶ್ಲೋಕಗಳಲ್ಲಿ ಮಾಧವಿಯ ಉಲ್ಲೇಖವಿದೆ. ಅದು ಋಷಿ ಗಾಲವನು ಗುರುಗಳಿಗೆ ಗುರುದಕ್ಷಿಣೆ ಕೊಡಲು ತನ್ನಲ್ಲಿ ಹಣವಿಲ್ಲದೇ ಯಯಾತಿಯನ್ನು ಯಾಚಿಸುತ್ತಾನೆ. ಯಯಾತಿಯು ತನ್ನ

ಮಗಳಾದ ಮಾಧವಿಯನ್ನು ಆತನಿಗೆ ಸಾಲವಾಗಿ ಕೊಡುತ್ತಾನೆ. ಗಾಲವನು ಮಾಧವಿಯನ್ನು ಕ್ರಮವಾಗಿ ಮೂರು ಜನ ರಾಜರಲ್ಲಿ ಒತ್ತಿಯಿಟ್ಟು ಅವರಿಂದ ೨೦೦ ಕುದುರೆಗಳನ್ನು ಪ್ರತಿಫಲ ಪಡೆಯುತ್ತಾನೆ. ಪ್ರತಿಯೊಬ್ಬರೂ ಅವಳನ್ನು ಅನುಭವಿಸಿ ಒಂದೊಂದು ಮಗುವನ್ನು ಹುಟ್ಟಿಸಿ ಅವಳನ್ನು ಪುನಃ ಗಾಲವನಿಗೆ ಒಪ್ಪಿಸುತ್ತಾರೆ. ಗಾಲವನು ಅವಳನ್ನು ಜೊತೆಗೆ ಕುದುರೆಗಳನ್ನು ಮತ್ತು ಒಟ್ಟಾದ ಎಲ್ಲಾ ಸಂಪತ್ತನ್ನು ಗುರುಕಾಣಿಕೆಯಾಗಿ ಕೊಟ್ಟು ತನ್ನ ಬಾಕಿ ತೀರಿಸುತ್ತಾನೆ. ಗುರು ವಿಶ್ವಾಮಿತ್ರ ಕೂಡ ಅವಳಲ್ಲಿ ಒಂದು ಮಗುವನ್ನು ಹುಟ್ಟಿಸಿ ಪುನಃ ಅವಳನ್ನು ಗಾಲವನಿಗೆ ಹಿಂದಿರುಗಿಸುತ್ತಾನೆ. ಗಾಲವನು ಮಾಧವಿಯನ್ನು ಯಯಾತಿಗೆ ಒಪ್ಪಿಸುತ್ತಾನೆ. ಇಲ್ಲಿಗೆ ಅವಳ ದುರಂತದ ಕಥೆ ಮುಗಿಯಲಿಲ್ಲ. ಇಷ್ಟು ಸಮಯದ ಗುಲಾಮಗಿರಿಯ ನಂತರ ತಂದೆಯು ಸ್ವಯಂವರ ಪದ್ಧತಿಯಿಂದ ಅವಳ ಮದುವೆ ಮಾಡಲು ಯೋಚಿಸುತ್ತಾನೆ. ಇದಕ್ಕೆ ರಾಜರು, ಶ್ರೀಮಂತರು, ಯುವಕರೂ ಬರುತ್ತಾರೆ. ಆದರೆ ಈ ಸಮಯಕ್ಕಾಗಲೇ ಮಾಧವಿ ಜೀವನದ ಬಗ್ಗೆ ಜಿಗುಪ್ಸೆಯನ್ನು ಹೊಂದಿ ಬಂದ ಎಲ್ಲರನ್ನು ತಿರಸ್ಕರಿಸಿ ಕಾಡಿಗೆ ಹೋಗುತ್ತಾಳೆ. ಇಲ್ಲಿ ಅವಳು ವರ್ಗಸಮಾಜದ ದುಷ್ಟ ಹಿಡಿತದಿಂದ ಪಾರಾಗಲು ದೇವರನ್ನು ಪ್ರಾರ್ಥಿಸುತ್ತಾಳೆ.

ಹೀಗೆ ಪಿತೃವಿಗೆ ಹೆಂಡತಿ, ಮಗಳು ಮತ್ತು ಮಕ್ಕಳುಗಳನ್ನು ಅಡವಿಡುವುದಕ್ಕೆ ಅಧಿಕಾರ ಸೀಮಿತವಾಗಿರಲಿಲ್ಲ, ಅವರ ಜೀವನದ ಮೇಲೆ ಪೂರ್ಣ ಅಧಿಕಾರವಿತ್ತು. ಇಚ್ಛೆ ಬಂದಾಗ ಅವರನ್ನು ಕೊಲ್ಲಬಹುದಿತ್ತು. ಏಕೆಂದರೆ ಹೊಸ ಪದ್ಧತಿಯು ತನ್ನ ಆಸ್ತಿಯಾದ ಹೆಂಡತಿ, ಮಗ ಗುಲಾಮ ಮುಂತಾದವರ ಮೇಲೆ ಸರ್ವಸಾಮ್ಯವನ್ನು ಬಯಸುತ್ತಿತ್ತು. ಹೆಂಗಸರು ಕೂಡ ಹಳೆಯ ಸ್ಥಾನಮಾನಗಳಿಗಾಗಿ ಸಾಕಷ್ಟು ಹೋರಾಡಿದ್ದು ಕಂಡುಬರುತ್ತದೆ. ಪರಿಣಾಮ ಕೆಲ, ಹಳೆ ಪದ್ಧತಿಗಳು ಉಳಿದು ಬಂದವು. ಆದರೂ ವ್ಯವಸ್ಥೆಯ ಒಡೆಯನಾದ ಗಂಡಸು ಇವನ್ನು ಸಾಕಷ್ಟು ಕ್ರೂರವಾಗಿಯೇ ಹತ್ತಿಕ್ಕಿದನು. ಇದು ಸುದರ್ಶನ-ಓಘವತಿ, ಗೌತಮ-ಗೌತಮಿ, ಜಮದಗ್ನಿ-ರೇಣುಕೆಯರ ಮೂರು ಪ್ರಸಂಗಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

ಭಗವದ್ಗೀತೆಯಲ್ಲಿ ಸ್ತ್ರೀಯ ಲಕ್ಷಣಗಳು ಯಾವುದೆಂಬುದನ್ನು ಹೇಳಲಾಗಿದೆ. ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧಸ್ಸು, ಧೃತಿ ಮತ್ತು ಕ್ಷಮೆ, ಲಜ್ಜಾ ಸೌಜನ್ಯದಿಂದ ವರ್ತಿಸುವುದೇ ಸ್ತ್ರೀಯರಿಗೆ ಕೀರ್ತಿ, ಪವಿತ್ರ ಜೀವನವೇ ಅವರಿಗೆ ಶೋಭೆಯನ್ನು ತರುವಂತಹದು. ಮೃದು ಮಧುರವಾಣಿ, ಉತ್ತಮ ಸ್ತ್ರೀ ಪ್ರಧಾನ ಲಕ್ಷಣ ಅವರಿಗೆ ಒಳ್ಳೆಯ ಜ್ಞಾಪಕಶಕ್ತಿ ಇರಬೇಕು ಎನ್ನಲಾಗಿದೆ.

ಇದೇ ಕಾಲದ ಸರಿ ಸುಮಾರಿನಲ್ಲಿ ಸಮಾಜದಲ್ಲಿ ಒಂದು ಅದ್ಭುತ ಬದಲಾವಣೆ ಉಂಟಾಯಿತು. ಮೊದಲಿಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಹೊಂದಿರುವಂತಹದ್ದು, ಅದೀಗ ಪಿತೃಪ್ರಧಾನ ವ್ಯವಸ್ಥೆಯಾಗಿ ಪರಿಣಮಿಸಿತು. ಮೊದಲು ಹೆಣ್ಣು ಪ್ರಬಲ ಶಕ್ತಿಯಾಗಿದ್ದಳು. ಮೊದಲಿನ ಮಾನವ ತನ್ನ ಜನನಿಯ ಬಗ್ಗೆ ತುಂಬಾ ಶ್ರದ್ಧೆ ಗೌರವಗಳನ್ನಿರಿಸಿಕೊಂಡಿದ್ದ. ಈ ಕಾರಣದಿಂದಲೇ ಮಾತೃ ಪ್ರಧಾನ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಅದರ ಒಂದು ರೂಪವೇ ಇಂದಿಗೂ ಭಾರತದ 'ಕೇರಳದ ಮಲಬಾರ್' ವಲಯದಲ್ಲಿ ಉಳಿದುಕೊಂಡು ಬಂದಿದೆ. ಈಗ ಈ ಸ್ಥಿತಿ ಬದಲಾಗಿ ತಾಯಿಗೆ ಬದಲಾಗಿ ತಂದೆ ಪ್ರಬಲನಾಗಿ ಪರಿಣಮಿಸಿದ್ದಾನೆ. ತಾಯಿಗೆ ದೊರೆತಿದ್ದ ಅಧಿಕಾರಗಳೆಲ್ಲವೂ ಈಗ ತಂದೆಗೆ ಸೇರಿದವು. ಇದರಿಂದ ಹೆಣ್ಣು ಮಕ್ಕಳ ವರ್ಗ ಗಂಡಿಗೆ ಸೇವೆಯನ್ನು ಸಲ್ಲಿಸುವ ಅವನ ಮಕ್ಕಳಿಗೆ

ತಾಯಿಯಾಗುವ ಕೆಲಸಗಳಿಗೆ ಮೀಸಲಾಗಿತ್ತು. ಹೆಣ್ಣು ಮಕ್ಕಳನ್ನು ಸಾಯಿಸಿಬಿಡುವ ಪದ್ಧತಿ ಜಾರಿಯಲ್ಲಿದ್ದುದರಿಂದ ಕೆಲವು ಸಮುದಾಯಗಳಲ್ಲಿ ಹೆಣ್ಣಿಗೆ ಬೇಡಿಕೆ ಹೆಚ್ಚಿತು. ಅದರ ಪರಿಣಾಮವೆಂಬಂತೆ ಹೆಣ್ಣುಗಳಿಗಾಗಿ ನಡೆಯುವ ಯುದ್ಧಗಳ ಸಂಖ್ಯೆಯೂ ಹೆಚ್ಚಿತು. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಗಂಡಿನ ಭೋಗದ ಸಾಧನವಾಗಿಬಿಟ್ಟಳು. ಅವನಿಗಾಗಿ ಮಕ್ಕಳನ್ನು ಹೆರುವ ಯಂತ್ರವಾಗಿಬಿಟ್ಟಳು. ಏಕಪತ್ನಿತ್ವದ ವ್ಯವಸ್ಥೆ ಇರುವಲ್ಲಿ ಪತ್ನಿ ದಾಸಿಯಂತೆ ಇರುವುದು ಅನಿವಾರ್ಯವೇ ಆಗಿತ್ತು. ಈ ಕಾಲದ ಗಂಡಿನ ಏಕಪತ್ನಿತ್ವ ಹೆಣ್ಣಿಗೆ ಮಾತ್ರ ಅನ್ವಯಿಸುವ ಸಂಗತಿಯಾಗಿದೆಯೇ ಹೊರತು ಗಂಡಿಗೆ ಯಾವುದೇ ರೀತಿಯಲ್ಲಿ ಅನ್ವಯವಾಗುವಂತಿಲ್ಲ.

ಈ ಕಾಲವು ಮಹಿಳೆಯರ ಪಾಲಿಗೆ 'ಕತ್ತಲೆಯ ಯುಗ' ಸ್ವಾತಂತ್ರ್ಯ, ಸಮಾನತೆಗಳ ಕೊರತೆ, ಶಿಕ್ಷಣ, ಸಂಸ್ಕಾರಗಳ ಕೊರತೆಗಳು ಮಹಿಳೆಯ ಸ್ಥಾನವನ್ನು ಅವನತಿಗೊಳಿಸಿತು.

ವೇದಗಳ ನಂತರ ರಚಿಸಿದ ಸಾಹಿತ್ಯದಿಂದ ಸ್ಫೂರ್ತಿ ಪಡೆದ ಧರ್ಮಶಾಸ್ತ್ರ ಮತ್ತು ನ್ಯಾಯಶಾಸ್ತ್ರಗಳು 'ಪುರುಷ ಪ್ರಧಾನ ತತ್ವ' ಎತ್ತಿ ಹಿಡಿದು ಸ್ತ್ರೀ ಹಿತಕ್ಕೆ ಧಕ್ಕೆ ತಂದಿತು. ಇವು ವೇದಗಳನ್ನು ಆಧರಿಸಿದ್ದರೂ, ಅನೇಕ ಹೊಸ ವಿಚಾರಗಳನ್ನು ಈ ಧರ್ಮ ಶಾಸ್ತ್ರಗಳು ಪ್ರಥಮಬಾರಿಗೆ ವ್ಯಕ್ತಪಡಿಸಿದವು. ಇವು ಹಿಂದೂ ಜನ ಜೀವನದ ನಿರ್ದೇಶನ ಸೂತ್ರಗಳಿಗಾಗಿ ಇಂದಿಗೂ ಉಳಿದುಕೊಂಡಿರುವುದು ಗಮನಾರ್ಹ. ಇವು ಸ್ತ್ರೀಯರ ಪಾತ್ರಗಳ ಮೇಲೆ ನಿರ್ಬಂಧಗಳನ್ನು ಹೇರಿ ಅವರ ಸ್ಥಾನಮಾನವನ್ನು ಇನ್ನಷ್ಟು ಕುಂಠಿತಗೊಳ್ಳುವಂತೆ ಮಾಡಿದವು. ಧರ್ಮಶಾಸ್ತ್ರಗಳು ಪುರುಷ ಪ್ರಾಧಾನ್ಯತೆಯನ್ನು ಎತ್ತಿಹಿಡಿದು, ಸ್ತ್ರೀ ಹಿತಕ್ಕೆ ದಕ್ಕೆ ತಂದವು. ಧರ್ಮಶಾಸ್ತ್ರಗಳ ಕಾಲಕ್ಕೆ ಸ್ತ್ರೀ ಸಂಬಂಧಿತ ಹಲವು ಸಮಸ್ಯೆಗಳ ಅಂದರೆ ಬಾಲ್ಯವಿವಾಹ, ವರದಕ್ಷಿಣೆ ಪಿಡುಗು, ಸತಿಪದ್ಧತಿ, ವಿಧವಾ ಸಮಸ್ಯೆ ಮತ್ತು ದೇವದಾಸಿ, ಇವುಗಳ ಉಗಮಕ್ಕೆ ಧರ್ಮ ಶಾಸ್ತ್ರ ಮತ್ತು ಪುರಾಣಗಳು ವಿಧಿಸಿದ ಕಟ್ಟುಪಾಡುಗಳೇ ಕಾರಣ. ಇವು ಮಧ್ಯಯುಗದಲ್ಲಿ ದೊಡ್ಡ ಸಾಮಾಜಿಕ ಪಿಡುಗುಗಳಾಗಿ ಬೆಳೆದವು.

"ಮನುವು ವಿವಾಹ ಪವಿತ್ರ ಬಂಧನ. ಈ ಬಂಧನ ಸ್ತ್ರೀಯರಿಗಷ್ಟೆ ಅನ್ವಯಿಸುವಂತಾಯಿತು. ಸ್ತ್ರೀಯರಿಗೆ ಪತಿಯನ್ನು ಪರಮ ದೈವವೆಂದು ಸ್ವೀಕರಿಸಬೇಕೆಂಬ ನಿಯಮ ಮೀರಿ ಆಕೆಯ ಮಾನಸಿಕ ಮತ್ತು ದೈಹಿಕ ಸ್ವಾತಂತ್ರ್ಯಗಳಿಗೆ ಅತಿಯಾದ ನಿರ್ಬಂಧಗಳನ್ನು ಹೇರಲಾಯಿತು. ಆಕೆ ಪುರುಷನ ಸ್ವತ್ತು. ಪರಾಧೀನ, ಸ್ವತಂತ್ರ್ಯ ವ್ಯಕ್ತಿತ್ವ ಹೊಂದಲು ಅನರ್ಹಳು ಎಂಬ ಮೌಲ್ಯಗಳು ಜನ ಜನಿತವಾಗಿ ಹೆಣ್ಣಾಗಿ ಜನಿಸುವುದೇ ಒಂದು ದೊಡ್ಡ ಕುತ್ತಾಗಿ ಪರಿಗಣಿಸುವಂತಾಯಿತು. ಹೆಣ್ಣು ಶಿಶುವಿನ ಜನನ ದುಃಖ ಸೂಚಕ ಸಂದರ್ಭವಾಗಿ ಪರಿಣಮಿಸಿತು. ಬೇಡದ ಹೆಣ್ಣು ಸಂತಾನ ನಾಶಕ್ಕಾಗಿ ಅನೇಕ ಪೋಷಕರು ಮುಂದಾದರು"[೬೦]

ಹೀಗೆ ಶಾಸ್ತ್ರಕಾರರು ವಿಧಿಸಿದ ಸ್ತ್ರೀ ವಿರೋಧಿ ನಿಯಮಗಳಿಂದಾಗಿ ಸ್ತ್ರೀಯರು ಆತ್ಮವಿಶ್ವಾಸ, ಗೌರವದಿಂದ ಬದುಕುವುದೇ ದುಸ್ತರವಾಯಿತು. ದೇವದಾಸಿ, ನೃತ್ಯದಂತಹ ಅನೇಕ ಪ್ರಕಾರಗಳು ಗೌರವಾನ್ವಿತವಾಗಿ ಹುಟ್ಟಿ ಬಂದರೂ ಈ ಕಾಲಕ್ಕೆ ಸ್ತ್ರೀ ಸಂಬಂಧಿತ ಅನಿಷ್ಟ ಪದ್ಧತಿಯಾಗಿ ರೂಪಾಂತರಗೊಂಡಿತು.

"ಕ್ರಿ.ಪೂ.೩೦೦ ರ ನಂತರದ ಆರ್ಯರ ಯುಗದಲ್ಲಿ ಸಮಾಜ ಜಾತಿ ಪದ್ಧತಿಯ ಸಿಕ್ಕಿನೊಳಗೆ ಸಿಲುಕಿ, ಸ್ತ್ರೀ ಸ್ವಾತಂತ್ರ್ಯ ಮೊಟಕಾಗಿದ್ದನ್ನು ಕಾಣುತ್ತೇವೆ. ಈ ಅವನತಿಯ ಕಾಲದಲ್ಲಿ ಸ್ತ್ರೀಯರು ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಹೇಗೆ ಕಳೆದು ಕೊಂಡರೆಂಬುದನ್ನು ಕುರಿತು ಅನೇಕ ಅಭಿಪ್ರಾಯಗಳಿವೆ. ಅಮಾಯಕ

ಕನ್ಯೆಯರು ಆರ್ಯ ಮನೆತನಗಳಿಗೆ ವಿವಾಹವಾಗಿ ಬರಲು ಸಾಮಾಜಿಕ ಒಪ್ಪಿಗೆ ಸಿಕ್ಕಿದ್ದು, ಈ ಬಗೆಗಿನ ಪಿತೂರಿಗಳಲ್ಲೊಂದು ಎಂದು ಪರಿಗಣಿಸಬಹುದು. ಅಂತಹ ಹುಡುಗಿಯರು ನೀಚ ಕುಲದವರೆಂದು ಪರಿಗಣಿಸಲ್ಪಟ್ಟು ಹಲವಾರು ಹಕ್ಕುಗಳಿಂದ ವಂಚಿತರಾದವರು, ಸಂಸ್ಕೃತ ಜ್ಞಾನವಿಲ್ಲದ, ಶಿಕ್ಷಣದಿಂದ ದೂರವುಳಿದು ಹಲವಾರು ಧಾರ್ಮಿಕ ಕ್ರಿಯಾವಿಧಿಗಳು ಹಾಗೂ ಮಂತ್ರಗಳ ಉಚ್ಛಾರಣೆಗೂ ಅಂದರೆ ಅತಿ ಪುನೀತವೆಂದು ಗೌರವಿಸಲ್ಪಡುವ ಗಾಯಿತ್ರಿ ಮಂತ್ರಕ್ಕೂ ಹೊರತಾದರು''[೫೨]. ಪಿತೃಪ್ರಧಾನ ವ್ಯವಸ್ಥೆ ಸ್ತ್ರೀಯನ್ನು ತನ್ನ ಕಪಿ ಮುಷ್ಟಿಯಲ್ಲಿಟ್ಟುಕೊಂಡು ಮುನ್ನಡೆಸುತ್ತಿರುವ ಜೊತೆಗೆ ಅನೇಕ ಧರ್ಮಗಳು ಭಾರತದಂತಹ ವ್ಯವಸ್ಥೆಯಲ್ಲಿ ಹೆಣ್ಣನ್ನು ತನ್ನ ಕಾಲ್ತುಳಿತಕ್ಕೆ ಸಿಕ್ಕಿಸಿಕೊಂಡಿವೆ. ಈ ವ್ಯವಸ್ಥೆ ಹೆಣ್ಣನ್ನು ದಾಸಿಯನ್ನಾಗಿ, ಭೋಗದ ವಸ್ತುವನ್ನಾಗಿ ನಿರಂತರವಾಗಿ ಭೋಗಿಸುತ್ತಲೇ ಬಂದಿವೆ. ಈ ನಿಟ್ಟಿನಲ್ಲಿಯೇ ಸ್ತ್ರೀ ಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ, ಗೃಹಿಣಿಯಾಗಿ ಆದರ್ಶವನ್ನು ಮೆರೆಯಬೇಕೆಂದು ಈ ವ್ಯವಸ್ಥೆ ನಿರೀಕ್ಷಿಸುತ್ತದೆ. ಇದಾವ ಪಾತ್ರವೂ ಇಲ್ಲದವಳು ದೇವದಾಸಿ, ವೇಶ್ಯೆಯಾಗಿಯಾದರೂ ಪಾತ್ರ ನಿರ್ವಹಿಸಬೇಕು. ಹೆಣ್ಣನ್ನು ಭೋಗದ ವಸ್ತುವಾಗಿ ಪುರುಷನ ಭೋಗಲಾಲಸೆಯನ್ನು ಪೂರೈಸುತ್ತಾ ಬಂದ ಒಂದು ಪರಂಪರೆಯೇ ನಮ್ಮೊಂದಿಗಿರುವಂತಹ ವ್ಯವಸ್ಥೆ ಕಾಣುತ್ತೇವೆ.

### ೪.೫ ಬೌದ್ಧ ಮತ್ತು ಜೈನ ಧರ್ಮಗಳ ಕಾಲದಲ್ಲಿ ಸ್ತ್ರೀ

ಜಾತಿ ಪದ್ಧತಿಯ ದೋಷ ದೌರ್ಬಲ್ಯಗಳಿಗೆ ಪ್ರತಿಕ್ರಿಯೆ ಎನ್ನುವಂತೆ ಕ್ರಿ.ಪೂ.೬ ನೇ ಶತಮಾನದಲ್ಲಿ ಹುಟ್ಟಿಕೊಂಡ ಬೌದ್ಧಮತವು ಕ್ಷೀಣಿಸುತ್ತಿದ್ದ ಮಹಿಳೆಯರ ಸ್ಥಾನಮಾನದಲ್ಲಿ ಸ್ವಲ್ಪ ಮಟ್ಟಿಗಾದರೂ ಸುಧಾರಣೆಗೊಳಿಸಲು, ಸಹಾಯಕವಾಯಿತು. ಈ ಕಾಲದಲ್ಲಿ ರಾಜಪ್ರಭುತ್ವದ ಅಟ್ಟಹಾಸದಿಂದಾಗಿ, ನೂರಾರು ಬುಡಕಟ್ಟುಗಳು ಕ್ಷೀಣವಾಗುತ್ತಿದ್ದವು. ಅವರ ಬದುಕಿನಲ್ಲಿ ಅಶಾಂತಿ ತುಂಬಿತ್ತು.

ಈ ವೇಳೆಗೆ ಬುದ್ಧ ಹಾಗೂ ಮಹಾವೀರರ ಚಿಂತನೆಗಳಿಂದ ಸ್ತ್ರೀ ಸ್ವಾತಂತ್ರ್ಯವನ್ನು ಗುರುತಿಸುವ ಪ್ರಯತ್ನ ಆರಂಭವಾಯಿತು. ವೈದಿಕ ಧರ್ಮಕ್ಕೆ ಬೌದ್ಧ ಮತ್ತು ಜೈನಧರ್ಮಗಳು ತೋರಿಸಿದ ಪ್ರತಿಭಟನೆ ಹೊಸ ಸಾಮಾಜಿಕ ರಚನೆ ಮತ್ತು ಚಿಂತನೆಗಳಿಗೆ ದಾರಿ ಮಾಡಿಕೊಟ್ಟಿತು.

ಬೌದ್ಧಧರ್ಮವು ಹಿಂದೂ ಧರ್ಮಕ್ಕಿಂತಲೂ, ಸಮಾನತೆಯ ತತ್ವಕ್ಕೆ ಹೆಚ್ಚು ಒತ್ತನ್ನು ನೀಡಿತ್ತು. ಸ್ತ್ರೀಯರ ಸ್ಥಾನವನ್ನು ಉತ್ತಮ ಪಡಿಸಬೇಕೆಂಬ ಯಾವುದೇ ವಿಶೇಷ ಕಾಳಜಿಯನ್ನೇನು ಹೊಂದಿರಲಿಲ್ಲವಾದರೂ ಸ್ತ್ರೀಯರಿಗೂ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಒಂದು ಅವಕಾಶವನ್ನು ನೀಡಬೇಕೆಂಬ ಭಾವನೆಯ ಛಾಯೆಯನ್ನು ಬೌದ್ಧಧರ್ಮದಲ್ಲಿ ಗುರುತಿಸಬಹುದು. ಈ ಸಂಸ್ಥೆಯೂ ಮಹಿಳಾ ಪ್ರಶ್ನೆಯನ್ನು ಸಾಂಪ್ರದಾಯಿಕ ರೀತಿಯಲ್ಲಿಯೇ ಅರ್ಥೈಸಿತು ಎನ್ನುವುದು ನಿಜವಾದರೂ ಬೌದ್ಧಧರ್ಮದ ಹಲವು ತತ್ವಗಳು ಸ್ತ್ರೀಯರ ಜೀವನದ ಮೇಲೆ ತೀವ್ರ ಪ್ರಭಾವವನ್ನು ಬೀರಿದವು ಎಂದರೆ ತಪ್ಪಾಗಲಾರದು. ಬುದ್ಧನೂ ವಿವಾಹವನ್ನು ಒಂದು ಸಾಮಾಜಿಕ ಹಾಗೂ ಆರ್ಥಿಕ ಒಪ್ಪಂದವೆಂದು ಪರಿಗಣಿಸಿದ್ದಾನೆ. ಬೌದ್ಧಧರ್ಮದಲ್ಲಿ ಸ್ತ್ರೀಯರಿಗೂ ಧಾರ್ಮಿಕ ಚಿಂತನೆ ಹಾಗೂ ಕ್ರಿಯಾವಿಧಿಗಳಲ್ಲಿ ಭಾಗಿಗಳಾಗುವ ಅವಕಾಶವನ್ನು ಕಲ್ಪಿಸಲಾಗಿತ್ತು. ಈ ಕಾರಣದಿಂದಲೇ ಹೆಚ್ಚಿನ ಸಂಖ್ಯೆಯಲ್ಲಿ ಭಿಕ್ಷುಣಿಯರು, ಬೌದ್ಧಧರ್ಮವನ್ನು ಸ್ವೀಕರಿಸಿದರು.

ಬೌದ್ಧ ಸಂಘಗಳು ಸಮಾಜದ ಎಲ್ಲಾ ವರ್ಗಗಳ ಜಾತಿ, ವೃತ್ತಿ, ಅಂತಸ್ತು ಯಾವ ಭೇದಗಳಿಲ್ಲದೆ ಬೌದ್ಧ

ಸಂಘಗಳಲ್ಲಿ ಮಹಿಳೆಯರು ಸ್ವತಂತ್ರ್ಯವನ್ನು ಅನುಭವಿಸಿದರು. ಇದು ಅವರ ಬದುಕಿಗೆ ಒಂದು ಹೊಸ ಚಾಲನೆಯನ್ನು ತಂದುಕೊಟ್ಟಿತು. ಬುದ್ಧನಿಗಿದ್ದ ಮಾನವ ಪ್ರೀತಿ, ಗೌರವ; ಸ್ತ್ರೀಯರ ಘನತೆಯನ್ನು ಎತ್ತರಿಸುವಲ್ಲಿ ಬಹುಮುಖ್ಯ ಪಾತ್ರವಹಿಸಿತು. ಸತಿಪದ್ಧತಿ, ಬಾಲ್ಯವಿವಾಹ, ವರದಕ್ಷಿಣೆಯಂತವುಗಳು ಇಲ್ಲಿ ತ್ಯಾಜ್ಯವಾದವು. ವೈಯಕ್ತಿಕ ಸ್ವಾತಂತ್ರ್ಯವನ್ನು ಅನುಭವಿಸಲು ಸಾಧ್ಯವಾದ ಬೌದ್ಧಸಂಘದ ಮಹಿಳೆ ಅಂದಿನ ಸಮಾಜದ ದುಸ್ತರತೆಯಿಂದ ಹೊರಬಂದು ಉಸಿರಾಡುವಂತಾಯಿತು. ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಸಿಕ್ಕ ಈ ಅವಕಾಶದಿಂದಾಗಿ, ಮಹಿಳೆಯರು ಧನ್ಯತಾಭಾವ ಹೊಂದಿದ್ದರು.

**೪.೬ ಮಧ್ಯಕಾಲೀನ ಬುಡಕಟ್ಟು ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು**

ಈ ಅವಧಿಯಲ್ಲಿ ಭಾರತೀಯ ಸ್ತ್ರೀಯರ ಸ್ಥಾನಮಾನದಲ್ಲಿ ಅನೇಕ ಬದಲಾವಣೆಗಳು ಉಂಟಾಗಿ, ಸ್ತ್ರೀಯರು ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಯಾವುದೇ ಪ್ರಗತಿ ಕಾಣದ ಕೀಳುಸ್ಥಾನ ಹೊಂದಬೇಕಾಯಿತು. ಈ ಕಾಲವನ್ನು ಇತಿಹಾಸಕಾರರು 'ಅಂಧಕಾರದ ಯುಗ' ಎಂದು ಕರೆದಿದ್ದಾರೆ.

ಬೌದ್ಧಮತ ಕ್ಷೀಣದೆಸೆಗೆ ತಲುಪುತ್ತಿದ್ದಂತೆ ಮುಸ್ಲಿಂ ಧಾಳಿ ಮತ್ತು ಆಳ್ವಿಕೆ ಆರಂಭದಿಂದಾಗಿ ಸ್ತ್ರೀಯರ ಸ್ಥಾನ ಅಧೋಗತಿಗೆ ತಲುಪಿದವು. ಸ್ತ್ರೀಶೋಷಣೆ ಮೇರೆ ಮೀರಿತು. ಸ್ತ್ರೀ ಸಂಬಂಧಿತ ಸಮಸ್ಯೆಗಳು ಸಾಮಾಜಿಕ ಪಿಡುಗುಗಳಾಗಿ ಕಾಡತೊಡಗಿದವು. ಸ್ತ್ರೀಯರು ಉಗ್ರವಾದ ಜಾತಿವಾದದ ಕಪಿಮುಷ್ಟಿಗೆ ಸಿಲುಕಿದರು.

ಪಿ.ಥಾಮಸ್‌ರವರು ತಿಳಿಸುವಂತೆ ಸ್ತ್ರೀಯರ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲಾಯಿತು. ಶಾಸ್ತ್ರಗಳ ಬಗ್ಗೆ ಹೆಚ್ಚು ಜ್ಞಾನ ಗಳಿಸಿಕೊಳ್ಳುವುದಿರಲಿ, ಅವರ ಅಕ್ಷರಾಭ್ಯಾಸಕ್ಕೆ ಅವಕಾಶವಿಲ್ಲವಾಯಿತು. ಸ್ತ್ರೀಯರು ಪರಾವಲಂಭಿಗಳಾಗಿ ಎಲ್ಲದರಲ್ಲಿ ಪುರುಷರನ್ನು ಅವಲಂಬಿಸಬೇಕಾಯಿತು. ಅವರು ಆಸ್ತಿಯ ಹಕ್ಕಿನಿಂದ ವಂಚಿತರಾದರು. ನಿಯೋಗದ, ವಿಧವಾ ಪುನರ್‌ವಿವಾಹದ ಅವಕಾಶವನ್ನು ರದ್ದುಪಡಿಸಲಾಯಿತು. ಬಾಲ್ಯವಿವಾಹವನ್ನು ಶಿಫಾರಸ್ಸು ಮಾಡಿದ್ದರಿಂದ ಆ ಸಂಬಂಧಿತ ದುಷ್ಪರಿಣಾಮಗಳಿಗೆ ಸ್ತ್ರೀಯರು ಗುರಿಯಾಗಬೇಕಾಯಿತು"ಎಂದಿದ್ದಾರೆ.

೧೧ ನೇ ಶತಮಾನದ ನಂತರ ಭಾರತದಲ್ಲಿ ಇಸ್ಲಾಂ ಸಂಸ್ಕೃತಿಯ ಪ್ರಭಾವವು ಹೆಚ್ಚುತ್ತಾ ಹೋಯಿತು. ಸ್ತ್ರೀಯರನ್ನು ಅತಿಯಾದ ನಿರ್ಬಧನೆಗಳಿಗೆ ಒಳಪಡಿಸುವ ಪರದಾ ಪದ್ಧತಿ, ಅವರ ಚಲನ ಮತ್ತು ಅಭಿವೃದ್ಧಿಗಳ ಮೇಲೆ ಅತ್ಯಂತ ನಕಾರಾತ್ಮಕವಾದ ಪರಿಣಾಮಗಳನ್ನು ಬೀರಿತು. ಸ್ತ್ರೀಯರ ಪ್ರಪಂಚವನ್ನು ಕುಟುಂಬಕ್ಕೆ ಸೀಮಿತಗೊಳಿಸಿದ ಪರದಾ ಪದ್ಧತಿ, ಸಕ್ರೀಯ ಸಾಮಾಜಿಕ ಜೀವನದಿಂದ ಸ್ತ್ರೀಯರನ್ನು ದೂರವಿಟ್ಟದ್ದೇ ಅಲ್ಲದೇ ಸ್ತ್ರೀಯರು ಶಿಕ್ಷಣವನ್ನಾಗಲಿ, ಪ್ರಾಪಂಚಿಕ ಜ್ಞಾನವನ್ನಾಗಲಿ ಪಡೆಯಲಾಗದಂತಹ ಪರಿಸ್ಥಿತಿಯನ್ನು ಸೃಷ್ಟಿಸಿತು. ಪರದೆಯನ್ನು ಬಳಸದ ಸ್ತ್ರೀಯರನ್ನು ಅಗೌರವದಿಂದ ಕಂಡು ಗಂಡುಬೀರಿ ಎನ್ನಲಾಗುತ್ತಿತ್ತು. ಮುಸ್ಲಿಂ ಅಲ್ಲದ ಸ್ತ್ರೀಯರೂ ಕೂಡ ಆಂತರಿಕ ನಂಬಿಕೆ ಆಚರಣೆಗಳಲ್ಲಿ ಹೆಚ್ಚಿನ ಬದಲಾವಣೆಗಳನ್ನೇನೂ ತರುವ ಪ್ರಯತ್ನ ಮಾಡಲಿಲ್ಲ.

### ೪.೭ ಭಕ್ತಿ ಪಂಥ ಮತ್ತು ಸಮಾಜ ಸುಧಾರಕರ ಪಾತ್ರ

ಭಾರತೀಯ ಮಹಿಳೆಯರ ಸ್ಥಾನ ಸುಧಾರಿಸುವಲ್ಲಿ ಬೌದ್ಧ ಮತ್ತು ಜೈನ ಧರ್ಮಗಳ ಜೊತೆಯಲ್ಲಿ ವೀರಶೈವ, ಸಿಖ್ ಮತ್ತು ಕ್ರೈಸ್ತ ಮತಗಳು ಸ್ತ್ರೀಯರ ಏಳಿಗೆಗೆ, ಔನತ್ಯಕ್ಕೆ ಕಾರಣವಾಗಿ ಸ್ತ್ರೀಯರ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ಆಧ್ಯಾತ್ಮಿಕದ ಕಡೆ ಅಪಾರ ಗಮನ ಹರಿಸಿದವು.

**ವೀರಶೈವ ಮತವು:** ಆ ಕಾಲದಲ್ಲಿ ಮಹಿಳೆಯರಿಗೆ ಸಮಾಜದಲ್ಲಿ ಸಮಾನ ಸ್ಥಾನವಿರಲಿಲ್ಲ. ಬಸವಣ್ಣನವರು ಧಾರ್ಮಿಕ ಕ್ಷೇತ್ರದಲ್ಲಿ ಸ್ತ್ರೀಯರಿಗೂ ಪುರುಷರಷ್ಟೇ ಹಕ್ಕು ಇದೆ ಎಂದು ಘೋಷಿಸಿದರು. ಅವರಿಗೂ ಲಿಂಗಧಾರಣೆ, ದೀಕ್ಷಾ ಸಂಸ್ಕಾರಗಳಿಗೆ ಅವಕಾಶ ಕಲ್ಪಿಸಿಕೊಟ್ಟು ಸ್ವತಂತ್ರವಾಗಿ ಪೂಜೆ ಮಾಡಲು ಸಮಾನ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ಸ್ತ್ರೀಯರ ಸ್ಥಾನ ಉತ್ತಮಪಡಿಸುವಲ್ಲಿ ಗಮನಾರ್ಹ ಸೇವೆಸಲ್ಲಿಸಿತು. ಸ್ತ್ರೀಯರು ಪುರುಷನ ಸಿದ್ಧಿಯ ಮಾರ್ಗದಲ್ಲಿ ಒಂದು 'ವಿಘ್ನ' ಎಂಬ ವಾದ ಅಲ್ಲಗಳೆದು ಬಸವಣ್ಣ 'ಪರವಧುವನ್ನು ಮಹಾದೇವಿಯೆಂಬೆ'ಎಂದು ಆಧರಾಭಿಮಾನಗಳನ್ನು ತೋರಿಸಿದರು. ಅಕ್ಕಮಹಾದೇವಿ ಯಾವ ಬಂಧನಕ್ಕೂ ಒಳಗಾಗದೇ ತನ್ನ ಇಷ್ಟದೇವರಿಗೆ ಅರ್ಪಿಸಿ ಮುಕ್ತಳಾಗಿದ್ದು, ಈ ಧರ್ಮವು ಹೆಣ್ಣಿಗೆ ಸಂಬಂಧಿಸಿದಂತೆ ಲಿಂಗ ತಾರತಮ್ಯಸಲ್ಲದು. ಹೆಣ್ಣು ಗಂಡು ಎಂಬ ವ್ಯತ್ಯಾಸ ಜೈವಿಕ ಲಕ್ಷಣಗಳಿಗೆ ಮಾತ್ರ ಸೀಮಿತವಾಗಿರಬೇಕು. ಸ್ತ್ರೀಯರಿಗೂ ಧಾರ್ಮಿಕ ಸ್ವಾತಂತ್ರ್ಯವಿದೆ. ತನಗಿಷ್ಟವಾದ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿದೆ. ಸಾಮಾಜಿಕ ಮತ್ತು ಕೌಟುಂಬಿಕ ಜೀವನದಲ್ಲಿ ಸ್ವಾತಂತ್ರ ನೀಡಲು ಮತ್ತು ಸ್ತ್ರೀಯರ ಸೂತಕ, ಮೈಲಿಗೆ, ಪ್ರಸವ, ಋತುಸ್ರಾವ ಮುಂತಾದ ಜೈವಿಕ ಸಂಬಂಧಗಳ ಪ್ರಕ್ರಿಯೆಗಳ ಕಾರಣದಿಂದ ಸ್ತ್ರೀಯರ ಮೇಲೆ ವಿಧಿಸಿದ್ದ ನಿರ್ಬಂಧಗಳನ್ನು ಅವರು ನಿವಾರಣೆ ಮಾಡಿದರು. ಸ್ತ್ರೀತ್ವವನ್ನು ಮಾತೃತ್ವಕ್ಕೆ ಏರಿಸಿ, ಗೌರವದಿಂದ ಸ್ತ್ರೀಯನ್ನು ಕಾಣಲು ಹೇಳಿದರು ವೀರಶೈವ ಆಂದೋಲನದ ಬೆಳವಣಿಗೆಗೆ ಸ್ತ್ರೀಯರ ಸಹಭಾಗಿತ್ವದಿಂದ ವಿಶಿಷ್ಟ ವೇಗ ಸಿಕ್ಕಿದಂತಾಗಿದೆ.

**ಭಕ್ತಿ ಪಂಥ:** ಭಕ್ತಿ ಪಂಥವು ಸ್ತ್ರೀ ಸ್ಥಾನದ ಔನ್ನತ್ಯಕ್ಕೆ ಅಪಾರ ಶ್ರಮಿಸಿತು. ಧರ್ಮ ಮತ್ತು ಸಂಸ್ಕೃತಿಯ ಪ್ರಸಾರ ಸರಳ ಭಾಷೆಯಲ್ಲಿ ಮಾಡಿ ಸ್ತ್ರೀಯರು ಮನೆಯಿಂದ ಹೊರಬಂದು ವಿಶಾಲ ಜಗತ್ತು ನೋಡಲು ಅನುವು ಮಾಡಿತು.

ಸಾಧುಸಂತರು, ಸಮಾಜ ಸುಧಾರಕರು, ಗಮನಾರ್ಹ ಪಾತ್ರವನ್ನು ವಹಿಸಿದರು. ಕಬೀರರು, ನಾಮದೇವ, ರಾಮದಾಸ, ಶಂಕರಾಚಾರ್ಯ, ಮಾಧ್ವಚಾರ್ಯ, ರಾಮಾನುಜಾಚಾರ್ಯ ಮುಂತಾದವರು ಜಾತಿ, ಮತ, ಪಂಥ, ಪಂಗಡ, ಲಿಂಗ, ಭೇದವಿಲ್ಲದ ಭಕ್ತಿಮಾರ್ಗ ಅನುಸರಿಸಿ ಮುಕ್ತಿ ಪಡೆಯಲು ಸಾರಿ ಹೇಳಿದರು. ಸಮಾಜ ಸುಧಾರಕರಾದ, ರಾಜಾರಾಮ್ ಮೋಹನರಾಯ, ದಯಾನಂದ ಸರಸ್ವತಿ, ಈಶ್ವರಚಂದ್ರ ವಿದ್ಯಾಸಾಗರ, ಕೇಶವ ಚಂದ್ರಸೇನ್, ಎಂ.ಜಿ.ರಾನಡೆ, ಡಿ.ಕೆ.ಕರ್ವೆ, ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು. ಸಿಸ್ಟರ್ ನಿವೇದಿತಾ, ಡಾ.ಅನಿಬೆಸೆಂಟ್, ಲಾಲಾಲಜಪತರಾಯ್, ಗೋಪಾಲಕೃಷ್ಣಗೋಖಲೆ, ಪಂಡಿತ್ ರಾಮಾಬಾಯಿ ರಾನಡೆ, ಗಾಂಧಿಜಿ ಮುಂತಾದವರು ಸ್ತ್ರೀ ಸ್ವಾತಂತ್ರ್ಯದ ಅಗತ್ಯತೆ ಮನಗಂಡು ಸ್ಥಾನ ಉತ್ತಮ ಪಡಿಸಲು ಸತತವಾಗಿ ಶ್ರಮಿಸಿದರು. ಇವರ ಫಲವಾಗಿ ಸತಿಸಹಗಮನ ಪದ್ಧತಿ ನಿಂತಿತು. ಬಾಲ್ಯವಿವಾಹ ಸ್ವಲ್ಪ ಮಟ್ಟಿಗೆ

ತೊಲಗಿತು. ಬಹುಪತ್ನಿತ್ವ ಖಂಡನೆಗೆ ಒಳಗಾಗಿ ವಿಧವಾ ವಿವಾಹಕ್ಕೆ ಪ್ರೋತ್ಸಾಹ ಸಿಕ್ಕು ಪರದಾ ಪದ್ಧತಿ ರದ್ದಾಯಿತು. ದೇವದಸಾಸಿ ಪದ್ಧತಿಗೆ ತಡೆ ಒಡ್ಡಲಾಯಿತು.

ಒಟ್ಟಿನಲ್ಲಿ ಈ ಕಾಲದಲ್ಲಿ ಸ್ತ್ರೀಯರ ಸಮಾನತೆಗೆ ಅವಕಾಶಗಳು ಕಲ್ಪಿಸಿಕೊಡಲು ಪ್ರಯತ್ನಗಳು ನಡೆದವು. ಮೆಕಾಲೆಯೆಂಬ ಬ್ರಿಟಿಷ್ ಅಧಿಕಾರಿಯ ಸಹಕಾರದಿಂದ ಆರ್ಯ ಸಮಾಜ, ಬ್ರಹ್ಮ ಸಮಾಜಗಳು ಹೆಣ್ಣು ಮಕ್ಕಳ, ಅದರಲ್ಲೂ ಹಿಂದುಳಿದ ಬುಡಕಟ್ಟು ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಲಾಯಿತು.

ಒಟ್ಟಿನಲ್ಲಿ "ಬ್ರಿಟಿಷ್ ಇಂಡಿಯಾದ ಎಲ್ಲಾ ಭಾಗಗಳಲ್ಲೂ ಸುಧಾರಣಾವಾದಿಗಳ ಗುಂಪುಗಳು ಹಬ್ಬಿ ಹರಡಿದ್ದವು. ಇವರ ಗಮನವೆಲ್ಲಾ ಹೆಣ್ಣು ಶಿಶುಗಳ ಹತ್ಯೆ, ಬಹುಪತ್ನಿತ್ವ, ಸ್ತ್ರೀ ಶಿಕ್ಷಣಕ್ಕಿದ್ದ ನಿರ್ಬಂಧ, ದೇವದಾಸಿ ಪದ್ಧತಿ ನಿರ್ಮೂಲನೆ, ಪುರುಷ ಪ್ರಧಾನ ಒಟ್ಟು ಕುಟುಂಬ ಇಂತಹ ಸಂಗತಿಗಳನ್ನೇ ಸುತ್ತಿತ್ತು, ಅನಂತರ ಕ್ರಮೇಣವಾಗಿ ಭಾರತ ಮಟ್ಟದ ಸುಧಾರಣಾವಾದಿ ಸಂಘ ಸಂಸ್ಥೆಗಳು ಅಸ್ತಿತ್ವಕ್ಕೆ ಬರತೊಡಗಿದವು"[೩೩]. ತದನಂತರ ಅಸಂಖ್ಯಾತ ಸ್ತ್ರೀಯರಿಗೆ ಸ್ಫೂರ್ತಿ ಪ್ರೇರಣೆ ಈ ಸುಧಾರಣಾ ವಾದಗಳು ನೀಡಿದರು.

ಭಾರತೀಯ ಮಹಿಳೆಯರು ಅತ್ಯಂತ ಧೈರ್ಯ ಸಾಹಸದಿಂದ ಮೆರೆದಿರುವ ಸಾಹಸ ಕಥೆಗಳು ನಮ್ಮ ಇತಿಹಾಸ ಪೂರ್ವ, ಸ್ವಾತಂತ್ರ್ಯ ಪೂರ್ವದಲ್ಲಿ ಬಹಳಷ್ಟಿವೆ. ಅಷ್ಟೇ ಅಲ್ಲ ಬ್ರಿಟಿಷರನ್ನು ಭಾರತದಿಂದ ಹೊರ ದೂಡಲು ಅವರ ವಿರುದ್ಧ ಹೋರಾಡಿ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸ್ತ್ರೀಯರ ಮಹತ್ವ ಅರಿತ ಮಹಾತ್ಮ ಗಾಂಧಿಜಿಯವರು ಸ್ತ್ರೀಯರು ಭಾಗವಹಿಸದ ಹೊರತು ರಾಷ್ಟ್ರಕ್ಕೆ ಸ್ವಾತಂತ್ರ್ಯ ಬರಲು ಸಾಧ್ಯವಿಲ್ಲ ಎಂದು ಸ್ತ್ರೀಯರನ್ನು ಸ್ವತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಲು ಮನವೊಲಿಸಿಕೊಂಡು ಅವರುಗಳಿಂದ ಸಾಹಸ ಕಾರ್ಯಗಳ ಪ್ರಯೋಜನ ಪಡೆದರು.

### ೪.೮ ಆಧುನಿಕ ಭಾರತದಲ್ಲಿ ಸ್ತ್ರೀಯರ ಸ್ಥಾನಮಾನ

ಬ್ರಿಟಿಷರ ಆಳ್ವಿಕೆಯ ಕಾಲವನ್ನು ಭಾರತದಲ್ಲಿ ಆಧುನಿಕ ಯುಗದ ಪ್ರಾರಂಭ ಎಂದು ಗುರುತಿಸಬಹುದು. ಇವರ ಆಳ್ವಿಕೆಯ ಆರಂಭದಲ್ಲಿ ಭಾರತದ ಸ್ತ್ರೀಯರ ಸ್ಥಾನಮಾನಗಳು ಬಹಳ ಶೋಚನೀಯವಾಗಿಯೇ ಇದ್ದವು. ಪರದಾ ಪದ್ಧತಿಯ ಹೇರಿಕೆ, ಬಾಲ್ಯವಿವಾಹ, ವಿಧವಾ ಪುನರ್ವಿವಾಹ ನಿಷೇಧ, ಸತಿ ಆಚರಣೆ, ಸ್ತ್ರೀ ಶಿಕ್ಷಣದ ನಿಷೇಧ, ಪುರುಷರ ಸ್ವಾರ್ಥದ ಬಹುಪತ್ನಿತ್ವದ ಆಚರಣೆ, ದೇವದಾಸಿ ಪದ್ಧತಿ, ಅಂತರ್ಜಾತೀಯ ವಿವಾಹ ನಿಷೇದ, ಸ್ತ್ರೀಯರ ಆಸ್ತಿ ಹಕ್ಕಿನ ನಿರಾಕರಣೆ, ದತ್ತು ಸ್ವೀಕಾರ ನಿರಾಕರಣೆ, ಸ್ತ್ರೀಯರ ರಾಜಕೀಯ ಹಾಗೂ ಸಾರ್ವಜನಿಕ ಜೀವನ ನಡೆಸಲು ಪ್ರತಿಕೂಲವಾಗಿದ್ದಂತಹ ಪರಿಸ್ಥಿತಿ, ಈ ಮುಂತಾದ ಸಮಸ್ಯೆಗಳ, ಸವಾಲುಗಳ ಸುಳಿಯಲ್ಲಿ ಸ್ತ್ರೀಯರ ಸ್ಥಾನಮಾನವು ಸಿಲುಕಿಕೊಂಡಂತಹ ಸಮಯದಲ್ಲಿ ಬ್ರಿಟಿಷರು ಭಾರತದಲ್ಲಿ ಆಡಳಿತದ ಚುಕ್ಕಾಣಿ ಹಿಡಿದರು. ಸಂಕೀರ್ಣವಾದಂತಹ ಅಸಮಾನತೆಯನ್ನು ಆಧರಿಸಿ ರೂಪುಗೊಂಡಿದ್ದ ಭಾರತೀಯ ಸಾಮಾಜಿಕ ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರುವುದು ಸುಲಭ ಸಾಧ್ಯವಾದ ಕಾರ್ಯವಾಗಿರಲಿಲ್ಲ. ವಿಭಿನ್ನವಾದ ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದಿದ್ದ ಬ್ರಿಟಿಷರಿಗೆ ಇಲ್ಲಿನ ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳುವುದು ಕೂಡ ಕಷ್ಟವಾಗಿತ್ತು. ಬ್ರಿಟಿಷ್ ಸಾಮ್ರಾಜ್ಯ ಸ್ಥಾಪನೆಯಿತ್ತ ತಮ್ಮ ಗಮನವನ್ನೆಲ್ಲ ಕೇಂದ್ರೀಕರಿಸಿದ್ದ ಬ್ರಿಟಿಷರು ಪ್ರಾರಂಭದಲ್ಲಿ ಭಾರತೀಯ ಸಮಾಜದ ವ್ಯವಹಾರಗಳಲ್ಲಾಗಲಿ, ಸಾಮಾಜಿಕ ನ್ಯಾಯವನ್ನು ಒದಗಿಸುವ

ಪ್ರಯತ್ನಗಳಲ್ಲಾಗಲಿ, ತಮ್ಮನ್ನು ತೊಡಗಿಸಿಕೊಳ್ಳಲಿಲ್ಲ. ಆದರೂ ಆಧುನಿಕತೆಯ ಗಾಳಿಯ ಪರಿಣಾಮಗಳಿಂದ ಕೆಲ ಬದಲಾವಣೆಗಳನ್ನು ತರಲೇಬೇಕಾಯ್ತು.

೧೮ ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಆದ ಕೈಗಾರಿಕಾ ಕ್ರಾಂತಿಯ ಪ್ರಭಾವ ಭಾರತಕ್ಕೂ ತಟ್ಟಿ ಇಲ್ಲಿಯೂ ಹಲವಾರು ಕಾರ್ಖಾನೆಗಳು ಸ್ಥಾಪನೆಗೊಂಡು ಮಹಿಳೆಯರು ಹಲವಾರು ವೃತ್ತಿಗಳಲ್ಲಿ, ಸಾರ್ವಜನಿಕ ವಲಯಗಳಲ್ಲಿ ಪ್ರವೇಶಿಸಲು ಅವಕಾಶವುಂಟಾಯಿತು.

೧೯ನೇ ಶತಮಾನದ ಮಧ್ಯಭಾಗದ ವೇಳೆಗೆ ಬ್ರಿಟಿಷರ ವಿರುದ್ಧ ಹೋರಾಡುವಾಗ ಗಾಂಧೀಜಿ ಸ್ತ್ರೀಯರಿಗೆ ಕೊಟ್ಟ ಪ್ರಾಶಸ್ತ್ಯ, ಬ್ರಿಟಿಷ ಸರ್ಕಾರದ ಸಹಾಯದಿಂದ ಬುಡಕಟ್ಟು ಮಹಿಳೆಯರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಲಾಯಿತು. ಸುಧಾರಣಾವಾದಿಗಳು ಇವರ ಕಡೆ ಗಮನಕೊಟ್ಟು, ಹೆಣ್ಣು ಶಿಶುಹತ್ಯೆ, ಬಹುಪತ್ನಿತ್ವ, ಸ್ತ್ರೀ ಶಿಕ್ಷಣದ ನಿರ್ಬಂಧ, ದೇವದಾಸಿ ಪದ್ಧತಿಯ ನಿರ್ಮೂಲನೆ, ಪುರುಷ ಪ್ರಾಧಾನ್ಯತೆಯ ಅವಿಭಕ್ತ ಕುಟುಂಬ ಇಂತಹ ಸಂಗತಿಗಳಿಗೆ ಒತ್ತುಕೊಟ್ಟು, ಅನೇಕ ಸಂಘಸಂಸ್ಥೆಗಳು ಅಸ್ತಿತ್ವಕ್ಕೆ ಬರತೊಡಗಿದವು. ತದನಂತರ ಅಸಂಖ್ಯಾತ ಸ್ತ್ರೀಯರಿಗೆ ಸ್ಫೂರ್ತಿ ಪ್ರೇರಣೆ ಈ ಸುಧಾರಣಾವಾದಿಗಳು ನೀಡಿದರು.

'ಜೇಮ್ಸ್ ಮಿಲ್' ಬರೆದ ಅತ್ಯಂತ ಪ್ರಭಾವಶಾಲಿ ಗ್ರಂಥವೆನಿಸಿದ 'ಬ್ರಿಟಿಷ್ ಇಂಡಿಯಾ ಚರಿತ್ರೆ'ಯಲ್ಲಿ ಒಂದು ಸಮಾಜದ ಅಭಿವೃದ್ಧಿಯಲ್ಲಿ ಅಲ್ಲಿನ ಮಹಿಳೆಯ ಸ್ಥಿತಿಗತಿಗಳನ್ನು ಲಕ್ಷಿಸಿ ಗುರುತಿಸಬಹುದು ಎಂದು ಹೇಳಿದ್ದಾರೆ ಮುಂದುವರೆದು ಸಮಾಜಗಳನ್ನು ವರ್ಣಿಸುತ್ತಾ ದುರ್ಬಲ ಮಹಿಳೆಯರ ಪರಿಸ್ಥಿತಿ ದಿನ ದಿನಕ್ಕೆ ಉತ್ತಮಗೊಳ್ಳುತ್ತಾ ಕೊನೆಗೊಮ್ಮೆ ಅವರು ಪುರುಷರಿಗೆ ಸಮಾನರೆನಿಸುವಂತಾಗಿ, ತಮ್ಮ ಇಚ್ಛೆ ಮತ್ತು ಅನುಕೂಲತೆಗಳಿಗೆ ತಕ್ಕ ಸ್ಥಾನಗಳನ್ನು ಗಳಿಸುವಂತಾಗುತ್ತಾರೆ ಎಂದು ಹೇಳುತ್ತಾರೆ. ತದನಂತರ ಮಹಾತ್ಮಗಾಂಧಿ ಮೊದಲು ಗ್ರಾಮಗಳ ಅಭಿವೃದ್ಧಿಯಾಗಬೇಕು. ಇದರ ಜೊತೆಗೆ ಬುಡಕಟ್ಟು ಮಹಿಳೆಯರು ಅಭಿವೃದ್ಧಿ ಹೊಂದಿದರೆ ಮಾತ್ರ ದೇಶದ ಅಭಿವೃದ್ಧಿಯಲ್ಲಿ ಎರಡು ಮಾತಿಲ್ಲ ಎಂದು ಹೇಳಿದ್ದಾರೆ.

ಮಧ್ಯಕಾಲೀನ ಯುಗದಲ್ಲಿ ಮತ್ತು ಆ ಬಳಿಕ ಬ್ರಿಟಿಷರ ಕಾಲಾವಧಿಯಲ್ಲಿ ಶಿಕ್ಷಿತರಾದ ಮೇಲ್ಜಾತಿಯ ಸ್ತ್ರೀಯರಿಗಿಂತಲೂ ಅಶಿಕ್ಷಿತರಾದ ಕೆಳಜಾತಿಯ ಸ್ತ್ರೀಯರೇ ಹೆಚ್ಚು ಸ್ವತಂತ್ರರಾಗಿದ್ದು, ಜಾತಿಯ ಬಿಗಿಯಾದ ಕಟ್ಟುಪಾಡುಗಳಿಂದ ಹೆಚ್ಚು ಮುಕ್ತರಾಗಿದ್ದರು ಎನ್ನುವಂತಹದ್ದು, ಪರದಾ ಧರಿಸುವಂತಹ, ಏಕಾಂತದಲ್ಲಿ ಅಥವಾ ಒಂಟಿಯಾಗಿ ಬಾಳಬೇಕಾದ, ವಿವಾಹ ವಿಚ್ಛೇದನ ಮತ್ತು ವಿಧವಾ ಪುನರ್‌ವಿವಾಹದ ಹಕ್ಕುಗಳಿಲ್ಲದ ಅನರ್ಹತೆಗಳಿಂದ ತೊಳಲಾಡಬೇಕಾದ ಸ್ಥಿತಿ ಶಿಕ್ಷಿತರಾದ ನಗರದ ಮೇಲ್ಜಾತಿಯ ಸ್ತ್ರೀಯರುಗಳಿಗಿತ್ತೇ ವಿನಃ, ಶೇ.೯೦ ರಷ್ಟಿದ್ದ ಹಳ್ಳಿಗಳ ಅಶಿಕ್ಷಿತ ಸ್ತ್ರೀಯರುಗಳಿಗಿರಲಿಲ್ಲ. ಹಳ್ಳಿಗಳಲ್ಲಿನ ಕೆಳಜಾತಿ ಸ್ತ್ರೀಯರು ಹೆಚ್ಚು ಸ್ವಾತಂತ್ರ್ಯರಿದ್ದರು, ತಮ್ಮಗಂಡಂದಿರನ್ನು ಅಗತ್ಯವಾದಲ್ಲಿ ಪರಿತ್ಯಜಿಸುವ ಮತ್ತು ಪುನರ್‌ವಿವಾಹವಾಗುವ ಸ್ವಾತಂತ್ರ್ಯ ಅವರಿಗಿತ್ತು. ವಿಧವೆಯರೂ ಪುನರ್‌ವಿವಾಹವಾಗಬಹುದಿತ್ತು. ಗ್ರಾಮೀಣ ಸ್ತ್ರೀಯರು ತಮ್ಮ ಪತಿಯಂತೆ ಹೊಲದ ಕೃಷಿಕಾರ್ಯಗಳಲ್ಲಿ ಹಾಗೂ ಕರಕುಶಲ ವೃತ್ತಿಗಳಲ್ಲಿ ತೊಡಗುತ್ತಿದ್ದರು. ತಮ್ಮ ಊರುಗಳಿಂದ ಪಕ್ಕದ ಪಟ್ಟಣಗಳಿಗೆ ಹೋಗಿ ಹಾಲು, ಮೊಟ್ಟೆ, ಬುಟ್ಟಿ, ಮಡಿಕೆ, ತರಕಾರಿ ಮುಂತಾದವು ಮತ್ತು ತಾವು ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡಲು ಅವರು ಮುಕ್ತ ಅವಕಾಶ ಪಡೆದಿದ್ದರು. ಇಂದಿಗೂ

ಕೂಡ ಮೇಲ್ಜಾತಿಯ ಸ್ತ್ರೀಯರಿಗಿಂತ ಹೆಚ್ಚಾಗಿ ಕೆಳಜಾತಿಯವರು ಧಾರ್ಮಿಕ ಹಬ್ಬಗಳಲ್ಲಿ, ಉತ್ಸವಗಳಲ್ಲಿ, ಜಾತ್ರೆಗಳಲ್ಲಿ, ಗ್ರಾಮದ ವಿಶೇಷ ಸಮಾರಂಭ ಸಂದರ್ಭಗಳಲ್ಲಿ ಈ ಸ್ತ್ರೀಯರುಗಳು ಯಾವುದೇ ಬಂಧನಗಳಿಲ್ಲದೇ ಓಡಾಡಿಕೊಂಡಿರುತ್ತಿದ್ದರು. ಬಾಲ್ಯವಿವಾಹ ಮತ್ತು ಬಹುಪತ್ನಿತ್ವಗಳು ಹಳ್ಳಿಗಳಲ್ಲಿ ಆಚರಣೆಯಲ್ಲಿದ್ದು, ಅವರ ಸ್ವಾತಂತ್ರ್ಯಕ್ಕೆ ಸ್ವಲ್ಪ ಅಡಚಣೆ ಉಂಟುಮಾಡಿದ್ದರೂ ಉಳಿದ ಎಷ್ಟೋ ವಿಚಾರಗಳಲ್ಲಿ ಮೇಲ್ಜಾತಿಗಳ ಸ್ತ್ರೀಯರುಗಳಂತೆ ನಿಯಮ ಕಟ್ಟುಪಾಡುಗಳ ಸಂಕೋಲೆಗಳಿಂದ ಬಂಧಿತರಾಗದೆ ತಮ್ಮ ಪರಂಪರೆಯೊಂದಿಗೆ ಸಮಾನತೆಯಿಂದ ಜೀವಿಸುತ್ತಿದ್ದರು. ಇಲ್ಲಿಯೂ ಸಾಮಾನ್ಯವಾಗಿ ಪುರುಷರ ಪ್ರಾಧಾನ್ಯತೆಯನ್ನು ಒಪ್ಪಿಕೊಂಡು ನಡೆಯಲಾಗುತ್ತಿತ್ತು. ಗಂಡಹೆಂಡಿರ ತಿಕ್ಕಾಟವಾದಾಗ ಮಾತ್ರ ಮೇಲ್ಜಾತಿಗಳಲ್ಲಿಲ್ಲದ ಕ್ರೌರ್ಯವನ್ನು ಪುರುಷರು ಪ್ರದರ್ಶಿಸಿ ಸ್ತ್ರೀಯರನ್ನು ನಿಯಂತ್ರಿಸಲು, ಯತ್ನಿಸುವುದು, ದಂಡಿಸುವುದಿತ್ತು ಎನ್ನಲಾಗಿದೆ.

೧೯ ಮತ್ತು ೨೦ನೇ ಶತಮಾನದ ಆದಿಭಾಗದಲ್ಲಿ ದೇವದಾಸಿ ಪದ್ಧತಿಯು ವೇಶ್ಯಾವೃತ್ತಿಯನ್ನು ಆವರಿಸಿಕೊಂಡಿತ್ತು. ಈ ಪಿಡುಗನ್ನು ತಡೆಯಲು ಹಲವು ಸಮಾಜ ಸುಧಾರಕರು ತಡೆಯಲು ಶ್ರಮಪಟ್ಟರು. ಗಾಂಧೀಜಿ ಸಹ ದೇವದಾಸಿ ಪದ್ಧತಿ ವಿರುದ್ಧ ಹೋರಾಡಿ ಇದನ್ನು ನಿರ್ನಾಮ ಮಾಡಲು ಪ್ರಯತ್ನಪಟ್ಟರು ದೇವದಾಸಿ ಮತ್ತು ವೇಶ್ಯಾವೃತ್ತಿಗೆ ಕಾರಣ ಬಡತನ ಇನ್ನೊಂದು ಕಾರಣ ಭ್ರಷ್ಟ ವ್ಯಾಪಾರಿಗಳು, ಕ್ರೂರ ಜಮೀನ್ದಾರರು, ಇದನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದರು. ಈ ಸಾಮಾಜಿಕ ಪಿಡುಗುಗಳ ಬಗ್ಗೆ ಮಾನವೀಯ ಅನುಕಂಪವನ್ನು ಹೊಂದಿಲ್ಲದೇ ಪ್ರಸ್ತುತ ಸಮಾಜದಲ್ಲಿ ಸಾಮಾನ್ಯವಾಗಿ ಕೆಳ ಮತ್ತು ಬುಡಕಟ್ಟು ಮಹಿಳೆಯರಲ್ಲಿ ಉಳಿದು ಕೊಂಡಿರುವುದನ್ನು ನಮ್ಮ ಪ್ರಸಕ್ತ ಅಧ್ಯಯನದಲ್ಲಿ ಕಾಣಬಹುದಾಗಿದೆ.

ಮೊದಲು ಸ್ವಾತಂತ್ರ್ಯ ಪೂರ್ವದಲ್ಲಿ ಮೇಲು ವರ್ಗದ ಮಹಿಳೆಯರಲ್ಲಿ ಕೂಡ ದೇವದಾಸಿ ಪದ್ಧತಿ ಇದ್ದದ್ದು ಕಂಡುಬರುತ್ತದೆ. ನಂತರ ಕಾಲ ಬದಲಾದಂತೆ, ರಾಷ್ಟ್ರೀಯ ಸೇವಾ ಯೋಜನೆಯಲ್ಲಿ ತೊಡಗಿಕೊಂಡು ಅವರಲ್ಲಿ ಈ ಪದ್ಧತಿ ಸಂಪೂರ್ಣವಾಗಿ ತೊಲಗಿಹೋಯಿತು. ಅನಿಷ್ಟ ಸಂಪ್ರದಾಯಗಳ ಸಮಸ್ಯೆಗಳ ಪರಿಹಾರವು ಬದುಕುವ ಪ್ರಾಥಮಿಕ ಅವಶ್ಯಕತೆಗಳಲ್ಲಿ ಸ್ವಾವಲಂಬನೆಯಾಗಿರುವುದನ್ನು ಅವಲಂಬಿಸಿವೆ ಎಂಬ ಅರಿವು ಗಾಂಧೀಜಿಗೆ ಇತ್ತು. ಈ ಕಾರಣಕ್ಕಾಗಿ ಗ್ರಾಮೀಣ ಬಡ ಮಹಿಳೆಯರ ಬದುಕು ಸ್ವಾವಲಂಬಿತವಾಗುವಂತೆ ಖಾದಿ ಚಳುವಳಿಯನ್ನು ರೂಪಿಸಿದ ಗಾಂಧಿ ವೇಶ್ಯಾ ಸಮಸ್ಯೆಯ ಪರಿಹಾರಕ್ಕೂ ಸ್ವಾವಲಂಬಿ ಜೀವನ ವಿಧಾನದ ಮಾದರಿಯನ್ನೇ ಉತ್ತರವಾಗಿ ಇಟ್ಟರು. ಹಾಗೆ ಹಲವಾರು ಮಹಿಳೆಯರ ಸ್ಥಿತಿಗತಿಗಳಲ್ಲಿ ಸ್ವಲ್ಪ ಬದಲಾವಣೆಗಳು ಕಂಡಿದ್ದರಿಂದ, ಇವರ ವ್ಯಕ್ತಿತ್ವವು ಇಡೀ ಪ್ರಪಂಚಕ್ಕೆ ತಾವು ಯಾರಿಗಿಂತ ಕಡಿಮೆ ಇಲ್ಲ ಎಂಬುದನ್ನು ಸಾಧಿಸುವಲ್ಲಿ ಸಮರ್ಥರಾಗಿದ್ದಾರೆ. ಹಾಗೆಯೇ ಗಾಂಧೀಜಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ನಾಡಿನ ಮಹಿಳೆಯರನ್ನು ತೊಡಗಿಸಿಕೊಂಡಿದ್ದರ ಪರಿಣಾಮ ಅವರ ಸ್ಥಿತಿಗತಿಗಳಲ್ಲಿ ಗಮನಾರ್ಹ ಬದಲಾವಣೆಗಳೂ ಕೂಡ ಆದವು.

### ೪.೯ ಸ್ವಾತಂತ್ರ್ಯಾನಂತರ ಬುಡಕಟ್ಟು ಸ್ತ್ರೀಯರು

ಇಲ್ಲಿ ಸ್ತ್ರೀಯರ ಸ್ಥಾನಮಾನ ಹೆಚ್ಚಿಸುವ ಮತ್ತು ಕಲ್ಯಾಣ ಸಾಧಿಸುವ ದೃಷ್ಟಿಯಿಂದ ಹಲವಾರು ಶಾಸನಾತ್ಮಕ, ಶೈಕ್ಷಣಿಕ, ಆರ್ಥಿಕ ಮತ್ತಿತರ ಕ್ರಮಗಳನ್ನು ಕೈಗೊಳ್ಳಲಾಯಿತು. ಈ ದೇಶದ ಬಹುಸಂಖ್ಯಾತರನ್ನು

ಅನಕ್ಷರತೆ, ಬಡತನ, ಅಜ್ಞಾನ, ಮೂಢನಂಬಿಕೆ ಕಂದಾಚಾರಗಳಿಂದ ಮುಕ್ತರನ್ನಾಗಿಸಿ ಸ್ವಾತಂತ್ರ್ಯಾದ ಅನಂತರವೂ ಮನುಷ್ಯರನ್ನಾಗಿಸುವ ಕ್ರಿಯಾತ್ಮಕತೆಯ ಕೊರತೆ ಒಂದು ಕಡೆಯಾದರೆ, ವ್ಯಕ್ತಿ ಸ್ವಾರ್ಥ ಹಿತಗಳು ಧರ್ಮ ದೇವರ ಹೆಸರಿನಲ್ಲಿಯ ಮತೀಯ ವಿಷ ಸಾಮಾನ್ಯ ಜನರ ಬದುಕಿನಲ್ಲಿ ಬೆರೆತು ಹೋಗುತ್ತಿರುವುದನ್ನು ನೋಡಿ ಮೂಕರಾಗುವ ನಿಷ್ಕ್ರೀಯತೆ ಇನ್ನೊಂದು ಕಡೆ ಇದ್ದರೂ, ತಾಂತ್ರಿಕ ಪರಿವರ್ತನೆ, ನಗರೀಕರಣ, ವಿಭಕ್ತ ಕುಟುಂಬಗಳ ಹೆಚ್ಚಳ, ಉದ್ಯೋಗದ ನಿಮಿತ್ತ ಸ್ತ್ರೀಯರು, ಪುರುಷರು, ಬೇರೆ ಬೇರೆಯಾಗುತ್ತಿರುವುದು ಇವು ಐತಿಹಾಸಿಕವಾಗಿ ಆಗಿರಬಹುದಾದ ದಾಳಿಗಿಂತಲೂ ಹೆಚ್ಚಿನ ಪ್ರಭಾವ ಪರಿಣಾಮಗಳನ್ನು ಸ್ತ್ರೀಪುರುಷರ ಸಂಬಂಧಗಳ ಮೇಲೆ ಪ್ರಭಾವ ಬೀರಬಲ್ಲವುಗಳಾಗಿವೆ. ಇವುಗಳ ಆಘಾತ ಎದುರಿಸುವ ಕ್ಷಮತೆಯನ್ನು ಬೆಳೆಸಿಕೊಳ್ಳುವುದು ಭಾರತೀಯ ಮಹಿಳೆಯರಿಗೆ ಇಂದಿನ ಪ್ರಸ್ತುತ ಸಮಯದ ಸವಾಲಾಗಿದೆ.

ಇಂದು ಬುಡಕಟ್ಟು ಮಹಿಳೆಯರು ಮನೆಯಿಂದ ಹೊರಬಂದು ಕಾರ್ಖಾನೆ, ಕೃಷಿ, ಕೈಗಾರಿಕೆ ಹಲವು ಶತಮಾನಗಳ ನಂತರ ಮಹಿಳೆಯರು ಗಂಡಂದಿರೊಂದಿಗೆ ಹೊರಗೆ ದುಡಿಯುತ್ತಿದ್ದು, ಶಿಕ್ಷಣ ಪಡೆದು, ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವಷ್ಟು ಸಮರ್ಥರಾಗಿ ಆಧುನಿಕ ಆರ್ಥಿಕತೆಯೊಂದಿಗೆ ಹಿಂದುಳಿದ ಮಹಿಳೆಯರಿಗೆ ಸಮಾನ ಅವಕಾಶಗಳು ಅಲ್ಪಸ್ವಲ್ಪ ದೊರೆಯತೊಡಗಿವೆ.

ಬುಡಕಟ್ಟು ಮಹಿಳೆಯರು ಗೃಹ ಕೈಗಾರಿಕೆಗಳಲ್ಲಿ, ವ್ಯಾಪಾರ, ಕೂಲಿ, ಹೈನುಗಾರಿಕೆಗಳಲ್ಲಿ ತೊಡಗಿ, ಮನೆಯ ಜವಾಬ್ದಾರಿಯನ್ನು ಬುಡಕಟ್ಟು ಮಹಿಳೆಯರು ನಿಭಾಯಿಸಿಕೊಂಡು ಹೋಗುವುದನ್ನು ಕಾಣಬಹುದು. ಈ ಮಹಿಳೆಯರು ಮನೆ ಹೊರಗೆ ದುಡಿಯುವುದರಿಂದ ಸ್ಥಾನ ಹಿಗ್ಗುವುದು. ಸ್ವಾತಂತ್ರ್ಯ ಸ್ವಾವಲಂಬನೆ ಜೊತೆಗೆ ಬುಡಕಟ್ಟು ಮಹಿಳೆ ಅಸಂಘಟಿತ ವಲಯಗಳಲ್ಲಿ ತೀವ್ರವಾಗಿ ತೊಡಗಿಸಿಕೊಳ್ಳುವುದು ಸಾಧ್ಯವಾಗಿದೆ.

ಕೆಲ ರಾಜಕೀಯ ಪುಡಾರಿಗಳು ಬುಡಕಟ್ಟು ಮಹಿಳೆಯರ ಮತ್ತು ಇತರ ಸಮುದಾಯದ ಮಹಿಳೆಯ ಬಗೆಗೆ ಕೀಳರಿಮೆ ಹೊಂದಿ, ಬುಡಕಟ್ಟು ಮಹಿಳೆಯರ ಸ್ಥಿತಿ ಸ್ವಾತಂತ್ರ್ಯದ ಅನಂತರ ಉತ್ತಮಗೊಳ್ಳುವುದಿರಲಿ, ಅವು ಇನ್ನಷ್ಟು ಶೋಚನೆಯ ಸ್ಥಿತಿಗೆ ಇಳಿದಿದೆ ಎಂಬುದು ಕಂಡುಬರುತ್ತಿದೆ. ನಮ್ಮ ಸಾಮಾಜಿಕ, ಸಾಂಸ್ಕೃತಿಕ, ಸಂಸ್ಥೆಗಳ ಮೂಲದಿಂದ ಉದ್ಭವಿಸಿದ ಸಮಸ್ಯೆಗಳ ಕಾರಣದಿಂದಾಗಿ ವಿವಿಧ ಒತ್ತಡಗಳಲ್ಲಿ ಅವರು ಬಳಲುವಂತಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಭಾರತ ಸಂವಿಧಾನವು ಬುಡಕಟ್ಟು ಮಹಿಳೆಯರು ಮತ್ತು ಇತರ ಮಹಿಳೆಯರೊಂದಿಗೆ ನೀಡಿದ ಹಕ್ಕುಗಳು ಮತ್ತು ಅವಕಾಶಗಳು ಅವರನ್ನು ತಲುಪದೆ ದೂರ ಉಳಿದಿವೆ ಎಂದು ಹೇಳಿದರೆ ತಪ್ಪಾಗಲಾರದು. ಅವರುಗಳ ಉದ್ಧಾರಕ್ಕಾಗಿ ಆಚರಣೆಗೆ ಬಂದ ಕಾನೂನು ಮತ್ತು ಹಕ್ಕುಗಳು ಏನೆಂಬುದೇ ಅವರಿಗೆ ತಿಳಿಯದು.

ಈ ಹಿನ್ನೆಲೆಯಲ್ಲಿ ಬುಡಕಟ್ಟು ಮಹಿಳೆ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಬದಲಾವಣೆ ಮತ್ತು ಆರ್ಥಿಕ ಅಭಿವೃದ್ಧಿ ಹೊಂದುವಲ್ಲಿ ಪ್ರಯತ್ನಪಡುತ್ತಿದ್ದಾರೆ ಎಂಬುದನ್ನು ತಿಳಿಯಬಹುದಾಗಿದೆ.

ಇಂದು ಬುಡಕಟ್ಟು ಮಹಿಳೆ ಇತರ ಸಮುದಾಯದ ಮಹಿಳೆಯರಿಗಿಂತ ಕಡಿಮೆ ಇಲ್ಲ. ಶಿಕ್ಷಣ ಪಡೆದು, ಅಲ್ಪಸಂಖ್ಯೆಯಲ್ಲಿಯೇ ಪ್ರಜ್ಞಾವಂತರಾಗಿ ರಾಜಕೀಯ ಚಟುವಟಿಕೆಯಲ್ಲಿ ಪಾಲ್ಗೊಂಡಿರುವುದು ಕಂಡುಬರುತ್ತದೆ. ಹಿಂದೆ ಬುಡಕಟ್ಟಿನವರು ಕ್ರೂರಿಗಳು, ಮಾಂಸಹಾರಿಗಳು ಎಂದು ಮೇಲ್ವರ್ಗದವರು ಕೀಳಾಗಿ ಕಾಣುತ್ತಿದ್ದರು. ಇಂದು ಬುಡಕಟ್ಟಿನ ಕೆಲ ಮಹಿಳೆಯರು, ವಿಜ್ಞಾನಿಗಳು, ಅಧ್ಯಾಪಕರು, ಎಂಜಿನಿಯರ್‌ಗಳು, ಸಂಶೋಧಕಿಯರಾಗಿ

ಕಾರ್ಯನಿರ್ವಹಿಸುತ್ತಿದ್ದಾರೆ. ಆದರೆ ಬಹುಸಂಖ್ಯಾತರು ಮೇಲು ಜಾತಿಗಳ ದಬ್ಬಾಳಿಕೆಯಿಂದ ಇವರು ಮೇಲಕ್ಕೇರಲು ಆಗುತ್ತಿಲ್ಲ. ಇದರಿಂದ ಬುಡಕಟ್ಟು ಮಹಿಳೆಯರು ಉನ್ನತ ವ್ಯಾಸಂಗ ಮಾಡಲು ಸಾಧ್ಯವಾಗುತ್ತಿಲ್ಲ. ಆದರೂ ಇಂತಹ ಉನ್ನತ ಪದವಿಯನ್ನು ಪಡೆದವರ ಸಂಖ್ಯೆ ತುಂಬಾ ಕಡಿಮೆ.

ಬುಡಕಟ್ಟು ಮಹಿಳೆಯರು ಆರ್ಥಿಕವಾಗಿ ಸಾಮಾಜಿಕವಾಗಿ ಅಭಿವೃದ್ಧಿ ಹೊಂದುವಲ್ಲಿ ಪ್ರಯತ್ನ ಪಡುತ್ತಿದ್ದಾರೆ. ಬದುಕಿನ ಎಲ್ಲಾ ವಲಯಗಳಲ್ಲಿಯೂ ಸಮಾಜದ ಹಕ್ಕು ಬಾಧ್ಯತೆಗಳಿಗಾಗಿ ನಡೆಯುತ್ತಿರುವ ಮಹಿಳಾ ಹೋರಾಟಗಳ ಬಗೆಗೆ ಮತ್ತು ಮಹಿಳೆಯರ ಜೀವನದ ಸ್ಥಿತಿಗತಿಗಳನ್ನು ಸುಧಾರಿಸುವ ಬಗೆಗೆ ಗಮನವನ್ನು ಕೇಂದ್ರೀಕರಿಸುವುದು 'ಭಾರತದ ಮಹಿಳೆಯರ ರಾಷ್ಟ್ರೀಯ ಫೆಡರೇಷನ್'ನ ಮುಖ್ಯ ಗುರಿಯಾಗಿತ್ತು. (NFIW) ಇದರ ಮೂಲಕ ಮಹಿಳೆಯರ ಸ್ಥಾನ ಸುಧಾರಣೆ ಪ್ರಯತ್ನ ಪಡಲಾಯಿತಾದರೂ, ಕೆಲ ಪ್ರಭಾವಿ, ಪ್ರಭುತ್ವ, ಸ್ವಾರ್ಥ ಪುರುಷರು ಬುಡಕಟ್ಟು ಮತ್ತು ಇತರೆ ಸಮುದಾಯದ ಮಹಿಳೆಯರ ಬಗೆಗಿನ ಕೀಳರಿಮೆಯಿಂದಾಗಿ ಇದೊಂದು 'ದಾನ ಕೇಂದ್ರ' ಎಂದು ಪರಿಗಣಿಸಿ ಅದರ ವ್ಯಾಪ್ತಿಯನ್ನು ಸಂಕುಚಿತಗೊಳಿಸಿದರು. ಪರಿಣಾಮ ಸ್ವಾತಂತ್ರ್ಯ ನಂತರ ಬುಡಕಟ್ಟು ಮಹಿಳೆಯರ ಸ್ಥಿತಿಗತಿ ಇನ್ನಷ್ಟು ಶೋಚನೀಯ ಸ್ಥಿತಿಗಿಳಿಯಲು ಕಾರಣವಾಯಿತು. ನಮ್ಮ ಸಾಮಾಜಿಕ, ಸಾಂಸ್ಕೃತಿಕ ಸಂಸ್ಥೆಗಳ ಮೂಲದಿಂದಲೇ ಉದ್ಭವಿಸಿದ ಕಾರಣಗಳಿಂದಾಗಿ ನಮ್ಮ ಮಹಿಳೆಯರಲ್ಲಿ ಅಸಾಮರ್ಥ್ಯವೇ ತುಂಬಿ ವಿವಿಧ ಒತ್ತಡಗಳಿಂದೆ ಬಳಲುವಂತಾಗಿದ್ದಾರೆ.

ಸ್ತ್ರೀಯರ ಶೋಷಣೆ ನಿಂತು ಅವರು ಪುರುಷರಿಗೆ ಸರಿಸಮಾನವಾಗಿ ಜೀವಿಸುವಂತಹ ಪರಿಸ್ಥಿತಿ ನಿರ್ಮಾಣವಾಗಬೇಕೆಂಬ ಹಂಬಲ ವಿಶ್ವರಾಷ್ಟ್ರ ಸಂಸ್ಥೆಯ ಮೂಲಕ ಪ್ರಕಟವಾಗುತ್ತಲೇ ಇತ್ತು. ಪರಿಣಾಮ ೧೯೭೫ರ ವರ್ಷವನ್ನು 'ಅಂತರರಾಷ್ಟ್ರೀಯ ಮಹಿಳಾ ವರ್ಷ' ವೆಂದು ಘೋಷಿಸಿದಾಗ ಅದರ ಕೆಲವು ಸದಸ್ಯ ರಾಷ್ಟ್ರಗಳು ಸ್ತ್ರೀಯರ ಕಡೆಗೆ ವಿಶೇಷ ದೃಷ್ಟಿ ಹರಿಸಿದವು. ತುಳಿತಕ್ಕೊಳಗಾದ ಹಲವಾರು ಮಹಿಳೆಯರು ಶತ ಶತಮಾನಗಳಿಂದ ಪುರುಷ ಪ್ರಧಾನ ಸಮಾಜ ಹೇರುವ ಅಸಮಾನತೆ, ಶೋಷಣೆ, ದಬ್ಬಾಳಿಕೆಯ ವಿರುದ್ಧ ಸಿಡಿದೆದ್ದು, ಸಂಘಟಿತರಾಗಿ ಹೋರಾಟ ಆರಂಭಿಸಿದ ದಿನವದು. ಚಿರಂತನವಾಗಿ ನೆನಪುಗಳಿಯುವ ಈ ದಿನ ಮಹಿಳೆಯರ ಘನತೆ, ಗೌರವ, ಕೆಚ್ಚು ಧೈರ್ಯಕ್ಕೆ ಪ್ರತೀಕವಾಗಿ ನಿಂತಿದೆ. ಈ ಹೋರಾಟದ ಫಲವೇ ಇವರು ಎಲ್ಲಾ ಕ್ಷೇತ್ರಗಳಲ್ಲಿ ದುಡಿಯುತ್ತಿರುವುದು ಕಂಡು ಬರುತ್ತದೆ.

"ವಿಶ್ವಸಂಸ್ಥೆಯು ೧೯೭೫ ನ್ನು 'ಮಹಿಳಾ ವರ್ಷ'ವಾಗಿ ಘೋಷಿಸಲು ನಿರ್ಧರಿಸಿ ಅದರ ಪೂರ್ವಸಿದ್ಧತೆಗಾಗಿ ಎಲ್ಲಾ ದೇಶಗಳಿಂದಲೂ ಈ ಕುರಿತು ವರದಿಗಳನ್ನು ಪಡೆಯಲು ಸೂಚನೆಗಳನ್ನು ನೀಡಿತೆಂಬುದೂ ಕಾಕತಾಳೀಯವಾಗಿ ಒದಗಿ ಬಂದಿತು"[೩೪] ಎಂದು ಹೇಳಲಾಗಿದ್ದು, ಈ ಅವಧಿಯಲ್ಲಿ ಭಾರತದಂತಹ ಹಲವಾರು ಸಮುದಾಯದ ಮಹಿಳೆಯರು ತಮ್ಮ ಬದುಕಿನಲ್ಲಿ ಆಧುನಿಕತೆಯನ್ನು ಪಡೆದುಕೊಂಡರು, ಆಧುನಿಕ ಮಹಿಳೆಯರನ್ನು ವಿಶ್ವಸಂಸ್ಥೆಗೆ ಪ್ರತಿನಿಧಿಗಳನ್ನಾಗಿ ಕಳುಹಿಸಿದ ನಿದರ್ಶನಗಳನ್ನು ನಾವು ನೋಡಬಹುದಾಗಿದೆ. ಈ ನಿಟ್ಟಿನಲ್ಲಿ ಜಗತ್ತಿನ ಇತಿಹಾಸದಲ್ಲಿ 'ಮಾರ್ಚ್ ೮' ಸುವರ್ಣಾಕ್ಷರಗಳಲ್ಲಿ ಬರೆಯಲ್ಪಟ್ಟ ದಿನ ಎನ್ನಬಹುದಾಗಿದೆ.

ಸ್ವಾತಂತ್ರ್ಯಾನಂತರ ಸ್ತ್ರೀಯರ ಉದ್ಧಾರವೇ ದೇಶದ ಉದ್ಧಾರವೆಂದು ಅರಿತ ನಮ್ಮ ನಾಯಕರು ಭಾರತದ ಸಂವಿಧಾನದಲ್ಲಿ ತನ್ನ ೧೫ ನೇ ವಿಧಿಯಲ್ಲಿ ಲಿಂಗ ತಾರತಮ್ಯವನ್ನು ನಿಷೇಧಿಸುವುದರ ಮೂಲಕ ನಮ್ಮ

ಸಮಾಜದಲ್ಲಿ ಸ್ತ್ರೀ ಪುರುಷರ ಸಮಾನತೆಯನ್ನು ಸ್ಥಾಪಿಸಿ, ಸ್ತ್ರೀಯರಿಗೆ ಸಮಾಜದ ಸರ್ವ ರಂಗಗಳಲ್ಲಿ ಸಮಾನ ಅವಕಾಶಗಳನ್ನು ನೀಡುವ ಪ್ರಯತ್ನಗಳಿಗೆ ಹೊಸ ತಿರುವನ್ನು ಕೊಟ್ಟಿತು. ಸಾರ್ವಜನಿಕ ಜೀವನದಲ್ಲಷ್ಟೇ ಅಲ್ಲದೇ ಕುಟುಂಬ, ವಿವಾಹ, ಶಿಕ್ಷಣ ಮುಂತಾದ ಸಂಸ್ಥೆಗಳಲ್ಲೂ ಸ್ತ್ರೀಯರಿಗೆ ವಿಶೇಷ ಹಕ್ಕುಗಳನ್ನು ಸ್ವಾತಂತ್ರ್ಯ ನಂತರದಲ್ಲಿ ನೀಡಲಾಯಿತು. ಸ್ವತಂತ್ರ ಭಾರತದಲ್ಲಿ ಮಹಿಳೆಯರ ಮೇಲೆ ವಿಶೇಷ ಪ್ರಭಾವ ಬೀರುವಂತಹ ಅಂಶಗಳಲ್ಲಿ ಕಾನೂನು ಕೂಡ ಮುಖ್ಯವಾದುದು ಎಂದರೂ ತಪ್ಪಾಗಲಾರದಾಗಿದೆ. ಈ ನಿಟ್ಟಿನಲ್ಲಿ ಸ್ತ್ರೀ ವಿಮೋಚನೆಗಾಗಿ ಜಾರಿಗೆ ಬಂದ ಕಾಯಿದೆಗಳು ಹಲವಾರು ಇವೆ.

ಹೀಗಿದ್ದು ಸ್ವತಂತ್ರ ಭಾರತದಲ್ಲಿ ಬುಡಕಟ್ಟು ಮಹಿಳೆಯರ ಬದುಕು ಉತ್ತಮ ಸ್ಥಿತಿಗೆ ಬಂದಿದೆ ಎಂದು ಹೇಳುವುದು ಕಷ್ಟ. ಏಕೆಂದರೆ ಸ್ವಾತಂತ್ರ್ಯ ಪೂರ್ವದಲ್ಲಿ ಬುಡಕಟ್ಟು ಮಹಿಳೆಯರ ಮೇಲೆ ಬೀಳುವ ಕಾರ್ಯಭಾರ, ಅವರ ಬದುಕಿನ ಪರಿಸ್ಥಿತಿಗಳು ದುಡಿಯುವ ಮಹಿಳೆಯರ ಅಭಿಪ್ರಾಯಗಳು ಇವುಗಳ ಬಗ್ಗೆ ಲಕ್ಷಿಸಿಯೇ ಇಲ್ಲ. ಆದರೂ ಹೋರಾಟ, ಸಂಘಟನೆಗಳ ಮೂಲಕ ಸ್ತ್ರೀ ಆಧುನಿಕ ಜಗತ್ತಿನಲ್ಲಿ ಅಲ್ಪ ಸೌಲಭ್ಯಗಳನ್ನು ಪಡೆಯುವಲ್ಲಿ ಸಫಲತೆ ಹೊಂದಿ, ಜಗತ್ತಿನ ವಿಜ್ಞಾನ, ತಂತ್ರಜ್ಞಾನಗಳಲ್ಲಿ ಮುಂದುವರೆಯುವಷ್ಟು ಈ ಮಹಿಳೆಯರು ಬೆಳೆದಿದ್ದಾರೆ. ಇಂದಿನ ನಗರೀಕರಣ, ಜಾಗತೀಕರಣದ ಪ್ರಕ್ರಿಯೆಗಳಿಂದ ಬುಡಕಟ್ಟು ಮಹಿಳೆಯರು ತಮ್ಮ ಆರ್ಥಿಕತೆಯಲ್ಲಿ ಹೊಸದೊಂದು ಚಾಲನೆಯನ್ನು ಒದಗಿಸಿಕೊಂಡು ಮನೆಯ ನಾಲ್ಕು ಗೋಡೆಗಳಿಂದ ಪಾರಾಗಿ ಹೊರಗಿನ ಜಗತ್ತಿಗೆ ಬಂದು, ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ಬುಡಕಟ್ಟು ಮಹಿಳೆಯರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಪ್ರಗತಿ ಹೊಂದುತ್ತಿರುವುದು ಒಂದು ಗಮನಾರ್ಹ ಸಂಗತಿ.

ಸ್ವಾತಂತ್ರ ಭಾರತದಂತಹ ದೇಶದಲ್ಲಿ ಬುಡಕಟ್ಟು ಮಹಿಳೆಯರು "ದೇಶದ ರಾಜಕೀಯ ಹಾಗೂ ಆರ್ಥಿಕ ರಂಗಗಳಲ್ಲಾದ ಬದಲಾವಣೆಗಳಿಂದಾಗಿ ವ್ಯಾಪಿಸತೊಡಗಿದ ನಗರೀಕರಣ ಮತ್ತು ಜಾಗತೀಕರಣ ಪ್ರಕ್ರಿಯೆಯಲ್ಲಿ ಮಹಿಳೆಯರ ಸ್ಥಿತಿಗತಿಗಳಲ್ಲಿ ತೀವ್ರತರದ ಬದಲಾವಣೆಗಳು ಕಾಣಲಾರಂಭಿಸಿವೆ. ಮಹಿಳೆಯರಿಗೆ ದೊರಕಿದ ಶಿಕ್ಷಣ ಹಾಗೂ ಉದ್ಯೋಗದ ಅವಕಾಶಗಳಿಂದಾಗಿ ಅವಳೀಗ ಪುರುಷನಿಗೆ ಸಮಾನವಾದ ಸ್ಥಾನಮಾನಗಳಲ್ಲಿ ಪ್ರವೇಶಗಳನ್ನು ಪಡೆಯುತ್ತಿದ್ದಾಳೆ"[೨೫]. ಸ್ತ್ರೀಯರ ಶೋಷಣೆ ನಿಂತು ಅವರು ಪುರುಷರಿಗೆ ಸರಿಸಮಾನವಾಗಿ ಜೀವಿಸುವಂತಹ ಪರಿಸ್ಥಿತಿ ನಿರ್ಮಾಣವಾಗಬೇಕೆಂಬ ಹಂಬಲ ವಿಶ್ವರಾಷ್ಟ್ರ ಸಂಸ್ಥೆಯ ಮೂಲಕ ಪ್ರಕಟವಾಗುತ್ತಲೇ ಇತ್ತು. ಪರಿಣಾಮ ೧೯೭೫ರ ವರ್ಷವನ್ನು 'ಅಂತರಾಷ್ಟ್ರೀಯ ಮಹಿಳಾ ವರ್ಷ'ವೆಂದು ಘೋಷಿಸಿದಾಗ ಅದರ ಕೆಲವು ಸದಸ್ಯ ರಾಷ್ಟ್ರಗಳು ಸ್ತ್ರೀಯರ ಕಡೆಗೆ ವಿಶೇಷ ದೃಷ್ಟಿ ಹರಿಸಿದವು. ತುಳಿತಕ್ಕೊಳಗಾದ ಹಲವಾರು ಮಹಿಳೆಯರು ಶತ, ಶತಮಾನಗಳಿಂದ ಪುರುಷ ಪ್ರಧಾನ ಸಮಾಜ ಹೇರುವ ಅಸಮಾನತೆ, ಶೋಷಣೆ, ದಬ್ಬಾಳಿಕೆಯ ವಿರುದ್ಧ ಸಿಡಿದೆದ್ದು, ಸಂಘಟಿತರಾಗಿ ಹೋರಾಟ ಆರಂಭಿಸಿದ ದಿನವದು. ಚಿರಂತನವಾಗಿ ನೆನಪುಳಿಯುವ ಈ ದಿನ ಮಹಿಳೆಯರ ಘನತೆ, ಗೌರವ, ಕೆಚ್ಚು ಧೈರ್ಯಕ್ಕೆ ಪ್ರತೀಕವಾಗಿ ನಿಂತಿದೆ. ಈ

ಹೋರಾಟದ ಫಲವೇ ಇವರು ಎಲ್ಲಾ ಕ್ಷೇತ್ರಗಳಲ್ಲಿ ದುಡಿಯುತ್ತಿರುವುದು ಕಂಡು ಬರುತ್ತದೆ.

"ವಿಶ್ವಸಂಸ್ಥೆಯು ೧೯೭೫ ನ್ನು ಮಹಿಳಾ ವರ್ಷವಾಗಿ ಘೋಷಿಸಲು ನಿರ್ಧರಿಸಿ ಅದರ ಪೂರ್ವ ಸಿದ್ಧತೆಗಾಗಿ ಎಲ್ಲಾ ದೇಶಗಳಿಂದಲೂ ಈ ಕುರಿತು ವರದಿಗಳನ್ನು ಪಡೆಯಲು ಸೂಚನೆಗಳನ್ನು ನೀಡಿತೆಂಬುದೂ ಕಾಕತಾಳೀಯವಾಗಿ ಒದಗಿ ಬಂದಿತು"[೨೬] ಎಂದು ಹೇಳಲಾಗಿದ್ದು, ಈ ಅವಧಿಯಲ್ಲಿ ಭಾರತದಂತಹ ಹಲವಾರು ಸಮುದಾಯದ ಮಹಿಳೆಯರು ತಮ್ಮ ಬದುಕಿನಲ್ಲಿ ಆಧುನಿಕತೆಯನ್ನು ಪಡೆದುಕೊಂಡರು. ಆಧುನಿಕ ಮಹಿಳೆಯರನ್ನು ವಿಶ್ವಸಂಸ್ಥೆಗೆ ಪ್ರತಿನಿಧಿಗಳನ್ನಾಗಿ ಕಳುಹಿಸಿದ ನಿದರ್ಶನಗಳನ್ನು ನಾವು ನೋಡಬಹುದಾಗಿದೆ. ಈ ನಿಟ್ಟಿನಲ್ಲಿ ಜಗತ್ತಿನ ಇತಿಹಾಸದಲ್ಲಿ 'ಮಾರ್ಚ್ ೮' ಸುವರ್ಣಾಕ್ಷರಗಳಲ್ಲಿ ಬರೆಯಲ್ಪಟ್ಟ ದಿನ ಎನ್ನಬಹುದಾಗಿದೆ. ೨೦೦೧ ನೇ ವರ್ಷವನ್ನು 'ಮಹಿಳಾ ಸಶಕ್ತೀಕರಣದ ವರ್ಷ'ವನ್ನಾಗಿ ಘೋಷಿಸಿದ ಹಿನ್ನೆಲೆಯಲ್ಲಿ ಸ್ತ್ರೀಯರ ಸಬಲೀಕರಣಕ್ಕೆ ಭಾರತ ಸರ್ಕಾರವು ಸೂಚಿಸಿದ ಕಾರ್ಯತಂತ್ರಗಳು ಹೀಗಿವೆ,

ಸ್ತ್ರೀಯರು ರಾಜಕೀಯ ಸಹಭಾಗಿತ್ವ ಪಡೆಯಲು ಚುನಾವಣೆಗಳಲ್ಲಿ ಮತ್ತು ನೌಕರಿಯಲ್ಲಿ ಮೀಸಲಾತಿ, ಗ್ರಾಮೀಣಾಭಿವೃದ್ಧಿ ಯೋಜನೆಗಳಾದ IRDP, TRYSEM, JRY ಮುಂತಾದವುಗಳಲ್ಲಿ ಸ್ತ್ರೀಯರು ಫಲಾನುಭವಿಗಳಾಗುವಂತೆ ನೋಡಿಕೊಳ್ಳುವುದು ಸ್ತ್ರೀಯರ ಸಾಕ್ಷರತಾ ಮಟ್ಟವನ್ನು ಗಣನೀಯವಾಗಿ ಹೆಚ್ಚಿಸುವುದು, ಸ್ತ್ರೀಯ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವುದು, ಲಿಂಗತಾರತಮ್ಯ ನಿವಾರಣೆ, ಮಾನವ ಹಕ್ಕುಗಳ ಭರವಸೆ ನೀಡುವುದು, ಈ ಕಾರ್ಯಗಳನ್ನು ಸಮರ್ಥ ರೀತಿಯಲ್ಲಿ ಜಾರಿಗೊಳಿಸಲು ಪ್ರಯತ್ನಿಸಿದೆ. (ಭಾರತೀಯ ಸಮಾಜಶಾಸ್ತ್ರ ರಾಮಚಂದ್ರ ಜೋಷಿ).

ಈ ನಿಟ್ಟಿನಲ್ಲಿ ನಗರದ ಬುಡಕಟ್ಟು ಮಹಿಳೆಯರು ತಮ್ಮ ಸ್ಥಿತಿಗತಿಯಲ್ಲಿ ಸುಧಾರಣೆಯನ್ನು ಕಾಣುತ್ತಿರುವ ಬದಲಾವಣೆಯ ಪ್ರಭಾವವನ್ನು ಗ್ರಾಮೀಣ ಪ್ರದೇಶದ ಬುಡಕಟ್ಟು ಸ್ತ್ರೀಗೆ ಹೋಲಿಸಿದಾಗ, ಹಿಂದುಳಿದ ಸುಧಾರಣೆಯ ಮಂದಗತಿಯ ಮೆಟ್ಟಿಲುಗಳನ್ನು ಏರುತ್ತಾ ಆಧುನಿಕತೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಲ್ಲಿ ಪ್ರಯತ್ನಿಸುತ್ತಿರುವುದನ್ನು ಕಾಣಬಹುದಾಗಿದೆ. ಇತಿಹಾಸದುದ್ದಕ್ಕೂ ನಾವು ಬುಡಕಟ್ಟು ಮಹಿಳೆ ಎದುರಿಸುತ್ತಾ ಬಂದ ಕೆಲವು ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಹುಡುಕುವ ಪ್ರಯತ್ನಗಳನ್ನು ಮಾಡುತ್ತಾ ಬಂದಿದ್ದು, ಪರಿಣಾಮವಾಗಿ ಹಿಂದಿನ ಅದೆಷ್ಟೋ ಸಮಸ್ಯೆಗಳು ಈಗ ಇಲ್ಲವಾಗಿವೆ. ಅಮಾನುಷವಾದ ಸತಿ ಆಚರಣೆ, ಬಾಲ್ಯವಿವಾಹ, ವಿಧವಾ ಪುನರ್ವಿವಾಹ ನಿಷೇಧ, ವಿಧವೆಯರ ಶೋಷಣೆ ಮುಂತಾದವು ಈಗ ಬಹುತೇಕ ಕಣ್ಮರೆಯಾದಂತಾಗಿದ್ದರೂ, ಇಂದಿನ ಆರ್ಥಿಕ ವೈಜ್ಞಾನಿಕ ಬೆಳವಣಿಗೆ, ಶಿಕ್ಷಣದ ವ್ಯಾಪಕತೆ, ರಾಜಕೀಯ ಸಾಮಾಜಿಕ ಆಂದೋಲನಗಳು, ನಗರೀಕರಣ, ಮಾತಾಂತರೀಕರಣ, ಪಾಶ್ಚಾತ್ಯೀಕರಣ, ಆಧುನೀಕರಣ ಮುಂತಾದವುಗಳ ಬೆಳವಣಿಗೆಯಿಂದಾಗಿ ಸ್ತ್ರೀಯರ ಬಗ್ಗೆ ಒಂದು ಬಗೆಯ ಉದಾರ ನೀತಿ ತಾಳಿದ್ದರೂ, ಅವರು ಸಮಸ್ಯೆಗಳಿಂದ ಮುಕ್ತರಾಗಿಲ್ಲ. ಅದರಲ್ಲಿ ದೇವದಾಸಿ ಪದ್ಧತಿ, ಬಸವಿ ಪದ್ಧತಿಗಳು, ಬೆತ್ತಲೆ ಸೇವೆ ಪ್ರಾಚೀನ ಕಾಲದಿಂದಲೂ ಇಲ್ಲಿಯ ವರೆಗೆ ಸ್ತ್ರೀಯರನ್ನು ಅದರಲ್ಲಿಯೂ ಬುಡಕಟ್ಟು ಸ್ತ್ರೀಯರನ್ನು ವ್ಯಾಪಕವಾದ ರೀತಿಯಲ್ಲಿ ಕಾಡುವ ಅನಿಷ್ಠ ಪದ್ಧತಿಗಳಾಗಿವೆ.

**ಅಡಿ ಟಿಪ್ಪಣಿಗಳು**

೦೧. ಎಚ್.ಎಸ್. ಶ್ರೀಮತಿ, ಮಹಿಳಾ ಅಧ್ಯಯನ, ಜನವರಿ ೧೯೯೯ ಹೆಣ್ಣು ಹೆಂಗಸು, ಪು.೧೨೩,೧೨೪, ೧೯೯೯

೦೨. ಸಂಯುಕ್ತ ಕರ್ನಾಟಕ, ಪು.೩, ೨೨.೫.೦೬

೦೩. ಅದೇ, ಪು.೩

೦೪. ಎಚ್.ಎಸ್. ಶ್ರೀಮತಿ, ಮಹಿಳಾ ಅಧ್ಯಯನ, ಜನವರಿ ೧೯೯೯ ಹೆಣ್ಣು ಹೆಂಗಸು, ಪು.೨೦೮, ೧೯೯೯

೦೫. ಅದೇ, ಪು.೨೧

೦೬. ಸ್ತ್ರೀ ಮುಕ್ತಿ, ತ್ರೈಮಾಸಿಕ ಪತ್ರಿಕೆ, ಪು.೫೯,೧.೪.೨೦೦೩,

೦೭. ಡಾ.ಮಲ್ಲಿಕಾಘಂಟಿ, ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ, ಪು.೩೧೫, ೧೯೯೪

೦೮. ಪ್ರಜಾವಾಣಿ ಪುರವಣಿ, ಭೂಮಿಕಾ ಪು.೩, ೨೦೦೩

೦೯. ಏಂಗಲ್ಸ್, ಉಲ್ಲೇಖ: ಎಚ್.ಎಸ್. ಶ್ರೀಮತಿ, ಮಹಿಳಾ ಅಧ್ಯಯನ, ಜನವರಿ ೧೯೯೯ ಹೆಣ್ಣು ಹೆಂಗಸು, ಪು.೨೫, ೧೯೯೯

೧೦. ಡಾ.ಶ್ರೀಮತಿ.ಎಚ್.ಎಸ್. ಮಹಿಳಾ ಅಧ್ಯಯನ, ದಕ್ಷಿಣಾಯಣ, ಜುಲೈ ೨೦೦೦, ಅಂದು ತಾರಾಬಾಯಿ ಸಿಂಧೆ, ಪು.೧೨೧, ೨೦೦೦

೧೧. ಅದೇ, ಪು.೧೨೧

೧೨. ಸಿಮಾನ್ ದಬುವಾ, ದ ಸೆಕೆಂಡ್ ಸೆಕ್ಸ್, ಉಲ್ಲೇಖ: ಎಚ್.ಎಸ್. ಶ್ರೀಮತಿ, ಮಹಿಳಾ ಅಧ್ಯಯನ, ಜನವರಿ ೧೯೯೯ ಹೆಣ್ಣು ಹೆಂಗಸು, ಪು.೧೨೧, ೧೯೯೯

೧೩. ವಿಜಯ ಕರ್ನಾಟಕದ ದಿನ ಪತ್ರಿಕೆ, ಪು.೪, ೧೯.೨.೨೦೦೭

೧೪. ಅಂಬೇಡ್ಕರರ ಬರಹ ಮತ್ತು ಭಾಷಣಗಳು, ಸಂ ೧, ಪು.೨೪, ೧೯೯೦

೧೫. ನಾರ್ಲಾ ವೆಂಕಟೇಶ್ವರ್‌ರಾವ್, ಅನು: ಡಾ. ಎಚ್ ಎಸ್ ಸುಜಾತ, ಸೀತೆಯ ಭವಿಷ್ಯ, ಪು.೧೨೪, ೧೯೮೬

೧೬. ಡಾ.ಚಿದಾನಂದಮೂರ್ತಿ, ಕನ್ನಡ ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ, ಪು.೪೫೬, ೧೯೭೯

೧೭. ಡಾ.ಬಿ.ದೇಶಮಾನೆ, ಅಂಬೇಡ್ಕರರ ದೃಷ್ಟಿಯಲ್ಲಿ ಕಾರ್ಮಿಕರು ಮತ್ತು ಮಹಿಳೆಯರು, ಪು.೫೦, ೨೦೦೩

೧೮. ಚ.ನ.ಶಂಕರ್‌ರಾವ್, ಸಮಾಜಶಾಸ್ತ್ರದ ಪ್ರಾಥಮಿಕ ತತ್ವಗಳು ಮತ್ತು ಸಾಮಾಜಿಕ ಚಿಂತನೆ, ಪು.೪೮೯, ೧೯೯೫

೧೯. ಅದೇ, ಪು.೪೯೦

೨೦. ಅದೇ, ಪು.೪೯೫

೨೧. ಗಾಂಧಿ ಗ್ರಂಥಮಾಲೆ, ಸಮಾಜ ಧರ್ಮ, ಪು.೨೩೩

೨೨. ಸ್ತ್ರೀ ಮುಕ್ತಿ, ತ್ರೈಮಾಸಿಕ ಪತ್ರಿಕೆ, ಪು.೫, ಜೂನ್ ೨೦೦೪,

೨೩. ರಾಹುಲ ಸಾಂಕೃತ್ಯಾಯನ, ಓಲ್ಗಾಗಂಗಾ, ಪು.೯೮

೨೪. ಎಂ.ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪು.೭೭, ೧೯೮೨

೨೫. ಡಾ.ಚೆನ್ನಣ್ಣ ವಾಲೀಕರ್, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ಪು.೫೧೭, ೨೦೦೧

೨೬. ಶ್ರೀಧರರಾವ್ ಪಿಸ್ಸೆ, ಕನ್ನಡ ದಾಸ ಸಾಹಿತ್ಯ ಮತ್ತು ಸಾಂಸ್ಕೃತಿಕ ಪಲ್ಲಟ, ಅಪ್ರಕಟಿತ ಪಿಎಚ್, ಡಿ ಮಹಾ ಪ್ರಬಂಧ, ಪು.೨೫೬, ೨೦೦೪

೨೭. ಲೀಲಾ ಸಂಪಿಗೆ, ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆಯ ಪರಂಪರೆ ಮತ್ತು ಸಮಸ್ಯೆಗಳು,ಅಪ್ರಕಟಿತ ಪಿಎಚ್, ಡಿ ಮಹಾ ಪ್ರಬಂಧ, ಪು.೬೮, ೨೦೦೪

೨೮. ನಾಗರಾಜ್ ಡಿ.ಆರ್. ಸ್ತ್ರೀವಾದಿ ಸಾಹಿತ್ಯ ಮೀಮಾಂಸೆಯ ಸ್ವರೂಪ ಸಮಸ್ಯೆಗಳು ಸಾಧ್ಯತೆಗಳು ಪು.೧೨೨, ೧೯೯೩,

೨೯. ಮೊಗಳ್ಳಿ ಗಣೇಶ್, ಮಹಿಳಾ ಅಧ್ಯಯನ ಸಂಪುಟ ೬ ಸಂಯುಕ್ತ ಸಂಚಿಕೆ,ದಲಿತ ಮಹಿಳಾ ಕಲ್ಪನೆ, ಪು.೧೯೩, ೧೯೪, ೨೦೦೪

೩೦. ಗಾಯಿತ್ರಿ ನಾವಡ, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಪುಟ.೧೩, ೧೯೯೭

೩೧. ಡಾ.ಆರ್.ಇಂದಿರಾ, ಭಾರತದಲ್ಲಿ ಮಹಿಳೆಯರು ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನ, ಮಹಿಳಾ ಅಧ್ಯಯನ ಸಂಚಿಕೆ ೨, ಪು ೨೦, ೧೯೯೯

೩೨. ಕಮಲಾದೇವಿ ಚಟ್ಟೋಪಾಧ್ಯಾಯ, ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ, ಪು.೧೯

೩೩. ಬಿ.ಬೊಮ್ಮಯ, ಬುಡಕಟ್ಟು ಮಹಿಳೆಯರ ಆರ್ಥಿಕ ಸುಧಾರಣೆಯಲ್ಲಿ ಸ್ವ ಶಕ್ತಿಯೋಜನೆಯ ಪಾತ್ರ, ಪು.೧೩, ಅಪ್ರಕಟಿತ ಎಂ, ಫಿಲ್ ಪ್ರಬಂಧ, ೨೦೦೩

೩೪. ಜೆರಾಲ್ಡಿನ್ ಪೋಬ್ಸ್, ಮೂಲ: ಆಧುನಿಕ ಭಾರತದಲ್ಲಿ ಮಹಿಳೆ, ಅನು: ಎಚ್.ಎಸ್.ಶ್ರೀಮತಿ ಪು.೩೪೨, ೨೦೦೪

೩೫. ಅದೇ, ಪು.೩೪೨

೩೬. ಅದೇ, ಪು.೩೪೨

ಅಧ್ಯಾಯ ೫

## ಅಧ್ಯಯನ ಕ್ಷೇತ್ರದ ಪರಿಚಯ ಮತ್ತು ದೇವದಾಸಿಯರ ಚಿತ್ರಣ

೫ :೧ ಅಧ್ಯಯನ ಕ್ಷೇತ್ರದ ಪರಿಚಯ

೫.:೨ ಅಧ್ಯಯನ ಕ್ಷೇತ್ರದ ಐತಿಹಾಸಿಕತೆ

೫.:೩ ಬಸವಿ ಬಿಡುವ ಸಂಪ್ರದಾಯದ ಹಿನ್ನಲೆ ಮತ್ತು ವಿಧಾನಗಳು

೫ :೪ ಗಟ್ಟಿಮುದ್ರೆ ಸಂಸ್ಕಾರದ ವಿಧಾನ

೫ :೫ ಹೂ ಮುದ್ರೆ

೫ :೬ ಮುತ್ತು ಕಟ್ಟುವಿಕೆ.

೫ :೭ ಕನ್ಯತ್ವ ಒಡೆಯುವ ಕಾರ್ಯ

೫.:೮ ಸಾಮಾಜಿಕ ಜೀವನ

೫ :೯ ಆರ್ಥಿಕ ಜೀವನ

೫ :೧೦ ಕಲಾಜೀವನ

೫.:೧೧ ಶೈಕ್ಷಣಿಕ ಜೀವನ

೫ :೧೨ ದೇವದಾಸಿಯರ ಸಾಂಸ್ಕೃತಿಕ ಜೀವನ

೫ :೧೩ ಆಯ್ದ ದೇವದಾಸಿಯರ ಜೀವನ ಚಿತ್ರಣ

## ಅಧ್ಯಯನ ಕ್ಷೇತ್ರದ ಪರಿಚಯ ಮತ್ತು ದೇವದಾಸಿಯರ ಚಿತ್ರಣ

**ಪೀಠಿಕೆ**

ಸಮಾಜ ವಿಜ್ಞಾನಗಳ ಸಂಶೋಧನೆಗಳು ಸಾಮಾನ್ಯವಾಗಿ ಕ್ಷೇತ್ರ ನಿರ್ದಿಷ್ಟವಾಗಿರುತ್ತವೆ. ಅಧ್ಯಯನ ವಸ್ತು ಯಾವುದೇ ಇರಲಿ, ಅದನ್ನು ಸರಿಯಾಗಿ ಅರ್ಥೈಸಿಕೊಳ್ಳಲು ಸಂಶೋಧಕರಿಗೆ ಆಯ್ದುಕೊಂಡ ಕ್ಷೇತ್ರದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಭೌಗೋಳಿಕ, ಜನಸಂಖ್ಯೆ ಅಂಶಗಳ ಕುರಿತು ಮಾಹಿತಿ ಇರುವುದು ಅತ್ಯವಶ್ಯ. ಕ್ಷೇತ್ರಕ್ಕೆ ತಕ್ಕಂತೆ ಅಧ್ಯಯನ ವಿಧಾನಗಳನ್ನು ಆರಿಸಿಕೊಳ್ಳಬೇಕಾಗುತ್ತದೆ. ಅಷ್ಟೇ ಅಲ್ಲದೇ, ಸಾಮ್ಯತೆಯನ್ನು ವಿಂಗಡಿಸಿ, ವಿಶ್ಲೇಷಿಸುವಲ್ಲಿ ಆಯ್ದ ಕ್ಷೇತ್ರದ ಜ್ಞಾನ ಪ್ರಧಾನ ಪಾತ್ರವನ್ನು ವಹಿಸುತ್ತದೆ. ಪ್ರಸ್ತುತ ಅಧ್ಯಯನವನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲ ಭಾಗವು ಅಧ್ಯಯನ ಕ್ಷೇತ್ರವಾದ ಕೂಡ್ಲಿಗಿ ತಾಲ್ಲೂಕಿನ ಭೌಗೋಳಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ನೈಸರ್ಗಿಕ ಸಂಪನ್ಮೂಲಗಳು, ಮೂಲಭೂತ ಸೌಲಭ್ಯಗಳು ಮತ್ತು ಜನಸಂಖ್ಯೆಗೆ ಸಂಬಂಧಿಸಿದ ಸಂಪೂರ್ಣ ಮಾಹಿತಿಯನ್ನು ಹೊಂದಿರುತ್ತದೆ. ಎರಡನೆಯ ಭಾಗವು ಚಲನಶೀಲತೆ ಅಥವಾ ಬದಲಾಗುವಿಕೆ ಈ ಜೀವಂತ ಜಗತ್ತಿನ ಮುಖ್ಯ ಲಕ್ಷಣವಾಗಿದೆ. ಈ ಜಗತ್ತು ಈ ಕ್ಷಣ ಇರುವ ಹಾಗೆ ಮತ್ತೆಂದಿಗೂ ಇರುವುದಿಲ್ಲ. ಅದು ಪ್ರತಿ ಕ್ಷಣವೂ ಹೊಸತಾಗುತ್ತಲೇ ಇರುತ್ತದೆ. ಹೊಸದು ಹಳೆಯದಾಗುತ್ತಾ ಹಳೆಯದು ಹೊಸದಾಗುತ್ತಿರುತ್ತದೆ. ವಿಚಾರಧಾರೆಗಳಲ್ಲಿ ಬದಲಾಗುವಿಕೆ, ಆಳ್ವಿಕೆಯಲ್ಲಿ ಬದಲಾಗುವಿಕೆ ಚರಿತ್ರೆಯ ಭಾಗವಾಗಿರುತ್ತದೆ. ಅದು ಜೀವನ ಕ್ರಮದ ಪಲ್ಲಟಗಳನ್ನು ಒಳಗೊಂಡಿರುತ್ತದೆ. ಕ್ರಿಯಾಶೀಲ ಜೀವನವು ಪ್ರತಿ ಕ್ಷಣವೂ ಮರು ಹುಟ್ಟು ಪಡೆಯುವ ಪ್ರಕ್ರಿಯೆಯಾಗಿರುತ್ತದೆ.

ಹಾಗೆಯೇ ಸಾಮಾಜಿಕ ಸ್ಥಿತಿಗತಿಗಳಲ್ಲಿ ಹಿಂದಿಗಿಂತ ಇಂದು ಹೆಚ್ಚು ಬದಲಾಗಿದೆ. ಅದರಲ್ಲೂ ಕೆಲವು ದುರಾಚಾರಗಳು ಮಾತ್ರ ಇಂದಿಗೂ ಮುಂದುವರೆಯುತ್ತಿವೆ. ಸಮಾಜವನ್ನು ಪೀಡಿಸುತ್ತಿರುವ ಅನೇಕ ದುಷ್ಟ ದುರಾಚಾರಗಳಲ್ಲಿ ಪ್ರಮುಖವಾಗಿ ತೊಂದರೆಗೊಳಗಾಗುವವರು ಮಹಿಳೆಯರು ಎಂಬುದು ಗಮನಾರ್ಹ. ಪ್ರಾಚೀನ ಕಾಲದಿಂದಲೂ ಸಾಗಿ ಬರುತ್ತಿರುವ ಕಂದಾಚಾರದ ವ್ಯವಸ್ಥೆಯಲ್ಲಿ 'ದೇವದಾಸಿ' ಪದ್ಧತಿಯು ಒಂದು. ಅದರೊಂದಿಗೆ ಅಂಟಿಕೊಂಡು ಬಂದ 'ವೇಶ್ಯಾವೃತ್ತಿ' ಕೂಡ ಮತ್ತೊಂದು ದುಷ್ಟ ಅನಾಚಾರ. ಪುರುಷರಿಗೆ

ಸಮಾನವಾಗಿ ಸ್ತ್ರೀಯರು ವಿವಿಧ ಕ್ಷೇತ್ರಗಳಲ್ಲಿ ಮುನ್ನಡೆಯುತ್ತಿದ್ದಾರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ಆದರೆ ಆಚಾರದಲ್ಲಿ ಅನಾಚಾರದ ಸಂಗತಿಗಳು ಇಂದು ಸಮಾಜವನ್ನು ಅಣಕಿಸುತ್ತಿವೆ. ನಿಜಕ್ಕೂ ಇದೊಂದು ವಿಪರ್ಯಾಸವೇ ಸರಿ.

ವಯಸ್ಸಿಗೆ ಬಂದ ಮಗಳಿಗೆ ತಕ್ಕ ವರನನ್ನು ನೋಡಿ ಮದುವೆ ಮಾಡುವುದು ಹೆತ್ತವರ ಆಸೆ. ಅದು ಸಹಜವೂ ಕೂಡಾ. ದುರಂತವೆಂದರೆ, ತಮ್ಮ ಮಗಳಿಗೆ ಇನ್ನು ಹದಿನಾರು ತುಂಬಿರುವುದಿಲ್ಲ ಆಗಲೇ ಅಮಾಯಕ ಹೆಣ್ಣು ಮಕ್ಕಳನ್ನು ದೇವರ ಸೇವೆಗೆ ಯಾವಾಗ ಅರ್ಪಿಸಬೇಕೆಂದು ಆಲೋಚಿಸುವ ತಂದೆ ತಾಯಂದಿರು ಉಂಟು. ದೇವದಾಸಿ ಹೆಸರಿನಲ್ಲಿ ಇಂದಿಗೂ ಕೆಲವು ಸಮುದಾಯಗಳಲ್ಲಿನ ಈ ದುರಾಚಾರ ಆಚಾರವಾಗಿ ಮುಂದುವರೆಯುತ್ತಿರುವುದು ಮಹಿಳಾ ಕುಲಕ್ಕೆ ಬಹುದೊಡ್ಡ ಶಾಪವಾಗಿದೆ. ಇಂದು ಸಮಸ್ಯೆಯ ವಿಭಿನ್ನ ಸ್ವರೂಪ ಪಡೆದಿದೆ.

ಕೂಡ್ಲಿಗಿ ಪಟ್ಟಣದ ಬುಡಕಟ್ಟು ದೇವದಾಸಿಯರು ಐತಿಹಾಸಿಕ ಹಿನ್ನೆಲೆಯಿಂದ ಪ್ರಭಾವಿತರಾಗಿದ್ದು ಕೂಡ್ಲಿಗಿಯು ವಿಜನಯಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ಸೈನಿಕರ ತಂಗುದಾಣವಾಗಿದ್ದ ಕಾರಣ, ಹೆಚ್ಚು ಸಂಖ್ಯೆಯ ದೇವದಾಸಿಯರ ಸೃಷ್ಟಿಗೆ ಪ್ರೇರಣೆ ನೀಡಿದ್ದು, ಮಧ್ವ ಸಂಪ್ರದಾಯದಿಂದಾಗಿ ಆಂಜನೇಯ ದೇವರಿಗೆ ಬಸವಿ ಬಿಡುವುದು ಸಾಮಾನ್ಯ ಸಂಪ್ರದಾಯವಾಗಿ ರೂಢಿಗೆ ಬಂದಿದೆ. ಇದು ಧಾರ್ಮಿಕ ಹಿನ್ನೆಲೆಯನ್ನು ಹೊಂದಿದ್ದ ಕಾರಣ ದೇವದಾಸಿಯರು ಅಂದು ಸಾಮಾಜಿಕವಾಗಿ ಉನ್ನತ ಸ್ಥಾನಗಳನ್ನು ಹೊಂದಿದ್ದರು. ಆದರೆ ಇಂದು ನಿಕೃಷ್ಟವಾದ ಸ್ಥಾನ ಪಡೆದು, ಕೆಲ ದೇವದಾಸಿಯರು ಕಾರಣಾಂತರಗಳಿಂದಾಗಿ, ರಂಗಕಲಾವಿಧೆಯರಾಗಿ ರಾಜ್ಯ ಮಟ್ಟದಲ್ಲಿ ಹೆಸರು ಮಾಡಿದ್ದಾರೆ. ಹಾಗೆಯೆ ಊರಿನ ಧಾರ್ಮಿಕ ಸಮಾರಂಭಗಳಲ್ಲಿ ವಿಶೇಷವಾಗಿ ಭಾಗವಹಿಸುವ ಇವರು ರಾಜಕೀಯ ಕ್ಷೇತ್ರಕ್ಕೂ ಕಾಲಿರಿಸಿ ಪಟ್ಟಣ ಪಂಚಾಯಿತಿಯ ಸದಸ್ಯೆ ಹಾಗೂ ಅಧ್ಯಕ್ಷರಾಗಿ ಸಮರ್ಥ ರೀತಿಯಲ್ಲಿ ಕಾರ್ಯ ನಿರ್ವಹಿಸಿದ ಉದಾಹರಣೆಗಳಿವೆ. ಇವರು ಇತರರಿಗಿಂತ ಭಿನ್ನವಾದ ಪರಿಸರ, ಸಾಂಸ್ಕೃತಿಕ ಜೀವನ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮಟ್ಟವನ್ನು ಹೊಂದಿದ್ದು ಇವರ ಬಾಹ್ಯ ಜೀವನವು ನೆಮ್ಮದಿಯಿಂದ ಕೂಡಿದೆ ಎಂದು ಕಂಡು ಬಂದರೂ ಆ ಸಮುದಾಯದ ಆಳ ಹೊಕ್ಕು ವಿಶ್ಲೇಷಿಸಿದಾಗ ತಿಳಿಯುವ ಸತ್ಯಾಂಶವೇ ಬೇರೆ. ಒಳಗೊಳಗೆ ಕೀಳರಿಮೆಯಿಂದ ಕೊರಗಿ, ಸೊರಗುತ್ತಾ ಕಾಣದ ಕೈಗಳ ಹಿಡಿತಕ್ಕೆ ಸಿಕ್ಕು, ಪಾಪ ಜೀವನವನ್ನು ನಡೆಸುವ ಕುರಿತ ಮಾಹಿತಿಯನ್ನು ಒಳಗೊಂಡಿದೆ.

**೫.೧ ಅಧ್ಯಯನ ಕ್ಷೇತ್ರದ ಪರಿಚಯ**

**ಭೌಗೋಳಿಕ ಚಿತ್ರಣ:** ಹೈದ್ರಾಬಾದ್ ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳಲ್ಲಿ ಒಂದಾಗಿರುವ ಕೂಡ್ಲಿಗಿ ಹಿಂದುಳಿದ ಪ್ರದೇಶವಾಗಿದ್ದು. ತಾಲ್ಲೂಕು ಆಡಳಿತ ಕೇಂದ್ರವಾಗಿದೆ, ತನ್ನದೇ ಆದ ಐತಿಹಾಸಿಕ ಚರಿತ್ರೆಯನ್ನು ಹೊಂದಿದೆ, ಕೂಡ್ಲಿಗಿಯು ಬಳ್ಳಾರಿಯ ನೈಋತ್ಯಕ್ಕಿದೆ ಈ ತಾಲೂಕು ಪಶ್ಚಿಮದಲ್ಲಿ ಹೂವಿನಹಡಗಲಿ, ಮತ್ತು ಹರಪನಹಳ್ಳಿ ತಾಲೂಕುಗಳನ್ನು, ಉತ್ತರದಲ್ಲಿ ಹಗರಿಬೊಮ್ಮನಹಳ್ಳಿ, ಈಶಾನ್ಯದಲ್ಲಿ ಹೊಸಪೇಟೆ, ಪೂರ್ವದಲ್ಲಿ ಸಂಡೂರು ತಾಲ್ಲೂಕುಗಳೂ ಆಗ್ನೇಯ, ದಕ್ಷಿಣ ನೈರುತ್ಯದಲ್ಲಿ ಚಿತ್ರದುರ್ಗ ಜಿಲ್ಲೆಯಿಂದ ಸುತ್ತುವರೆದಿವೆ. ತಾಲ್ಲೂಕಿನ ದಕ್ಷಿಣಕ್ಕೆ ದಾವಣಗೆರೆ ಜಿಲ್ಲೆ, ಹರಿಹರ ಇವೆ.

ಕೊಟ್ಟೂರು, ಹೊಸಹಳ್ಳಿ, ಕೂಡ್ಲಿಗಿ ಮತ್ತು ಗುಡೇಕೋಟೆ ಎಂಬ ಹೋಬಳಿಗಳು, ೯೭ ಗ್ರಾಮಗಳನ್ನು ಹೊಂದಿದ್ದು ಇದರ ವಿಸ್ತೀರ್ಣ ೧,೮೨೫ ಚ.ಕಿ.ಮಿ.ಗಳಷ್ಟಿದೆ.

ಈ ತಾಲ್ಲೂಕಿನಲ್ಲಿ ಕೂಡ್ಲಿಗಿ ಮತ್ತು ಗುಡೇಕೋಟೆ ಬೆಟ್ಟಗಳ ಸಾಲುಗಳಿವೆ. ಗುಡೇಕೋಟೆ ಶ್ರೇಣಿ ಸಂಡೂರು ತಾಲ್ಲೂಕಿನ ಬಳಿ ಪ್ರಾರಂಭವಾಗಿ ಆಗ್ನೇಯ ದಿಕ್ಕಿಗೆ ಹಬ್ಬಿ ಗುಡೇಕೋಟೆಯ ಉತ್ತರ ಭಾಗದಲ್ಲಿ ಮುಂದುವರೆದು ಚಿನ್ನಹಗರಿ ಕಣಿವೆಯನ್ನು ದಾಟುತ್ತದೆ. ಇಲ್ಲಿಯ ಗುಡೇಕೋಟೆ, ಜರ್ಮಲಿ, ಜರಿಮಲೆ, ಬೀರಲಗುಡ್ಡ ಇತಿಹಾಸ ಪ್ರಸಿದ್ಧ ಸ್ಥಳಗಳಾಗಿವೆ. ಮರಳು ಮಿಶ್ರಿತ ಕೆಂಪು ಮಣ್ಣಿನ ಭೂಮಿ ಇದಾಗಿದೆ. ಈ ಭಾಗದ ತಾಲ್ಲೂಕಿನ ಸರಾಸರಿ ವಾರ್ಷಿಕ ಮಳೆ ೭೩೦ ಮಿ.ಮೀ. ತಾಲ್ಲೂಕಿನ ಒಟ್ಟು ೪,೫೦,೨೨೪ ಎಕರೆ ಭೂಮಿಯಲ್ಲಿ ೯೧,೬೦೪ ಎಕರೆಯಷ್ಟು ಕಾಡಿನಿಂದ ಕೂಡಿದೆ. ಇಲ್ಲಿನ ಜನರು ಕೃಷಿಯೊಂದಿಗೆ ಪಶುಪಾಲನೆಯನ್ನು ಉಪಕಸುಬನ್ನಾಗಿ ಮಾಡುತ್ತಾರೆ.

ತಾಲ್ಲೂಕಿನ ನೈರುತ್ಯಕ್ಕೆ ಉಜ್ಜನಿಯಲ್ಲಿ ಪ್ರಸಿದ್ಧ ವೀರಶೈವ ಕೇಂದ್ರವಿದೆ. ಈ ಮಠವನ್ನು ಉಜ್ಜನಿ ಸದ್ಧರ್ಮಪೀಠ ಎಂದು ಕರೆಯುವರು. ಕೂಡ್ಲಿಗಿಗೆ ಸುಮಾರು ೩ ಕಿ.ಮೀ. ದೂರದಲ್ಲಿ ಅಮರದೇವರ ಗುಡ್ಡದಲ್ಲಿ ಸು. ೧.೭೧ ಎಕರೆ ಗಳಷ್ಟು ವಿಸ್ತಾರವಾಗಿ ಹಬ್ಬಿರುವ ದೊಡ್ಡ ಆಲದ ಮರವಿದೆ. ಕೂಡ್ಲಿಗಿ ನೈರುತ್ಯದಲ್ಲಿ ಪ್ರಸಿದ್ಧ ಸಿದ್ದೇಶ್ವರ ಗುಡ್ಡವಿದ್ದು, ಅಲ್ಲಿ ಶಿವಲಿಂಗ ದೇವಸ್ಥಾನವಿದೆ. ಇಲ್ಲಿ ವರ್ಷಕ್ಕೊಮ್ಮೆ ಮಹಾಶಿವರಾತ್ರಿಯ ದಿನ ವಿಶೇಷ ಪೂಜೆ ಸಲ್ಲಿಸುತ್ತಾರೆ. ಈ ಗುಡ್ಡಕ್ಕೆ ಐತಿಹಾಸಿಕ ಹಿನ್ನೆಲೆ ಇದೆ. ಹಾಗೆ ಮುಂದೆ ಬಂದರೆ, ಒಂದು ದೊಡ್ಡ ಆಲದ ಮರವಿದೆ. ಅದರಲ್ಲಿ ಭೂಮಿಯಿಂದ ಹೊರಹೊಮ್ಮಿದ ಒಂದು ಹೆಣ್ಣು ದೇವತೆಯ ವಿಗ್ರಹವಿದೆ. ಅದಕ್ಕೆ 'ಸೊಲ್ಲಮ್ಮ ದೇವತೆ' ಎಂಬ ಹೆಸರು. ಆ ದೊಡ್ಡ ಆಲದ ಮರಕ್ಕೆ ಅಂಟಿಕೊಂಡ ನಾಲ್ಕೈದು ಆಲದ ಮರಗಳು ಬೆಳೆದಿವೆ. ಇದರ ಪುರೋಹಿತರು ಬೇಡ ಸಮುದಾಯದವರಾಗಿದ್ದು, ಈ ದೇವತೆಗೆ ವರ್ಷಕ್ಕೊಮ್ಮೆ ಬೇಟೆ ಕಡಿಯುವ ಮೂಲಕ ಹರಕೆ ಒಪ್ಪಿಸುವ ಪದ್ಧತಿಯಿದೆ. ಇದನ್ನು ಕೆಲವರು ಲಕ್ಷ್ಮಿ ಎಂದು ಸಹ ಕರೆಯುವರು. ಈ ದೇವತೆ ಸೊನ್ನದಿಂದ ಇಲ್ಲಿಗೆ ಬಂದಳೆಂಬ ಪ್ರತೀತ ಇದೆ. ಈ ಮರಕ್ಕೆ 'ಸೊಲ್ಲಮ್ಮನ ಮರ' ಎಂದು ಕರೆಯುವರು. ಪುರಾತನ ಕಾಲದವು ಎನ್ನಲಾದ ರಾಮಲಿಂಗೇಶ್ವರ ದೇವಾಲಯ, ಲಕ್ಷ್ಮಿನರಸಿಂಹ ದೇವಾಲಯ, ಕೊತ್ತಲ ಆಂಜನೇಯ ದೇವಾಲಯ, ಊರಮ್ಮನ ಗುಡಿ, ಕೇಶವ ದೇವಾಲಯ, ಹಾಗೂ ಕೆಲವು ಬಾವಿಗಳು ಈ ಊರಿನಲ್ಲಿ ಕಂಡುಬರುತ್ತವೆ. ಈ ಊರಿನ ಮತ್ತೊಂದು ಹೆಮ್ಮೆಯ ವಿಷಯವೆಂದರೆ 'ಗಾಂಧಿ ಚಿತಾಭಸ್ಮ'ವಿದೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ದೇಶದಲ್ಲಿಯೂ ಪ್ರಮುಖ ರಸ್ತೆಗಳಲ್ಲಿ ಒಂದಾದ ರಾಷ್ಟ್ರೀಯ ಹೆದ್ದಾರಿ ೧೩ ಹಾದು ಹೋಗುತ್ತದೆ. ಉತ್ತರದಲ್ಲಿ ೪೫ ಕಿ.ಮಿ. ದೂರದಲ್ಲಿ ತುಂಗಭದ್ರ ನದಿ ಹರಿಯುತ್ತಿದ್ದರೂ ಈ ತಾಲ್ಲೂಕಿಗೆ ಯಾವುದೇ ರೀತಿಯ ನೀರಿನ ಸೌಲಭ್ಯ ಪಡೆಯುತ್ತಿಲ್ಲ. ಇದು ರಾಜಧಾನಿ ಬೆಂಗಳೂರಿಗೆ ಸುಮಾರು ೨೭೦ ಕಿ.ಮೀ. ಹಾಗೂ ಬಳ್ಳಾರಿ ಜಿಲ್ಲಾ ಕೇಂದ್ರದಿಂದ ೮೦ ಕಿ.ಮೀ. ಅಂತರದಲ್ಲಿದೆ.

ಪಟ್ಟಣದಲ್ಲಿ ಬ್ಯಾಂಕ್, ಅಂಚೆ ಕಛೇರಿ, ದೂರವಾಣಿಕೇಂದ್ರ, ತಾಲ್ಲೂಕು ಕಚೇರಿ, ೨ ನ್ಯಾಯಾಲಯಗಳು, ಬಸ್ ಡಿಪೋ, ಮುಂತಾದ ಸೌಲಭ್ಯಗಳೊಡನೆ ಪ್ರಾಥಮಿಕ ಮಟ್ಟದಿಂದ ಪದವಿ ಮಟ್ಟದ ವರೆಗಿನ ಶಿಕ್ಷಣ ಸಂಸ್ಥೆಗಳಿವೆ. ಇತ್ತೀಚೆಗೆ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಹರಪನಹಳ್ಳಿ ತಾಲ್ಲೂಕು ದಾವಣಗೆರೆ ಜಿಲ್ಲೆಗೆ

ಸೇರಿಸಲಾಗಿದ್ದು. ಕೂಡ್ಲಿಗಿ ತಾಲ್ಲೂಕಿನ ೧೩ ಗ್ರಾಮಗಳನ್ನು ಆ ತಾಲ್ಲೂಕಿಗೆ ವರ್ಗಾಯಿಸಲಾಗಿದೆ.

**ಜನಸಂಖ್ಯೆ**

ಕೂಡ್ಲಿಗಿ ತಾಲ್ಲೂಕು ೪ ಹೋಬಳಿಗಳನ್ನು ಹೊಂದಿದೆ. ಅಲ್ಲದೇ ಈ ತಾಲೂಕು ಆಡಳಿತಾತ್ಮಕವಾಗಿ ಅನುಕೂಲವಾಗಿರುವುದರಿಂದ ಬ್ರಿಟಿಷರ ಕಾಲದಿಂದಲೂ ಇದು ತಾಲ್ಲೂಕು ಕೇಂದ್ರವಾಗಿದೆ ಈ ತಾಲ್ಲೂಕಿನ ನಾಲ್ಕು ಹೋಬಳಿಗಳ ಪೈಕಿ, ಕೊಟ್ಟೂರು ಹೋಬಳಿಯಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ರಚಿಸಲಾಗಿದೆ. ಈ ತಾಲ್ಲೂಕಿನಲ್ಲಿ ಕಾರ್ಮಿಕರು, ಕೂಲಿಕಾರರು ಹೆಚ್ಚಾಗಿ ಕಂಡು ಬರುತ್ತಾರೆ. ಆದ್ದರಿಂದ ಇಲ್ಲಿನ ಜನತೆ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಬಹಳ ಹಿಂದುಳಿದಿದ್ದಾರೆ. ಈ ತಾಲೂಕಿನ ಜನ ಸಂಖ್ಯೆಗೆ ಸಂಬಂಧಪಟ್ಟ ಮಾಹಿತಿಯನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೭**

**ಕೂಡ್ಲಿಗಿ ತಾಲ್ಲೂಕು ಹಾಗೂ ಕೂಡ್ಲಿಗಿ ಪಟ್ಟಣದ ಜನಸಂಖ್ಯಾ ವಿವರ**

| ಕ್ರ.ಸಂ | ವಿವರಗಳು | ಒಟ್ಟು | ಗಂಡು | ಹೆಣ್ಣು |
|---|---|---|---|---|
| ೧. | ಕೂಡ್ಲಿಗಿ ತಾಲೂಕಿನ ಜನಸಂಖ್ಯೆ | ೨,೭೨,೧೮೩ | ೧,೩೯,೨೦೨ | ೧,೩೨,೯೮೧ |
| ೨. | ಬೇಡಸಮುದಾಯ ಸಂಖ್ಯೆ | ೫೩,೯೬೩ | ೨೭,೦೯೭ | ೨೬,೮೭೨ |
| ೧. | ಕೂಡ್ಲಿಗಿ ಪಟ್ಟಣ ವ್ಯಾಪ್ತಿಯಲ್ಲಿನ ಜನಸಂಖ್ಯೆ | ೨೧,೮೪೯ | ೧೧,೦೬೮ | ೧೦,೭೮೧ |
| ೨. | ಪರಿಶಿಷ್ಟ ಜಾತಿಗಳ ಸಂಖ್ಯೆ | ೩,೫೨೫ | ೧,೮೧೩ | ೧,೭೧೨ |
| ೩. | ಪರಿಶಿಷ್ಟ ಪಂಗಡಗಳ ಸಂಖ್ಯೆ | ೭,೦೧೨ | ೩,೪೦೬ | ೩,೬೦೬ |
| ೪. | ಬೇಡ ಸಮುದಾಯದ ಜನಸಂಖ್ಯೆ | ೬,೭೯೦ | ೩,೧೮೦ | ೩,೬೧೦ |

(ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ಪ್ರಕಾರ ೨೦೦೧ರ ಅಂಕಿ ಅಂಶಗಳ ಪ್ರಕಾರ)

ಕೋಷ್ಟಕದಲ್ಲಿ ಸೂಚಿಸಿದಂತೆ ಕೂಡ್ಲಿಗಿ ತಾಲ್ಲೂಕಿನ ಒಟ್ಟು ಜನಸಂಖ್ಯೆ. ೨,೭೨,೧೮೩ ಇದರಲ್ಲಿ ಬೇಡ ಸಮುದಾಯದವರು ೫೩,೯೬೩ ಎಂದು ಗೊತ್ತಾಗುತ್ತದೆ. ನಂತರ ಕೂಡ್ಲಿಗಿ ಪಟ್ಟಣ ಪ್ರದೇಶದ ಜನಸಂಖ್ಯೆ ೨೧೮೪೯ ಇದೆ. ಇದರಲ್ಲಿ ಗಂಡು ೧೧೦೬೮, ಹೆಣ್ಣು ೧೦೭೮೧ ಇರುವುದು ಕಂಡು ಬರುತ್ತದೆ. ಪರಿಶಿಷ್ಟಜಾತಿ ೩೫೨೫ ರಷ್ಟು ಇದ್ದು, ಗಂಡಸರ ಸಂಖ್ಯೆ ೧೮೧೩ ಆದರೆ ಮಹಿಳೆಯರು ೧೭೧೨ ಆಗಿದೆ. ಬುಡಕಟ್ಟು ಸಮುದಾಯ ಅಥವಾ ಪಂ.ಪಂಗಡ ಒಟ್ಟು ಜನ ಸಂಖ್ಯೆ ೭೦೧೨ ಇದರಲ್ಲಿ ಗಂಡು ೩೪೦೬, ಹೆಣ್ಣು ೩೬೦೬, ಇದರಲ್ಲಿ ಬೇಡ ಸಮುದಾಯದ ಜನಸಂಖ್ಯೆ ಒಟ್ಟು ೬೭೯೦ ಇದರಲ್ಲಿ ಗಂಡು ೩೧೮೦, ಹೆಣ್ಣು ೩೬೧೦ ಇರುವುದು ಕಂಡು ಬರುತ್ತದೆ. ಹೆಣ್ಣು ೩೬೧೦ ಇರುವುದು ಕಂಡು ಬರುತ್ತದೆ. ಕೂಡ್ಲಿಗಿ ಪಟ್ಟಣದ ವಿಶೇಷವೆಂದರೆ ಬೇಡ ಸಮುದಾಯದ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಗಿರುವುದು ಇದಕ್ಕೆ ಪ್ರಮುಖ ಕಾರಣ ಎರಡು. ೧. ಬೇಡ ಸಮುದಾಯದ ಪ್ರತಿ ಕುಟುಂಬವು ಹೆಚ್ಚು ಹೆಣ್ಣು ಮಕ್ಕಳನ್ನು ಪಡೆಯಲು ಬಯಸುವುದು.

೨. ಕೂಡ್ಲಿಗಿ ಪಟ್ಟಣ ವ್ಯಾಪ್ತಿಯಲ್ಲಿ ಬರುವ ಬೇಡರ ಕೆಲ ಕುಟುಂಬಗಳ ಹೆಣ್ಣು ಮಕ್ಕಳು ಎಲ್ಲರಂತೆ ವಿವಾಹವಾಗಿ ಬೇರೆ ಗ್ರಾಮ, ಪಟ್ಟಣ, ನಗರಗಳಿಗೆ ಹೋಗದೆ ಸಾಂಪ್ರದಾಯಿಕವಾದ ದೇವದಾಸಿಯರಾಗಿ ಅಲ್ಲೇ ಉಳಿಯುವುದು ಕಾರಣವಾಗಿದೆ. (ತಾಲೂಕು ಅಂಕಿ ಅಂಶಗಳ ನೋಟ)

**ನೈಸರ್ಗಿಕ ಸಂಪನ್ಮೂಲಗಳು**

ಕೂಡ್ಲಿಗಿ ತಾಲೂಕು ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಗಮನಾರ್ಹವಾದ ಅಂಶಗಳನ್ನು ಹೊಂದಿದ್ದರೆ. ಕೂಡ್ಲಿಗಿ ಪಟ್ಟಣ ಯಾವುದೇ ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದದೇ ಇರುವುದು ಹಿಂದುಳಿಯಲು ಕಾರಣವಾಗಿದೆ.

**ಭೂ ಸಂಪತ್ತು:** ಇಲ್ಲಿ ಮರಳು ಮಿಶ್ರಿತ ಕೆಂಪು, ಕಪ್ಪು ಮಣ್ಣು ಹೆಚ್ಚಾಗಿ ಕಂಡು ಬರುತ್ತದೆ. ನೀರಾವರಿ ಪ್ರದೇಶದ ಪ್ರಮಾಣ ಬಹಳ ಕಡಿಮೆ. ಮಳೆಯನ್ನು ಅವಲಂಬಿಸಿರುವ ಭೂಮಿಯೇ ಹೆಚ್ಚು. ಈ ತಾಲೂಕಿನಲ್ಲಿ ಜೋಳ, ಶೇಂಗ, ಸೂರ್ಯಕಾಂತಿ, ಸಜ್ಜೆ, ರಾಗಿ, ನವಣೆ ಮುಂತಾದ ಬೆಳೆ ಬೆಳೆಯುತ್ತಾರೆ. ಜೊತೆಗೆ ಪಶುಪಾಲನೆ, ಬೇಟೆಗಾರಿಕೆ ಕಂಡುಬರುತ್ತವೆ. ಹುಣಸೆಹಣ್ಣಿನ ವ್ಯಾಪಾರ ಮತ್ತು ಮಾವಿನಹಣ್ಣಿನ ವ್ಯಾಪಾರವು ಋತುಮಾನದ ವ್ಯಾಪಾರಗಳಾಗಿವೆ. ಇಲ್ಲಿ ನಡೆಯುವ ಹುಣಸೇಹಣ್ಣಿನ ವ್ಯಾಪಾರವು ರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿನ ಜನರಿಗೆ ಹುಣಸೆ ಹಣ್ಣಿನ ವ್ಯಾಪಾರದಿಂದ ಸ್ವಲ್ಪ ಮಟ್ಟಿಗೆ ಆರ್ಥಿಕ ಅಭಿವೃದ್ಧಿ ಹೊಂದುವುದು ಸಾಧ್ಯವಾಗಿದೆ.

**ಜಲ ಸಂಪತ್ತು:** ಈ ಕ್ಷೇತ್ರದಲ್ಲಿ ನೀರಾವರಿ ಯೋಜನೆಗಳು ಕಡಿಮೆ ಇರುವುದನ್ನು ಕಾಣಬಹುದು. ಇಲ್ಲಿ ಯಾವುದೇ ಆಣೆಕಟ್ಟು ಇರುವುದಿಲ್ಲ. ಕೆರೆ ಮಾತ್ರ ಇದ್ದು, ಅಂತರ್ಜಲ ಸಂಪತ್ತು ಕೂಡ್ಲಿಗಿ ತಾಲ್ಲೂಕಿನಲ್ಲಿ ಲಭ್ಯವಿದೆ. ಆದರೆ ಇವುಗಳು ಸಹ ಇತ್ತೀಚಿನ ದಿನಗಳಲ್ಲಿ ದುರ್ಬಲವಾಗುತ್ತಿರುವುದನ್ನು ಕಾಣಬಹುದಾಗಿದೆ. ಈ ಅಂತರ್ಜಲ ನೀರನ್ನು ಜನರು ಕುಡಿಯಲು ಬಳಸುತ್ತಾರೆ. ಹಾಗೂ ವ್ಯವಸಾಯಕ್ಕೂ ಬಳಸಲ್ಪಡುತ್ತಿರುವುದು ಕಾಣಬಹುದಾಗಿದೆ.

ಕೂಡ್ಲಿಗಿ ಪಟ್ಟಣದ ಬಗೆಗೆ ಬಳ್ಳಾರಿ ಗೆಜೆಟಿಯರ್‌ನಲ್ಲಿ ಈ ಮುಂದಿನಂತೆ ಉಲ್ಲೇಖವಿದೆ.

"Kudligi is the head quarters of taluk Kudligi the some name and has a muncipality. It is situated at distance of about 80 K.M. from Bellary city. The old town has narrow and ill made lanes. There are now three well laid out extension on a rock south west of the town the festivals of village godess was formely a very popular event with the local people the place is having a high school and Banking fecilities."[೧]

ಬಳ್ಳಾರಿ ಜಿಲ್ಲೆಯಲ್ಲಿ ಅಭಿವೃದ್ಧಿ ಪಡಿಸಿದ ವಿವಿಧ ಮೂಲಗಳ ನೀರಾವರಿ ಪ್ರದೇಶದ ವಿವರಗಳನ್ನು ಕೋಷ್ಟಕದಲ್ಲಿ ವಿವರಿಸಲಾಗಿದೆ.

ಕೋಷ್ಟಕ ೮

ಬಳ್ಳಾರಿ ಜಿಲ್ಲೆಯ ವಿವಿಧ ಮೂಲಗಳ ಜಲ ಸಂಪತ್ತಿನ ವಿವರ

| ತಾಲ್ಲೂಕು | ಅಂತರ್ಜಲ | ಬಾಹ್ಯರೂಪದ ನೀರು | ಇತರೆ | ಒಟ್ಟು |
|---|---|---|---|---|
| ಬಳ್ಳಾರಿ | ೧೬,೫೪೫ | ೫೫,೬೨೦ | ೪೬ | ೭೨.೨೧೧ |
| ಹೂವಿನಹಡಗಲಿ | ೮,೧೭೨ | ೨,೭೪೨ | ೭,೦೭೪ | ೧೮,೪೭೪ |
| ಹೆಚ್.ಬಿ.ಹಳ್ಳಿ | ೫,೧೭೨ | ೬,೦೨೨ | ೧,೦೯೧ | ೧೨,೨೮೫ |
| ಹೊಸಪೇಟೆ | ೮,೫೦೫ | ೫೬೬ | ೨೨,೮೦೧ | |
| ಕೂಡ್ಲಿಗಿ | ೮,೬೩೮ | ೬,೩೭೨ | ೪೨ | ೧೫,೪೩೩ |
| ಸಂಡೂರು | ೭,೨೨೨ | ೨,೯೦೪ | | ೧೦,೧೨೭ |
| ಶಿರಗುಪ್ಪ | ೯,೦೬೭ | ೨೪,೯೯೯ | ೩,೫೪೮ | ೩೭,೬೧೪ |
| ಒಟ್ಟು | ೨೩,೭೭೬ | ೧,೨೨,೧೫೯ | ೧೬,೬೭೮ | ೨,೧೨,೭೯೦ |

ಬಳ್ಳಾರಿ ಜಿಲ್ಲೆಯಲ್ಲಿರುವುದು ಎರಡೇ ಕಾಲ 'ಒಂದು ಬೇಸಿಗೆ ಕಾಲ. ಮತ್ತೊಂದು ಅತೀ ಬೇಸಿಗೆ ಕಾಲ' ಎಂಬ ಮಾತು ರೂಢಿಯಲ್ಲಿರುವುದುಂಟು. ಅಂದರೆ ಇಲ್ಲಿ ಮಳೆಗಾಲ ಕಡಿಮೆ ಎಂಬ ಹಿನ್ನೆಲೆಯಲ್ಲಿ ಹೇಳುವುದಾಗಿದೆ. ಜಿಲ್ಲೆಯ ವಿವಿಧ ಮೂಲಗಳ ಜಲಸಂಪತ್ತಿನ ಅಂಕಿ ಅಂಶಗಳನ್ನು ಗಮನಿಸಿದಾಗ, ಅತ್ಯಂತ ಕಡಿಮೆ ಅಂತರ್ಜಲ ಪ್ರಮಾಣವನ್ನು ಹೊಂದಿರುವ ತಾಲೂಕುಗಳೆಂದರೆ, ಹಗರಿಬೊಮ್ಮನಹಳ್ಳಿ ೫,೧೭೨, ಸಂಡೂರು ೭,೨೨೨, ಹೂವಿನಹಡಗಲಿ ೮,೧೭೨, ಹೊಸಪೇಟೆ ೮,೫೦೫, ಕೂಡ್ಲಿಗಿ ೮,೬೩೮ ನ್ನು ಹೊಂದಿದ್ದು, ಅದರ ಪ್ರಮಾಣ ಹೆಚ್ಚಿರುವ ತಾಲೂಕುಗಳೆಂದರೆ, ಬಳ್ಳಾರಿ ೧೬,೫೪೫, ಶಿರಗುಪ್ಪ ೨೩೭೭೬ ಹೊಂದಿದೆ. ಹಾಗೆಯೇ ಬಾಹ್ಯ ರೂಪದ (ಕೆರೆ, ನದಿ, ಇತ್ಯಾದಿ) ನೀರಿನ ಲಭ್ಯತೆಯಲ್ಲಿಯೂ ಹೊಸಪೇಟೆ ೫೬೬, ಸಂಡೂರು ೨೬೦೪, ಹೂವಿನಹಡಗಲಿ ೨೭೮, ಹಗರಿಬೊಮ್ಮನಹಳ್ಳಿ ೬,೦೨೨, ಕೂಡ್ಲಿಗಿ ೬,೩೭೨ ನ್ನು ಹೊಂದಿದ್ದು. ಇತರೆ ಮೂಲದಲ್ಲಿ ೨೨,೮೦೧ ಹೂವಿನಹಡಗಲಿ ೭,೦೭೪, ಹೆಚ್.ಬಿ.ಹಳ್ಳಿ ೧,೦೯೧ ಶಿರಗುಪ್ಪ ೩,೫೪೮ ನ್ನು ಹೊಂದಿ ತುಂಗಭದ್ರ ಆಣೆಕಟ್ಟಿನ ಸಹಾಯದಿಂದ ಸ್ವಲ್ಪ ಮಟ್ಟಿಗೆ ಅನುಕೂಲಕರ ಸ್ಥಿತಿಯಲ್ಲಿವೆ. ಒಟ್ಟಾರೆ, ಸಂಡೂರು, ಕೂಡ್ಲಿಗಿ, ಹೆಚ್.ಬಿ.ಹಳ್ಳಿ, ನೀರಾವರಿ ಸೌಕರ್ಯಕ್ಕೆ ಅವಕಾಶವಿಲ್ಲದೇ ಆರ್ಥಿಕ ಅಭಿವೃದ್ಧಿಗೆ ಮಾರಕವಾದ ಸ್ಥಿತಿಯಲ್ಲಿವೆ.

**ರಾಜಕೀಯ ಸ್ಥಿತಿಗತಿ**

ಕೂಡ್ಲಿಗಿ ತಾಲೂಕಿಗೆ ತನ್ನದೇ ಆದ ವಿಧಾನಸಭಾ ಕ್ಷೇತ್ರವಿದೆ. ಆದರೆ ಈ ಕ್ಷೇತ್ರದಲ್ಲಿ ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳನ್ನು ಸೇರಿಸಿ ಒಂದು ವಿಧಾನ ಸಭಾ ಕ್ಷೇತ್ರವಾಗಿ ಮಾಡಲಾಗಿದೆ. ಕೂಡ್ಲಿಗಿ ತಾಲೂಕು ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ಗ್ರಾಮಗಳನ್ನು ಹೊಂದಿದ ಪ್ರದೇಶವಾಗಿರುವುದರಿಂದ ಇದನ್ನು ಎರಡು

ಕ್ಷೇತ್ರಗಳನ್ನಾಗಿ ಮಾಡಲಾಗಿದೆ. ಕೊಟ್ಟೂರು ವಿಧಾನಸಭಾಕ್ಷೇತ್ರ ಮತ್ತು ಕೂಡ್ಲಿಗಿ ವಿಧಾನಸಭಾಕ್ಷೇತ್ರ ಎಂದು ವರ್ಗೀಕರಿಸಲಾಗಿದೆ. ಇದರಿಂದ ತಾಲ್ಲೂಕಿನ ಅಭಿವೃದ್ಧಿಯು ಕುಂಠಿತವಾಗಿದೆ ಒಟ್ಟು ೩೩ ಗ್ರಾಮ ಪಂಚಾಯಿತಿಗಳು ಮತ್ತು ಎರಡು ಪಟ್ಟಣ ಪಂಚಾಯಿತಿಗಳನ್ನು ಇದು ಹೊಂದಿದೆ. ಇದರಲ್ಲಿ ತಾಲೂಕು ಪಂಚಾಯತಿ ಸದಸ್ಯರು ೧೯ ಜನರು. ಹಾಗೂ ೫ ಜನ ಜಿಲ್ಲಾ ಪಂಚಾಯಿತಿ ಸದಸ್ಯರನ್ನು ಈ ತಾಲೂಕು ಒಳಗೊಂಡಿದೆ. (ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೦) ಪ್ರಸ್ತುತ ಕೂಡ್ಲಿಗಿ ಪಟ್ಟಣ ಪಂಚಾಯಿತಿ ಚುನಾವಣೆಗಳಲ್ಲಿ ಸ್ಪರ್ಧಿಸಿ ಆಯ್ಕೆಯಾದ ಸದಸ್ಯರ ವಿವರ ೨೦೦೦ ೨೦೦೧ ಅನುಬಂಧದಲ್ಲಿ ತಿಳಿಯಬಹುದಾಗಿದೆ.

**ತಾಲೂಕಿನ ಶಿಕ್ಷಣ ವ್ಯವಸ್ಥೆ**

ಶಿಕ್ಷಣವು ಭಾರತದಂತಹ ದೇಶದಲ್ಲಿ ಮೇಲ್ವರ್ಗಗಳ ಸ್ವತ್ತಾಗಿಯೇ ಉಳಿದದ್ದು, ಒಂದು ದೇಶದ ಶಿಕ್ಷಣ ವ್ಯವಸ್ಥೆಯ ಸ್ಥಿತಿಗತಿಯನ್ನು ಆ ದೇಶದಲ್ಲಿ ಬದುಕುತ್ತಿರುವ ಜನರ ಸಾಕ್ಷರತೆಯ ಮೂಲಕ ಲೆಕ್ಕಚಾರ ಮಾಡಲಾಗುತ್ತದೆ. ಆದರೆ ಭಾರತದಂತಪ ಶ್ರೇಣೀಕೃತ ಜಾತಿ ಅಸಮಾನತೆ ನೆಲೆಯ ಸಮಾಜದಲ್ಲಿ ಅಸಾಧಾರಣ ಏರು ಪೇರುಗಳಿವೆ. ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗದ ಸಮುದಾಯಗಳಿಗೆ ಶಿಕ್ಷಣವೆಂಬುದು ಗಗನ ಕುಸುಮ. ಈ ಕಾರಣದಿಂದಾಗಿ ಈ ಸಮುದಾಯಗಳು ಕೇವಲ ಶ್ರಮದಾಯಕ ದುಡಿಮೆಗಳಲ್ಲಿ ಶತಮಾನಗಳಿಂದ ತೊಡಗಿಕೊಂಡೇ ಬಂದರು. ಆದರೆ ಕಳೆದ ನೂರು ವರ್ಷಗಳಲ್ಲಿ ಈ ಸಮುದಾಯಗಳ ಶೈಕ್ಷಣಿಕ ಸ್ಥಿತಿ ಹಂತ ಹಂತವಾಗಿ ಸುಧಾರಿಸುತ್ತಾ ಬಂದಿದೆ. ಆದರೂ ನಿರೀಕ್ಷಿತ ಮಟ್ಟವನ್ನು ತಲುಪಿಲ್ಲದಿರುವುದು ಈ ಕ್ಷೇತ್ರದಲ್ಲಿನ ಅಂಕಿ ಅಂಶಗಳಿಂದ ಗೊತ್ತಾಗುತ್ತದೆ. ಕನಾಟಕದ ಒಟ್ಟಾರೆಯ ಸಾಕ್ಷರತೆಯ ಪ್ರಮಾಣ ಮತ್ತು ಕೂಡ್ಲಿಗಿ ತಾಲೂಕಿನ ಸಾಕ್ಷರತೆಯ ಪ್ರಮಾಣಗಳನ್ನು ಕೆಳಗಿನ ಕೋಷ್ಟಕದ ಮೂಲಕ ಕಂಡುಕೊಳ್ಳಬಹುದಾಗಿದೆ. ಈ ಕೆಳಗಿನ ಅಂಕಿ ಅಂಶಗಳನ್ನು ೨೦೦೧ರ ಜನಗಣತಿಯಿಂದ ಪಡೆದುಕೊಳ್ಳಲಾಗಿದೆ.

**ಕೋಷ್ಟಕ ೯**

**ಕೂಡ್ಲಿಗಿ ತಾಲೂಕಿನ ಶೈಕ್ಷಣಿಕ ಮಟ್ಟ**

| ಪ್ರಾಥಮಿಕ ಶಿಕ್ಷಣದ ಒಟ್ಟಾರೆ ವಿವರ | | | | ಪರಿಶಿಷ್ಟ, ಪಂಗಡದವರ ವಿವರ | | |
|---|---|---|---|---|---|---|
| ಪ್ರಾ,ಶಾಲೆಗಳು | ವಿದ್ಯಾರ್ಥಿಗಳು | ಗಂಡು | ಹೆಣ್ಣು | ವಿದ್ಯಾರ್ಥಿಗಳು | ಗಂಡು | ಹೆಣ್ಣು |
| ೨೮೯ | ೫೧,೯೭೪ | ೨೭,೦೦೦ | ೨೪,೯೭೪ | ೧೩,೯೪೨ | ೬,೮೫೧ | ೭,೦೯೧ |
| ಪ್ರೌ,ಶಾಲೆಗಳು | ವಿದ್ಯಾರ್ಥಿಗಳು | ಗಂಡು | ಹೆಣ್ಣು | ವಿದ್ಯಾರ್ಥಿಗಳು | ಗಂಡ | ಹೆಣ್ಣು |
| ೩೭ | ೯,೭೩೪ | ೬,೦೫೫ | ೩೬೭೯ | ೧೯೦೬ | ೧,೨೦೬ | ೭೦೦ |

(ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೧)

ಕೋಷ್ಟಕ ೧೦

ಪದವಿಪೂರ್ವ ಮತ್ತು ಪದವಿ ಶೈಕ್ಷಣಿಕ ಮಟ್ಟ

| ಪದವಿಪೂರ್ವ ಶಿಕ್ಷಣ | | ಪದವಿ ಶಿಕ್ಷಣ | |
|---|---|---|---|
| ಕಾಲೇಜುಗಳು | ವಿದ್ಯಾರ್ಥಿಗಳು | ಕಾಲೇಜುಗಳು | ವಿದ್ಯಾರ್ಥಿಗಳು |
| ೦೫ | ೨,೫೩೮ | ೦೩ | ೧,೫೦೦ |

(ಜಿಲ್ಲಾ ಅಂಕಿ ಅಂಶಗಳ ನೋಟ ೨೦೦೧)

ಕೋಷ್ಟಕ ೧೧

೨೦೦೬ರ ಕೂಡ್ಲಿಗಿ ತಾಲೂಕಿನ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ವಿವರ

| ಕ್ರ.ಸಂ. | ವಿವರಗಳು | ಸರ್ಕಾರಿ | ಅನುದಾನಿತ | ಅನುದಾನ ರಹಿತ |
|---|---|---|---|---|
| ೧ | ಪ್ರಾಥಮಿಕ | ೨೭೦ | ೫ | ೨೮ |
| | ಪ್ರೌಢ ಶಿಕ್ಷಣ | ೨೦ | ೧೯ | ೧೧ |
| ೨ | ತಾಲ್ಲೂಕಿನ ಸಾಕ್ಷರತಾ ಪ್ರಮಾಣ | ೫೯.೫೪ | | |
| | | ಪ್ರಾಥಮಿಕ | ಪ್ರೌಢಶಾಲೆ | |
| | ವಿದ್ಯಾರ್ಥಿಗಳ ಸಂಖ್ಯೆ | ೫೦೭೨೩ | ೯೬೧೯ | |
| ೩ | ಹುಡುಗರು | ೨೬೧೪೭ | ೫೩೫೯ | |
| | ಹುಡುಗಿಯರು | ೨೪೫೭೬ | ೪೨೬೦ | |
| ೪ | ತಾಲ್ಲೂಕಿನ ಜನಸಂಖ್ಯೆ | ೨,೨೭,೬೩೩ | | |
| ೫ | ಬೇಡ ಬುಡಕಟ್ಟಿನ ಹುಡುಗರ ಸಂಖ್ಯೆ (ವಿದ್ಯಾರ್ಥಿಗಳು) | | | ೮೬೬೨ |
| ೬ | ಬೇಡ ಬುಡಕಟ್ಟಿನ ಹುಡುಗಿಯರ ಸಂಖ್ಯೆ (ವಿದ್ಯಾರ್ಥಿನಿಯರು) | | | ೭೯೮೭ |

ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರಶಿಕ್ಷಣಾಧಿಕಾರಿಗಳ ಕಛೇರಿ ಕೂಡ್ಲಿಗಿ

ಈ ಅಂಕಿ ಅಂಶಗಳನ್ನು ಇಟ್ಟುಕೊಂಡು ಕೂಡ್ಲಿಗಿ ತಾಲೂಕಿನ ಸಾಕ್ಷರತೆಯ ಸ್ಥಿತಿಗತಿಯನ್ನು ವಿವರಿಸಬಹುದಾಗಿದೆ. ಕೂಡ್ಲಿಗಿ ತಾಲೂಕಿನ ಸಾಕ್ಷರತೆಯ ತೌಲನಿಕ ಪ್ರಮಾಣ. ಕೋಷ್ಟಕ ೫, ೬, ೨೦೦೧ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟಾರೆ ಸಾಕ್ಷರತೆಯ ಪ್ರಮಾಣಕ್ಕಿಂತ ಕೂಡ್ಲಿಗಿಯ ಸಾಕ್ಷರತೆಯ ಪ್ರಮಾಣ ಇಳಿಮುಖವಾಗಿರುವುದು ಮೇಲಿನ ಕೋಷ್ಟಕಗಳಿಂದ ಕಂಡು ಬರುತ್ತದೆ. ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಸಾಕ್ಷರತೆಯ ಪ್ರಮಾಣವು ಅತ್ಯಂತ ಕಡಿಮೆ ಇರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ಈ ಸಮುದಾಯದ ಆರ್ಥಿಕ ಸ್ಥಿತಿಯೇ ಆಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಆರ್ಥಿಕವಾಗಿ ದುಸ್ಥಿತಿಯಲ್ಲಿರುವ ಸಮುದಾಯಗಳು ಸಾಕ್ಷರತೆಯ ಪ್ರಮಾಣದಲ್ಲೂ ಹೀನಾಯ ಸ್ಥಿತಿಯಲ್ಲಿರುವುದು ಕಂಡು ಬರುತ್ತದೆ. ಅದರಲ್ಲಿ ಪರಿಶಿಷ್ಟ ಪಂಗಡದ ಪ್ರಮಾಣವು ಕಳವಳಕಾರಿ ಸ್ಥಿತಿಯಲ್ಲಿರುವುದನ್ನು ಗಮನಿಸಿದ ಎಂ.ಜಿ.ಈಶ್ವರಪ್ಪನವರ ಮ್ಯಾಸಬೇಡರೆಂಬ ಗ್ರಂಥದಲ್ಲಿ ಬೇಡ

ಸಮುದಾಯದಲಿ ವಿದ್ಯಾವಂತರು ಹೆಚ್ಚು ಸಂಖ್ಯೆಯಲ್ಲಿ ಸಿಗುವುದು ಅಪರೂಪ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕೋಷ್ಟಕ೧೨

ಕರ್ನಾಟಕದ ಸಾಕ್ಷರತೆ ಜನಗಣತಿ ಮಾಹಿತಿ ೨೦೦೧

| ಕ್ರ.ಸಂ. | ವಿವರಗಳು | ಒಟ್ಟು | ಮಹಿಳೆಯರು | ಪುರುಷರು |
|---|---|---|---|---|
| ೧. | ರಾಜ್ಯದ ಒಟ್ಟು ಜನಸಂಖ್ಯೆ | ಶೇ. ೬೭.೦೪ | ೫೭.೪೫ | ೭೬.೨೯ |
| ೨. | ಪರಿಶಿಷ್ಟ ಜಾತಿ | ಶೇ. ೫೨.೯೦ | ೪೧.೭೦ | ೬೩.೮೦ |
| ೩. | ಪರಿಶಿಷ್ಟ ವರ್ಗ | ಶೇ. ೪೮.೩೦ | ೩೬.೬೦ | ೫೯.೭೦ |
| ೪. | ಅಂತರ : ಪ.ಜಾ. (೧-೨) | -೧೪.೧೪ | -೧೫.೭೫ | -೧೨.೪೯ |
| ೫. | ಅಂತರ : ಪ.ಪಂ. (೧-೩) | -೧೮.೭೪ | -೨೦.೮೫ | -೧೬.೫೯ |

ಕರ್ನಾಟಕದ ಸಾಕ್ಷರತೆಯ ಕೋಷ್ಟಕದ ಪ್ರಕಾರ ಶಿಷ್ಟ ವರ್ಗಗಳ ಸಾಕ್ಷರತೆಯ ಪ್ರಮಾಣ ಶೇ. ೬೭.೦೪ ರಷ್ಟಿದೆ. ಮಹಿಳೆಯರು ಶೇ. ೫೭.೪೫ ಮತ್ತು ಪುರುಷರು ೭೬.೨೯ ರಷ್ಟು ಸಾಕ್ಷರಸ್ಥರಿದ್ದಾರೆ. ಆದರೆ ಪರಿಶಿಷ್ಟ ಜಾತಿಯ ಒಟ್ಟಾರೆ ಸಾಕ್ಷರತೆಯು ಶೇ. ೫೨.೯೦ ರಷ್ಟಿದೆ. ಪುರುಷರು ಶೇ. ೬೩.೮೦ ಮತ್ತು ಸ್ತ್ರೀಯರು ಶೇ. ೪೧.೭೦ ರಷ್ಟಿದೆ. ಪರಿಶಿಷ್ಟ ಪಂಗಡದ ಒಟ್ಟಾರೆ ಸಾಕ್ಷರತೆ ೪೮.೩೦ ರಷ್ಟಿದೆ. ಇದರಲ್ಲಿ ಶೇ ೫೯.೭೦ ರಷ್ಟು ಪುರುಷರು ಮತ್ತು ಶೇ. ೩೬.೬೦ ರಷ್ಟು ಸ್ತ್ರೀಯರು ಸಾಕ್ಷರತೆಯನ್ನು ಹೊಂದಿದ್ದಾರೆ. ಈ ಅಂಕೆ ಸಂಖ್ಯೆಗಳಿಗೆ ಕೂಡ್ಲಿಗಿ ತಾಲೂಕಿನ ಪರಿಶಿಷ್ಟ ಪಂಗಡದ ಸಾಕ್ಷರತಾ ಸ್ಥಿತಿಗತಿಗಳನ್ನ ಹೋಲಿಸಿ ನೋಡಿದಾಗ ಶಿಕ್ಷಣ ಕ್ಷೇತ್ರದಲ್ಲಿ ಇವರು ಬಹು ಹಿಂದುಳಿದಿರುವುದು ಕಂಡು ಬರುತ್ತದೆ.

**೫ :೨ ಅಧ್ಯಯನ ಕ್ಷೇತ್ರದ ಐತಿಹಾಸಿಕತೆ**

ಕೂಡ್ಲಿಗಿಯು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ರಾಜಕೀಯ ಸಮಾವೇಶದ ಅನೇಕ ಕೇಂದ್ರಗಳಲ್ಲಿ ಇದೂ ಒಂದು ಕೇಂದ್ರವಾಗಿತ್ತು. ಅಂದರೆ ಕೂಡ್ಲಿಗಿಯ ಸುತ್ತ ಇತಿಹಾಸದಲ್ಲಿ ದಾಖಲಿಸಿರುವಂತೆ ಹಲವಾರು ಪಾಳೇಗಾರರ ಸಂಸ್ಥಾನಗಳಿವೆ. ಸಾರಿಗೆ ವ್ಯವಸ್ಥೆಯ ದೃಷ್ಟಿಯಿಂದ ಈ ಪಟ್ಟಣವು ಈ ಎಲ್ಲಾ ಸಂಸ್ಥಾನದವರು ಕೂಡುವುದು, ಸೈನ್ಯ ಸಮಾಲೋಚನೆ ಮತ್ತು ಮುಂದಿನ ಪ್ರಯಾಣಕ್ಕೆ ಸೈನ್ಯವನ್ನು ಸಜ್ಜುಗೊಳಿಸುವಿಕೆಗೆ ಅನುಕೂಲಕರ ಕೇಂದ್ರವಾಗಿತ್ತು. ಇಲ್ಲಿಂದ ಬಳ್ಳಾರಿ, ಹರಿಹರ, ಚಿತ್ರದುರ್ಗ, ರಾಯದುರ್ಗ ಸುಮಾರು ೮೦ ಕಿ.ಮಿ. ದೂರದಲ್ಲಿವೆ. ಅದೇ ರೀತಿ ಹೊಸಪೇಟೆ, ಸಂಡೂರು, ಹರಪನಹಳ್ಳಿ, ಗುಡೇಕೋಟೆ, ಜರಿಮಲೆ, ಬೀರಲಗುಡ್ಡ ಇವುಗಳೆಲ್ಲ ಪಾಳೇಗಾರರ ಸಂಸ್ಥಾನಗಳು. ೪೦ ಕಿ.ಮೀ. ದೂರದ ಒಳಗಿದ್ದು, ಈ ಎಲ್ಲ ಪ್ರದೇಶಗಳು ವಿಜಯನಗರದ ಅರಸರ ಅಧೀನಕ್ಕೆ ಒಳಪಟ್ಟಿದ್ದವು ಎಂಬುದು ಚರಿತ್ರೆಯ ದಾಖಲೆಯಿಂದ ತಿಳಿದು ಬರುತ್ತದೆ.

ವಿಜಯನಗರ ಸಾಮ್ರಾಜ್ಯ ತುಂಬಾ ವಿಸ್ತಾರವಾಗಿದ್ದರಿಂದ ಎಲ್ಲ ಭಾಗಗಳ ಮೇಲೆ ತಾವೇ ನೇರ ಆಳ್ವಿಕೆ ನಡೆಸುವುದು ತೊಡಕಾಗುತ್ತಿತ್ತು, ಹೀಗಾಗಿ ಆಡಳಿತದ ಉಸ್ತುವಾರಿ ನೋಡಿಕೊಳ್ಳಲು ಯುದ್ಧ ಸಂದರ್ಭದಲ್ಲಿ

ಸಹಾಯ ಮಾಡುವುದು ಮೊದಲಾದ ಉದ್ದೇಶಗಳಿಗಾಗಿ ಬಲಿಷ್ಠ ಹಾಗೂ ಅತಿ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. 'ಬರ್ಟನ್ ಸ್ಟೈನ್' ವಿಜಯನಗರ ಸಾಮ್ರಾಜ್ಯವು ಸಣ್ಣ ಸಣ್ಣ ಸಂಸ್ಥಾನ, ರಾಜ್ಯಗಳಲ್ಲಿ ವಿಭಾಗ ಗೊಂಡಿದ್ದು, ಅವುಗಳ ಮೇಲೆ ಇವರು ಪ್ರಭುತ್ವ ಹೊಂದಿದ್ದರೆಂದು 'ಸೆಗ್ಮೆಂಟರಿ ಸ್ಟೇಟ್' ಸಿದ್ಧಾಂತ ಮಂಡಿಸುತ್ತಾನೆ. ಇಂಥಾ ಅಧೀನರಾದ ಸಾಮಾಂತರು, ಸೈನಿಕರು, ದಂಡನಾಯಕರು, ನಾಯಕರು, ಕೂಡ್ಲಿಗಿಯ ಪಕ್ಕದ ಜರಿಮಲೆಯಲ್ಲಿದ್ದರು. ಇದು ಆಗ್ನೇಯಕ್ಕೆ ೧೪ ಕಿ.ಮೀ. ದೂರದಲ್ಲಿದೆ. ಪುಟ್ಟ ಗ್ರಾಮವಾಗಿರುವ ಇದು ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದು, ವಿಜಯನಗರದ ಸಾಮಂತ ನಾಯಕರುಗಳು ಇಲ್ಲಿ ಆಡಳಿತ ನಡೆಸುತ್ತಿದ್ದರು ಅಂದರೆ ವಿಜಯನಗರದ ಅರಸರು, ತಮ್ಮ ಅಧೀನದಲ್ಲಿದ್ದ ತಳವಾರ, ಪೌಜುದಾರ ಮೊದಲಾದವರಿಗೆ ಆಯಾ ಸ್ಥಳಗಳಲ್ಲಿ ನಡೆಸುತ್ತಿದ್ದ ಅಧಿಕಾರವನ್ನು ಅವರಿಗೆ ಬಿಟ್ಟು ಕೊಟ್ಟಿದ್ದರು. ಹಾಗೆಯೇ ಉಜ್ಜಿನಿಯಲ್ಲಿ ಪಾಳೆಗಾರರ ಆಳ್ವಿಕೆ ಇದ್ದು ವಿಜಯನಗರದ ಸಾಮಂತರಾಗಿದ್ದು ಇದು ಕೂಡ್ಲಿಗಿಯ ದಕ್ಷಿಣ (ನೈಋತ್ಯ)ಕ್ಕಿದೆ. ಇದು ಚಾರಿತ್ರಿಕ ಮತ್ತು ಧಾರ್ಮಿಕವಾಗಿ ಮಹತ್ವ ಪಡೆದ ಕ್ಷೇತ್ರ. ಇದು ಕೂಡ್ಲಿಗಿ ತಾಲೂಕು ಕೇಂದ್ರದಿಂದ ೨೮ ಕಿ.ಮೀ. ದೂರದಲ್ಲಿದೆ.

'ಗುಡೇಕೋಟೆ' ಶ್ರೀಕೃಷ್ಣದೇವರಾಯನೇ ಗುಡೇಕೋಟೆ ಪಾಳೆಪಟ್ಟನ ಸ್ಥಾಪನೆಗೆ ಚಾಲನೆ ನೀಡಿದ್ದನೆಂದು ಕೈಫಿಯತ್ತುಗಳ ಮೂಲಕ ತಿಳಿದು ಬರುತ್ತದೆ. ಸೇನಾಧಿಪತಿಗಳು ಯುದ್ಧದಲ್ಲಿ ತೋರಿದ ಸಾಹಸ ಹಾಗೂ ತಂದುಕೊಟ್ಟ ವಿಜಯಕ್ಕೆ ಪ್ರತಿಫಲವಾಗಿ ವಿಜಯನಗರದ ಅರಸರು ಈ ಪ್ರದೇಶವನ್ನು ಜಹಗೀರರಾಗಿ ಕೊಟ್ಟಿರಬೇಕು ಎನ್ನಲಾಗಿದೆ. 'ಹರಪನಹಳ್ಳಿಯ' ಕೂಡ್ಲಿಗಿಯಿಂದ ೪೦ ಕಿ.ಮೀ. ದೂರದಲ್ಲಿರುವ ಇದು ವಿಜಯನಗರದ ಸಾಮಂತರಾದ ಪಾಳೆಗಾರರ ವಶದಲ್ಲಿತ್ತು. ಅವರ ಆಡಳಿತ ಕೇಂದ್ರಕ್ಕೆ ಒಳಪಟ್ಟಿತ್ತು.

'ಬೀರಲಗುಡ್ಡ' (ವೀರನದುರ್ಗ ಪಾಳೇಗಾರರು) ಇದು ಚಾರಿತ್ರಿಕ ಸ್ಥಳ ಕೂಡ್ಲಿಗಿಯಿಂದ ೬ ಕಿ.ಮೀ. ದಕ್ಷಿಣಕ್ಕಿದೆ. ವಿಜಯನಗರದ ಸಾಮಂತ ಅರಸರ ಕೇಂದ್ರ ಸ್ಥಳವಾಗಿದ್ದು ಮೇಲೆ ಸೂಚಿಸಿದ್ದವುಗಳೆಲ್ಲ ತಮ್ಮದೇ ಆದ ಸೈನಿಕ ನೆಲೆಯನ್ನು ಹೊಂದಿದ್ದವು. ಜೊತೆಗೆ ಸಂಡೂರಿನ ಸಂಸ್ಥಾನಿಕರು. ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿದ್ದ ಹರಪನಹಳ್ಳಿ, ಜರಿಮಲೆ, ಗುಡೇಕೋಟೆ, ಬೀರಲಗುಡ್ಡ, ಉಜ್ಜನಿಯ ಸೈನಿಕ ನೆಲೆಯವರು, ಅರಸರು ಹೇಳಿ ಕಳುಹಿಸಿದಾಗ, ರಾಜಧಾನಿಗೆ ಪ್ರಯಾಣ ಬೆಳೆಸುವ ಸಂದರ್ಭದಲ್ಲಿ ಸೈನಿಕ ಕಾರ್ಯಚರಣೆಗೆ ಅನುಕೂಲವಾಗುವಂತೆ ಕೂಡ್ಲಿಗಿಯ ಮೂಲಕ ಎಲ್ಲರೂ ಹಾದೂ ಹೋಗಬೇಕಾಗಿದ್ದರಿಂದ ಕೂಡ್ಲಿಗಿ ಕೇಂದ್ರಕ್ಕೆ ಬಂದು ಸೇರುತ್ತಿದ್ದರು. ಇದನ್ನು ತಂಗುವ ಅಥವಾ ವಿಶ್ರಾಂತಿ ಪಡೆಯುವ ಸ್ಥಳವಾಗಿ ಮಾಡಿಕೊಂಡಿದ್ದರು. ವಿದ್ವಾಂಸರ ಅಭಿಪ್ರಾಯದ ಪ್ರಕಾರ ಕೂಡ್ಲಿಗಿ ಆಂಧ್ರಪ್ರದೇಶದ ವ್ಯಾಪ್ತಿಗೆ ಒಳಪಟ್ಟಿತ್ತು ಎಂದು ಹೇಳುವರು. ವಿಜಯನಗರ ಕಾಲದಲ್ಲಿ ಈ ಪ್ರದೇಶದ ಜನರು ಆ ಸಂಸ್ಥಾನದಲ್ಲಿ ಸೈನಿಕ ವೃತ್ತಿಗಳನ್ನು ಮಾಡುತ್ತಿದ್ದವರು ಎಂಬುದಾಗಿ ಕೆಲವರ ಅಭಿಪ್ರಾಯವಾಗಿದೆ. ಅಲ್ಲಿಂದ ಬಂದ ಬೇಡರು ನೇರವಾಗಿ ಕೂಡ್ಲಿಗಿಗೆ ಬಂದು ನೆಲೆಸಿದರು ಎಂದು ಹೇಳಲಾಗಿದೆ. ಕೂಡ್ಲಿಗಿ ಕೇಂದ್ರದ ಸುತ್ತಮುತ್ತಲಿನ ಪಾಳೇಗಾರರು ಕೂಡ್ಲಿಗಿಯಲ್ಲಿ ಸೈನ್ಯ ಬೀಡುಬಿಟ್ಟು ವಿಜಯನಗರದ ದೊರೆ ಹೇಳಿ ಕಳುಹಿಸಿದಾಗ, ಕೂಡ್ಲಿಗಿ ಕೇಂದ್ರದ ಸುತ್ತ ಮುತ್ತಲಿನ ಸಾಮಂತ ಪ್ರಭುಗಳು,

ಪಾಳೇಗಾರರು, ಹೊರಡಲು ಇಂದಿನಂತೆ ಅಂದು ಸಾರಿಗೆ ಸಂಪರ್ಕ ಸಾಧನಗಳಿಲ್ಲದಿದ್ದ ಕಾರಣ ದೂರದ ಪ್ರಯಾಣ ಸೈನಿಕರ ಜೊತೆಗೂಡಿ ಕುದುರೆ, ಆನೆ, ರಥ, ಬಂಡಿಗಳಲ್ಲಿ ಪ್ರಯಾಣಿಸಿ ಕೂಡ್ಲಿಗಿಗೆ ತಲುಪುವ ವೇಳೆಗೆ ರಾತ್ರಿಯಾಗುತ್ತಿತ್ತು, ಎಲ್ಲಾ ಸಾಮಾಂತರು ಕೂಡ್ಲಿಗಿಯ ಮೂಲಕವೇ ರಾಜಧಾನಿಗೆ ಹಾದೂ ಹೋಗಬೇಕಾದ್ದರಿಂದ ಇತರರೆಲ್ಲಾ ಬರುವವರೆಗೆ ಇಲ್ಲಿಯೇ ಕಾಯುತ್ತಿದ್ದರು. ಎಲ್ಲಾ ಬಂದು ಸೇರುವುದು ಸಾಮಾನ್ಯವಾಗಿ ರಾತ್ರಿಯಾಗುತ್ತಿತ್ತು. ಆಗ ಎಲ್ಲಾ ಸಾಮಂತ ಅಧಾಕಾರಿಗಳು ಸೇರಿ ಗುಪ್ತ ಸಮಾಲೋಚನೆ, ಚರ್ಚೆಗಳನ್ನು, ಸೈನಿಕ ಕಾರ್ಯಚರಣೆಗಳ ಬಗ್ಗೆ ಪರಸ್ಪರ ಚರ್ಚಿಸಿ, ಆ ರಾತ್ರಿ ಕೂಡ್ಲಿಗಿಯಲ್ಲಿಯೇ ತಂಗುವ ವ್ಯವಸ್ಥೆ ಇದ್ದಿತು. ಆ ಸ್ಥಳ ಸಾಮಾನ್ಯವಾಗಿ ಇಂದಿನ ೭ನೇ ವಾರ್ಡ್ ಎಂದು ಕರೆಯುವ 'ಕೋಟೆ' ಪ್ರದೇಶವಾಗಿದೆ. ಈ ಪ್ರದೇಶದಲ್ಲಿ ಎಲ್ಲರಿಗೂ ಸಾಕಾಗುವಷ್ಟು ಭಕ್ಷ್ಯಭೋಜನಗಳನ್ನು ತಯಾರಿಸಲಾಗುತ್ತಿತ್ತು. ಜೊತೆಗೆ ಸೈನಿಕರ ಮನರಂಜಿಸುವ ಸಲುವಾಗಿ ರಾತ್ರಿ ಸಂಗೀತ, ನೃತ್ಯ, ಹಾಡುಗಳ ವ್ಯವಸ್ಥೆಗಾಗಿ ದೇವದಾಸಿಯರನ್ನು ಹೆಚ್ಚು ಸಂಖ್ಯೆಯಲ್ಲಿ ಈ ಸ್ಥಳದಲ್ಲಿ ಬಳಸಲಾಗುತ್ತಿತ್ತು. ಕಾರಣ "ವಿಜಯನಗರ ಅರಸರಿಗೆ ಸಂಬಂಧಿಸಿದಂತೆ ೧೦ ಲಕ್ಷ ಸೇನೆ ಯಾವಾಗಲೂ ಇರುತ್ತಿತ್ತು. ಇದರಲ್ಲಿ ಕುದುರೆ, ಮತ್ತು ಪದಾತಿದಳ ಎಲ್ಲಾವು ಸೇರಿದ್ದು ಇವರುಗಳಲ್ಲದೇ ಸೇನೆಯೊಂದಿಗೆ ತೆರಳುವಾಗ, ೫-೬ ಸಾವಿರ ಸ್ತ್ರೀಯರನ್ನು ದೊರೆ ಸಂಬಳ ಕೊಟ್ಟು ಇಟ್ಟುಕೊಂಡಿದ್ದರೆನ್ನಲಾಗಿದೆ. ಯುದ್ಧ ಸಮಯದಲ್ಲಿ ಸಮರಕ್ಕೆ ತೆರಳುವಾಗ ಸೈನಿಕರಿಗೆ ಸಂಖ್ಯೆಗೆ ಅನುಗುಣವಾಗಿ, ಈ ಸ್ತ್ರೀಯರನ್ನು ಹಂಚಲಾಗುತ್ತಿತ್ತು. ಹೆಂಗಸರಿಲ್ಲದೆ ಸೈನಿಕರು ಯುದ್ಧಮಾಡಲಾರರೆಂಬುದು ದೊರೆಯ ಅಭಿಪ್ರಾಯವಾಗಿತ್ತು. ಈ ಸ್ತ್ರೀಯರೆಲ್ಲರೂ ಕುಶಲ ಗಾಯಕಿಯರು, ನರ್ತಕಿಯರು, ದೊಂಬರಾಟ ಬಲ್ಲವರು, ಚತುರೆಯರು ಇದ್ದು"[೨], ಜೊತೆಗೆ "ಸೈನಿಕರು ತಮ್ಮೊಂದಿಗೆ ಕರೆದ್ಯೊಯುವ ಅವಿವಾಹಿತ ಸ್ತ್ರೀಯರಿಗೆ ಇನ್ನೂ ಹೆಚ್ಚಿನ ಮನ್ನಣೆ ದೊರೆಯುತ್ತದೆ ಇಂಥಹ ಸ್ತ್ರೀಯರಲ್ಲಿ ಕೆಲವರು ಅಪರೂಪದ ಸುಂದರಿಯರೂ, ಧನಾಡ್ಯರೂ ಆಗಿದ್ದು ವಿಶೇಷ ಗೌರವಕ್ಕೆ ಪಾತ್ರರಾಗುತ್ತಿದ್ದರು. ಇವರುಗಳಲ್ಲಿ ಮೋಹಗೊಂಡ ಸೈನಿಕರು, ಅವರನ್ನು ಒಲಿಸುವುದಕ್ಕಾಗಿ ಜೀವನದ ಹಂಗು ತೊರೆದು ಹೋರಾಡುತ್ತಾರೆ. ಹೀಗೆ ಹೆಂಗಸರಿರುವುದರಿಂದಲೇ ಎಷ್ಟೋ ಕಡೆಯ ಜನ ಬಂದು ಈ ಸೇನೆಯಲ್ಲಿ ಸೇರುತ್ತಾರೆ"[೩]. ಎಂದು ಹೇಳಲಾಗಿದೆ.

ಮೇಲಿನ ಆಧಾರಾಂಶಗಳಿಂದಾಗಿ ಕೂಡ್ಲಿಗಿಯಲ್ಲಿ ವಿಜಯನಗರದ ಸಾಮಾಂತರು ದೊರೆಯ ಆದೇಶದ ಮೇರೆಗೆ ಸೇನೆಯೊಂದಿಗೆ ರಾಜಧಾನಿಗೆ ಹೋಗುವಾಗ, ಬರುವಾಗ, ಕೂಡ್ಲಿಗಿಯಲ್ಲಿ 'ತಂಗುದಾಣವಾಗಿ', ಮಾಡಿಕೊಂಡು ವಿಶ್ರಾಂತಿ ಪಡೆದು, ದೊರೆಗಳ ವ್ಯವಸ್ಥೆಯಲ್ಲಿ ಇಲ್ಲಿನ ದೇವದಾಸಿಯರೊಂದಿಗೆ ರಾತ್ರಿ 'ಕೂಡಿ', ಬೆಳಿಗ್ಗೆ 'ಅಗಲುತ್ತಿದ್ದರು' ಅಂದರೆ ತಮ್ಮ ಮುಂದಿನ ಪ್ರಯಾಣ ಬೆಳೆಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಈ ಸ್ಥಳಕ್ಕೆ 'ಕೂಡಿ ಅಗಲು' ಎಂದು ಮೊದಲಿಗೆ ಕರೆದರು. ಇದೇ ಪದ ಬರುಬರುತ್ತಾ 'ಕೂಡ್ಲಿಗಿ' ಆಗಿದೆ. ಎಂದು ಇಲ್ಲಿನ ಅನುಭವಿ ವಯಸ್ಸಾದ ವಕ್ತೃಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೇಳಿದ್ದಾರೆ.

ಹೀಗೆ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ಇದು ವಿಶೇಷವಾದ ಹೆಸರಿನಿಂದ ಸೈನಿಕರು ತಂಗುವ

ಕೇಂದ್ರ, ಗುಪ್ತ ಸಮಾಲೋಚನೆಯ ಸ್ಥಳವಾಗಿ, ವಿಜಯನಗರದ ಪತನದ ಅನಂತರ ಮಡಿದ ಸೈನಿಕರು ಅವರ ಪತ್ನಿಯರು, ಅವರೊಂದಿಗೆ ಕೆಲ ಅನಾಥ ಮಹಿಳೆಯರು ದೇವದಾಸಿಯರು ದಿಕ್ಕಪಾಲಾಗಿ ಇಲ್ಲಿಗೆ ಬಂದು ನೆಲೆಸಿದರು. ಅವರಿಗೆ ಜೀವನ ನಿರ್ವಹಣೆಗೆ ಯಾವುದೇ ಪರ್ಯಾಯ ಉದ್ಯೋಗ ಕಾಣದೇ ಅನಿವಾರ್ಯವಾಗಿ ತಮ್ಮ ದೇಹ ಮಾರಿ ಜೀವಿಸಬೇಕಾಗಿ ಬಂದಿತು. ಆಗ ಪ್ರಾರಂಭವಾದ ದೇವದಾಸಿ ಸಂಪ್ರದಾಯದ ವೃತ್ತಿ ಇಲ್ಲಿಯ ತನಕ ನಿರಾತಂಕವಾಗಿ ಕೂಡ್ಲಿಗಿಯ 'ಕೋಟೆ' ಎಂಬ ಕೇರಿಗೆ ಸೀಮಿತ (ಅವರುಗಳು ಬಂದು ನೆಲೆಸಿದ) ವಾಗಿ ಬೆಳೆದುಕೊಂಡು ಬಂದು, ಸ್ತ್ರೀ ಸಂಬಂಧಿತ ಅನಿಷ್ಟ ಪದ್ಧತಿಯಾಗಿ ಇಂದು ಬೃಹದಾಕಾರವಾಗಿ ಬೆಳೆದಿದೆ. ಅದರ ವಿವರವನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ. ನನ್ನ ಸಮೀಕ್ಷೆಯ ಪ್ರಕಾರ ಕೂಡ್ಲಿಗಿ ಪಟ್ಟಣದಲ್ಲಿ ಕಂಡು ಬಂದ ದೇವದಾಸಿಯರ ವಯಸ್ಸು ಮತ್ತು ಸಂಖ್ಯೆ ಹೀಗಿದೆ.

**ಕೋಷ್ಟಕ ೧೩**

**ಕೂಡ್ಲಿಗಿ ಪಟ್ಟಣದಲ್ಲಿನ ದೇವದಾಸಿಯರ ವಯೋ ಗುಂಪುಗಳು**

| ಕ್ರ.ಸಂ | ವಯೋ ಗುಂಪುಗಳು | ದೇವದಾಸಿಯರ ಸಂಖ್ಯೆ | ಶೇಕಡವಾರು |
|---|---|---|---|
| ೦೧ | ೧೩ಕ್ಕಿಂತ ಕೆಳಗೆ | ೩೭ | ೪ |
| ೦೨ | ೧೪-೧೫ | ೩೧೧ | ೩೧ |
| ೦೩ | ೧೬-೧೭ | ೨೩೨ | ೨೩ |
| ೦೪ | ೧೮-೧೯ | ೩೦೮ | ೩೧ |
| ೦೫ | ೨೦-೨೧ | ೮೨ | ೮ |
| ೦೬ | ೨೨-೩೫ ವರ್ಷ ಮೇಲ್ಪಟ್ಟವರು | ೩೦ | ೩ |
| | ಒಟ್ಟು | ೧೦೦೦ | ೧೦೦ |

(ಕೋಷ್ಟಕದ ಮಾಹಿತಿಯಂತೆ ಕೂಡ್ಲಿಗಿ ಪಟ್ಟಣದಲ್ಲಿ ಋತುಮತಿಯಾಗುವುದಕ್ಕಿಂತ ಮುಂಚೆಯೇ ಹುಡುಗಿಯರನ್ನು ಕೆಲವರು ದೇವರಿಗೆ ಅರ್ಪಿಸುವ ಪದ್ಧತಿ ಇಂದಿಗೂ ಇದೆ. ಹಾಗಾಗಿ ೧೩ ವರ್ಷದ ಕೆಳಗಿನ ೩೭ ಜನ ದೇವದಾಸಿಯರಿದ್ದು ೧೪ ರಿಂದ ೨೯ರ ವಯಸ್ಸಿನವರು ಅಧಿಕ ಸಂಖ್ಯೆಯಲ್ಲಿರುವರು. ವಯಸ್ಸಾದಂತೆ ಇವರ ಸಂಖ್ಯೆ ಕಡಿಮೆ ಯಾಗುವುದನ್ನು ಗಮನಿಸಬಹುದಾಗಿದೆ. ೨೨ ರಿಂದ ೫೫ ವಯಸ್ಸಿನವರು ಸಾವಿರಕ್ಕೆ ೩೦ ರಷ್ಟಿದ್ದಾರೆ. ಅನುಬಂಧ ೩ ರಲ್ಲಿ ಕೂಡ್ಲಿಗಿ ತಾಲೂಕಿನ ೪೦ ಹಳ್ಳಿಗಳ ದೇವದಾಸಿಯರ ವಿವರಗಳನ್ನು ಗಮನಿಸಬಹುದು.)

ಈ ಹಿನ್ನೆಲೆಯಲ್ಲಿಯೇ ಕೂಡ್ಲಿಗಿಯ ನೆರೆ ತಾಲೂಕುಗಳಾದ ಹೊಸಪೇಟೆ ಮತ್ತು ಸಂಡೂರು ತಾಲೂಕುಗಳಲ್ಲಿ ದೇವದಾಸಿಯರ ಸಂಖ್ಯೆ ಲಭ್ಯವಾಗಿದ್ದು ಅದರ ಮಾಹಿತಿಯನ್ನು ಕೆಳಗಿನ ಕೋಷ್ಟಕದಲ್ಲಿ ಸೂಚಿಸಲಾಗಿದೆ.

ಕೋಷ್ಟಕ ೧೪

೨೦೦೬-೦೭ ನೇ ಸಾಲಿನ ದೇವದಾಸಿ ಮಹಿಳೆಯರ ಪುನರ್‌ವಸತೀಕರಣ ಪಟ್ಟಿ

| ಕ್ರ ಸ | ತಾಲೂಕು | ೫೦ ವರ್ಷ ಒಳಗಿನವರು | ೫೦ ವರ್ಷ ಮೇಲ್ಪಟ್ಟವರು | ಮರಣ ಹೊಂದಿದವರು | ಅಂಗವಿಕವರು | ವಲಸೆ ಹೋದವರು | ಮದುವೆ ಯಾದವರು | ಒಟ್ಟು |
|---|---|---|---|---|---|---|---|---|
| ೧ | ಸಂಡೂರು | ೫೨೩ | ೨೨೯ | ೬೧ | ೨೪ | ೧೧ | ೦೧ | ೮೪೯ |
| ೨ | ಹೊಸಪೇಟೆ | ೪೪೧ | ೨೭೮ | ೪೪ | ೧೭ | ೦೪ | ೦೨ | ೭೮೬ |

ಆಧಾರ : ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

(ಜಿಲ್ಲಾ ಕಛೇರಿ ಬಳ್ಳಾರಿ)

ಮೇಲಿನ ಕೋಷ್ಟಕಗಳ ಅಂಕೆ ಸಂಖ್ಯೆಗಳನ್ನು ಗಮನಿಸಿದಾಗ ಕೂಡ್ಲಿಗಿ ಪಟ್ಟಣದಲ್ಲಿನ ಒಟ್ಟು ದೇವದಾಸಿಯರ ಸಂಖ್ಯೆ ಸಾವಿರವಿದ್ದು ಈ ತಾಲೂಕಿನ ೪೦ ಹಳ್ಳಿಗಳ ಆಯ್ದ ದೇವದಾಸಿಯರ ಸಂಖ್ಯೆ ಒಟ್ಟು ೯೪೯ ಇದೆ. ಹಾಗೆಯೇ ಕೂಡ್ಲಿಗಿ ತಾಲೂಕಿನ ನೆರೆಯ ತಾಲೂಕುಗಳಾದ ಸಂಡೂರು ೮೪೯ ಹಾಗೂ ಹೊಸಪೇಟೆಯಲ್ಲಿ ೭೮೬ ದೇವದಾಸಿಯರಿರುವುದು ತಿಳಿದು ಬಂದಿದೆ. ಹೀಗೆ ಈ ಪ್ರದೇಶಗಳಲ್ಲಿ ಹೆಚ್ಚು ಸಂಖ್ಯೆಯ ದೇವದಾಸಿಯರು ಕಂಡು ಬರಲು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಪ್ರಭಾವವೂ ಒಂದು ಕಾರಣವಾಗಿದೆ.

**೫:೩ ಬಸವಿ ಬಿಡುವ ಸಂಪ್ರದಾಯದ ಹಿನ್ನೆಲೆ**

ವಿಜಯನಗರದ ಆಳ್ವಿಕೆಗೆ ಕೂಡ್ಲಿಗಿ ಪ್ರದೇಶವು ಒಳಪಟ್ಟಿದ್ದ ಕಾರಣದಿಂದಾಗಿ ಅದರ ಪರಂಪರೆಯ ಪ್ರಭಾವಕ್ಕೆ ಒಳಗಾಗಿದ್ದ ಪರಿಣಾಮ, ಮಾಧ್ವ ಸಂಪ್ರದಾಯವನ್ನೂ ಅಳವಡಿಸಿಕೊಂಡಿದೆ. "ಹನುಮನಿಂದ ಮಾಧ್ವಸಂಪ್ರದಾಯ ಪ್ರಾರಂಭವಾಗುತ್ತದೆ. ಹನುಮನ ಅವತಾರವೇ ಭೀಮ. ಭೀಮನ ಅನಂತರ ಬರುವವನೇ ಮಾಧ್ವ. ತಮಿಳುನಾಡಿನ ಶ್ರೀರಂಗದಲ್ಲಿದ್ದ ರಾಮಾನುಜಾಚಾರ್ಯರು ತಿರುಪತಿಗೆ ಹೆಚ್ಚಿನ ಪ್ರಚಾರವನ್ನು ನೀಡಿದರು. ಚೋಳ, ಹೊಯ್ಸಳರ ಅವಧಿಯ ಅನಂತರ ವಿಜಯನಗರ ಆಳ್ವಿಕೆ ಬರುತ್ತದೆ. ವಿಜಯನಗರದ ಪರಂಪರೆಯಲ್ಲಿ ಮೊದಲು ಶೈವ ಅರಸರಿದ್ದರು. ಸಾಳ್ವನರಸಿಂಗನಿಂದಲೇ ವೈಷ್ಣವರ ಆಳ್ವಿಕೆ ಪ್ರಾರಂಭವಾಯಿತು. ಕೃಷ್ಣದೇವರಾಯನ ಅವಧಿಯಲ್ಲಿ ವ್ಯಾಸರಾಯರು ಬಂದರು. ವ್ಯಾಸರಾಯರು ಆಂಜನೇಯನಿಗೆ ಹೆಚ್ಚು ಮಹತ್ವವನ್ನು ಕೊಟ್ಟರು. ಇದರಿಂದಾಗಿ ಕೃಷ್ಣ ದೇವರಾಯರು ತಿರುಪತಿಯ ಪ್ರಭಾವಕ್ಕೆ ಒಳಗಾದಂತೆ ಆಂಜನೇಯನ ಪ್ರಭಾವಕ್ಕೂ ಒಳಗಾದರು. ವ್ಯಾಸರಾಯರು ಸ್ಥಾಪಿಸಿದ ಆಂಜನೇಯ ಮೂರ್ತಿಗಳು ವಿಶಿಷ್ಟವಾಗಿವೆ. ಕರ್ನಾಟಕದಲ್ಲಿ ೧೦ನೇ ಶತಮಾನದ ಅವಧಿಯಲ್ಲಿಯೇ ಕಂಬದಲ್ಲಿ ಕೆತ್ತಿದ ಆಂಜನೆಯ ಚಿತ್ರಗಳಿದ್ದರೂ ಅದಕ್ಕೆ ಒಂದು ಸ್ವಾತಂತ್ರ ಅಸ್ತಿತ್ವ ಬಂದುದು ಕೃಷ್ಣದೇವರಾಯನ ಅವಧಿಯಲ್ಲಿಯೇ (೧೫೦೦) ಸುಮಾರು ೭೦೦ ಕ್ಕೂ ಹೆಚ್ಚು ಆಂಜನೇಯ ದೇವಸ್ಥಾನಗಳನ್ನು ಅವನು ಕಟ್ಟಿಸಿದನೆಂಬ ಪ್ರತೀತಿಯಿದೆ"[೪]. ಅದರಲ್ಲಿ ಈ ಕ್ಷೇತ್ರದಲ್ಲಿರುವ ಆಂಜನೇಯ ದೇವಾಲಯವೂ ಒಂದಾಗಿದೆ. ಈ ಎಲ್ಲಾ ಆಂಜನೇಯ ದೇವಾಲಯಗಳಿಗೆ 'ಬಸವಿ ಬಿಡುವ' ಸಂಪ್ರದಾಯವು ಪ್ರಾರಂಭವಾಯಿತು. ಹನುಮ ಪರಂಪರೆಗೆ ಸೇರಿದ ಬಸವಿಯರಿಗೆ ಮುದ್ರೆ ಹಾಕಲಾಗುತ್ತದೆ. ಬಸವಿಯರಿಗೆ ಎದೆಯ ಮೇಲ್ಭಾಗಗಳಿಗೆ ಮುದ್ರೆಹಾಕುತ್ತಾರೆ. ಮುದ್ರೆಯ ಅಗ್ನಿ ಸ್ಪರ್ಶದಿಂದ ಪವಿತ್ರರಾಗುವರೆಂಬ

ನಂಬಿಕೆ ಅವರಲ್ಲಿದೆ. ಮುದ್ರೆ ಹಾಕಿದ ಎತ್ತು ಬಸವನಾದರೆ, ಮುದ್ರೆ ಹಾಕಿಸಿಕೊಂಡ ಮಹಿಳೆ ಬಸವಿಯಾಗುತ್ತಾಳೆ. ಬಸವ ಊರಿನ ದೇವಸ್ಥಾನಕ್ಕೆ ಬಿಟ್ಟ ವೃಷಭ, ಅದು ದೇವರಿಗೆ ಸೇರಿದ್ದು. ಊರಿನಲ್ಲಿ ಅದು ಏನು ಮಾಡಿದರೂ, ಯಾರ ಹೊಲವನ್ನು ಮೇದರೂ ಶಿಕ್ಷೆಯಿಲ್ಲ. ಅದಕ್ಕೆ ಪೂರ್ತಿ ಸ್ವಾತಂತ್ರ್ಯ ಉಂಟು. ಬಸವಿಯೂ ಅಂಥವಳೇ. ಅವಳೂ ದೇವರಿಗೆ ಸೇರಿದವಳು. ಮತ್ತು ಅವಳಿಗೆ ಯಾವ ಪುರುಷನ ಜೊತೆಯಾದರೂ ಸಂಬಂಧ ಇಟ್ಟುಕೊಳ್ಳುವ ಸ್ವಾತಂತ್ರ್ಯ ಉಂಟು.

ಈ ಬಗ್ಗೆ 'ಅಮುಕ್ತ ಮೌಲ್ಯದ' ಗ್ರಂಥದಲ್ಲಿ ವಿಜಯನಗರದ ಅರಸರುಗಳ ರಸಿಕ ಜೀವನವನ್ನು ಕಾಣಬಹುದು. ಆಯಾ ಮಂಡಲದ ರಾಜರ, ನಾಯಕರ, ಪಾಳೇಗಾರರ, ಸಣ್ಣ ಸಂಸ್ಥಾನದ ರಾಜರು. ಜಮೀನ್ದಾರರು, ದೇವದಾಸಿಯರ ಪೋಷಣೆಗೆ ಮಹತ್ವಕೊಟ್ಟಿದ್ದು, ದೇವಾಲಯಗಳಲ್ಲಿ ಮತ್ತು ರಾಜ ಸಭೆಗಳಲ್ಲಿ ವೇಶ್ಯೆಯರ ನೃತ್ಯಸ್ಪರ್ಧೆಗಳ ಏರ್ಪಾಡುಗಳು ಆಗುತ್ತಿದ್ದವು. "ಆ ಕಾಲದಲ್ಲಿ ದ್ರಾವಿಡ ಸ್ತ್ರೀಯರು ಮಾತನಾಡುತ್ತಿರುವಾಗ, ಆ ಮಾತು ಕೇಳಿದ ಎಂಥಹ ಯೋಗಿಗಳಿಗೂ ಭೋಗತಾಪ ಉಂಟಾಗಿ ಮೈಪುಳಕಗೊಳ್ಳುತ್ತದೆ. ಆ ಹೆಂಗಸರು ತಮ್ಮೆಡೆಗೆ ನೇರವಾಗಿ ನೋಡದಿದ್ದರೂ ಯಾವುದೇ ಸಂದರ್ಭದಲ್ಲಿ ತಲೆ ತಿರುಗಿಸಿದಾಗ ಅವರ ಮುಖ ನೋಡಿದರೆ ಸಾಕು, ಮನ್ಮಥನ ಹೂಬಾಣ ತಗುಲಿದಂತೆ ಅನುಭವವಾಗುತ್ತದೆ. ವಿಷ್ಣುಭಕ್ತರು ಎದುರಿಗೆ ಸಿಕ್ಕಾಗ ಆ ಹೆಂಗಸರು ನಮಸ್ಕರಿಸುವ ಭಂಗಿಗಳು ನೋಡಿದಾಗ ದೇವೇಂದ್ರನು ಸಹ 'ನನಗೆ ಇಂತಹ ನಮಸ್ಕಾರಗಳು' ಲಭಿಸಿದರೆ ಚೆನ್ನಾಗಿರುತ್ತದೆ ಎಂದು ಕೊಳ್ಳುತ್ತಾನೆ. ದೇವಾಲಯದೊಳಗಿಂದ ಶಂಖಧ್ವನಿ ಕೇಳಿಸಿದಾಗ ಆ ಸ್ತ್ರೀಯರು ಅತ್ತ ಕಡೆಗೆ ತಿರುಗಿ ನೋಡುವ ನೋಟ ಪುರುಷರ ಹೃದಯವನ್ನು ಅಪಹರಿಸುತ್ತದೆ"[೫]. ಅಂದರೆ ವಿಜಯನಗರದ ವೇಶ್ಯೆಯರು ಬಹಳ ಸುಂದರಿಯರು, ಅಪ್ಸರೆಯರಂತಿರುತ್ತಾರೆ. ಎಂತಹ ಗಂಡಸರನ್ನಾಗಲಿ ವಶಪಡಿಸಿಕೊಳ್ಳುವ ಆಕರ್ಷಕ ಮೊಗ, ಸುವಾಸನೆಯನ್ನು ಹೊರಚೆಲ್ಲುವ ಬಳ್ಳಿಯಂತೆ ಬಳಕುವ ಅವರ ಶರೀರ, ಅವರು ರತಿ ಮನ್ಮಥ ಶಾಸ್ತ್ರದಲ್ಲಿ ಪಾರಂಗತರಾಗಿದ್ದರು. ಈ ವೇಶ್ಯೆಯರು ಪಡಶಾಲೆಯಲ್ಲಿ ಕಂಬಿಗಳಿಗೆ ತಗಲು ಹಾಕಿದ ಪಂಜರದಲ್ಲಿನ ಗಿಳಿಗಳು ವಿಟಪುರುಷನನ್ನು ಗುರುತು ಹಿಡಿದು 'ಭಾವಾ' ಎಂದು ಕರೆಯುತ್ತವೆ. ಭೂಮಿಗಿಳಿದು ಬಂದು ವಾಸಿಸುತ್ತಿರುವ ತಾರೆಯಂತೆಯೇ ಆ ವೇಶ್ಯೆಯರಿದ್ದು ಎಷ್ಟಾದರೂ ಸರಿ ಬೆಲೆ ಕೊಡಲು ಅರ್ಹರಾದವರಿದ್ದರು ಎನ್ನಲಾಗಿದೆ. ಹೀಗೆ 'ಬಸವಿ' ಈ ಪದವೇ ಶೈವ ಪಂಥಕ್ಕೆ ಸೇರಿದಂತೆ ಕಂಡರೂ, ಅದರ ಆಚರಣೆಗಳೆಲ್ಲವೂ ವೈದಿಕ ಪರಂಪರೆಗೆ ಸೇರಿದುದು ಅಗ್ನಿ, ವೈದಿಕರಿಗೆ ಶ್ರೇಷ್ಠವಾದುದಾಗಿದೆ. ಅಂದರೆ ಪಿತೃ ಮೂಲ ಪರಂಪರೆಗೆ ಸೇರಿದೆ. "ಧರ್ಮ ಪ್ರಚಾರದ ಉದ್ದೇಶ ಮತ್ತು ಪುರುಷ ಶಾಹಿ ಸಂಸ್ಕೃತಿಯ ಸ್ವಾರ್ಥತೆಗಳೆರಡೂ ಬಸವಿ ಸಂಪ್ರದಾಯದಲ್ಲಿದೆ"[೬].

ವಿಜಯನಗರ ಕಾಲದಲ್ಲಿ ಬಸವಿ ಸಂಪ್ರದಾಯ ಹುಟ್ಟಿಕೊಂಡಿದ್ದು, ಇದಕ್ಕೆ ಧಾರ್ಮಿಕ ಸ್ವರೂಪವಿದೆ. ಬಹುಸಂಖ್ಯೆಯಲ್ಲಿ ಹನುಮಂತ ದೇವಾಲಯಗಳನ್ನು ಕಟ್ಟಿಸಿ ಅದಕ್ಕೇ ಹೆಣ್ಣುಬಿಡುವ ಪದ್ಧತಿಗೆ ಅಡಿಗಲ್ಲು ಹಾಕಿದರು. ಈ ಕಾಲದಲ್ಲಿ ಹೇರಳವಾಗಿದ್ದಷ್ಟು ದೇವದಾಸಿಯರು ಇನ್ನಾವ ಸಾಮ್ರಾಜ್ಯಗಳ ಕಾಲಾವಧಿಯಲ್ಲಿ

ಇರಲಿಲ್ಲ. ಇದಕ್ಕೆ ಅನೇಕ ಕಾರಣಗಳು ಸಿಗುತ್ತವೆ. ಮುಖ್ಯವಾಗಿ ವಾಣಿಜ್ಯ ಕೇಂದ್ರವಾಗಿ ಬೆಳೆದ ಇದು, ದೇಶ ವಿದೇಶಗಳಿಂದ ಬಂದ ಸಾವಿರಾರು ವ್ಯಾಪಾರಸ್ಥರಿಗೆ ಆಶ್ರಯ ನೀಡಿತ್ತು. ಬಂದವರು ಹಲವು ತಿಂಗಳುಗಳು ಅಥವಾ ವರ್ಷಗಳೋ ಇಲ್ಲಿದ್ದು ವ್ಯಾಪಾರ ನಡೆಸುತ್ತಿದ್ದರು. ಈಗಿನಂತೆ ಆಗ, ಬೇಕಾದಲ್ಲಿಗೆ ಹೋಗಲು ಆಧುನಿಕ ವಾಹನ ಸೌಲಭ್ಯಗಳಿರಲಿಲ್ಲ. ಹೀಗಾಗಿ ಅಷ್ಟು ದೀರ್ಘ ಅವಧಿಯವರೆಗೆ ಅವರು ತಮ್ಮ ಹೆಂಡತಿಯರನ್ನು ಬಿಟ್ಟಿರಲೇ ಬೇಕಾದ ಅನಿವಾರ್ಯತೆ ಇತ್ತು. ಈ ಸಂದರ್ಭದಲ್ಲಿ ಅವರು ಹೆಣ್ಣಿನ ಸಂಗವನ್ನು ಆಪೇಕ್ಷಿಸುತ್ತಿದ್ದರು. ಅದಕ್ಕಾಗಿ ವಿಜಯನಗರ ಸಾಮ್ರಾಜ್ಯವು ದೇವಾಲಯಗಳಿಗೆ ಹೆಣ್ಣುಗಳನ್ನು ಬಿಡುವ ಸಂಪ್ರದಾಯಕ್ಕೆ ವಿಶೇಷ ಪ್ರಾಧಾನ್ಯತೆ ನೀಡಿ ಪ್ರೋತ್ಸಾಹಿಸಿದ್ದರು. ಜೊತೆಗೆ ಸೈನಿಕರು ಇಂತಹ ಮಹಿಳೆಯರಿದ್ದರೆ ಹುರುಪಿನಿಂದ ಹೋರಾಡುವರು ಹಾಗೂ ಅವರಲ್ಲಿ ಮೋಹಗೊಂಡು ಒಲಿಸಿಕೊಳ್ಳುವುದಕ್ಕಾಗಿ ಸೈನ್ಯಕ್ಕೂ ಸೇರುವರೆಂಬ ಉದ್ದೇಶ ಹೊಂದಿದ್ದರ ಪರಿಣಾಮ ವಿಜಯನಗರ ಸುಭದ್ರ ಮಿಲಿಟರಿ ಹೊಂದಿತ್ತು. ಅದು ಕಾಲಾಳು ಪಡೆ, ಅಶ್ವಪಡೆ, ಗಜದಳ, ಒಂಟಿ ಮತ್ತು ಫಿರಂಗಿ ದಳಗಳಿಂದ ಕೂಡಿತ್ತು. ತಾಳೀಕೋಟೆ ಯುದ್ಧದ ಸಮಯದಲ್ಲಿ ವಿಜಯನಗರ ಹೊಂದಿದ್ದ ಸೈನ್ಯದ ಸಂಖ್ಯೆ ಕಾಲ್ದಳ-೧,೦೦,೦೦೦, ಅಶ್ವದಳ-೬೦,೦೦೦, ರಥದಳ-೩೦೦೦, ಗಜದಳ-೧೦೦೦, ಇತ್ತು. ಈ ಸೈನ್ಯದಳದವರ ದೈಹಿಕ ಅಗತ್ಯತೆ ಪೂರೈಸುವ ಜೊತೆ ಜೊತೆಯಲ್ಲಿಯೇ ಧರ್ಮ ಪ್ರಚಾರ ಮತ್ತು ಅಂದಿನ ಸಾಮಾಜಿಕ ಅಗತ್ಯದ ಪೂರೈಕೆಗೆ ದೇವದಾಸಿ ಪದ್ಧತಿಯು ಸಹಕಾರಿಯಾಗಿತ್ತು. ವಿಜಯನಗರಕ್ಕೆ ಭೇಟಿ ನೀಡಿದ ಬಹುಪಾಲು ವಿದೇಶಿ ಪ್ರವಾಸಿಗರು ಇಲ್ಲಿರುವ ದೇವದಾಸಿಯರ ಕುರಿತಂತೆ ಉಲ್ಲೇಖಿಸುತ್ತಾರೆ. ಹನುಮಂತ ದೇವರ ದೇವಾಲಯಕ್ಕೆ 'ಬಸವಿ' ಬಿಡುವ ಸಂಪ್ರದಾಯಕ್ಕೆ ಸಾಂಸ್ಕೃತಿಕ ಚಹರೆಗಿಂತಲೂ ವ್ಯವಹಾರಿಕ ಚಹರೆ ಇದೆ. ಇದಕ್ಕೆ ಜೋಗತಿ ಸಂಪ್ರದಾಯಕ್ಕಿರುವಂತೆ ಪ್ರಬಲವಾದ ಪೌರಾಣಿಕ ಹಿನ್ನೆಲೆ ಇಲ್ಲ.

ಈ ಅಧ್ಯಯನ ಪ್ರದೇಶಗಳಲ್ಲಿ ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ಬಿಡುವುದಕ್ಕೆ ಹೊರಿ ಹೊರಿಸುವುದು, ಮನೆಗೆ ಬಿಡುವುದು, ದೇವರಿಗೆ ಬಿಡುವುದು, ದೇವರ ಹೊರಿಸುವುದು, ದೇವರ ಬಿರುದಾವಳಿ, ಮುದ್ರೆ ಹಾಕಿಸುವುದು, ಮೊದಲಾಗಿ ಹೇಳುವರು. ಇಲ್ಲಿ ನಾಯಕರು, ತಳವಾರ, ಬೇಡರು, ಗಂಗಾಮತದವರು, ಹರಿಜನರು ತಮ್ಮ ಹೆಣ್ಣುಮಕ್ಕಳನ್ನು ದೇವರಿಗೆ ಬಿಡುವ ಸಂಪ್ರದಾಯವಿದೆ. ರಾಜ್ಯದಲ್ಲಿಯೇ ಹೆಚ್ಚಾಗಿ ಬಳ್ಳಾರಿ ಜಿಲ್ಲೆಯಲ್ಲಿ ಈ ಸಂಪ್ರದಾಯ ಕಂಡುಬಂದರೆ, ಅದರಲ್ಲಿ ಪ್ರಮುಖವಾಗಿ ಬಹುಪಾಲು ಸ್ತ್ರೀಯರು ಮುದ್ರೆ ಹಾಕಿಸಿಕೊಳ್ಳುವುದು, ಕೂಡ್ಲಿಗಿಯಲ್ಲಿ ಕಂಡುಬರುತ್ತದೆ. ಮುದ್ರೆಗಳಲ್ಲಿ ಎರಡು ವಿಧಗಳಿವೆ. ೧. ಗಟ್ಟಿಮುದ್ರೆ ೨. ಹೂ ಮುದ್ರೆ. ಆರಂಭದಲ್ಲಿ ಗಟ್ಟಿ ಮುದ್ರೆ ಇದ್ದು, ಬರುಬರುತ್ತಾ ನಾಗರಿಕತೆಗೆ ಒಳಗಾದಂತೆಲ್ಲ ಉಗ್ರ ಆಚರಣೆಗಳು ಸೌಮ್ಯಗೊಳ್ಳತೊಡಗಿದ ಪರಿಣಾಮ ಹೂ ಮುದ್ರೆ ಆಚರಣೆಗೆ ಬಂದಿವೆ.

### ೫.೪ ಗಟ್ಟಿಮುದ್ರೆ ಸಂಸ್ಕಾರದ ವಿಧಾನ

ಸಾಮಾನ್ಯವಾಗಿ ನನ್ನ ಅಧ್ಯಯನ ಕ್ಷೇತ್ರಕ್ಕೆ ಒಳಪಟ್ಟ ಕೂಡ್ಲಿಗಿ ಪಟ್ಟಣದ ೧೦೦೦ ಜನ ದೇವದಾಸಿಯರಲ್ಲಿ ೮೬೦ ರಷ್ಟು ದೇವದಾಸಿಯರು ಹನುಮಂತ ದೇವರ ಮುದ್ರೆಯನ್ನು ಒತ್ತಿಸಿಕೊಂಡವರಿದ್ದು, ಈ ಕಾರ್ಯವನ್ನು ಶಾಸ್ತ್ರ ಕೇಳಿ ಬಂದು ಶುಭ ದಿನದಂದು ಮುಹೂರ್ತವನ್ನು ಗೊತ್ತುಮಾಡುವರು. ಸಾಮಾನ್ಯವಾಗಿ ರಾಮನವಮಿ,

ಲಕ್ಷ್ಮಿಯದಿನ ಶುಕ್ರವಾರ, ಶನಿವಾರ ಅಥವಾ ಗುರುವಾರಗಳಂದು ಮಾಡುವರು. ಇದರ ಅರ್ಪಣೆಯ ಸಮಾರಂಭದ ದಿನದಂದು, ಆ ಹುಡುಗಿಯ ತಂದೆ ತಾಯಿಗಳು, ಸಂಬಂಧಿಕರು, ಹಿರಿಯ ದೇವದಾಸಿಯರು ಸೇರಿ ಮಾಡುವ ಆಚರಣೆ ಆಗಿದೆ. ಅಂದು ಮನೆಯನ್ನೆಲ್ಲಾ ಸಾರಿಸಿ, ಸುಣ್ಣದ ಕಾಣೆ ಇಡುವರು, ದೇವದಾಸಿಯಾಗಲಿರುವ ಕನ್ನೆಯು ಬೆಳಗಿನಿಂದ ಉಪವಾಸವಿರಬೇಕು. ಆಕೆಗೆ ಅರಿಶಿಣದ ನೀರನ್ನು ಹಾಕಿ, ಹಸಿರು ಬಳೆಗಳನ್ನು ತೊಡಿಸಿ, ಹೂ ಮುಡಿಸಿ ವಧುವಿನಂತೆ ಶೃಂಗಾರಮಾಡುವರು. ಆ ದಿನ ಸಂಸ್ಕಾರ ಕಾರ್ಯಕ್ರಮವನ್ನು ಸಂತೋಷವಾಗಿ ಆಚರಿಸಲು ಹೋಳಿಗೆ ಮತ್ತಿತರ ಸಿಹಿ ಪದಾರ್ಥಗಳನ್ನು ಅಣಿಗೊಳಿಸುವುದು ರೂಢಿಯಲ್ಲಿದೆ.

ಮಂಗಳ ದ್ರವ್ಯಗಳೊಡನೆ ದೇವಾಲಯಕ್ಕೆ ಹೋಗಿ ದೇವರಿಗೆ ಪೂಜೆ ಸಲ್ಲಿಸಿದ ಬಳಿಕ, ಗರ್ಭ ಗುಡಿಯ ಹೊರಗೆ ಕಂಬಳಿ ಗದ್ದುಗೆ ಹಾಸಿ, ಸುರಿಗೆ ಸುತ್ತಿ ೪ ಮೂಲೆಗಳಲ್ಲಿ ಕಳಸ ಹೂಡುತ್ತಾರೆ. ನಾಲ್ಕು ಕಡೆ ಅಕ್ಕಿಯ ಚಿಕ್ಕ ರಾಶಿಯನ್ನು ಹಾಕಿ ಅದರ ಮೇಲೆ ನಾಲ್ಕು ತಂಬಿಗೆಗಳನ್ನು ಇಟ್ಟು ಅವುಗಳಿಗೆ ಅರಿಶಿನ ಕುಂಕುಮ ಹಚ್ಚಿ ಅದರಲ್ಲಿ ವೀಳ್ಯೆದೆಲೆಯನ್ನು ಬಿಡುವರು, ಹೀಗೆ ಅಲಂಕರಿಸಿದ ತಂಬಿಗೆಗಳಿಗೆ, ಈ ನಾಲ್ಕು ಮೂಲೆಗೆ ಸೇರಿದಂತೆ, ೯ ಸುತ್ತು ದಾರವನ್ನು ಸುತ್ತಿ, ಅದರ ಮಧ್ಯದಲ್ಲಿ ಹುಡುಗಿಯನ್ನು ಕೂರಿಸಿ, ಸಮಾರಂಭಕ್ಕೆ ಅಗತ್ಯವಾದ ಸಾಮಾಗ್ರಿಗಳಾದ ಅರಿಶಿನ ಕುಂಕುಮ, ತೆಂಗಿನ ಕಾಯಿ, ಬೆಳೆಹಣ್ಣು, ವೀಳ್ಯೆದೆಲೆ, ಅಡಿಕೆ, ನಾಮ, (ವಿಭೂತಿ), ಶ್ರೀಗಂಧ, ಒಂದು ತಟ್ಟೆಯ ತುಂಬಾ ಅಕ್ಕಿ ತುಂಬಿ, ಅದರಲ್ಲಿ ೫ ಕೊಬ್ಬರಿ ಬಟ್ಟಲು, ಉತ್ತುತ್ತಿ, ದುಂಡಡಿಕೆ, ಕೇರಬೀಜ, ಅರಿಶಿನದಕೊಂಬು, ಇಟ್ಟಿರುತ್ತಾರೆ. ಇನ್ನೊಂದು ತಟ್ಟೆಯಲ್ಲಿ ಹೊಸ ಸೀರೆ, ಹೊಸ ಬಳೆ, ತಾಳಿ, ಇಟ್ಟು ಪೂಜಾರಿಯ ಕೈಗೆ ಕೊಡುತ್ತಾರೆ. ಕಳಸ ಹೂಡಿ, ಕರಿ ಕಂಬಳಿಯಲ್ಲಿ ಅಕ್ಕಿಚೆಲ್ಲಿ ಐದು ಗುಂಪು ಅಕ್ಕಿಯ ನಿಧಿಯನ್ನು ಕಂಬಳಿಯ ಮೇಲೆ ಹಾಕುತ್ತಾರೆ. ಮತ್ತೊಂದು ಕಡೆ ಹಿತ್ತಾಳೆಯ ತಂಬಾಳಿಯಲ್ಲಿ ಉಣಸೆಮರದ ತೊಗಟೆಯಿಂದ ಕೆಂಡ ಮಾಡುತ್ತಾರೆ. ಕಾರಣ ಹೆಚ್ಚು ಕಾವು ಕೊಡುತ್ತದೆ ಮತ್ತು ಬೇಗ ಕೆಂಡವಾಗುವುದೆಂದು ಇದನ್ನು ಬಳಸುತ್ತಾರೆ. ಸಮಾರಂಭದಲ್ಲಿ ಪಾಲ್ಗೊಂಡವರಿಗೂ ಹಾಗೂ ಹುಡುಗಿಯರಿಗೆ ಕಂಕಣ ಕಟ್ಟುತ್ತಾರೆ. ಮುತ್ತೈದೆಯರು, ಕನಿಷ್ಟ ಐದು ಜನರಾದರೂ ಸಾಸುವೆ ಇಟ್ಟು, ಕಳಸ ಬೆಳಗುತ್ತಾರೆ. ಅನಂತರ ಪೂಜಾರಿ ಕೆಲ ಮಂತ್ರಗಳನ್ನು ಘರಿಸಿ ಪಂಚಲೋಹದಿಂದ ಮಾಡಿದ ಶಂಖ ಮತ್ತು ಚಕ್ರಗಳ ಮುದ್ರೆಗಳನ್ನು ಕೆಂಪಾಗಿ ಕಾಯಿಸುವರು. ಅವು ಕಾದಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಮೊದಲು ವೀಳ್ಯೆದೆಲೆಯ ಮೇಲೆ ಮುದ್ರೆ ಒತ್ತುತ್ತಾನೆ. ಅನಂತರ ಅದನ್ನು ದೇವದಾಸಿಯಾಗಲಿರುವ ಹುಡುಗಿಯ ಎದೆಯ ಬಲ ಮೇಲ್ಭಾಗದ ಮೇಲೆ ಚಕ್ರದ ಮುದ್ರೆಯನ್ನು ಎಡ ಭಾಗದ ಮೇಲೆ ಶಂಖದ ಮುದ್ರೆಯನ್ನು ಒತ್ತಿ ಅದೇ ಕ್ಷಣದಲ್ಲಿಯೂ ಬಲಗೈ ತೋಳ ಮೇಲೆ ಪದ್ಮವನ್ನು ಗುರುತು ಮಾಡುತ್ತಾನೆ. ಅನಂತರ ಈಗಾಗಲೇ ಬಟ್ಟಲಿನಲ್ಲಿ ಕಲಿಸಿ ಇಟ್ಟಿದ್ದ ನಾಮವನ್ನು ಅವುಗಳ ಮೇಲೆ ಲೇಪಿಸುತ್ತಾನೆ. ನೋವು ತಾಳಿಕೊಳ್ಳಲಾರದೇ ಚೀರಿದರೆ 'ಹರಿಹರಿ' ಎನ್ನುವಂತೆ ಸಲಹೆ ಮಾಡುತ್ತಾರೆ. (ಇದು ಆ ಹುಡಿಗಿ ಏನಾದರೂ ಅಪರಾದ ಮಾಡಿದ್ದರೆ ಮುಂದೆ ಹೆಚ್ಚಿನ ಗಾಯವಾಗುತ್ತವೆ. ಇಲ್ಲದಿದ್ದರೆ ಬೇಗ ಗಾಯ ಮಾಯುವುದೆಂಬ ನಂಬಿಕೆ ಇದೆ). ಹೀಗೆ ಮುದ್ರೆ ಹಾಕಿದ ಮೇಲೆ ಅರ್ಚಕರು ಹನುಮಂತ ದೇವರ ತಾಳಿಯನ್ನು

(ತಾಳಿಯ ಮೇಲೆ ಹನುಮಂತನ ಮುದ್ರೆ ಇರುವ ಒಂಟಿ ತಾಳಿಯನ್ನು) ದೇವರ ಪಾದದ ಮೇಲಿಟ್ಟು, ಬಳಿಕ ಹುಡುಗಿಯ ಕೊರಳಿಗೆ ಅದನ್ನು ತಾವೇ ಕಟ್ಟುತ್ತಾರೆ. ಅನಂತರ ಆಕೆಯು ಪಾಲಿಸಬೇಕಾದ ನಿತ್ಯನಿಯಮಗಳನ್ನು ಮೆತ್ತಗೆ ಕಿವಿಯ ಬಳಿ ಹೇಳಿ ತನಗೆ ಸೇರಬೇಕಾದ ಸಾಜೀ ಶುಲ್ಕ ಪಡೆಯುತ್ತಾನೆ. ದೇವಸ್ಥಾನದಲ್ಲಿ ಮೂರು ಬಾರಿ ಪ್ರದಕ್ಷಿಣೆ ಹಾಕಿ ಉಡಿ ತುಂಬಿದ್ದನ್ನು ಸಡಿಲಿಸಿ ಎಲ್ಲರಿಗೂ ನಮಸ್ಕಾರ ಮಾಡಿ ಮನೆಗೆ ಹೋಗಿ, ಬಂಧು ಬಾಂಧವರಿಗೆಲ್ಲಾ ಊಟಕ್ಕೆ ಹಾಕುವರು, ಅಲ್ಲಿಗೆ ಅವಳು ಹನುಮಂತ ದೇವರ ಪತ್ನಿಯಾಗುವಳು.

**೫.೫ ಹೂ ಮುದ್ರೆ ವಿಧಾನ**

ಡಾ.ಶೈಲಜಾಹಿರೇಮಠ್ ಅವರ ಅಭಿಪ್ರಾಯದಂತೆ, ಆಚರಣೆಗಳು ನಾಗರಿಕತೆಗೆ ಒಳಗಾದಂತೆಲ್ಲ ಸೌಮ್ಯಗೊಳ್ಳುತ್ತ ಹೋಗುತ್ತವೆ ಎನ್ನುವ ಹಿನ್ನೆಲೆಯಲ್ಲಿ, ಪರಂಪರಾಗತವಾಗಿದ್ದ ಗಟ್ಟಿಮುದ್ರೆಯ ಬದಲಾಗಿ ಈಗ 'ಹೂ ಮುದ್ರೆ' ಆಚರಣೆಯಲ್ಲಿದೆ. ದೇವದಾಸಿ ನಿಷೇಧದ ಕಾಯ್ದೆ ಕಾನೂನುಗಳು ಜಾರಿಗೆ ಬಂದ ಮೇಲೆ, ಕದ್ದು ಮುಚ್ಚಿ ಕಳ್ಳತನದಿಂದ ಮಾಡುವ ದೇವದಾಸಿ ಸಂಸ್ಕಾರಗಳಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಳ್ಳಲಾಗಿದೆ. ಅಂತಹ ಬದಲಾವಣೆಯ ಸಂಸ್ಕಾರದ ವಿಧಾನವೇ ಈ ಹೂ ಮುದ್ರೆಯಾಗಿದೆ ಎಂತಲೂ ಹೇಳಬಹುದು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಂತೆ ಈ ಸಂಸ್ಕಾರವನ್ನು ರಹಸ್ಯವಾಗಿ ನೆರವೇರಿಸುವುದರ ಬಗ್ಗೆ ಮಾಹಿತಿ ಲಭ್ಯವಾಗಿದೆ. ಹಿಂದಿನಂತೆ ಅಲ್ಲಿಗೆ ಹೋಗಿ ಕೆಲವರು ಸಂಸ್ಕಾರ ಪೂರೈಸಿಕೊಂಡು ಬರುವರು. ಹಿಂದೆ ಇದ್ದಂತೆ ಇದನ್ನು ದೇವಸ್ಥಾನದಲ್ಲಿ ಆಚರಿಸದೇ ತಮ್ಮ ತಮ್ಮ ಮನೆಗಳಲ್ಲಿಯೇ ಅಥವಾ ಖರ್ಚನ್ನು ಕೊಟ್ಟು ಬೇರೆಯವರ ಮನೆಯಲ್ಲಿ ನೆರವೇರಿಸುವರು. ಇದನ್ನು ಬಹು ಗೌಪ್ಯವಾಗಿ ಹಿರಿಯ ದೇವದಾಸಿಯರ ಜೊತೆ ಮಾತನಾಡಿ, ಶುಭ ದಿನದಂದು ಮನೆ ಸ್ವಚ್ಛಗೊಳಿಸಿ, ಸಾರಿಸಿ, ಮಧ್ಯರಾತ್ರಿಯಲ್ಲಿ ದಾಸಪ್ಪನನ್ನು ಕರೆದುಕೊಂಡು ಮನೆಯ ಮಧ್ಯದಲ್ಲಿ ಅಥವಾ ದೇವರ ಕೋಣೆಯಲ್ಲಿ ಸುರಿಗೆ ಸುತ್ತಿ, ಹೊಸ ಬಟ್ಟೆ ಉಡಿಸಿ, ಹೋಳಿಗೆ ಮಾಡಿ, ಸಂಸ್ಕಾರಕ್ಕೆ ಬೇಕಾದ ಎಲ್ಲಾ ಪದಾರ್ಥಗಳನ್ನು ಅಂದರೆ ಗಟ್ಟಿ ಮುದ್ರೆಯಲ್ಲಿ ಬರುವಂತೆ, ಎಲ್ಲವನ್ನು ಜೋಡಿಸಿ, ಆ ವೇಳೆಗೆ ಪೂಜಾರಪ್ಪನನ್ನು ಕರೆದುಕೊಂಡು ಬಂದು, ಕೆಲ ಮಂತ್ರಗಳನ್ನು ಪಠಿಸಿ, ಎರಡು ಮಲ್ಲಿಗೆ ಹೂವನ್ನು ದೇವರ ಮುಂದಿನ ದೀಪಕ್ಕೆ ಹಿಡಿದು ಎದೆಯ ಮೇಲಿನ ಬಲ ಮತ್ತು ಎಡಭಾಗಗಳ ಮೇಲೆ ಒತ್ತುತ್ತಾನೆ. ಅದಾದ ಮೇಲೆ ಹನುಮ ತಾಳಿಯನ್ನು ಹಿರಿಯ ದೇವದಾಸಿ, ಅಥವಾ ಸೋದರ ಮಾವನ ಕಡೆಯಿಂದ ಕಟ್ಟಿಸುವರು. ನೈಮಿತ್ಯಕವಾಗಿ ಪೂಜಾರಿ ಆಕೆ ಪಾಲಿಸಬೇಕಾದ ನಿಯಮನಿತ್ಯಗಳನ್ನು ಹೇಳಿ ತನಗೆ ಕೊಡಬೇಕಾದ ೧೦೧ ಅಥವಾ ೫೦೧ ಹಣ ಸಾಜಾ ಪಡೆದು ಹಿಂದಿರುಗುವನು. ಬೆಳಗಾದ ಮೇಲೆ ತಮ್ಮ ಬಂಧು ಬಳಗದವರಿಗೆ, ಅಕ್ಕ ಪಕ್ಕದವರಿಗೆ ಎಲೆಅಡಿಕೆ, ಸಕ್ಕರೆ, ಬಾಳೆಹಣ್ಣು ಹಂಚುವರು. ಇದರಿಂದ ಆ ಮನೆಯ ಹುಡುಗಿಗೆ ಸಂಸ್ಕಾರವಾದ ವಿಷಯ ಎಲ್ಲರಿಗೂ ತಿಳಿಯುವುದು.

**ದೇವದಾಸಿ ಪಾಲಿಸಬೇಕಾದ ನಿತ್ಯ ನಿಯಮಗಳು**

ಪ್ರತಿ ಶನಿವಾರ ಉಪವಾಸವಿರಬೇಕು. ಸುಳ್ಳನ್ನು ಹೇಳಬಾರದು. ಹಸಿವಾದವರಿಗೆ ಅನ್ನ ನೀರು ನೀಡಬೇಕು. ನಿರಾಶ್ರಿತರಿಗೆ ಆಶ್ರಯ ನೀಡಬೇಕು. ಯಾರಾದರೂ ಬೈದರೆ ಅಥವಾ ಹೊಡೆದರೆ ತಿರುಗಿ ಬೈಯುವುದು ಮತ್ತು

ಹೊಡೆಯುವುದನ್ನು ಮಾಡಬಾರದು. ಪರಿಚಯ ಅಥವಾ ಬಂಧು ವರ್ಗದಲ್ಲಿ ಯಾರಾದರೂ ಮೃತಪಟ್ಟರೆ, ಅವರ ಶವ ಸಂಸ್ಕಾರ ಆಗುವವರೆಗೂ ಊಟ ಮಾಡದೇ ಶವಸಂಸ್ಕಾರದ ಅನಂತರ ಸ್ನಾನ ಮಾಡಿ, ಹನುಮಂತ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸಿದ ಮೇಲೆಯೇ ಏನಾದರೂ ಊಟ ಮಾಡಬೇಕು. ಬೇರೆಯವರ ಎಂಜಲನ್ನು ತಿನ್ನಬಾರದು. ಯಾವಾಗಲೂ ದೇವರ ಧ್ಯಾನ ಮಾಡುತ್ತಾ ತಮ್ಮನ್ನು ಬಯಸಿ ಬಂದವರಿಗೆ ತೃಪ್ತಿ ಪಡಿಸುವುದೇ ಅವರ ಕರ್ತವ್ಯವೆಂಬ ನಿಯಮಗಳನ್ನು ಪಾಲಿಸಲು ಹೇಳುವರು.

**೫.೬ ಮುತ್ತುಕಟ್ಟುವಿಕೆ ವಿಧಾನ**

ಅಧ್ಯಯನ ಕ್ಷೇತ್ರವಾದ ಕೂಡ್ಲಿಗಿ ಪಟ್ಟಣದಲ್ಲಿ ೧೦೦೦ ಜನ ದೇವದಾಸಿಯರಲ್ಲಿ ೪೦ ರಷ್ಟು ದೇವದಾಸಿಯರು ರೇಣುಕೆಯ ಸಂಪ್ರದಾಯದವರಾಗಿದ್ದು, ೫೦ ಜನ ದೇವದಾಸಿಯರು ಸವದತ್ತಿ ಎಲ್ಲಮ್ಮ ಹಾಗೂ ಹುಲಿಗಿಯ ಹುಲಿಗೆಮ್ಮಳಿಗೆ ನಡೆದುಕೊಳ್ಳುವವರಾಗಿದ್ದು, ಮುತ್ತು ಕಟ್ಟಿಸಿ ಕೊಂಡಿದ್ದಾರೆ˙ಈ ಮುತ್ತು ಕಟ್ಟುವ ಕಾರ್ಯಕ್ರಮವು ಸಾಮಾನ್ಯವಾಗಿ ಭರತ ಹುಣ್ಣಿಮೆಯ ಜಾತ್ರೆ ವೇಳೆಯಲ್ಲಿ ನೆರವೇರುತ್ತದೆ. ದೇವದಾಸಿ ಅರ್ಪಣೆಯ ಸಮಾರಂಭದ ದಿನದಂದು ಆ ಹುಡುಗಿಯ ತಂದೆತಾಯಿಗಳು, ಸಂಬಂಧಿಕರು, ಹಿರಿಯ ಜೋಗತಿ ದೇವದಾಸಿಯರು, ಗುಂಪಾಗಿ ಬಂದು ಸೇರುತ್ತಾರೆ. ಸಮಾರಂಭವನ್ನು ಸಂತೋಷವಾಗಿ ಆಚರಿಸಲು ಆದಿನ ಹೋಳಿಗೆ ಮತ್ತಿತರ ಸಿಹಿ ಪದಾರ್ಥಗಳನ್ನು ಅಣಿಗೊಳಿಸುತ್ತಾರೆ.

ಹುಡುಗಿಯನ್ನು ಅರ್ಪಿಸುವ ಪೂಜಾ ಸಮಾರಂಭಕ್ಕೆ ಬೇಕಾಗುವ ಪದಾರ್ಥಗಳು ಹೀಗಿವೆ.

೧. ಕುಂಕುಮ ಮತ್ತು ಭಂಡಾರ ಅರಿಶಿಣದ ಪುಡಿ ಕಪ್ಪುಪುಡಿ, ಹಳದಿ, ಕೆಂಪು, ನೀಲಿ, ಬಳಿ, ಒಟ್ಟು ೯ ಈ ಬಣ್ಣದ ರಂಗೋಲಿ ಪುಡಿ ಪ್ರತಿಯೊಂದು ಐದು ಅಳತೆಗಳು.

೨. ಐದು ಚಿಪ್ಪು ಬಾಳೆಹಣ್ಣು.

೩. ೨೫ ವೀಳ್ಯೆದೆಲೆ

೪. ಹೂಬತ್ತಿಯ ಒಂದು ಕಟ್ಟು

೫. ೨೫ ಅಡಿಕೆ

೬. ವಿಭೂತಿ

೭. ಶ್ರೀಗಂಧ (ತೇದಗಂಧ)

೮. ಒಂದಿಷ್ಟು ನಾಣ್ಯಗಳು

೯. ಕಳಸ

೧೦. ೪ ಬೆಲ್ಲದ ಅಚ್ಚು

೧೧. ಮುತ್ತು ಕಟ್ಟಿದ ತಾಳಿ ಅಥವಾ ತಾಳಿ ಇಲ್ಲದ ಮುತ್ತಿನ ಸರ

ಮಂಗಳವಾರ ಅಥವಾ ಶುಕ್ರವಾರ ಮಾತ್ರ ಈ ಅರ್ಪಣೆಯ ಸಮಾರಂಭ ನಡೆಯುತ್ತದೆ. ಇವು ಹುಲಿಗೆಮ್ಮ

ದೇವಿಯ ಪೂಜೆ ಮಾಡುವ ಮಂಗಳಕರ ದಿನಗಳೆಂಬ ನಂಬಿಕೆ. ಸಮಾರಂಭ ನಡೆಯುವ ಸ್ಥಳವನ್ನು ಸಗಣಿಯಿಂದ ಸಾರಿಸಿ ಶುದ್ಧಮಾಡಿ, ಆನಂತರ ೯ ಬಗೆಯ ರಂಗೋಲಿಯ ಪುಡಿಗಳಿಂದ ತಲಾ ಐದು ಅಳತೆಯಂತೆ ತೆಗೆದುಕೊಂಡು ದೇವತೆಯ ಮುಂದೆ ಕಲಾತ್ಮಕ ರಂಗೋಲಿ ಬಿಡಿಸುತ್ತಾರೆ. ಈ ಚಿತ್ರಕ್ಕೆ 'ಜೋಗತಿ ಪಟ್ಟ' ಎಂದು ಹೆಸರು. ಈ ಜೋಗತಿ ಪಟ್ಟದ ನಾಲ್ಕು ಅಂಚಿಗೆ ಕಳಸಗಳನ್ನು ಇಡಲಾಗುತ್ತದೆ. ಪ್ರತಿಯೊಂದು ಕಳಸವನ್ನು ವಿಭೂತಿ, ಬಾಳೆಹಣ್ಣು ಚಿಪ್ಪು, ಅಡಿಕೆ, ಬೆಲ್ಲ, ಮತ್ತು ವೀಳ್ಯೆದೆಲೆಯಿಂದ ಅಲಂಕರಿಸುತ್ತಾರೆ. ಕಳಸದ ಮೇಲೆ ಕೆಲವು ನಾಣ್ಯಗಳನ್ನು ಇಡಲಾಗುತ್ತದೆ. ಅರ್ಪಣೆ ಮಾಡಲಿರುವ ಹುಡುಗಿಯನ್ನು 'ಜೋಗತಿ ಪಟ್ಟದ' ಮಧ್ಯ ಭಾಗದಲ್ಲಿ  ಕೂರಿಸುವ ಮೊದಲು ನದಿಯಲ್ಲಿ ಸ್ನಾನ ಮಾಡಿಸಿ, ಹೊಸಬಟ್ಟೆ ತೊಟ್ಟು, ಹಸಿರುಬಳೆ ತೊಡಿಸಿರುತ್ತಾರೆ. ಅನಂತರ ಕೂಡಿಸಿ, ಒಬ್ಬೊಬ್ಬ ಹಿರಿಯ ದೇವದಾಸಿಯು ಒಂದೊಂದು ಕಳಸವನ್ನು ತನ್ನ ಬಲಗೈಯಿಂದ ಹಿಡಿದುಕೊಳ್ಳುವರು. ಚೌಡಕಿ, ತಂಬೂರಿ ಮತ್ತು ಜಾಗಟೆಗಳ ಹಿನ್ನೆಲೆಯೊಂದಿಗೆ ಅಲ್ಲಿರುವ ಉಳಿದೆಲ್ಲ ದೇವದಾಸಿಯರು ಎಲ್ಲಮ್ಮನ ಹೊಗಳಿಕೆಯ ಹಾಡುಗಳನ್ನು ಒಟ್ಟಾಗಿ ಹಾಡುವರು. ಹಾಡುತ್ತಿರುವಾಗಲೇ ನಾಲ್ಕು ಕಳಸಗಳ ಮೂಲಕ ಹಾದು ಹೋಗಿರುವ ದಾರವನ್ನು ಆ ನಾಲ್ಕು ಜನ ದೇವದಾಸಿಯರು ಎತ್ತಿಕೊಂಡು, ಅದನ್ನು ನಾಲ್ಕು ಬಾರಿ ಮಡಚಿ, ಅನಂತರ ಅದಕ್ಕೆ ಅರಿಶಿಣವನ್ನು ಹಚ್ಚುವರು. ಬಳಿಕ ಉಳಿದ ದೇವದಾಸಿಯರು 'ತಾಯಿ ಯಲ್ಲಮ್ಮ ಉಧೋ ಉಧೋ' ಎಂದು ಒಟ್ಟಾಗಿ ಹಾಡುತ್ತಿರುವಾಗಲೇ ಆ ದಾರವನ್ನು ಹುಡುಗಿಯ ಕತ್ತಿಗೆ ಕಟ್ಟಲಾಗುವುದು. ಬಿಳಿ ಅಥವಾ ಕೆಂಪು ಮಣಿಗಳಿಂದ ಕೂಡಿದ ಒಂದು ಸರವನ್ನು ಕೈಯಲ್ಲಿ ಹಿಡಿದು ಪೂಜಾರಪ್ಪ ತಾಳಿಯ ದಾರದ ಒಂದು ತುದಿಯನ್ನು ಆಕೆಯ ಕತ್ತಿಗೂ ಮತ್ತೊಂದು ಎಲ್ಲಮ್ಮನ ಮೂರ್ತಿಯ ಕೈಗೂ ಕಟ್ಟುತ್ತಾನೆ. ಆಗ ಹಿರಿಯ ಜೋಗತಿಯರು ಗುಡ್ಡವೇ ಝೇಂಕರಿಸುವಂತೆ ಚೌಡಿಕೆ ನುಡಿಸುತ್ತಾರೆ. ಎಲ್ಲಮ್ಮನ ಸ್ತುತಿ ಪದದ ಗೀತೆಗಳನ್ನು ಹಾಡ ತೊಡಗುತ್ತಾರೆ. ಅನಂತರ ಪೂಜಾರಪ್ಪ, ಇಂದಿನಿಂದ ನೀನು ದೇವಿಯ ಸ್ವತ್ತು, ಎಂದು ಅಧಿಕೃತವಾಗಿ ಹೇಳುತ್ತಾನೆ. ಆಗ ಹುಡುಗಿಯ ತಂದೆತಾಯಿಗಳಿಗೆ ಸೋದರ, ಸೋದರಿಯರಿಗೆ ಉತ್ತರಗಳನ್ನು ನಿರೀಕ್ಷಿಸಿ, ಸಿದ್ಧಪಡಿಸಿದ ಪ್ರಶ್ನೆಗಳನ್ನು ಕೇಳುತ್ತಾನೆ ಅವುಗಳು ಹೀಗಿವೆ.

ಪೂಜಾರಿ: ನಿಮ್ಮ ಮಗಳು, ಅಕ್ಕ ಅಥವಾ ತಂಗಿಯನ್ನು ದೇವತೆಗೆ ಸ್ವಂತ ಇಚ್ಛೆಯಿಂದ ಅರ್ಪಿಸುತ್ತೀಯೋ? ತಂದೆತಾಯಿ -ಹೌದು,

ಪೂಜಾರಿ: ಇನ್ನು ಮುಂದು ನಿಮಗೆ ಈಕೆ ಪೀಡೆಯಾಗುತ್ತಾಳೆ. ಇವಳು ಅನೇಕ ಸಮಸ್ಯೆಗಳನ್ನು ತಂದೊಡ್ಡುತ್ತಾಳೆ. ಶಾಂತಿಯಿಂದ ಊಟ ಮಾಡಲು ಮಲಗಲೂ ಇವಳು ನಿಮ್ಮನ್ನು ಬಿಡುವುದಿಲ್ಲ. ನಿನ್ನ ಆಸ್ತಿಯಲ್ಲಿ ಸಮಾನ ಭಾಗವನ್ನು ಆಕೆ ಕೇಳುತ್ತಾಳೆ.

ತಂದೆ ತಾಯಿ- ಹೌದು. ಅನಂತರ ಪೂಜಾರಿ ಹುಡುಗಿಗೆ, ಸಿದ್ಧಪಡಿಸಿದ ಪ್ರಶ್ನೆ ಕೇಳಿ, ಸಿದ್ದಪಡಿಸಿದ ಉತ್ತರ ಅಪೇಕ್ಷಿಸುತ್ತಾನೆ.

ಪೂಜಾರಿ: ನೀನು ಮನುಷ್ಯನ ಹೆಂಡತಿಯಲ್ಲ. ಪ್ರತಿ ಮಂಗಳವಾರ ಮತ್ತು ಶುಕ್ರವಾರ ನೀನು ಉಪವಾಸವಿರಬೇಕು. ಆ ದಿನಗಳಲ್ಲಿ ಜಗವನ್ನು ಕೈಯಲ್ಲಿ ಹಿಡಿದು ಭಿಕ್ಷೆ ಬೇಡಲು ಹೋಗಬೇಕು. ಕನಿಷ್ಠ ೫

ಮನೆಗಳಿಗಾದರೂ ಹೋಗಬೇಕು. ಸುಳ್ಳು ಹೇಳಬಾರದು, ಊಟ ಕೇಳಬಾರದು, ಅಪರಿಚತರಿಗೆ ಆಶ್ರಯ ನೀರು ಕೊಡು, ನಿರಾಶ್ರಿತರಿಗೆ ಆಶ್ರಯ ನೀಡು, ನೀನು ಯಾರಾದರೂ ಬೈದರೆ ಅಥವಾ ಹೊಡೆದರೆ ಯಾವಾಗಲೂ ಹಿಂದಿರುಗಿಸಬಾರದು. ಯಾವುದಾದರೂ ಸಾವನ್ನು ಕಂಡಂತಹ ಸಂದರ್ಭದಲ್ಲಿ ನೀನು ಸ್ನಾನ ಮಾಡಿ, ಯಲ್ಲಮ್ಮನ ಗುಡಿಯೊಳಗೆ ಹೋಗಬೇಕು, ಪೂಜೆ ನಂತರ ಊಟ ಮಾಡಬೇಕು. ಬೇರೆಯವರ ಎಂಜಲನ್ನು ತಿನ್ನಬಾರದು. ಯಾವಾಗಲೂ ಯಲ್ಲಮ್ಮನ ನಾಮ ಜಪಿಸುತ್ತಿರಬೇಕು.

ಹುಡುಗಿ: ಆಗಲಿ ಎನ್ನುವಳು.

ಅನಂತರ ಉಧೋ ಯಲ್ಲಮ್ಮ ಉಧೋ ಜೋಗಲ್‌ದೊ, ಉಧೋ ಯೆಕ್ಕೆಲ್‌ಧೋ ಎಂದು ಉಘೇ ಹಾಕುತ್ತಾರೆ. ಮಣಿಸರವನ್ನು ಹುಡುಗಿಯ ಕತ್ತಿಗೆ ಪೂಜಾರಿ ಕಟ್ಟುವನು. ಮತ್ತು ಜಗವನ್ನು (ಬಿದರಿನಿಂದ ಹೆಣೆದ ಭಿಕ್ಷೆಬುಟ್ಟಿಯನ್ನು) ಅವಳ ತಲೆ ಮೇಲೆ ಇರಿಸುವನು. ಅನಂತರ ಹುಡುಗಿಯು ಸ್ವಲ್ಪ ಕಾಲ ದೇವತೆಯನ್ನು ಪೂಜೆ ಮಾಡಿ ಕಳಸ ಬೆಳಗುವಳು. ಈ ಆಚರಣೆಗಳ ಬಳಿಕ ಹುಡುಗಿಯ ದೀಕ್ಷಾ ಸಮಾರಂಭ ಮುಗಿಯುತ್ತದೆ.

ಈ ಸಂಸ್ಕಾರಕ್ಕೆ ಒಳಗಾಗುವ ಕಾರಣಗಳನ್ನು ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಪ್ರಶ್ನಾವಳಿಯ ಮೂಲಕ ತಿಳಿದ ಅಂಶಗಳನ್ನು ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಸಂಸ್ಕಾರಕ್ಕೆ ಒಳಗಾಗುವ ಕಾರಣಗಳು**

| | | | |
|---|---|---|---|
| ೧ | ತಂದೆ-ತಾಯಿ ಹಿರಿಯರು | ೫೦೯ | ೫೦% |
| ೨ | ಸಂಪ್ರದಾಯ | ೩೮೬ | ೩೯% |
| ೩ | ಬೇರೆಯವರ ಹಿತಾಸಕ್ತಿ | ೧೦೫ | ೧೧% |
| | ಒಟ್ಟು | ೧೦೦೦ | ೧೦೦% |

ಮೇಲಿನ ಕೋಷ್ಟಕದಲ್ಲಿ ದೇವದಾಸಿ ಸಂಸ್ಕಾರ ಕಾರಣರಾದವರನ್ನು ಗಮನಿಸಿದಾಗ ತಂದೆ, ತಾಯಿ, ಹಿರಿಯರಿಂದ ೫೦೯ ಜನರು ಇದ್ದು, ಪ್ರಮಾಣ ೫೧% ರಷ್ಟಿದೆ, ಸಂಪ್ರದಾಯದ ಪ್ರಭಾವದಿಂದ ೩೮೬ ಜನರಿದ್ದು ಪ್ರಮಾಣ ೩೯% ರಷ್ಟು ಕಂಡುಬರುತ್ತಿದ್ದ ಹಾಗೂ ಬೇರೆಯವರ ಹಿತಾಸಕ್ತಿ ೧೦೫ ಜನಸಂಖ್ಯೆ ಕಂಡು ಬಂದು, ಪ್ರಮಾಣ ಶೇ. ೧೧ ರಷ್ಟು ಕಂಡು ಬರುತ್ತದೆ.

ಇಲ್ಲಿ ತಂದೆ ತಾಯಿ ಮತ್ತು ಹಿರಿಯರಿಂದ ದೇವದಾಸಿ ಸಂಸ್ಕಾರಕ್ಕೆ ಅತಿ ಹೆಚ್ಚು ಪ್ರಮಾಣದಲ್ಲಿ ಅಂದರೆ ೫೦೯ ದೇವದಾಸಿಯರು ೫೧% ರಷ್ಟಿದ್ದು, ಕಾರಣ ಅಜ್ಞಾನ, ಶೋಷಣೆ, ಜೊತೆಗೆ ಆರ್ಥಿಕ ಸಹಾಯ, ಸಾಮಾಜಿಕ ಸ್ಥಾನ, ವ್ಯಕ್ತಿ ಮತ್ತು ಜಾತಿಯ ಗುಂಪಿನ ಸಂಸ್ಕೃತಿ ಮನೋಭಾವನೆ ಮುಂತಾದವು ಪೋಷಕವಾಗಿವೆ. ಇಲ್ಲದಿದ್ದರೆ ಅನಾಹುತಗಳಾಗುವ ಸಂಭವಗಳ ಬಗ್ಗೆ ಭಯ, ಆತಂಕ ಇರುವುದು ಮನೆಗೆ ಒಬ್ಬಳೇ ಮಗಳಿರುವುದು, ಅಥವ ತಮ್ಮ ಮಗ ರಕ್ಷಣೆಯನ್ನು ಮಾಡುವ ಭರವಸೆಯನ್ನು ಕಳೆದುಕೊಂಡು ಮಗಳಲ್ಲಿ ಆ ಭರವಸೆಯನ್ನಿಟ್ಟಿರುವುದು ಅಥವ ಮಗಳಿಗೆ ಮದುವೆ ಮಾಡಲು ಆರ್ಥಿಕ ಅಡಚಣೆ ಇರುವುದು ಮುಂತಾದ ಕಾರಣಗಳಿಂದಾಗಿ ಹಿರಿಯರು

ತಮ್ಮ ಪರಂಪರಾಗತ ಸಂಪ್ರದಾಯಗಳ ನೆಪದಲ್ಲಿ ಸ್ವಾಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ತಮ್ಮ ಮಗಳಿಗೆ ದೇವದಾಸಿ ಸಂಸ್ಕಾರ ಮಾಡಲು ಹೆಚ್ಚು ಕಾರಣರಾಗಿರುವುದು ಕಂಡು ಬರುತ್ತದೆ. ನಂತರ ಸಂಪ್ರದಾಯವು ೩ನೇ ಪ್ರಬಲ ಅಂಶವಾಗಿದ್ದು, ಅಂದರೆ ೩೮೬ ದೇವದಾಸಿಯರು ೩೯% ರಷ್ಟಿದ್ದು, ಈಗಲೂ ಈ ಪ್ರದೇಶದಲ್ಲಿ ಈ ಸಂಪ್ರದಾಯ ಪ್ರಬಲ ಸ್ಥಾನ ಪಡೆದಿರುವುದನ್ನು ಅರಿಯಬಹುದಾಗಿದೆ. ಹಾಗೂ ಬೇರೆಯವರ ಹಿತಾಸಕ್ತಿಯಿಂದ ೧೧೦೫ ದೇವದಾಸಿಯರು ೧೧% ರಷ್ಟಿದ್ದು ಬೇರೆಯವರೆಂದರೆ, ಊರಿನ ಪ್ರಬಲ ಬಲಿಷ್ಟ ವ್ಯಕ್ತಿಗಳು, ರಾಜಕೀಯ ನಾಯಕರು, ಭೂಮಾಲಿಕರು, ಅಥವ ಅಧಿಕಾರಿಗಳು ಹೀಗೆ ತಮ್ಮ ಸ್ವ-ಹಿತಾಸಕ್ತಿ ಕಾಪಾಡಿಕೊಳ್ಳುವ ನಿಟ್ಟಿನಲ್ಲಿ ಪ್ರಯತ್ನಿಸಿದ ಫಲವಾಗಿದೆ.

**೫.೭ ಕನ್ಯತ್ವ ಒಡೆಯುವ ಕಾರ್ಯ**

"ಹಿಂದೆ ವಿಜಯನಗರ ಸಾಮ್ರಾಜ್ಯದಲ್ಲಿ, ಅಂಥ ಶ್ರದ್ಧೆಯಿಂದ ಎಷ್ಟೋ ಜನ ಹೆಂಗಸರು, ತಮ್ಮ ಹೆಣ್ಣು ಮಕ್ಕಳ ಕನ್ಯತ್ವವನ್ನು ತಮ್ಮ ದೇವರೊಬ್ಬನಿಗೆ ಅರ್ಪಿಸುವುದಾಗಿ ಹರಕೆ ಹೊರುತ್ತಿದ್ದರು. ಅಂಥವರು ಹುಡುಗಿಗೆ ಹನ್ನೆರಡು ವರ್ಷ ವಯಸ್ಸಾದ ಕೂಡಲೇ ಅವಳನ್ನು ದೇವರ ಗುಡಿಗೆ, ನೆಂಟರೊಡನೆ ಹೋಗಿ, ಹುಡುಗಿಗೆ ಮದುವೆಯಷ್ಟೇ ಸಂಭ್ರಮದ ಕಾರ್ಯ ಮಾಡುತ್ತಿದ್ದುದು ರೂಢಿಯಲ್ಲಿತ್ತು. ದೇವಾಲಯದ ಹೊರ ಭಾಗದಲ್ಲಿ ಪುರುಷ ಪ್ರಮಾಣದ, ಬಹು ಗಟ್ಟಿಯಾದ ಕಪ್ಪು ಶಿಲೆಯಿದ್ದು, ಅವರ ಸುತ್ತಲೂ ಮರದ ಕಟ್ಟೆ ಇರುತ್ತದೆ, ಇವುಗಳ ಮೇಲೆ ರಾತ್ರಿ ಹೊತ್ತು ದೀಪಗಳನ್ನಿಡುತ್ತಾರೆ. ಹರಕೆಯ ದಿನ ಹೊರಗಿನವರಿಗೆ ಒಳಗೆ ನಡೆಯುವುದು ಕಾಣದಂತೆ ಕಟ್ಟೆಗೆ ರೇಷ್ಮೆ ಬಟ್ಟೆಯನ್ನು ಕಟ್ಟುತ್ತಾರೆ. ಮೇಲೆ ಹೇಳಿದ ಕಪ್ಪು ಶಿಲೆಯ ಮೇಲೆ ಬಾಗಿದ ಮನುಷ್ಯನ ಎತ್ತರವಿರುವ ಮತ್ತೊಂದು ಕಲ್ಲು ಇದ್ದು, ಅದರ ಮಧ್ಯ ಚೂಪಾದ ಮೊನೆಯ ಕಟ್ಟಿಗೆಯನ್ನುಳ್ಳ ರಂಧ್ರವಿರುತ್ತದೆ. ಕನ್ಯೆಯ ತಾಯಿ ತನ್ನ ಮಗಳು ಮತ್ತು ಇತರೆ ಆಪ್ತ ಸ್ತ್ರೀಯರೊಡನೆ ಕಟ್ಟೆಯೊಳಗೆ ಹೋಗಿ, ಅಡ್ಡ ಇರುವ ಮರೆಯಲ್ಲಿ ಕೆಲವು ಕರ್ಮಗಳನ್ನು ಮಾಡಿದ ಬಳಿಕ, ಹುಡುಗಿ ಅಲ್ಲಿರುವ ಕಟ್ಟಿಗೆಯಿಂದ ತನ್ನ ಕನ್ಯೆತನವನ್ನು ಕಳೆದುಕೊಂಡು, ಆ ಕಲ್ಲಿನ ಮೇಲೆ ರಕ್ತವನ್ನು ಚಿಮುಕಿಸುತ್ತಾಳೆ. ಅಲ್ಲಿಗೆ ಕನ್ಯತ್ವ ಒಡೆಯುವ ಸಂಸ್ಕಾರ ಮುಗಿಯುತ್ತದೆ"[೭]. ಎಂದು ಬಾರ್ಬೋಸನು ತನ್ನ ಅನುಭವಕ್ಕೆ ಬಂದ ಕನ್ಯತ್ವ ಒಡೆಯುವ ಕಾರ್ಯವನ್ನು ವಿಜಯನಗರ ಸಾಮ್ರಾಜ್ಯ ಕಾಲಕ್ಕೆ ಸಂಬಂಧಿಸಿದಂತೆ ವಿವರಿಸಿದ್ದಾರೆ.

ಬರುಬರುತ್ತಾ ಈ ಆಚರಣೆಯಲ್ಲಿ ಹಲವಾರು ಬದಲಾವಣೆಗಳು ಸಂಭವಿಸಿವೆ. ಅನಂತರದ ಕಾಲದಲ್ಲಿ ದೇವದಾಸಿ ಸಂಸ್ಕಾರಕ್ಕೊಳಗಾದ ಹುಡುಗಿ ಋತುಮತಿಯಾದ ಮೇಲೆ ಆಕೆಗೆ ಊರಿನ ಎಲ್ಲಾ ದೇವತೆಗಳಿಗೆ ಮೆರವಣಿಗೆಯಲ್ಲಿ ಹೋಗಿ ಪೂಜಾ ಕಾರ್ಯ ನೆರವೇರಿಸಿಕೊಂಡು ಬರುವರು. ಇದರಿಂದ ಈ ಸುದ್ದಿ ಊರು ತುಂಬಾ ಆಗುವುದು. ಆರಂಭದ ಕಾಲಘಟ್ಟದಲ್ಲಿ ಗುಡಿಯ ಪೂಜಾರಿಯೇ ಕನ್ಯತ್ವ ಒಡೆಯುವ ಅಧಿಕಾರವನ್ನು ಹೊಂದಿ ಆ ವ್ಯವಸ್ಥೆಯಲ್ಲಿ ದೇವಾಲಯದ ಗರ್ಭಗುಡಿಯಲ್ಲಿಯೇ ನೆರವೇರಿಸುತ್ತಿದ್ದರು. ಕೆಲವರಿಗೆ ಇದು ಸರಿ ಕಾಣದ ಕಾರಣ ಪುನಃ ಇದರಲ್ಲಿ ಪರಿವರ್ತನೆಗಳಾದವು. ದೇವರಿಗೆ ಅರ್ಪಿಸಿದ ಹುಡುಗಿ ಋತುಮತಿಯಾದ ಮೇಲೆ ತಂದೆ ತಾಯಿಗಳು ಅವಳ ಕನ್ಯತ್ವ ಒಡೆಯುವ ಸಂತೋಷದ ಹಕ್ಕು ಸ್ಥಳೀಯ ಮೇಲು ಜಾತಿಯ ಶ್ರೀಮಂತ, ಹಣವಂತ ಭೂ ಒಡೆಯ, ವ್ಯಾಪಾರಿಗಳು, ಮಾಲಿಕರು ಅಥವಾ ಪ್ರಭಾವಶಾಲಿ ಹಾಗೂ ಪ್ರತಿಷ್ಠಿತ ರಾಜಕೀಯ ವ್ಯಕ್ತಿಗಳಿಂದ

ಹುಡುಗಿಯ ಕನ್ಯತ್ವ ಒಡೆಯುವುದನ್ನು ಬಯಸುತ್ತಾರೆ. 'ಕುಲಸ್ಥರನ್ನು ಕೂಡಿಕೊಂಡರೆ ಕೂಲಿಮಾಡುವುದು ತಪ್ಪದು. ಕುಲಸ್ಥರನ್ನು ಕೂಡಿಕೊಂಡರೆ ಕುಬಸಕ್ಕೆ ಗತಿ ಇಲ್ಲ' ಎಂಬ ಗಾದೆಯಂತೆ ಆ ವೇಳೆಗಾಗಲಿ ಇಚ್ಛೆ ಇದ್ದವನು ಹುಡುಗಿಯ ತಂದೆ ತಾಯಿಗಳೊಂದಿಗೆ ಮಧ್ಯವರ್ತಿಗಳ ಮೂಲಕ ಸಂಬಂಧ ಕುದುರಿಸಿಕೊಂಡು ಕನ್ಯತ್ವ ಒಡೆಯುವುದಕ್ಕೆ ಮುಂಚೆ ಹುಡುಗಿಗೆ ನೀಡಬೇಕಾದ, ಹಣ, ಒಡವೆ, ಬಟ್ಟೆ ಬರೆ, ಮಾಂಗಲ್ಯ, ಹಾಸಿಗೆ, ಸೀರೆ, ಹಾಗೂ ಇತರೆ ಪದಾರ್ಥಗಳನ್ನು ಅವನೇ ನೋಡಿ ಕೊಳ್ಳುತ್ತಾನೆ. ಒಪ್ಪಂದವು ಅವನ ಮತ್ತು ಹುಡುಗಿಯ ತಂದೆ ತಾಯಿರೊಂದಿಗೆ ನಡೆಯುತ್ತದೆ. ಸಾಮಾನ್ಯವಾಗಿ ಅವಳನ್ನು ಕಾಪಾಡುವ ಸಾಮಾರ್ಥ್ಯವಿರುವ ವ್ಯಕ್ತಿಯನ್ನು ಕನ್ಯತ್ವ ಒಡೆಯುವ ಸಲುವಾಗಿ ಅಥವಾ ಮೀಸಲು ಮುರಿಯಲು ಆರಿಸಿ ಕೊಳ್ಳಲಾಗುತ್ತದೆ. 'ಹೆಣ್ಣು ಮಾಡಿದ' ಅಥವಾ 'ಮೀಸಲು ಮುರಿದ' ವ್ಯಕ್ತಿ ತನ್ನ ಆಸಕ್ತಿ ಇರುವವರೆಗೆ ಬರುತ್ತಾನೆ. ಅನಂತರ ಬೇರೆ ಪುರುಷನನ್ನು ಹುಡುಕಿ ಕೊಳ್ಳಬೇಕಾಗುತ್ತದೆ. ಹೀಗೆ ಒಬ್ಬರಾದ ಬಳಿಕ ಮತ್ತೊಬ್ಬರನ್ನು ಬದಲಿಸುವುದು ಅನಿವಾರ್ಯವಾಗಿರುತ್ತದೆ. ಇಲ್ಲಿ ಒಬ್ಬ ಪುರುಷನಿಗೆ ಹೊಂದಿಕೊಂಡು ಉಪಪತ್ನಿಯಂತೆ ಜೀವಿಸಲು ಬಯಸಿದರೆ, ಬಲವಂತವಾಗಿ ಕುಟುಂಬದ ಸದಸ್ಯರು, ನೆರೆಹೊರೆ ಅಜ್ಜಿಗಳು ಹೀಗೆ ಕೆಲವರ ಬಲವಂತದ ಮೇರೆಗೆ ಇತರರೊಂದಿಗೆ ದೇಹ ಸಂಬಂಧ ಬೆಳೆಸಲು ಆಸೆ ಆಮಿಷ ತೋರಿಸಿ ಸುಖಪಡಲು ಪ್ರಯತ್ನಿಸುವುದು, ಇಲ್ಲದಿದ್ದರೆ ಕಾನೂನು ಬಾಹಿರ ಪದ್ಧತಿ ಆಚರಿಸುವರೆಂದು ಹೆದರಿಸಿ ಪೋಲಿಸರಿಗೆ ದೂರು ನೀಡುವುದು ಹಾಗೂ ತೊಂದರೆ ಉಂಟು ಮಾಡುವುದು, ಹಾಗೂ ಆಕೆಗೆ ಕಷ್ಟಕರ ಸಮಸ್ಯೆಗಳನ್ನು ತಂದು ಪುರುಷರನ್ನು ಬದಲಿಸುವುದನ್ನು ಅನಿವಾರ್ಯವನ್ನಾಗಿ ಮಾಡುತ್ತಾರೆ. ಮೀಸಲು ಮುರಿದವನು ಬಿಡದಂತೆ ಬರುತ್ತಿದ್ದರೆ ಅವನಿಗೆ ಇಲ್ಲಸಲ್ಲದ ಚಾಡಿ ಹೇಳಿ ದೂರ ಮಾಡುವುದು ಉಂಟು.

ಹುಡುಗಿ ಚೆಲುವೆಯಾಗಿದ್ದರೆ, ಆಕೆಯ ಬೆಲೆಯು ಹೆಚ್ಚಾಗಿರುತ್ತದೆ, ಮಧ್ಯವರ್ತಿಗಳ ಮೂಲಕ ಸಂಧಾನ ನಡೆಯುವುದು. ಈ ರೀತಿ ಅವಳ ಕನ್ಯತ್ವ ಒಡೆದವನು ತನಗೆ ಬೇಕಾದಷ್ಟು ದಿನ ಅವಳ ಜೊತೆಗಿದ್ದರೆ, ಅವಳ ಖರ್ಚೆಲ್ಲ ನೋಡಿ ಕೊಳ್ಳಬೇಕಾಗುವುದು. ಬೇಡವೆನಿಸಿದಾಗ ಬಿಟ್ಟು ಬಿಡಲೂ ಬಹುದು. ಹುಡುಗಿ ಚೆಲುವೆಯಾಗಿರದಿದ್ದರೆ, ಬೇಡಿಕೆ ಹೆಚ್ಚಿರುವುದಿಲ್ಲ. ಯಾವ ಬೇಡಿಕೆಯೂ ಬರದಿದ್ದರೆ, ಕೊನೆಗೆ ಆಕೆಯ ಸೋದರ ಮಾವ ಆಕೆಯ ಕನ್ಯತ್ವ ಒಡೆಯುವನು. ಕೆಲವು ಸಂದರ್ಭದಲ್ಲಿ ದೇವದಾಸಿಯರೇ ತಮ್ಮ ಕನ್ಯತ್ವ ಒಡೆಯುವರು. ಕೆಲವು ಸಂದರ್ಭದಲ್ಲಿ ದೇವದಾಸಿಯರು ತನ್ನ ಕನ್ಯತ್ವ ಒಡೆದ ಒಬ್ಬ ವ್ಯಕ್ತಿಗೆ ತನ್ನ ಜೀವನವಿಡಿ ನಿಷ್ಠೆಯಿಂದಿರುವುದು ಇದೆ. ಒಬ್ಬ ಸೂಳೆಯಾಗಿ ಆಕೆಗೆ ಅವನ ಮೇಲೆ ಯಾವುದೇ ರೀತಿಯ ಹಕ್ಕು ಇರುವುದಿಲ್ಲ. ಈ ಸಂಬಂಧದಿಂದ ಹುಟ್ಟಿದ ಮಕ್ಕಳಿಗೆ ತಂದೆಯ ಆಸ್ತಿಯ ಮೇಲೆ ಯಾವುದೇ ಬಗೆಯ ಹಕ್ಕಿರುವುದಿಲ್ಲ. ಹಿಂದೆ ಊರಿನ ಶ್ರೀಮಂತರ ನಡುವೆ ದೇವದಾಸಿಯ ಕನ್ಯತ್ವ ಒಡೆಯಲು ಸ್ಪರ್ಧೆ ನಡೆಯುತ್ತಿದ್ದದ್ದೂ ಉಂಟು.

ಋತುಮತಿಯಾದ ಅನಂತರ ಕನ್ಯತ್ವ ಒಡೆಯುವ ಅಥವಾ ಹೆಣ್ಣು ಮಾಡುವ ಸಮಾರಂಭವನ್ನು ಮಾಡಲಾಗುತ್ತದೆ. ಹುಡುಗಿಯರ ಪೋಷಕರೇ ಈ ಬಗ್ಗೆ ಜವಬ್ದಾರಿ ತೆಗೆದುಕೊಳ್ಳುತ್ತಾರೆ. ಸಾಮಾನ್ಯವಾಗಿ ಇಂತಹ ಹುಡುಗಿಯನ್ನು ೫೦% ರಷ್ಟು ಜನ, ಮೊದಲು ರಂಗ ಪ್ರವೇಶಕ್ಕೆ ಬಿಡುವರು. ಇಲ್ಲಿನ ಹಿರಿಯ ರಂಗ ನಟಿಯರು ನಾಟಕಗಳಿಗೆ ಹೋಗುವಾಗ, ಅವರ ಜೊತೆಯಲ್ಲಿ ಇಂತಹ ಹುಡುಗಿಯರಿಗೆ ನಾಟಕದ ಮಧ್ಯದಲ್ಲಿ

ಆಗಾಗ ನೃತ್ಯ ಮಾಡುವ ಅವಕಾಶ ಕೊಡುತ್ತಾರೆ. ಹೀಗೆ ಅವಳು ಬರುಬರುತ್ತಾ ನಟನೆ ಮಾಡುವುದನ್ನು ಕಲಿತು ಬಹುಜನರ ಪರಿಚಯವಾದ ಅನಂತರ ಪರಿಚಯವಾದವರಲ್ಲಿ ಉತ್ತಮ ಶ್ರೀಮಂತ ವ್ಯಕ್ತಿಯನ್ನು ಆಯ್ಕೆ ಮಾಡಿ, ಅವರಿಂದ ಹುಡುಗಿಯರೊಂದಿಗೆ ಮೊದಲ ರಾತ್ರಿ ಕಳೆಯುವ ಹಕ್ಕು ಹೊಂದಿರುವ ಪೋಷಕನು ಹುಡುಗಿಗೆ ನಿಗದಿ ಪಡಿಸಿದ ಹಣ, ಅಥವಾ ಆಸ್ತಿ, ಬಂಗಾರ, ನೀಡಿ ಅವಳ ಜೊತೆಗೆ ಲೈಂಗಿಕ ಸಂಬಂಧ ಹೊಂದಬಹುದು. ಒಪ್ಪಂದದಂತೆ ಆ ಸಂಬಂಧವನ್ನು ಮುಂದುವರೆಸಬಹುದು. ಅಥವಾ ಅಷ್ಟಕ್ಕೆ ಬಿಡಲೂಬಹುದು. ಅನಂತರ ಆಕೆ ಬೇರೊಬ್ಬ ವ್ಯಕ್ತಿಯೊಂದಿಗೆ ವ್ಯವಹರಿಸಿಕೊಳ್ಳಬಹುದು. ಅಥವಾ ಅವನಿದ್ದರೂ ಬೇರೆ ಸಂದರ್ಭಗಳಲ್ಲಿ ಇತರರೊಂದಿಗೆ ಸಂಬಂಧ ಬೆಳೆಸಬಹುದಾಗಿದೆ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪ್ರಶ್ನಾವಳಿಯ ಮೂಲಕ ಪುರುಷ ಬದಲಿಕೆಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಗಿದೆ ಅದರ ಕೋಷ್ಟಕ ಕೆಳಗಿನಂತಿದೆ.

| ಪುರುಷ ಬದಲಾವಣೆ | |
|---|---|
| ಇಲ್ಲ | ಆಗಿದೆ |
| ೪೨ | ೯೫೮ |
| ಶೇಕಡ ೪ | ಶೇಕಡ ೯೬ |

ಇಲ್ಲಿನ ಮಹಿಳೆಯರಲ್ಲಿ ಶೇ. ೪ ರಷ್ಟು ಜನರು ಪುರುಷನನ್ನು ಬದಲಿಸದೇ ಆರಂಭದಿಂದಲೂ ಒಬ್ಬನಿಗೆ ನಿಷ್ಠೆಯಿಂದಿದ್ದು, ಆತನನ್ನು ಗಂಡ ಎಂದು ನಂಬಿ ಆತ ಸತ್ತಾಗ ಬಳೆ, ಮೂಗುತಿ, ಕುಂಕುಮ ತೆಗೆದ ನಿದರ್ಶನಗಳಿವೆ. ಇನ್ನು ಶೇ. ೯೬ ರಷ್ಟು ಜನ ಪುರುಷರನ್ನು ಬದಲಿಸುವುದು ಅನಿವಾರ್ಯವಾಗಿದೆ ಎನ್ನುತ್ತಾರೆ.

ಹಲವರ ಹಸಿದ ಕಾಮುಕ ಕಣ್ಣುಗಳಿಂದ ತಪ್ಪಿಸಿಕೊಳ್ಳಲು ಒಬ್ಬ ಪುರುಷನನ್ನು ಆಶ್ರಯಿಸಬೇಕಾಗುವುದಾದರೂ, ಸಾಂಪ್ರದಾಯಿಕವಾಗಿ ಒಪ್ಪಿಕೊಂಡ ಪುರುಷನು ಅಕಸ್ಮಾತ್ ಬಿಟ್ಟರೆ, ಮತ್ತೆ ಹಲವರ ಆಕ್ರಮಣ ಎದುರಿಸಬೇಕೆಂಬ ಆತಂಕ, ಈ ಸಂಬಂಧ ಕೊಲೆ ಪ್ರಸಂಗಗಳೂ ಜರುಗಿವೆ. ಸಾಹುಕಾರ, ರಾಜಕಾರಣ, ಪುಂಡ, ಅಧಿಕಾರಿಗಳು ಸೇರಿ ಊರು ಬಿಡಿಸಿದ ಉದಾಹರಣೆಗಳು ಉಂಟು. ಮುಪ್ಪು ಬಂದು ಅಪ್ಪುವವರೆಗೆ ಇಟ್ಟುಕೊಂಡವಳಾಗಿ, ಸಮಾಜದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿ, ತಮಗೆ ಅನುಕೂಲವಿದ್ದಾಗ ಬರುವರು. ಉಳಿದ ವೇಳೆ ತಮ್ಮ ಸಂಸಾರ ಜೀವನಕ್ಕೆ ಮೀಸಲಾಗಿ ಉಳಿವರು. ಹೀಗೆ "ಸೂಳೆಯನಾಯಿ ಸತ್ತರೆ ಊರೆಲ್ಲಾ, ಸೂಳೆ ಸತ್ತರೆ ಯಾರಿಲ್ಲ". ಎಂಬ ಗಾದೆಯು ಅವಳ ಅಭದ್ರ ಜೀವನ, ಪುರುಷನ ಆಸರೆ ಇಲ್ಲದ ಬಳ್ಳಿಯಾಗಿ, ಸಂಗಾತಿ, ಸ್ನೇಹಿತನಿಲ್ಲದೇ, ಅಲ್ಪ ತೃಪ್ತಿ. ಹಲವು ಜವಬ್ದಾರಿ ಹೊತ್ತು, ಮನೆಯ ಯಜಮಾನಿಯಾಗಿದ್ದರೂ ತನ್ನ ಸದಸ್ಯರು ಕಷ್ಟಪಟ್ಟು ಏಕೆ ದುಡಿಯಬೇಕು? ಎಂಬ ಅನುಕಂಪದ ಜೊತೆಗೆ ಸಾಂಪ್ರದಾಯಿಕ ಭಾವನೆಯೂ ಇರುತ್ತದೆ.

ಅಧ್ಯಯನ ಕ್ಷೇತ್ರದ ೧೦೦೦ ಜನ ದೇವದಾಸಿಯರನ್ನು ಆಯ್ಕೆಮಾಡಿಕೊಳ್ಳಲಾಗಿದೆ. (ಇನ್ನೂ ಹೆಚ್ಚು ದೇವದಾಸಿಯರಿರುವ ಆಧಾರಗಳು ಇವೆ) ಇವರೆಲ್ಲಾ ಬೇಡ ಸಮುದಾಯದ ಮ್ಯಾಸನಾಯಕರು, ಮತ್ತು ಊರು ನಾಯಕರ ಪಂಗಡಗಳಿಗೆ ಸೇರಿದವರೇ ಆಗಿದ್ದಾರೆ. ಇವರುಗಳೆಲ್ಲ ವಿವಿಧ ವಯಸ್ಸಿಗೆ ಸೇರಿದವರು. ಕೆಳಗಿನ ಕೋಷ್ಟಕದಲ್ಲಿ ೧೦೦೦ ಜನ ದೇವದಾಸಿಯರ ವಯಸ್ಸಿನ ವಿಂಗಡಣೆಯನ್ನು ನೀಡಿದೆ. ಇದರಿಂದ ಅನೇಕ ಮುಖ್ಯ ಸಂಗತಿಗಳು ನಮಗೆ ಗೋಚರಿಸುತ್ತವೆ.

ಕೋಷ್ಟಕ ೧೫

ಅಧ್ಯಯನ ಕ್ಷೇತ್ರದ ದೇವದಾಸಿಯರ ವಯೋಮಿತಿಯ ವರ್ಗೀಕರಣ

| ವಯೋ ಗುಂಪುಗಳು | ದೇವದಾಸಿಯರ ಸಂಖ್ಯೆ | ಒಟ್ಟು ದೇವದಾಸಿಯರ ಸಂಖ್ಯೆಯ ಶೇಕಡವಾರು |
|---|---|---|
| ೧೩ ವರ್ಷಕ್ಕಿಂತ ಕೆಳಗಿನವರು | ೩೭ | ೪% |
| ೧೪-೧೫ | ೩೧೧ | ೩೧% |
| ೧೬-೧೭ | ೨೩೨ | ೨೩% |
| ೧೮-೧೯ | ೩೦೮ | ೩೧% |
| ೨೦-೨೧ | ೮೨ | ೮% |
| ೨೨-೩೫ ಮೇಲ್ಪಟ್ಟವರು | ೩೦ | ೩% |
| ಒಟ್ಟು | ೧೦೦೦ | ೧೦೦% |

ಋತುಮತಿಯಾಗುವುದಕ್ಕಿಂತ ಮುಂಚೆಯೇ ಹುಡುಗಿಯರನ್ನು ದೇವತೆಗೆ ಅರ್ಪಿಸುವ ಪದ್ಧತಿ ಇಂದಿಗೂ ಜಾರಿಯಲ್ಲಿದೆ. ೧೩ ವರ್ಷದ ಕೆಳಗಿನ ೩೭ ಜನ ದೇವದಾಸಿಯರದು ೧೪ ರಿಂದ ೧೯ ರ ವಯಸ್ಸಿನವರು ಅಧಿಕ ಸಂಖ್ಯೆಯಲ್ಲಿರುವರು. ವಯಸ್ಸಾದಂತೆ ಇವರ ಸಂಖ್ಯೆ ಕಡಿಮೆಯಾಗುವುದನ್ನು ನಾವು ಗಮನಿಸಬಹುದಾಗಿದೆ. ೨೨ ರಿಂದ ೩೫ರ ವರೆಗಿನ ವಯಸ್ಸಿನವರು ೩೦ ಜನರಿದ್ದಾರೆ. ೧೪ನೇ ವಯಸ್ಸಾದ ನಂತರವೇ ದೇವದಾಸಿಯರು ಹಣವನ್ನು ಹೆಚ್ಚೆಚ್ಚು ಗಳಿಸುವ ಸಾಮರ್ಥ್ಯ ಹೊಂದುತ್ತಾರೆ. ಅಧ್ಯಯನದ ಮಾಹಿತಿಯ ಪ್ರಕಾರ ಇವರುಗಳಿಗೆ ಗಿರಾಕಿಗಳನ್ನು ಜೋಡಿಸುವ ಬ್ರೋಕರ್‌ಗಳೇ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ಮನೆಗಳನ್ನು ಕಟ್ಟಿಕೊಂಡು, ಬಂಗಾರದ ಒಡವೆಗಳಿಂದ ಅಲಂಕೃತರಾಗಿ ಭರ್ಜರಿ ಕುಳಗಳಾಗಿದ್ದಾರೆ. ಬರುವ ಗಿರಾಕಿಗಳೆಲ್ಲರೂ, ಕಿರಿಯ ವಯಸ್ಸಿನ ಹುಡುಗಿಯರನ್ನೇ ಕೇಳುವುದರಿಂದ ಇವರಿಗೆ ಬೇಡಿಕೆ ಹೆಚ್ಚಾಗಿರುತ್ತದೆ. ಗಿರಾಕಿ ಮತ್ತು ದೇವದಾಸಿ ಈ ಇಬ್ಬರ ಹತ್ತಿರ ಮಧ್ಯವರ್ತಿ ವ್ಯವಹಾರಕ್ಕಾಗಿ ಹಣವನ್ನು ತೆಗೆದುಕೊಳ್ಳುತ್ತಾನೆ. ಈ ವಯಸ್ಸಿನ ಹುಡುಗಿಯ ತಂದೆ ತಾಯಿಗಳಿಗೆ ಬೇಗನೇ ಶ್ರೀಮಂತರಾಗಬೇಕೆಂಬ ಆಸೆ ಇದ್ದು ಮಗಳನ್ನು ಸ್ವಚ್ಛಂದವಾಗಿ ಬಿಟ್ಟಿರುತ್ತಾರೆ.

**೫.೮ ಸಾಮಾಜಿಕ ಜೀವನ**

ಧರ್ಮದ ಹಿನ್ನೆಲೆಯಲ್ಲಿ ಪುರಾಣ ಹಾಗೂ ಐತಿಹಾಸಿಕ ಅಂಶಗಳ ಆಧಾರದ ಮೇಲೆ ಇವರಿಗೆ ಸಮಾಜದಲ್ಲಿ ಗೌರವಯುತವಾದ ಸ್ಥಾನಮಾನಗಳನ್ನು ನೀಡಿ 'ನಿತ್ಯಸುಮಂಗಳೆ'ಯರೆಂದು ಕರೆದು ಯಾವುದೇ ಶುಭ ಕಾರ್ಯದಲ್ಲಿ ಈಕೆ ಭಾಗವಹಿಸುವುದಕ್ಕೆ ಅವಕಾಶ ನೀಡಿ, ಈಕೆಯ ಮುಖದರ್ಶನವನ್ನು ಶುಭಶಕುನ ಎನ್ನುವ ನಂಬಿಕೆ ಇದೆ. 'ಸ್ಕಂದ ಪುರಾಣದಲ್ಲಿ' ಇವರನ್ನು 'ಅಪ್ಸರೆಯರ ವಂಶಜರು', ಮತ್ಸ್ಯಪುರಾಣದಲ್ಲಿ ದೇವತೆಗಳಿಗೂ ದಾನವರಿಗೂ ನಡೆದ ಯುದ್ಧದಲ್ಲಿ ಮಡಿದ ದೇವತೆಗಳ ಹೆಂಡಂದಿರು ದಾನವರ ಬಲಾತ್ಕಾರಕ್ಕೆ ಒಳಗಾಗಿ ಅವರಿಗೆ ದೇವೇಂದ್ರನು 'ನೀವು ಈಗ ಅರಮನೆಗಳಲ್ಲಿಯೂ, ದೇವಾಲಯಗಳಲ್ಲಿಯೂ ಭಕ್ತಿಯಿಂದ ವೇಶ್ಯಾ ಧರ್ಮವನ್ನು ಅನುಸರಿಸುತ್ತಾ ನಡೆಯಿರಿ' ಎಂದು ಆದೇಶ ನೀಡಿದನೆಂದು ತಿಳಿಸುತ್ತದೆ. ಒಟ್ಟಿನಲ್ಲಿ ಹಿಂದೆ ಇವರಿಗೆ

ಗೌರವಯುತವಾದ ಸ್ಥಾನವಿದ್ದು, ಮಧ್ಯ ಯುಗದಲ್ಲಿಯೂ ಗಣನೀಯ ಸಾಮಾಜಿಕ ಮನ್ನಣೆ ಇದ್ದು, "ಮುರಾರಿಯನ್ನು ಸೇವಿಸುವ ಲಕ್ಷ್ಮಿಯೇ ಈ ಭೂಮಿಯಲ್ಲಿ ಆತನ ಸೇವೆಗಾಗಿ ದೇವದಾಸಿಯಾಗಿ ಜನಿಸಿದಳೆಂದು ವರ್ಣಿಸುತ್ತ ಗೌರವದ ಹೆಸರಿನಲ್ಲಿ ಕರೆದು, ಆಕೆಯಿಂದ ಅಗೌರವ ವೃತ್ತಿಯಲ್ಲಿ ತೊಡಗುವಂತೆ ಮಾಡಲಾಗಿದೆ. ಇಂದು ದೇವದಾಸಿಯರ ಸ್ಥಾನಮಾನಗಳನ್ನು ಸಮಾಜದಲ್ಲಿ ವೀಕ್ಷಿಸಿದಾಗ ಆಕೆಯನ್ನು ಕೀಳಾಗಿ ಕಾಣುವುದು ಅಪಮಾನಗೊಳಿಸುವುದು ಕ್ರೌರ್ಯದಿಂದ ಅಮಾನವೀಯವಾಗಿ ನಡೆಸಿಕೊಳ್ಳುವುದು, ಮಾನಸಿಕ ಹಿಂಸೆಗೆ ಒಳಪಡಿಸುವುದು ಸಾಮಾನ್ಯವಾಗಿದೆ.

ಪುರುಷ ಪ್ರಧಾನ ಸಮಾಜ, ಇಂದು ದೇವದಾಸಿಯರ ಬಗ್ಗೆ ಹುಟ್ಟು ಹಾಕಿದ ಕಲ್ಪನೆಗಳು, ನಂಬಿಕೆಗಳು, ಗಾದೆಗಳು ಹೀಗಿವೆ.

'ಸೂಳೆಗೆ ಹೋದವ ಏನಾದ ! ಎಂತಾದ !

ಕಾಡು ನಾಯಾದ, ಕಪಿಯಾದ ! ಆಮುರವ

ಸೂಳೆಯ ಕಾಲಿಗೆ ಕೆರವಾದ !!'

'ಝಣ ಝಣ ಹಣವೇ ಆಕೆಗೆ ಗಂಡ', 'ವೇಶ್ಯೆಯ ಮನೆ ಮುಂದೆ ಆನೆ ಅಂಬಾರಿ ಕಟ್ಟಿದರೇನು? ಲಕ್ಷ ಕೋಟಿಗಳೆಲ್ಲ ಮಾಯ. ಉಟ್ಟಬಟ್ಟೆಬಿಟ್ಟರೆ, ಭಿಕ್ಷೆ ಪಾತ್ರೆ ಸೂಕ್ತಿ', 'ಸೂಳೆ ಸುಲಿದು ಕೊಂಡು ತಿಂದಳು. ಮಿಂಡ ತಿರುಕೊಂಡು ತಿಂದ' ಸಮಾಜದಲ್ಲಿ ಜಿಗುಳೆಗಳಿದ್ದ ಹಾಗೆ, ದುಡ್ಡಿಗಾಗಿ ಬರುವವಳು, ಬದುಕುವವಳು, ತನ್ನ ಒನಪು, ಒಯ್ಯಾರದಿಂದ ಜನರ ಕಲ್ಪನೆಗೆ ಬೆಂಕಿಹಚ್ಚಿ, ಇವರಿಗಾಗಿ ಹೊಡೆದಾಟ, ಕೊಲೆ, ಸುಲಿಗೆ ರಕ್ತಪಾತಕ್ಕೂ ಅವಕಾಶ ಕೊಡುವಂತೆ ಮರಳು ಮಾಡುವುದು'.

'ಸೂಳೆ ವಿಶ್ವಾಸ ಘಾತಕಿ, ಸೂಳೆಯ ಸಹವಾಸ, ಸ್ಮಶಾನದ ವಾಸ, ದೇಹ ಆತ್ಮಗಳೆರಡರ ನಾಶ, ಇಂತವರ ಕಾಮದ ಕಾವಿನ ಸೆಳೆತಕ್ಕೆ ಮರುಳಾದ ಪಾಮರರು ಪತನವಾಗುತಿಹರು ಪತಂಗಗಳಂತೆ'.

'ಸೂಳೆಯ ಜೀವನದಲಿ ಸತ್ಯವನು ಶೋಧಿಸುವುದು ಶವದ ಸಜೀವತೆಗಾಗಿ ಸ್ಮಶಾನದಲ್ಲಿ ಶೋಕಿಸಿದಂತೆ, ದುರ್ಗುಣಿಗಳಾದ ಕಾಮುಕರು ವಾಸಿಸುವುದು ವೇಶ್ಯೆಯರ ದ್ರೋಹದ ದೇಗುಲದಲಿ'.

"ಸೂಳೆ ನಂಬಿದವರಿಗೆ ಸಂಸಾರವುಂಟೆ? ಪ್ರೇಮದ ಸೋಗಿನಲಿ, ಸಿರಿ ಸಂಪತ್ತು, ಶೇಖರಿಸುವ ಸ್ತ್ರೀ ಸೇವೆಯನ್ನು ತನ್ನ ಆಸೆ, ಆಕಾಂಕ್ಷೆಗಳಿಗೆ ದುರುಪಯೋಗಪಡಿಸಿಕೊಂಡ ಬೆಂಕಿಯ ಮುಂದೆ ಬೆಣ್ಣೆ ಕರಗುವಂತೆ ಪುರುಷ ಪಶುವಂತೆ ಕೀಳು ಕಾಮನೆಯ ಕೈಗೊಂಬೆಯಾಗುತ್ತಾನೆ. ಇಟ್ಟುಕೊಂಡವಳು ಗಂಡಸಿನ ಸಂಪತ್ತು, ಯೌವನ, ಆರೋಗ್ಯವಿರುವವರೆಗೆ ಮಾತ್ರ 'ಇಟ್ಟುಕೊಂಡವಳು ಇರುವ ತನಕ, ಕಟ್ಟಿಕೊಂಡವಳು ಕೊನೆ ತನಕ' ಆತನಿಗೆ ವಿದೇಯಳಾಗಿ, ನಿಷ್ಠಳಾಗಿ, ನಡೆದುಕೊಳ್ಳುತ್ತಾರೆ. ಹಣದ ದುರಾಶೆಯ ಜೊತೆಗೆ ತೀವ್ರವಾದ ಲೈಂಗಿಕ ಅತೃಪ್ತಿ ಅವಳನ್ನು ಕಾಡುತ್ತಿರುತ್ತದೆ. ಲೈಂಗಿಕ ಲಾಲಸೆ ಅವಳಿಗೆ ರಕ್ತಗತವಾಗಿ ಬಂದಿರುತ್ತದೆ. ಅತಿಯಾದ ಭೋಗಾಸಕ್ತರೂ, ಶೃಂಗಾರಮಯಿಗಳಾಗಿದ್ದು, ಮುಖ ನೋಡಿ ಮಾತಾಡಿ, ಮಾಡೋ ವ್ಯಾಪಾರ ಇವರದು, ಈ ಕಸುಬಿನಲ್ಲಿ ೪ ಜಾತಿಗಳಿವೆ. ಉಢಾಪಿ, ಭಂಡಿ, ಬಜಾರಿ, ಬಿಡ್ಕಿ, ಎಂದು ಇವರು ಸಮಾಜದಲ್ಲಿ ಬೆಳೆದ ವಿಷ ವೃಕ್ಷಗಳು ಎಂಬ ಅವಹೇಳನಕಾರಕ ನಂಬಿಕೆಗಳು'. ಇವೆಲ್ಲಾ ಹೇಳಿಕೆಗಳನ್ನು ನೊಂದ ದೇವದಾಸಿಯರು ಸಮಾಜ

ತಮ್ಮ ಬಗ್ಗೆ ತಾಳಿದ ನಿಲುವನ್ನು ಹೇಳಿದ್ದಾರೆ. ಜೊತೆಗೆ ಇತರ ವಕ್ತೃಗಳು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಹೇಳಿದ್ದಾರೆ. ಈ ರೀತಿಯ ಪುರುಷ ಪ್ರಧಾನ ಸಾಂಸ್ಕೃತಿಕ ತಾತ್ವಿಕ ಚಿಂತನೆಯಿಂದ ಅಧ್ಯಯನ ಮಾಡಿದರೆ ದೇವದಾಸಿ ಸ್ತ್ರೀಯ ಬಗ್ಗೆ ಕೀಳು ಕೊಳಕು ಭಾವನೆ, ಭಯ, ನಿರ್ದಯಿ, ಕ್ರೂರಿ, ನೀತಿಬಾಹಿರರಾಗಿ, ಜೀವಿಸುವವಳೆಂಬ ಕಲ್ಪನೆ ಹುಟ್ಟು ಹಾಕಿ, ದೋಷಿಸುವುದು ಸುಲಭ. ನೈತಿಕತೆಯ ಸಿಟ್ಟನ್ನು ತೋರಿಸುವುದು ಇನ್ನೂ ಸರಳ.

ಮೇಲ್ವರ್ಗ, ಜಾತಿಯವರು ಬಹು ಎಚ್ಚರಿಕೆಯಿಂದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂತರವನ್ನು ಕಾಯ್ದುಕೊಳ್ಳುವ ವ್ಯವಸ್ಥೆಯನ್ನು ರೂಪಿಸಿದ್ದಾರೆ. ಪುರುಷನ ಲೈಂಗಿಕ ಸ್ವೇಚ್ಛಾಚಾರವನ್ನು ನೈತಿಕವಾಗಿ ಮಾಡುವತ್ತ, ಇದನ್ನು ಅಧಿಕೃತ ಸಂಸ್ಥೆಯನ್ನಾಗಿ ಮಾಡಿ, ಕೆಳಜಾತಿಯವಳಾದ ಈಕೆಗೆ, ಮುದ್ರೆಯ ಸಂಸ್ಕಾರ ಮಾಡಿ, ಆ ಮೂಲಕ ಮೇಲುಜಾತಿಯವರು ಪವಿತ್ರಳನ್ನಾಗಿಸಿ ಮೇಲ್ವರ್ಗ ಜಾತಿಯವರು ಮಾತ್ರ ಇವಳನ್ನು ಭೋಗಿಸಲು ಅವಕಾಶ. ಕೆಳಜಾತಿಯವರಿಗೆ ಅವಕಾಶವಿಲ್ಲ. ಹಾಗೇನಾದರೂ ಅವಳು ಕೆಳಜಾತಿಯವರ ಜೊತೆ ಸಂಬಂಧ ಹೊಂದಿದರೆ ಅವಳಿಗೆ ದಂಡ ವಿಧಿಸಿ, ಬಹಿಷ್ಕರಿಸಲಾಗುತ್ತಿತ್ತು. ಹೀಗಾಗಿ, ಮೇಲ್ವರ್ಗದ ಜಾತಿ ಪುರುಷರೊಂದಿಗಿನ ಸಂಬಂಧ ಶ್ರೇಷ್ಠವಾದುದು. ಮೇಲಂತಸ್ತಿಗೆ ಸೇರಿದಂತೆ ಭಾವಿಸುತ್ತಿದ್ದರು. ತಮ್ಮ ತಮ್ಮಲ್ಲೇ ಮೇಲು ಕೀಳು ಎಂದು ಕಚ್ಚಾಡುವುದು ಇದೆ. ಮೇಲ್ವರ್ಗದ, ಜಾತಿಯ ಪುರುಷರ ಆಶೋತ್ತರಗಳಿಗೆ ಪೂರಕವಾಗಿಯೇ ದೇವದಾಸಿಯರ ವರ್ತನೆಗಳು ಪ್ರಕಟಗೊಳ್ಳುತ್ತವೆ. ಕಾರಣ ಹಿಂದಿನಿಂದ ಹುಟ್ಟು ಹಾಕಿರುವ ನಂಬಿಕೆಗಳು ಇದು ಒಂದು ರೀತಿಯ ಬಹಿರಂಗ ದೈಹಿಕ ಸುಲಿಗೆಯಾಗಿದೆ ಇದು ಶೋಷಣೆ ಎಂಬ ಕಲ್ಪನೆಯೇ ಇವರಿಗಿಲ್ಲ. ಬದಲಾಗಿ ಪೂರ್ವಜನ್ಮದ ಕರ್ಮದ ಫಲ ಎಂಬ ತಿಳಿವಳಿಕೆ. ತನಗೆ ಲಭ್ಯವಾದ ಗಂಡಸಿನ ಜೊತೆಗೆ ಹಗಲು ರಾತ್ರಿ ಇರುವುದನ್ನು ಸಮಾಜ ಖಂಡಿಸುತ್ತದೆ. ದೈಹಿಕ ಸುಖದಾಚೆಗೆ ಅವಳ ಸಂಬಂಧಗಳು ವಿಸ್ತರಿಸಿಕೊಂಡಿರಬಹುದೆಂಬುದನ್ನು ಸಮಾಜ ಒಪ್ಪುವುದಿಲ್ಲ. ಈ ಕಾರಣಕ್ಕಾಗಿಯೇ ದೇವದಾಸಿಯರು ಮುಪ್ಪಿನಲ್ಲಿ ಕೊರಗುವುದು ಹೆಚ್ಚು, "ವಯಸ್ಸಿರುವ ತನಕ ದಿನ ಬಿಟ್ಟು ದಿನ ಬರ್ತಿದ್ದ, ಪ್ರೀತಿಯಿಂದ ನೋಡುತ್ತಿದ್ದ, ಮುಪ್ಪು ಬಂದ ಮೇಲೆ ಏಕೆ ಬಂದಾನು? ಅವನಿಗೆ ಸುಖ ಕೊಟ್ಟೆ, ಕಷ್ಟ ಬಂದಾಗ ಬಂಗಾರ ಹಣ ಕೊಟ್ಟೆ, ಆದ್ರೂ 'ಆಕೆ ನನ್ನಾಕೆ' ಅಂತ ಆತ ಒಂದು ಕಡೆಗೂ ಹೇಳಲಿಲ್ಲ. ಎಷ್ಟು ಮಾಡಿದರೂ ನಾನು ಅವನ ಹೆಂಡತಿ ಆಗಲ್ಲ ಎಂಬುದು ಸತ್ಯ. ಇಟ್ಟುಕೊಂಡವನಿಗೆ ನಿಷ್ಠೆಯಿಂದಿದ್ದ, ಕಷ್ಟ ಸುಖದಲ್ಲಿ ಕೈ ಹಿಡಿದು, ಅವನ ಹೆಂಡತಿಯನ್ನು ಪ್ರೀತಿಸಿ ಅವಳ ಮಕ್ಕಳನ್ನು ತನ್ನ ಮಕ್ಕಳಂತೆ ಭಾವಿಸಿ ಅವರ ಮೇಲೆ ಪ್ರೀತಿಯ ಮಹಾಪೂರ ಹರಿಸಿಯೂ, ಇಟ್ಟುಕೊಂಡವಳಾದನೆ ಹೊರತು ಗರತಿಯಾಗಲಿಲ್ಲ'. ಎಂಬ ತಮ್ಮ ಮನದಾಳದ ಕೊರಗನ್ನು ತೋಡಿಕೊಳ್ಳುತ್ತಾರೆ.

ತನ್ನ ಯಜಮಾನಿ ಮೈಯೊಂದು ಮಾರಿಕೊಂಡರೆ, ತಾವೆಲ್ಲಾ ಸುಲಭವಾಗಿ ಬದುಕಬಹುದೆಂದು, ತಾವು ಐಷರಾಮ ಜೀವನ, ಜೂಜು, ಕುಡಿತಕ್ಕೆ ಬಲಿಯಾಗಿ, ಇನ್ನು ಕೆಲವರು ಇತರರಿಗೆ ಇವರನ್ನು ಪರಿಚಯ ಮಾಡಿಸುವಲ್ಲಿ ಹಿಂದೇಟು ಹಾಕುತ್ತಾರೆ. ಭಾರತೀಯ ಸಂಪ್ರದಾಯದಲ್ಲಿ ವಿವಾಹಿತ ಸ್ತ್ರೀ ಗರ್ಭವತಿಯಾಗುವುದೆಂದರೆ, ಅದು ಸಂಭ್ರಮದ ಸಂದರ್ಭವೆಂದು ಕುಟುಂಬ, ಸಮಾಜ, ಆಚರಿಸುತ್ತದೆ. ಅದು

ಆಕೆಗೆ ವಿಶೇಷ ಗೌರವ ಕೊಡುತ್ತದೆ. ಆದರೆ ಅದೇ ದೇವದಾಸಿಯರ ಪ್ರಶ್ನೆ ಬಂದಾಗ, ಭಿನ್ನವಾಗಿರುತ್ತದೆ. ಆಕೆಯನ್ನು ನಿಕೃಷ್ಟವಾಗಿ ಕಾಣಲಾಗುತ್ತದೆ. ಬೇಡಿಕೆ ಇರುವುದಿಲ್ಲ. ಆರೈಕೆಯ ಜವಬ್ದಾರಿ ಹೊರಲು ಕುಟುಂಬ ಬೇಜವಬ್ದಾರಿ ತೋರಿಸುತ್ತದೆ ಏಕಾಂಗಿಯಾಗಿ ಆ ನೋವನ್ನು ಅನುಭವಿಸಬೇಕಾಗುತ್ತದೆ.

ಕುಟುಂಬದ ಸದಸ್ಯರೊಂದಿಗೆ ಒಂದೇ ಕಡೆ ವಾಸವಿದ್ದರೂ ಆಕೆಗೆ ಅವರು ಎಲ್ಲಾ ಕಾಲಕ್ಕೂ ಆಸರೆಯಾಗಿರುತ್ತಾರೆ ಎಂಬ ಭರವಸೆಯಿಲ್ಲ. ತಮ್ಮ ಹೆಂಡತಿ ಮಕ್ಕಳಿಂದ ಆಕೆಯ ವ್ಯವಹಾರ ಬೇರೆ ಇರಲೆಂದು ಆಕೆಯ ಅಣ್ಣತಮ್ಮಂದಿರು ಆಕೆಯ ವ್ಯವಹಾರಗಳಿಗಾಗಿ ಬೇರೆ ಮನೆ ಮಾಡಿರುವ ನಿದರ್ಶನಗಳು ಇಲ್ಲಿವೆ. ಆಕೆಯ ದುರ್ಬಳಕೆಯನ್ನು ಸಮಾಜ ಮಾಡುತ್ತಿದೆ ಎಂದು ಆ ಬಗ್ಗೆ ಅವರಿಗೆ ಚಿಂತೆಯಿಲ್ಲ.

ಬ್ರಿಟಿಷರ ಆಳ್ವಿಕೆಯ ಸಂದರ್ಭದಲ್ಲೂ ಇಲ್ಲಿನ ಈ ಮಹಿಳೆಯರ ಜೊತೆ ಕೆಲವು ಬ್ರಿಟಿಷ್ ಅಧಿಕಾರಿಗಳು ಸಂಬಂಧ ಹೊಂದಿದ್ದರು. ತಮ್ಮ ದೇಶಕ್ಕೆ ಇವರನ್ನು ಸಹ ಕರೆದುಕೊಂಡು ಹೋಗಲು ಪ್ರಯತ್ನಿಸಿದ್ದು. ಅನಂತರ ಅದು ವಿಫಲವಾಯಿತು. ಇಂದು ಆ ಮನೆತನಗಳಲ್ಲಿ. ಬ್ರಿಟಿಷ ಮಾದರಿಯ ಜನಾಂಗದಂತೆ ಹುಟ್ಟಿದ ಇಬ್ಬರು ಹುಡುಗಿಯರಿದ್ದಾರೆ. ಹೀಗೆ ದೇವದಾಸಿ ಮಹಿಳೆಯರು ಈ ಸಮಾಜದ ರಂಜನೀಯ ಭೋಗದ ವಸ್ತುಗಳಾಗಿ, ಸಂತೆಯಲ್ಲಿಟ್ಟು. ಕಾಮುಕನ ಆಸೆಯ ವಸ್ತುವಾಗಿ ಕಾಲ ಕಳೆಯಬೇಕಾದ ಗೋಳಿನ ಗತಿ ಇವರದಾಗಿದೆ. ದೇವದಾಸಿಯರು ಗಂಗೆ ಇದ್ದಂತೆ. ಹರಿಯುವ ನೀರು, ಯಾರಾದರೂ ಕುಡಿಯಬಹುದು. ಗೊತ್ತು ಪರಿಚಯವಿಲ್ಲದವನೊಡನೆ, ಭಾವನೆ ಬತ್ತಿ ಹೋಗಿದ್ದರೂ, ಸಂಸಾರ ಸಾಗಿಸುವುದಕ್ಕೋಸ್ಕರ ಅನಿವಾರ್ಯವಾಗಿ ಸಂಬಂಧ ಬೆಳೆಸಬೇಕಾದುದು ಅನಿವಾರ್ಯ, ಇದರಿಂದ 'ಸೂಳೆ ಸುಣ್ಣ ಬಳಿದ ಸಮಾದಿ, ಅವಳ ಜೀವನವೆಲ್ಲವೂ ಸಿಂಗರಿಸಿದ ಸುಡುಗಾಡು'

ಅನ್ಯಾಯ, ಅಸಮಾನತೆಗಳಿಂದಾಗಿ, ಅನಿವಾರ್ಯವಾಗಿ, ಅನುಭವಿಸಬೇಕಾಗಿ ಬರುವ ಕಷ್ಟಗಳಿಗೆ ಕಂಗೆಡುವ ಈಕೆ ಆತ್ಮವಿಶ್ವಾಸವನ್ನು ಕಳೆದುಕೊಂಡು ಹಲವಾರು ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ಭಾಗವಹಿಸುವ ಅನಿವಾರ್ಯತೆ ಇದೆ. ಆರ್ಥಿಕ ಅಭದ್ರತೆಗಾಗಿ ಆಕೆಯ ಪಾಡನ್ನು ಕಂಡೂ ಕಾಣದಂತೆ, ಪುರುಷ ಸಮಾಜ ಕಷ್ಟಗಳೆಲ್ಲ ಗಂಡಸಿಗೆ, ಸುಖ ಹೆಂಗಸಿಗೆ, ಎನ್ನುವಂತಹ ನಂಬಿಕೆ ವ್ಯವಸ್ಥೆ ಸೃಷ್ಟಿಸಿದೆ. ಆಕೆಯ ಪರಿಸರ, ಮಾನ, ಮರ್ಯಾದೆ, ಒಳ್ಳೆಯ ಕಲ್ಪನೆ ಇಲ್ಲದೆ, ಒಳ್ಳೆ ಜೀವನ ಅನುಕರಿಸಲು ಅವಕಾಶವಿಲ್ಲದಂತೆ, ಮಾರ್ಗದರ್ಶನವಿಲ್ಲದ ಮಾನಸಿಕ ಸ್ಥಿತಿ ರೂಪಿಸುವ ಅಜ್ಜಿ ಮಗಳು, ಮೊಮ್ಮಗಳು ಹೀಗೆ ಇದೇ ಪರಿಸರದಲ್ಲಿ ಜೀವಿಸಬೇಕಾಗಿದೆ.

**ಕೌಟುಂಬಿಕ ವ್ಯವಸ್ಥೆ**

ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ೧೦೦೦, ದೇವದಾಸಿ ಕುಟುಂಬ ಜೀವನದಲ್ಲಿ ಅವರದ್ದೇ ಆದ ವಿಶೇಷತೆ ಇದೆ. ಸಾಮಾನ್ಯವಾಗಿ ಇವರ ಕುಟುಂಬವು ಮಾತೃಪ್ರಧಾನ ಕುಟುಂಬಕ್ಕೆ ಹೋಲುವ ಅವಿಭಕ್ತ ಕುಟುಂಬ ವ್ಯವಸ್ಥೆಗಳಾಗಿವೆ. ತಾಯಿ, ಅಣ್ಣ, ತಮ್ಮ ಅವರ ಹೆಂಡತಿಯರು, ಅಕ್ಕ, ತಂಗಿ, ಇವರ ಮಕ್ಕಳು ಒಂದೇ ಕುಟುಂಬದಲ್ಲಿ ವಾಸಿಸುವುದು ಕಂಡುಬರುತ್ತದೆ. ಬೇಡರ ಕಣ್ಣಪ್ಪನ ಬೇಡಿಕೆಯಂತೆ, ಮನೆತುಂಬಾ ಮಕ್ಕಳ ಕೊಡು ದೇವ ಎಂಬ ಇಚ್ಛೆಯನ್ನು ಇವರುಗಳು ಸಹ ಹೊಂದಿದವರಾಗಿದ್ದಾರೆ. ಹುಟ್ಟಿದ ಗಂಡುಮಕ್ಕಳೇನಾದರೂ

ಸ್ವಾವಲಂಬಿಗಳಾದರೆ ಮಾತ್ರ ತಮ್ಮ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬೇರೆ ಮನೆಯಲ್ಲಿ ವಾಸಿಸುವುದುಂಟು. ಕುಟುಂಬದಲ್ಲಿ ತಾಯಿ ಅಥವಾ ಹಿರಿಯ ದೇವದಾಸಿಯೇ ಯಜಮಾನಿಯಾಗಿದ್ದು, ಅಧಿಕಾರವು ವಂಶಪಾರಂಪರ್ಯವಾಗಿ ತಾಯಿಯಿಂದ ಮಗಳಿಗೆ ಮುಂದುವರಿಯುತ್ತದೆ. ಮಾತೃಪ್ರಧಾನ ಪದ್ಧತಿ ಪ್ರಚಲಿತದಲ್ಲಿರುವುದರಿಂದ ಮನೆಯ ಧಾರ್ಮಿಕ ಕ್ರಮಾದಿಗಳನ್ನು ನಡೆಸುವ ಅಧಿಕಾರ ಹೆಣ್ಣಿಗೆ ಇರುತ್ತದೆ. ಕುಟುಂಬದ ಎಲ್ಲಾ ಸದಸ್ಯರನ್ನೂ ಸಲಹುವ ಹೊಣೆ ಹೊತ್ತು ಮನೆಯ ಎಲ್ಲ ವ್ಯವಹಾರಗಳನ್ನು ಸಮರ್ಥ ರೀತಿಯಲ್ಲಿ ನಿಭಾಯಿಸುತ್ತಾಳೆ. ತಂದೆ, ತಾಯಿಯಾಗಿ ತನ್ನ ಮಕ್ಕಳಿಗೆ ದ್ವಿಪಾತ್ರ ನಿರ್ವಹಿಸುತ್ತಾಳೆ. ಈಕೆಯ ಕುಟುಂಬ ಹೆಣ್ಣು ಸಂತಾನಕ್ಕೆ ಹೆಚ್ಚು ಸಂಭ್ರಮ ಪಡುತ್ತಾರೆ. ಬಹು ಜೋಪಾನವಾಗಿ ಸಾಕಿ, ನಾಮಕರಣವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಆ ಮಗುವನ್ನು ಮನೆಯ ಆಸ್ತಿಯಂತ ಭಾವಿಸಿ, ನಮಗೆ ಕಷ್ಟ ಸುಖಗಳಲ್ಲಿ ಆಗುವ 'ಕುಲದೀಪಿಕೆ' ಎಂಬ ಭಾವನೆ ಅವರಲ್ಲಿರುತ್ತದೆ. ಕಾರಣ ಗಂಡು ಮಕ್ಕಳ ಬಗ್ಗೆ ಅವರಿಗೆ ನಂಬಿಕೆ ಇಲ್ಲ. ಅವರು ಹುಟ್ಟು ಆಲಸ್ಯವನ್ನುಂಟು ಮಾಡುತ್ತದೆ. ಹೆಚ್ಚಿನ ಪ್ರಾಧಾನ್ಯತೆ ಇಲ್ಲ. ತಮ್ಮ ಕುಟುಂಬದ ಆಸ್ತಿಯಲ್ಲಿ ತನ್ನ ಸಹೋದರರಂತೆ, ಈಕೆಯೂ ಪಾಲು ಪಡೆಯುವ ಹಕ್ಕು ಹೊಂದಿದ್ದಾಳೆ.ಒಂದೇ ಮನೆಯಲ್ಲಿ ಅಜ್ಜಿ, ಅಮ್ಮ, ಮಗಳು ಮೂರು ಅಥವಾ ನಾಲ್ಕು ಜನ ದೇವದಾಸಿಯರಿರುವ ನಿದರ್ಶನಗಳು ಇಲ್ಲಿವೆ. ಹೊರಗೆ ನೋಡಲು ಇವರ ಕುಟುಂಬ ಗೌರವಾನ್ವಿತ ಮನೆಯಂತೆ ಕಂಡು ಬರುತ್ತದೆ. ಮನೆಯ ದೇವದಾಸಿಯರು ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದ್ದು ಬೇಕಾದಲ್ಲಿಗೆ ಹೋಗಿ ಬರುವ ಯಾವಾಗಲೂ ಅಲಂಕರಿಸಿಕೊಂಡು, ಆಭರಣಗಳನ್ನು ಹಾಕಿಕೊಂಡು ಹೂ ಮುಡಿದು ಮನೆಯ ಖಜಾನೆಯಂತೆ ಇರುತ್ತಾಳೆ. ಇಟ್ಟುಕೊಂಡವನು ಮನೆಗೆ ಬಂದು ಹೋಗುವಾಗ ಯಾವ ಅಪಚಾರವಾಗದಂತೆ, ಎಲ್ಲಗೂ ಆತ್ಮೀಯತೆಯಿದ ಆತನನ್ನು ಕುಟುಂಬದ ಸದಸ್ಯನಂತೆ ನೋಡಿಕೊಳ್ಳುತ್ತಾರೆ. ಈ ಆತ್ಮೀಯತೆಯಿಂದಾಗಿ, ಕೆಲ ಮನೆಗಳಲ್ಲಿ ಬಂದ ಗಿರಾಕಿ ಸದಸ್ಯರು ಅಜೀವ ಪರ್ಯಂತ ಇವರುಗಳ ಮನೆ ಸದಸ್ಯರಾಗಿಯೇ ಇಲ್ಲಿಯೇ ಇದ್ದು ಕೊನೆಯುಸಿರೆಳೆದ ಅನೇಕ ಬ್ರಾಹ್ಮಣ, ಶೆಟ್ಟಿ, ಲಿಂಗಾಯತ, ಐಯ್ಯಪ್ಪ ಮುಂತಾದ ಸಮುದಾಯದ ಗಂಡಸರು ಮದುವೆಯಾಗದೇ ಇವರೊಟ್ಟಿಗೆ ಜೀವನ ಸಾಗಿಸಿ ಕೊನೆಯುಸಿರೆಳೆದ ನಿದರ್ಶನಗಳಿವೆ.

ಇಲ್ಲಿ ಇಟ್ಟುಕೊಂಡವನು ಎಲ್ಲರ ಎದುರಿಗೆ ಮನೆಗೆ ಬಂದು ಹೋಗುವುದರಿಂದ ಇದು ಮನೆಯ ಎಲ್ಲರಿಗೂ ತಿಳಿದ ವಿಷಯವಾಗಿದ್ದು, ಈ ಬಗ್ಗೆ ಯಾವುದೇ ಕೀಳಿರಿಮೆ ಸಂಕೋಚ, ಭಯ, ಇಲ್ಲದೇ ಸಹಜವಾಗಿ ಆಕೆ ವ್ಯವಹರಿಸುತ್ತಾಳೆ. ಬಂದವನು ಮತ್ತೊಮ್ಮೆ ಮನೆ ಹುಡುಕಿಕೊಂಡು ಬರುವಂತಹ ಸಲಿಗೆ ಮತ್ತು ಆದರವನ್ನೂ ತೋರಿಸಲಾಗುತ್ತದೆ.

ಹೊರನೋಟಕ್ಕೆ ಈ ರೀತಿ ಕಂಡರೂ ಮನೆಯ ಅಂತರ್ಯದಲ್ಲಿ ಯಾರಿಗೂ ಕಾಣದಂತಹ ಕೈಗಳು, ಅವಳನ್ನು ನಿಯಂತ್ರಿಸುವ, ಹಾಗೂ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವ ಪುರುಷರ ಕೈಗಳು ಕೆಲಸ ಮಾಡುತ್ತಿರುತ್ತವೆ. ಮನೆಯ ವ್ಯವಹಾರದಲ್ಲಿ ಆಕೆಯ ಸಹೋದರರು ಸಹಕರಿಸುವ ಕಾರ್ಯ ಮಾಡುವುದರ ಜೊತೆಗೆ ವಿಟ ಪುರುಷರನ್ನು ಪೂರೈಕೆ ಮಾಡಲು, ಪರಿಚಾರಕರ ಕೆಲಸವನ್ನು ಅವರು ನಿರ್ವಹಿಸುತ್ತಾರೆ. ದೇವದಾಸಿಯರನ್ನು ಅವಲಂಬಿಸಿದ ಸಂಬಂಧಗಳು, ಸ್ಥಾನಮಾನಗಳು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಲಾಗಿದೆ.

## ಕೋಷ್ಟಕ ೧೬

### ದೇವದಾಸಿಯರ ಮೇಲೆ ಅವಲಂಬಿತರಾದವರ ಸಂಬಂಧಗಳ ಸ್ಥಾನಮಾನ

| ಸ್ಥಾನ | ಸಂಖ್ಯೆ | ಮಕ್ಕಳು | | ಸಹೋದರ | | ಸಹೋದರಿ | | ತಾಯಿ | ಇತರೆಸಂಬಂಧ | | ಒಟ್ಟು |
|---|---|---|---|---|---|---|---|---|---|---|---|
| | | ಗಂ | ಹೆ | ಅಣ್ಣ | ತಮ್ಮ | ಅಕ್ಕ | ತಂಗಿ | | ಗಂ | ಹೆ | |
| ತಾಯಿ | ೫೩೧ | ೭೫೩ | ೬೨೮ | ೭೪ | ೨೪೬ | ೩೮ | ೧೧೭ | ೧೨೬ | ೧೨ | ೭ | ೨೫೩೨ |
| ಮಗಳಾಗಿ | ೪೬೯ | ೨೫ | ೧೭ | ೧೯೩ | ೪೨೬ | ೮೮ | ೨೮೭ | ೨೦೬ | ೩೭ | ೧೨ | ೧೭೬೦ |
| ಅಕ್ಕ:ತಂಗಿ | ೭೭೮ | ೬೪೫ | | ೨೬೭ | ೬೭೨ | ೧೨೬ | ೪೦೪ | ೩೩೨ | ೪೯ | ೧೯ | ೪೨೯೨ |

ಅಧ್ಯಯನಕ್ಕೆ ಒಳಪಡಿಸಿದ ೧೦೦೦ ದೇವದಾಸಿಯರ ಕುಟುಂಬಗಳಲ್ಲಿ ಆಕೆಯನ್ನು ಅವಲಂಬಿಸಿ ಜೀವಿಸುವ ಸದಸ್ಯರ ಒಟ್ಟು ಚಿತ್ರಣ ಹೀಗಿದೆ.

ಒಟ್ಟು ಜನ ಸಂಖ್ಯೆ

| ಕುಟುಂಬಗಳ ಸಂಖ್ಯೆ | ಪುರುಷ | ಸ್ತ್ರೀ | ಒಟ್ಟು |
|---|---|---|---|
| ೧೦೦೦ | ೧೭೬೬ | ೨೫೨೬ | ೪೨೯೨ |
| | ೪೧% | ೫೯% | ೧೦೦% |

ಇಲ್ಲಿ ಪುರುಷ ಸದಸ್ಯರ ಸಂಖ್ಯೆ ಶೇ. ೪೧ ಇದ್ದರೆ, ಮಹಿಳಾ ಸದಸ್ಯರ ಸಂಖ್ಯೆ ಶೇ. ೫೯ ಇದೆ. ಕಾರಣ ಕುಟುಂಬದಲ್ಲಿ ಹುಟ್ಟಿದ ಸ್ತ್ರೀಯರು ಮದುವೆಯಾಗಿ ಹೊರ ಹೋಗದೇ ದೇವದಾಸಿ ಸಂಸ್ಕಾರಕ್ಕೊಳಗಾಗಿ ತವರು ಮನೆಯಲ್ಲೇ ಉಳಿಯುವುದು. ಜೊತೆಗೆ ಅಣ್ಣ ತಮ್ಮಂದಿರಿಗೆ ಬೇರೆ ಕಡೆಯಿಂದ ಹೆಣ್ಣನ್ನು ತಂದಿರುವ ಕಾರಣ ಮಹಿಳೆಯರ ಸಂಖ್ಯೆ ಕುಟುಂಬದಲ್ಲಿ ಸಹಜವಾಗಿ ಹೆಚ್ಚಾಗಿರುತ್ತದೆ.

ಇವರ ಕುಟುಂಬಗಳಲ್ಲಿ ಹೆಣ್ಣು ಮಕ್ಕಳ ವಿವಾಹಕ್ಕೆ ಸಂಬಂಧಿಸಿದಂತೆ ಆಲಸ್ಯ, ದ್ವೇಷಭಾವನೆ ಬರುವ ಹಾಗೆ ಮಾನಸಿಕವಾಗಿ ಸಿದ್ಧಗೊಳಿಸಲಾಗಿರುತ್ತದೆ. ಮನೆಯ ಸುತ್ತ ಮುತ್ತಲ ಪರಿಸರದಂತೆ, ಇವರನ್ನು ಹುಟ್ಟಿದ ಮನೆಯಿಂದ ತಳ್ಳಲ್ಪಟ್ಟ ಮೇಲೆ ಗಂಡನ ಮನೆಯಲ್ಲಿ ಆಳಾಗಿ ದುಡಿದು, ಕೂಲಿ ಮಾಡಿಯೂ ಗಂಡನಿಂದ ಹೊಡೆತ, ಬಡಿತ, ಬೈಗಳು, ಜೊತೆಗೆ ಅತ್ತೆ, ಮಾವಂದಿರ ಕಾಟ, ನಾದಿನಿಯರ ನಿಂದನೆ, ಮುಂತಾಗಿ ಬೆದರಿಸಿ, 'ಬಡವನ ಹೆಂಡತಿಯಾಗಿ ಈ ಪರಿಯಾಗಿ ಬಾಳುವುದಕ್ಕಿಂತ ಶ್ರೀಮಂತನ ಇಟ್ಟುಕೊಂಡವಳಾಗಿ ಬಾಳುವುದು ಭಾಗ್ಯ' ಎಂಬ ಮಾನಸಿಕ ಸ್ಥಿತಿಯನ್ನು ತಂದಿದ್ದಾರೆ, ಕೆಲ ಶಿಕ್ಷಣ ಪಡೆದ ಹುಡುಗಿಯರು ತಮಗೆ ಈ ಸಂಸ್ಕಾರ ಬೇಡವೆಂದು ಹಠಮಾಡಿ, ಅನಾಹುತ ಮಾಡಿಕೊಂಡದ್ದು ಇದೆ. ಪ್ರೀತಿಸಿದ ಹುಡುಗನ ಜೊತೆಯಲ್ಲಿ ಓಡಿ ಹೋಗಿ ಮದುವೆಯಾಗಿದ್ದರೂ, ಪ್ರಭಾವಿ ವ್ಯಕ್ತಿಗಳ ಸಹಾಯದಿಂದ ಬಿಡಿಸಿ, ಕರೆತಂದು, ಪುನಃ ಒಡೆದು ಬಡಿದು ಉಪವಾಸ ಹಾಕಿ ದೇವದಾಸಿ ಸಂಸ್ಕಾರಕ್ಕೊಳಪಡಿಸಿದ್ದಾರೆ ಈ ಕಾರಣಕ್ಕೆ ಕೆಲವರು ಜಿಗುಪ್ಸೆಯಿಂದ ಆತ್ಮಹತ್ಯೆ ಮಾಡಿಕೊಂಡರೆ, ಇನ್ನೂ ಕೆಲವರು ವಿಫಲ ಪ್ರಯತ್ನ ಮಾಡಿ ಉಳಿದುಕೊಂಡವರೂ ಇದ್ದಾರೆ. ಮಾನ, ಮರ್ಯಾದೆ ಕುರಿತು ಯೋಚಿಸುವ ಮಾನಸಿಕ ಸ್ಥಿತಿಯಲ್ಲಿ, ಅಂತಹ ಪರಿಸರದಲ್ಲಿ ಅವರಿಲ್ಲ. ಇವರಲ್ಲಿ ಕೆಲವರು ಕಲಾವಿದೆಯರಾಗಿದ್ದು, ರಾಜ್ಯದ ಎಲ್ಲ ಹಳ್ಳಿ, ಹಳ್ಳಿಗಳಲ್ಲಿ ನಾಟಕವಾಡಲು ಹೋಗಿ, ಅನೇಕ ಪ್ರಶಸ್ತಿಗಳನ್ನು,

ಮಾನ ಸನ್ಮಾನ, ಗೌರವಗಳನ್ನು ಪಡೆದು ಭ್ರಮಾಲೋಕದಲ್ಲಿ ತೇಲಾಡುವವರೂ ಇದ್ದಾರೆ.

ಕುಟುಂಬ ನಿರ್ವಹಣೆಯ ಜವಬ್ದಾರಿ ಹೊತ್ತ ಇವರು ಎಷ್ಟೋ ಜನ ಅನಕ್ಷರಸ್ಥರಾಗಿದ್ದರೂ ಅಣ್ಣ, ತಮ್ಮ, ತಂಗಿಯರಿಗೆ, ವಿವಾಹ ಮಾಡಿ, ಅವರುಗಳ ಮಕ್ಕಳಿಗೆ ನಾಮಕರಣ, ಬಾಣಂತನ, ಶಿಕ್ಷಣ, ಕೆಲಸಕ್ಕಾಗಿ ಪರದಾಡಿ ಇದರಿಂದ ಆಕೆ ಅನುಭವಿಸುವ ನೋವು, ನಿರಾಶೆ, ಹತಾಶೆ, ಅಪಮಾನದಿಂದ ಕೆಲವೊಮ್ಮೆ ಕುಗ್ಗುವುದೂ ಇದೆ. ಇದಕ್ಕೆಲ್ಲ ಸಮಾಜವನ್ನು ನಾವು ಜವಾಬ್ದಾರರನ್ನಾಗಿ ಮಾಡಬಹುದಾಗಿದೆ. ಮನೆಯ ಗಂಡು ಮಕ್ಕಳಿಗೆ ಈ ಊರಿನಲ್ಲಿ ನಿರ್ವಹಿಸಲು ನಿರ್ದಿಷ್ಟ ಉದ್ಯೋಗವಿಲ್ಲ. ಕಾರ್ಖಾನೆಗಳು, ಗಣಿ, ಎ.ಪಿ.ಎಂ.ಸಿ., ಮುಂತಾದ ಅವಕಾಶಗಳಿಲ್ಲದೇ ಸ್ವಂತ ಕಸುಬು ಗೊತ್ತಿಲ್ಲದೆ ಅನಿವಾರ್ಯವಾಗಿ ತಮ್ಮ ಅಕ್ಕ-ತಂಗಿ ದೇವದಾಸಿಯರನ್ನು ಆಶ್ರಯಿಸಿ ಜೀವಿಸಬೇಕಾಗಿದೆ.

ಹುಣಸೆಹಣ್ಣು ಮತ್ತು ಮಾವಿನಹಣ್ಣಿನ ಋತುಮಾನದಲ್ಲಿ ಒಂದಿಷ್ಟು ವ್ಯಾಪಾರ ಮಾಡಿದರೆ ಮುಗಿಯಿತು. ಉಳಿದ ಸಮಯವೆಲ್ಲ ವ್ಯರ್ಥವಾಗಿ ಕಾಲಕಳೆಯುತ್ತಾ, ತಮ್ಮ ತಾಯಿಯ ಹತ್ತಿರ ಪುಸಲಾಯಿಸಿ ಹಣ ಪಡೆದು, ದುಬಾರಿ ಬಟ್ಟೆಗಳನ್ನು ಧರಿಸಿ ತಿರುಗುವುದು, ಮಧ್ಯವರ್ತಿಗಳಾಗಿ ಕೆಲಸ ಮಾಡುವುದು ಖರ್ಚಿಗೆ ಹಣ ಬೇಕಾದಾಗ ದೇವದಾಸಿ ಅಕ್ಕ ತಂಗಿಯರನ್ನು ಒಡೆದು ಬಡಿದು ಹಣ ವಸೂಲಿ ಮಾಡಿ, ಕೊಡದಿದ್ದರೆ, ಮನೆಯ ಯಾವುದಾದರೂ ಸಾಮಾನುಗಳನ್ನು ಕೆಲವರು ಕದ್ದು ಮಾರುವುದು. ಕುಡಿಯುವುದು, ಜೊತೆಗೆ ಚಟಗಳಿಗೆ ಬಲಿ ಬೀಳುವುದು ಕಂಡುಬರುತ್ತದೆ. ತಮ್ಮ ಹೆಂಡತಿ ಮಕ್ಕಳ ಕಾಟ ಬಹಳವಾದರೆ, ಒಡೆದು ಬಡಿದು ತವರು ಮನೆಗಳಿಗೆ ಕಳುಹಿಸುವುದೂ ಇದೆ.

**ವೈವಾಹಿಕ ಬದುಕು**

ದೇವದಾಸಿಯರು ಮನೆಯಲ್ಲಿಯೇ ಯಜಮಾನತ್ವದ ಸ್ಥಾನದಲ್ಲಿದ್ದು ಅಣ್ಣ, ತಮ್ಮ, ತಂಗಿಯರಿಗೆ ವಿವಾಹ ಮಾಡುವ ಸಂದರ್ಭಗಳು ಬಂದಾಗ ಮಾನಸಿಕವಾಗಿ ಅಪಮಾನಕ್ಕೊಳಗಾಗುವ ಸಾಧ್ಯತೆಗಳೇ ಹೆಚ್ಚು. ಕೆಲವೊಮ್ಮೆ ಮನೆಯಲ್ಲಿ ದೇವದಾಸಿಯಾದವರನ್ನು ಗೌಪ್ಯವಾಗಿಟ್ಟು, ಬೀಗರು ಬಂದಾಗ, ಹೋದಾಗ, ಇಲ್ಲದಿರುವಂತೆ ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಅಥವಾ ಕೊಡು ತೆಗೆದುಕೊಳ್ಳುವ ಮಾತು ಕತೆಯಲ್ಲಿ ಅವಳನ್ನು ಕೂರಿಸುವುದಿಲ್ಲ. ಏಕೆಂದರೆ ಸೂಳೆಯ ಮಕ್ಕಳಿಗೆ ಅಥವಾ ಅಣ್ಣತಮ್ಮಂದಿರಿಗೆ ಹೆಣ್ಣು ಕೊಡುವುದಿಲ್ಲ ಎನ್ನುವರು ಇಂತಹ ಪರಿಸ್ಥಿತಿ ಎದುರಿಸಲಾಗದೇ ಕೆಲವರು ಆತ್ಮಹತ್ಯೆ ಮಾಡಿ ಕೊಂಡಿರುವುದಾಗಿ ತಿಳಿದು ಬಂದಿದೆ. ಇನ್ನೂ ಕೆಲವರು ಹುಚ್ಚರಾಗಿ, ಮಾನಸಿಕ ಅಸ್ವಸ್ಥತೆಗೆ ಒಳಗಾದವರೂ ಇದ್ದಾರೆ. ಈ ಮನೆಯ ಹುಡುಗಿಯರು ನಾನು ಮದುವೆಯಾಗುತ್ತೇನೆಂದು ಹಠಮಾಡಿದರೆ ಮುಂದೆ ಬಂದು ಮದುವೆ ಮಾಡಿಕೊಳ್ಳುವವರಿಲ್ಲ. ಕಾರಣ, ಅನಿವಾರ್ಯವಾಗಿ ದೇವದಾಸಿಯಾಗುವ ಮಾರ್ಗ ಅನುಸರಿಸುತ್ತಿದ್ದಾರೆ.

ಅವಿಭಕ್ತ ಕುಟುಂಬವಾಗಿದ್ದ ಪಕ್ಷದಲ್ಲಿ ದೇವದಾಸಿಯರನ್ನು ಹರಸಿಬರುವ ವಿಟಪುರುಷನ ಆಗಮನ ಉಳಿದವರಿಗೆ ಮಾನಸಿಕ ಹಿಂಸೆ ಎನಿಸಿ ಕೌಟುಂಬಿಕ ಸಮಸ್ಯೆಗಳು ತಲೆದೋರುವುದುಂಟು. ಈ ಅನಾನುಕೂಲತೆಗಳಿಗಾಗಿ ದೇವದಾಸಿಯರು ತಾಲ್ಲೂಕು ಅಥವಾ ಜಿಲ್ಲಾ ಕೇಂದ್ರಗಳಿಗೆ ಹೋಗಿ ತಮ್ಮ ಪರಿಚತ ಗಿರಾಕಿಗಳ ಜೊತೆ ಇದ್ದು ಬರುವುದು ಅಧ್ಯಯನದಿಂದ ಕಂಡುಬಂದಿದೆ.

## ದೇವದಾಸಿಯರ ಮಕ್ಕಳ ಸ್ಥಾನಮಾನ

ಸಾಮಾನ್ಯವಾಗಿ 'ಬಹು ಪಾಲು ದೇವದಾಸಿಯರಿಗೆ ಮಕ್ಕಳಾಗಿಲ್ಲ. ಕಾರಣ ಇವರುಗಳಿಗೆ ಗರ್ಭಧರಿಸುವಿಕೆ, ಹೆರಿಗೆ, ಬಾಣಂತನ ಈ ಎಲ್ಲವುಗಳಿಂದ ದುಡಿಮೆ ನಿಲ್ಲುವುದು. ಮನೆಯ ಖರ್ಚು ನಿಭಾಯಿಸುವವರು ಯಾರು? ಎಂಬ ಭಯದಿಂದ ಗರ್ಭಿಣಿಯರಾದರೂ ಗರ್ಭಪಾತ ಮಾಡಿಸಿಕೊಳ್ಳುವವರೆ ಹೆಚ್ಚು ಇವರಿಗೆ ಯಾವುದೇ ಕೌಟುಂಬಿಕ ಭದ್ರತೆ ಇಲ್ಲದೆ ಕೇವಲ ವ್ಯವಹಾರಿಕವಾಗಿ ದೈಹಿಕ ಸುಖವನ್ನು ಹೊಂದ ಬಯಸುವುದರಿಂದ ಸಂತಾನೋತ್ಪತ್ತಿ ಬಹಳ ಕಡಿಮೆ. ಆದಕಾರಣ ತಂಗಿ, ಅಣ್ಣ ಅಥವಾ ತಮ್ಮನ ಮಕ್ಕಳನ್ನು ದತ್ತುಪಡೆದು ಸಾಕುತ್ತಿದ್ದಾರೆ. ಮಕ್ಕಳಿದ್ದವರೂ ತಮ್ಮಲ್ಲಿಗೆ ವಿಟ ಪುರುಷನು ಬಂದಾಗ ಮಕ್ಕಳ ಕೈಗೆ ಹಣ ಕೊಟ್ಟು ಹೊರಗೆ ಕಳುಹಿಸುವುದು ಸಾಮಾನ್ಯ. ಈ ಮಕ್ಕಳಿಗೆ ತಾಯಿ ಒಬ್ಬಳೇ ಸತ್ಯವಾಗಿದ್ದು, ತಂದೆ ಬೇರೆ ಬೇರೆ ಎಂಬ ಆಂತರಿಕ ಭಾವನೆ ಇರುವ ಸಾಧ್ಯತೆಗಳಿವೆ. ಕಾರಣ ಇವರುಗಳ ಹೋಲಿಕೆಗಳಲ್ಲಿ ಬಹು ವ್ಯತ್ಯಾಸಗಳಿರುತ್ತದೆ. ಹಾಗೆ ಅವರುಗಳ ಮಕ್ಕಳ ಬಹು ರೂಪ. ಸೌಂದರ್ಯದಿಂದ ಕೂಡಿದವರೇ ಹೆಚ್ಚು ಜನ. ತಮ್ಮ ಗಿರಾಕಿಗಳಿಗಾಗಿ ಅಲೆಯುತ್ತಾ ವ್ಯವಹಾರಗಳಲ್ಲಿ ಮಕ್ಕಳ ಬಗ್ಗೆ ಹೆಚ್ಚು ನಿಗಾ ವಹಿಸಲಾಗುವುದಿಲ್ಲ. ಅವರುಗಳು ಕೇಳಿದ್ದನ್ನು ತಂದು ಕೊಡುವ ಬೆಲೆ ಬಾಳುವ ಬಟ್ಟೆ, ಖರ್ಚಿಗೆ ಹಣ ಎಲ್ಲವನ್ನೂ ಕೊಟ್ಟು, ತನ್ನ ತಾಯಿ ಅಥವಾ ಅಣ್ಣ ತಮ್ಮಂದಿರ ಆಶ್ರಯಕ್ಕೆ ಬಿಟ್ಟವರೇ ಹೆಚ್ಚು ಜನ. ಈಗಾಗಿ ಈ ಮಕ್ಕಳು ತಂದೆ ಇಲ್ಲದೇ ತಂದೆಯ ಹೆಸರನ್ನು ಯಾವುದೇ ಸರ್ಕಾರದ ಕಡತಗಳಿಗೆ ಸೂಚಿಸುವಂತಿಲ್ಲ. ಈ ಮಕ್ಕಳು ತನ್ನ ತಾಯಿಯ ವಂಶಕ್ಕೆ ಸೇರಿದವರಾಗಿ ತಾಯಿಯ ಜಾತಿಯನ್ನು ಅವಲಂಬಿಸುತ್ತಾರೆ. ತಾಯಿಯ ಹೆಸರನ್ನಷ್ಟೇ ಎಲ್ಲಾ ದಾಖಲಾತಿಗಳಲ್ಲಿ ನಮೂದಿಸುತ್ತಾರೆ.

ನಮ್ಮ ಪುರಾಣ ಕಥೆಗಳ ಸ್ತ್ರೀಯರಾದ ಅದಿರೆ, ದಿರೆ, ಜಬಾಲಾ, ವಿನಿತಾ, ಮೊದಲಾದವರ ಹೆಸರಿನಿಂದಲೇ ಅವರ ಮಕ್ಕಳನ್ನು ಕರೆಯಲಾಗುತ್ತಿತ್ತು. ತಂದೆ ಯಾರೆಂದು ತಾಯಿ ಕೊಡುವ ಅಭಿಪ್ರಾಯವೇ ಸಾಕಾಗುತ್ತಿತ್ತು. ಮಾತೃ ಮೂಲೀಯ ಪದ್ಧತಿಯ ಮಹತ್ವವನ್ನು ಇಲ್ಲಿ ಗಮನಿಸಬಹುದು. ನಮ್ಮ ಮಕ್ಕಳು ದೇವದಾಸಿಯರ ಮಕ್ಕಳು ಸಮಾಜದಲ್ಲಿ ಗೌರವಯುತವಾಗಿ ಬದುಕಬೇಕು ಎಂಬ ಕಾರಣದಿಂದ ತಮ್ಮ ಮನೆಗೆ ಬರುವ ಓರ್ವನ ಹೆಸರನ್ನು ಹೇಳಿ ಅವರೇ ಅವರ ತಂದೆ ಆತ ತೀರಿದನೆಂದು ವಿಧವೆಯರಂತೆ ಬದುಕುವವರೂ ಇದ್ದಾರೆ.

ಅವರದೇ ಪರಿಸರದಲ್ಲಿ ಅವರ ಮಕ್ಕಳಿಗೆ ಯಾವುದೇ ಹಿಂಜರಿಕೆ ಅಥವಾ ಕೀಳರಿಮೆಯ ಭಾವನೆ ಇರುವುದಿಲ್ಲ. ಆದರೆ ಆ ಪರಿಸರದಿಂದ ಹೊರ ಬಂದಾಗ ಅವರನ್ನು ನೋಡುವ ನೋಟ, ಅಪಮಾನ, ತಂದೆ ಇಲ್ಲದೇ ಹುಟ್ಟಿದವರೆಂಬ ಕಳಂಕಿತ ಹೆಸರು, ಇದರಿಂದ ಅವಮಾನಗೊಂಡು ನೇಣು ಹಾಕಿಕೊಂಡವರೂ ಇದ್ದಾರೆ. ಕೆಲವರು ಇದೆಲ್ಲವನ್ನು ಎದುರಿಸಿ ಮೆಟ್ಟನಿಂತವರೂ ಇದ್ದಾರೆ. ಹೆಣ್ಣುಮಕ್ಕಳಾದರೆ ಬಹಳ ಹಗುರವಾಗಿ ನಡೆಸಿಕೊಳ್ಳುವುದೇ ಹೆಚ್ಚು.

## ೫.೫ ಆರ್ಥಿಕ ಜೀವನ

ಮೂಲತಃ ಬೇಡ ಬುಡಕಟ್ಟು ಸಮುದಾಯಕ್ಕೆ ನಾಳೆ ಎಂಬ ಚಿಂತೆ ಇರಲಿಲ್ಲ. ಒಂದು ದಿನಕ್ಕೆ ಬೇಕಾದಷ್ಟು ಆಹಾರವನ್ನು ಸಂಗ್ರಹಿಸಿಟ್ಟು ಕೊಳ್ಳುತ್ತಿದ್ದರು. ಮಾನವನಲ್ಲಿ ಕ್ರಮೇಣ ಕೂಡಿಡುವ ಮನೋಭಾವ ಬೆಳೆದಿದ್ದರಿಂದ ಇವರುಗಳು ಗಳಿಸುವ ಆಮಿಷಕ್ಕೆ ಒಳಗಾದರು. ನಂತರ ಅವರು ತಮ್ಮದೇ ಆದ ಆರ್ಥಿಕ ಬೆಳವಣಿಗೆಗೆ ಮಹತ್ವ

ನೀಡತೊಡಗಿದರು. ಆಧುನೀಕರಣಗೊಂಡ ಇಂದಿನ ಈ ಸಮಾಜದಲ್ಲಿ ಆರ್ಥಿಕತೆಗೆ ಬಹು ಪ್ರಾತಿನಿಧ್ಯ ನೀಡಲಾಗಿದ್ದು, ಕಳೆದ ೫-೬ ವರ್ಷಗಳಿಂದ ಈಚೆಗೆ ಕೂಡ್ಲಿಗಿ ವ್ಯಾಪ್ತಿಯಲ್ಲಿ ಬರುವ ಬೇಡ ಸಮುದಾಯದವರ ಆರ್ಥಿಕ ಸ್ಥಿತಿ ಸುಧಾರಣೆಯಾಗುತ್ತಿದೆ. ಊರು ಬೆಳೆದಂತೆ ಗುಡಿಸಲುಗಳು ಹೆಂಚಿನ ಮನೆಗಳಾಗಿ, ಹೆಂಚಿನ ಮನೆಗಳು ಕಾಂಕ್ರೀಟ್ ಮನೆಗಳಾಗಿ ಪರಿವರ್ತನೆ ಹೊಂದಿವೆ. ಈ ಬೆಳವಣಿಗೆಯಿಂದಲೇ ತಕ್ಕಮಟ್ಟಿಗೆ ಈ ಸಮುದಾಯದ ಅಭಿವೃದ್ಧಿ ಅಲ್ಪ ಪ್ರಮಾಣದಲ್ಲಿ ಆಗಿದೆ ಎಂಬುದನ್ನು ಸೂಚಿಸುತ್ತದೆ. ದುರದೃಷ್ಟವಶಾತ್ ವಿದ್ಯಾವಂತರಾಗಿ ವೈದ್ಯರು, ವಕೀಲರು, ಶಿಕ್ಷಕರು, ಉನ್ನತ ಅಧಿಕಾರಿಗಳಾಗಿ ತವ್ಮ ಮೂಲವನ್ನು ಹೇಳಿಕೊಳ್ಳಲಾಗದೆ. ತಮ್ಮ ಮೂಲ ನೆಲದಿಂದ ವಿಮುಖರಾಗಿದ್ದಾರೆ. ಇದು ನೂರಾರು ಕುಟುಂಬಗಳು ಹೊಂದಬೇಕಾಗಿದ್ದ ಅಭಿವೃದ್ಧಿಗೆ ಹಿನ್ನೆಡೆಯಾಗಿದೆ. ಆದ್ದರಿಂದ 'ದೇವದಾಸಿ ಪದ್ಧತಿ' ಎಂಬುದು ಈ ಸಮುದಾಯಕ್ಕೆ ಶಾಪವಾಗಿದೆ.

**ಕೋಷ್ಟಕ ೧೭**

**ಬೇಡ ದೇವದಾಸಿ ಸಮುದಾಯದ ಮನೆ ಮಾದರಿಗಳು**

| ಶೇಕಡ | ಮನೆಗಳು | ಸಂಖ್ಯೆ |
|---|---|---|
| ೬ | ಗುಡಿಸಲುಗಳು | ೬೧ |
| ೧ | ಟಿನ್ | ೧೪ |
| ೩೬ | ಮಾಳಿಗೆ | ೩೬೨ |
| ೨೧ | ಆರ್ ಸಿ ಸಿ | ೨೦೯ |
| ೨೯ | ಹೆಂಚಿನ | ೨೮೬ |
| ೫ | ಆಶ್ರಯ | ೪೭ |
| ೨ | ಬಾಡಿಗೆ | ೨೧ |
| ೧೦೦ | ಒಟ್ಟು | ೧೦೦೦ |

ಕೋಷ್ಟಕದಲ್ಲಿ ನೀಡಿದ ಮನೆ ಮಾದರಿಗಳನ್ನು ಗಮನಿಸಿದಾಗ ಅತಿ ಹೆಚ್ಚಾಗಿ ಕಂಡು ಬರುವ ಮಾಳಿಗೆ ಮನೆಗಳ ಸಂಖ್ಯೆ ಶೇ. ೩೬ ರಷ್ಟಿದ್ದರೆ. ಶೇ ೨೯ ರಷ್ಟು ಹಂಚಿನ ಮನೆಗಳು ಕಂಡು ಬರುತ್ತದೆ. ಶೇ. ೨೧ ರಷ್ಟು ಆರ್.ಸಿ.ಸಿ. ಮನೆಗಳು ಇನ್ನುಳಿದ ಗುಡಿಸಲು ಶೇ. ೬ರಷ್ಟು ಆಶ್ರಯ ಮನೆಗಳ ಶೇ. ೫ ರಷ್ಟು ಬಾಡಿಗೆ ಮನೆಗಳು ಶೇ. ೨ ರಷ್ಟು ಟನ್‌ಮನೆ ಶೇ. ೧ ರಷ್ಟು ಕಂಡು ಬರುತ್ತವೆ. ಈ ಹಿಂದೆ ಬೇಡರು ಬೇಟೆ, ಪಶುಪಾಲನೆ, ಸೈನಿಕ ವೃತ್ತಿಯನ್ನು ಕೈಗೊಂಡಿದ್ದರು. ಆದರೆ ಇಂದು ಕೃಷಿಕರಾಗಿ ಪರಿವರ್ತಿತರಾಗಿದ್ದಾರೆ. ಎಂಬುವ ಎಂ.ಪಿ. ವೀಣಾ ರವರ ಅಭಿಪ್ರಾಯ ಸೂಕ್ತವೇ ಆಗಿದೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ೧೦೦೦ ದೇವದಾಸಿ ಕುಟುಂಬದವರು ಕೃಷಿಯನ್ನು ಅವಲಂಬಿಸಿದ್ದಾರೆ. ಮಳೆ ಆಧಾರಿತ ಕೃಷಿಯಾದ ಕಾರಣ ಜೀವನ ನಿರ್ವಹಿಸುವುದು ದುಸ್ತರವಾಗಿದೆ. ಇದರಿಂದ ದೇವದಾಸಿಯರು ತಮ್ಮ ಸಂಪ್ರದಾಯಕ ವೃತ್ತಿ ಅನುಸರಿಸುವುದು ಅನಿವಾರ್ಯವಾಗಿ ಮಾರ್ಪಟ್ಟಿದೆ. ಕುಟುಂಬ, ಜಾತಿ, ಸಮುದಾಯ ಸಮಾಜಕ್ಕೆ ಈ ಸಂಪ್ರದಾಯಿದ ಆಚರಣೆ ಪ್ರಯೋಜನವೆಂದು ತಿಳಿದು ಮುಂದುವರಿಸುರಿತ್ತಿರುವುದಾಗಿ ತಿಳಿದು ಬಂದಿದೆ.

ತಮ್ಮ ಕುಟುಂಬಗಳ ಆರ್ಥಿಕ ಭದ್ರತೆಗಾಗಿ ಈ ವೃತ್ತಿ ನಡೆಸುತ್ತಿದ್ದು ತಮ್ಮನ್ನು ಅವಲಂಬಿಸಿದ ಸದಸ್ಯರ ಬೇಡಿಕೆ ಈಡೇರಿಸಲು ಸುಲಭ ಮಾರ್ಗ. ಹೆಚ್ಚು ಶ್ರಮವಿಲ್ಲದೇ ಬದುಕುವ ವಿಧಾನ ಇದಾಗಿದೆ. ಇವರನ್ನು ಅವಲಂಬಿಸಿದ ಸದಸ್ಯರ ಮಾಹಿತಿಯನ್ನು ವಯೋಮಾನ ಆಧಾರದ ಮೇಲೆ ಕೆಳಗಿನ ಕೋಷ್ಟಕದಲ್ಲಿ ಈ ರೀತಿ ತೋರಿಸಬಹುದಾಗಿದೆ.

**ಕೋಷ್ಟಕ ೧೮**

**ಅವಲಂಬಿತ ಕುಟುಂಬದ ಸದಸ್ಯರ ವಯೋಮಾನ**

| ಕುಟುಂಬ | ವಯೋಮಾನ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧೦೦೦ | ೦-೫ | ---- | ೪ | ೪ |
| | ೬-೧೭ | ೨೯೯ | ೩೦೨ | ೬೦೧ |
| | ೧೮-೪೦ | ೧೨೭೮ | ೧೫೩೦ | ೨೮೦೮ |
| | ೪೧-೬೦ | ೧೫೨ | ೬೧೯ | ೭೭೧ |
| | ೬೧ -ಮೇಲ್ಪಟ್ಟು | ೩೭ | ೭೧ | ೧೦೮ |
| | **ಒಟ್ಟು** | **೧೭೬೬** | **೨೫೨೬** | **೪೨೯೨** |

ದೇವದಾಸಿಯರ ೧೦೦೦ ಕುಟುಂಬಗಳಲ್ಲಿ ಅವಲಂಬಿತ ಸದಸ್ಯರ ವಯೋಮಾನವನ್ನು ಗಮನಿಸಿದಾಗ, ೦ ರಿಂದ ೫ ರವರೆಗೆ ಗಂಡು, ಹೆಣ್ಣುಗಳ ಸಂಖ್ಯೆ ೦೪, ೬ ರಿಂದ ೧೭ ರ ವಯಸ್ಸಿನವರೆಗಿನ ಗಂಡು, ಹೆಣ್ಣುಗಳ ಸಂಖ್ಯೆ ೬೦೧ ಕಂಡು ಬರುತ್ತದೆ. ೧೮ ರಿಂದ ೪೦ ವರ್ಷ ವರೆಗಿನ ಗಂಡು ಹೆಣ್ಣುಗಳ ಸಂಖ್ಯೆ ೨೮೦೮, ೪೧ ರಿಂದ ೬೦ ವರ್ಷಗಳ ಗಂಡು ಹೆಣ್ಣುಗಳ ಸಂಖ್ಯೆ ೭೭೧ ಕಂಡು ಬರುವುದು. ಹಾಗೂ ೬೧ ವರ್ಷ ವೇಲ್ಪಟ್ಟವರ ಸಂಖ್ಯೆ ಗಂಡು ಹೆಣ್ಣುಗಳು ೧೦೮ ಎಂದು ಅಧ್ಯಯನದ ಮೂಲಕ ಕಂಡುಬರುತ್ತದೆ.

ಹೀಗೆ ಮನೆಯ ಯಜಮಾನಿಯರಾಗಿ ಕುಟುಂಬದ ಹೊಣೆಯನ್ನು ಹೊತ್ತಿರುವ ದೇವದಾಸಿಯರು ತಮ್ಮನ್ನು ಅವಲಂಬಿಸಿದ ಸದಸ್ಯರನ್ನು ಬೇರೆ ಕೆಲಸಗಳಿಗೆ ಹೋಗಿ ಬಂದು ಕನಿಷ್ಟ ಹಣದಿಂದ ಸಾಕಲು ಸಾಧ್ಯವಿಲ್ಲ. ಮರ್ಯಾದೆಯಿಂದ ಕೂಲಿಗೆ ಹೋದರೆ, ಅಲ್ಲಿಯು ಪುರುಷರು ಇವರನ್ನು ಗೌರವಿಸುವುದಿಲ್ಲ, ಮನೆಗೆಲಸಕ್ಕೆ ಹೋದರೆ, ಯಜಮಾನ ಪುರುಷರ ಕಾಟ ಇಂತಹ ತೀರಾ ಕೆಳವರ್ಗದಿಂದ ಬಂದಂತಹ ಇವರನ್ನು ಆಮಿಷಕ್ಕೆ, ವಂಚನೆಗೆ, ಒಳಪಡಿಸಿ, ಸಮಾಜದ ಗಣ್ಯರೆಂದು ಕರೆಯುವ ವ್ಯಕ್ತಿಗಳೇ ವೇಶ್ಯೆಯರನ್ನಾಗಿ ಮಾಡುವುದು, ವಂಚಿಸುವುದು ಹೆಚ್ಚಾಗಿ ಕಂಡುಬರುತ್ತಿದೆ.

ಕಷ್ಟಕಾರ್ಪಣ್ಯಗಳ ಮಧ್ಯ ಅಸಹಾಯಕಳಾಗಿ ಬದುಕುವ ಸಂದರ್ಭದಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಬಲಿಷ್ಠನಾದ ಪುರುಷನ ಆಶ್ರಯ ಕೋರಿ ಹೋದಾಗ ಪುರುಷರು ಸ್ವಾರ್ಥಕ್ಕಾಗಿ ಬಳಸಿಕೊಂಡು ಉಪಪತ್ನಿಯರನ್ನಾಗಿ ಮಾಡಿಕೊಂಡು ಸಮಾಜದಲ್ಲಿ ಅವರು ತಪ್ಪು ಹೆಜ್ಜೆ ಇಡಲು ಕಾರಣರಾಗಿರುವ ಉದಾಹರಣೆಗಳು ಇವೆ.

ಬಡವರ ಹೊಟ್ಟೆ ತಳಹರಿದ ಗಡಿಗೆಯಂತೆ, ಅದಕ್ಕೆ ಎಷ್ಟು ನೀರು ಹಾಕಿದರೂ ಹರಿದು ಹೋಗುವಂತೆ ಹಸಿವು ಅವರಿಗೆ ಶಾಪವಾಗಿ ಕಾಡುತ್ತದೆ ತಾಯಿಯಾದವಳು ಅನಿವಾರ್ಯವಾಗಿ ವೃತ್ತಿನಿರತಳಾಗಬೇಕಾಗುತ್ತದೆ.

ತನಗೊದಗಿದ ದುರಂತ ತನ್ನ ಮಕ್ಕಳಿಗೆ ಒದಗಬಾರದೆಂದು ಎಷ್ಟೇ ಪ್ರಯತ್ನ ಮಾಡಿದರೂ ಅದು ಸಾಧ್ಯವಾಗುವುದಿಲ್ಲ. ಶಿಕ್ಷಣ ಪಡೆದು ಸುಸಂಸ್ಕೃತಳಾದ ಮಗಳು ಈ ವೃತ್ತಿಗಿಳಿಯಲು ನಿರಾಕರಿಸುತ್ತಾಳಾದರೂ, ಹಣದ ಮುಂದೆ ಅವಳ ಪ್ರಾಮಾಣಿಕ ಜೀವನದ ಹಂಬಲ ಅರಣ್ಯರೋಧನವಾಗುತ್ತದೆ. ಮನಸ್ಸಿಲ್ಲದಿದ್ದರೂ ಮೈ ಮಾರಿ ಕೊಳ್ಳುವ ಒತ್ತಡಕ್ಕೆ ಸಿಲುಕುತ್ತಾರೆ.

**ಕೃಷಿ**

ಇವರುಗಳ ಕುಟುಂಬದ ಪುರುಷರು ವ್ಯವಸಾಯ ಮಾಡಲು ಹೆಚ್ಚು ಭೂಮಿ ಅಥವಾ ನೀರಾವರಿ ವ್ಯವಸ್ಥೆ ಇಲ್ಲದ ಕಾರಣ ಕೃಷಿಯನ್ನು ಅವಲಂಬಿಸಲು ಸಾಧ್ಯವಿಲ್ಲ ಈ ಬಗೆಗಿನ ಮಾಹಿತಿ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೧೯**

**ಕೂಡ್ಲಿಗಿಯಲ್ಲಿ ಬೇಡ ಸಮುದಾಯದವರು ಹೊಂದಿರುವ ಜಮೀನಿನ ಪ್ರಮಾಣ**

| ೫ ಎಕರೆಗಿಂತ ಕಡಿಮೆ ಜಮೀನು ಹೊಂದಿದ ಕುಟುಂಬಗಳ ಸಂಖ್ಯೆ | | ೫ ಎಕರೆಗಿಂತ ಹೆಚ್ಚು ಜಮೀನು ಹೊಂದಿರುವ ಕುಟುಂಬಗಳು | |
|---|---|---|---|
| ಎಕರೆ | ಕುಟುಂಬ | ಎಕರೆ | ಕುಟುಂಬ |
| ೧ | ೫ | ೬ | ೫೩ |
| ೨ | ೧೩ | ೭ | ೨೯ |
| ೩ | ೧೭೭ | ೮ | ೫೩ |
| ೪ | ೧೨೭ | ೯ | ೧೨ |
| ೫ | ೨೫೯ | ೧೦ | ೫೩ |
| **ಒಟ್ಟು** | **೬೬೬** | | **೨೦೪** |

ಮೇಲಿನ ಜಮೀನಿನ ಕೋಷ್ಟಕ ಗಮನಿಸಿದಾಗ ತಲಾ ೧ ಎಕರೆಯಯನ್ನು ೧೩ ಕುಟುಂಬಗಳು ತಲಾ ೨ ಎಕರೆಯನ್ನು ೯೦ ಕುಟುಂಬಗಳು ತಲಾ ೩ ಎಕರೆಯನ್ನು ೧೭೭ ಕುಟುಂಬಗಳು ತಲಾ ೪ ಎಕರೆಯನ್ನು ೧೨೭ ಕುಟುಂಬಗಳು ತಲಾ ೫ ಎಕರೆಯನ್ನು ೨೫೯ ಕುಟುಂಬಗಳು ತಲಾ ೬ ಎಕರೆಯನ್ನು ೫೩ ಕುಟುಂಬ ೭ ಎಕರೆ ೨೯ ಕುಟುಂಬಗಳ ೮ ಎಕರೆ ೫೩ ಕುಟುಂಬಗಳು ೯ ಎಕರೆ ೧೨ ಕುಟುಂಬಗಳು ೧೦ ಎಕರೆ ೫೩ ಕುಟುಂಬಗಳು ಕಂಡು ಬರುತ್ತವೆ. ಒಟ್ಟು ೧೩೦ ಭೂರಹಿತ ಕುಟುಂಬಗಳಿವೆ. ಆದರೂ ಒಣ ಬೇಸಾಯ ಪದ್ಧತಿಯಿಂದ ಈ ಭೂಮಿಯನ್ನು ನೆಚ್ಚಿಕೊಂಡು ಬಾಳುವ ಸ್ಥಿತಿ ಇಲ್ಲದೇ ಇತರ ಉಪಕಸುಬುಗಳನ್ನು ಅಲ್ಪ ಸ್ವಲ್ಪ ಆಶ್ರಯಿಸಿ ಬದುಕಬೇಕಾಗಿದೆ.

**ಪಶುಪಾಲನೆ**

ಕೂಡ್ಲಿಗಿಯ ಸುತ್ತಮುತ್ತಲ ಪರಿಸರದಲ್ಲಿ ಸಾಧಾರಣ ಮಟ್ಟದ ಕಾಡುಗಳು ಕಂಡುಬರುತ್ತದೆ. ಆಗಾಗ ಬರಗಾಲ ಬಂದು ಒಣಗುತಿದ್ದುದು ಉಂಟು. ಹಿಂದಿನಿಂದಲೂ ದನ, ಕರು, ಎತ್ತು, ಜೊತೆಗೆ ಕುರಿ, ಮೇಕೆ, ಎಮ್ಮೆ ಇತ್ಯಾದಿ ಸಾಕು ಪ್ರಾಣಿಗಳನ್ನು ಸಾಕುತ್ತಿದ್ದರು. ಕೆಲವರು ಹೈನುಗಾರಿಕೆಯನ್ನು ರೂಢಿಸಿಕೊಂಡಿದ್ದರು. ಇವುಗಳಿಗಾಗಿ

ಪ್ರತ್ಯೇಕ ಕೊಟ್ಟಿಗೆಗಳೂ ಸಹ ಇರುತ್ತಿದ್ದವು. ಇಂದಿಗೂ ಹಲವಾರು ಕುಟುಂಬಗಳು ಇದನ್ನು ಅವಲಂಬಿಸಿವೆ. ಆದರೆ ಆಗಾಗ ಬರುವ ಬರಗಾಲದಿಂದಾಗಿ ಊರಿನಲ್ಲಿರುವ ದನ ಕರುಗಳ ಸಂಖ್ಯೆ ಕ್ಷೀಣಿಸುತ್ತಾ ಬಂದಿದೆ. ಕುಟುಂಬದ ಸದಸ್ಯರ ಜೊತೆ ದನಕರುಗಳನ್ನು ಸಾಕುವುದು ಬಹಳ ದುಸ್ತರವಾಗಿದೆ. ಹೆಚ್ಚು ಲಾಭ ಗಳಿಸಬಹುದೆಂಬ ಕಾರಣದಿಂದ ಕುರಿ, ಮೇಕೆಗಳನ್ನು ಸಾಕುವುದು ಹೆಚ್ಚಾಗಿದೆ.

**ಕೋಷ್ಟಕ ೨೦**

**ದೇವದಾಸಿ ಕುಟುಂಬಗಳ ಪಶುಸಂಪತ್ತು**

| ಕುಟುಂಬಗಳು | ಪಶು ಸಂಪತ್ತು | | | | | |
|---|---|---|---|---|---|---|
| | ಎತ್ತು | ಎಮ್ಮೆ | ಆಕಳು | ಕುರಿ | ಮೇಕೆ | ಕೋಳಿ |
| ೧೦೦೦ | ೩೩ | ೨೦೭ | ೨೫೬ | ೩೭೯ | ೪೦೬ | ೩೦೯ |

ಸುಮ್ಮನೆ ಮನೆಯಲ್ಲಿ ಕುಳಿತರೆ ದುಡಿಮೆ ಸಾಧ್ಯವಿಲ್ಲ. ಹೆಚ್ಚುತ್ತಿರುವ ಆರ್ಥಿಕ ಹೊರೆಯನ್ನು ಸರಿದೂಗಿಸುವ ಸಲುವಾಗಿ ತಮ್ಮ ಕಸುಬಿನೊಂದಿಗೆ ಹಲವು ಉಪಕಸಬುಗಳನ್ನು ಮಾಡುವುದು ಕಂಡು ಬರುತ್ತಿದೆ. ಪ್ರಸ್ತುತ ಅಧ್ಯಯನ ಕೇಂದ್ರದಲ್ಲಿನ ದೇವದಾಸಿಯರ ಕುಟುಂಬಗಳಲ್ಲಿ ಮೇಕೆ, ಆಕಳುಗಳನ್ನು ಸಾಕುವುದುಂಟು. ಮೇಕೆಗಳ ಸಾಕಾಣೆ ಹೆಚ್ಚು ಶ್ರಮವಿಲ್ಲದ್ದು, ತಾವು ಕೂಲಿಗೆ ಹೋಗುವಾಗ ಜೊತೆ ಜೊತೆಯಲ್ಲಿ ಒಯ್ಯುವರು. ಕುರಿಗಳ ಸಂಖ್ಯೆ ೩೭೯, ಕೋಳಿ ೩೦೯, ಆಕಳುಗಳ ಸಂಖ್ಯೆ ೨೫೬, ಎಮ್ಮೆ, ೨೦೭, ಹಾಗೂ ಎತ್ತುಗಳ ಸಂಖ್ಯೆ ೩೩ ಕಡಿಮೆ ಸಂಖ್ಯೆಯಲ್ಲಿ ಕಂಡು ಬರುತ್ತದೆ.

ದೇವದಾಸಿಯರು ಒಬ್ಬ ವ್ಯಕ್ತಿಗೆ ನಿಷ್ಠರಾಗಿದ್ದು ಆತ ಕೊಡುವ ಅಲ್ಪಸ್ವಲ್ಪ ಹಣದಿಂದ ಜೀವನ ನಿಬಾಯಿಸುವುದು ಬಹುಕಷ್ಟವಾಗಿ, ಕೆಲವರು ಕೂಲಿ ಕೆಲಸಕ್ಕೂ ಹೋಗುತ್ತಿದ್ದು. ಇನ್ನು ಕೆಲವರು ಹೊಟೇಲ್‌ಗಳಲ್ಲಿ ಕೆಲಸಕ್ಕೆ ಸೇರಿರುವರು. ಕೇವಲ ಚಟಕ್ಕಾಗಿ ಬಂದು ಹೋಗುವ ವಿಟ ಪುರುಷರು ಇದ್ದಾರೆ. ಹೆಸರಿಗೆ ಒಬ್ಬ ಗಂಡನಂತೆ ಇರಲಿ ಬಿಡು ಎಂದು, ಅವರನ್ನು ನೋಡಿಕೊಳ್ಳುವುದಲ್ಲದೇ ಒಮ್ಮೊಮ್ಮೆ ಅವನ ಕುಟುಂಬದ ಕಷ್ಟದಲ್ಲೂ ಭಾಗಿಯಾಗುವುದುಂಟು. ಹಾಗೆ ಕೆಲ ವಿಟ ಪುರುಷರು ತಾವು ಇಟ್ಟುಕೊಂಡ ದೇವದಾಸಿಯರನ್ನು ಬೇರೆ ಗಿರಾಕಿಗಳನ್ನು ಕರೆತಂದು ಅವಳಲ್ಲಿ ಬಿಟ್ಟು ಅವರಿಂದ ಸಿಕ್ಕ ಉಚಿತ ಊಟ, ಕುಡಿತ, ಅಲ್ಪಸ್ವಲ್ಪ ಹಣದಿಂದ ತಮ್ಮ ಸ್ವಂತ ಕುಟುಂಬಗಳನ್ನು ನಿರ್ವಹಿಸುವುದೂ ಇದೆ. ಹಣ್ಣುಗಳು (ಮಾವು, ಹುಣಸೆ) ಋತುಮಾನದಲ್ಲಿ ಈ ದೇವದಾಸಿಯರಲ್ಲಿ ಕೆಲವರು ವ್ಯಾಪಾರ ಮಾಡುವರು. ಈ ಸಮುದಾಯಕ್ಕೆ ಸೇರಿದ ಕೆಲವು ನೌಕರರೂ ತಮ್ಮ ಮೇಲಾಧಿಕಾರಿಗಳು ಬಂದಾಗ ಅಥವಾ ಶ್ರೀಮಂತ ವ್ಯಕ್ತಿಗಳು, ರಾಜಕಾರಣಿಗಳು, ಬಂದಾಗ, ಪ್ರವಾಸಿ ಮಂದಿರ ಅಥವಾ ಹೊಟೇಲುಗಳಿಗೆ ದೇವದಾಸಿ ಸ್ತ್ರೀಯರನ್ನು ಕಳುಹಿಸಿ ಕೊಡುವುದು ಅಧ್ಯಯನದಿಂದ ತಿಳಿದುಬಂದಿದೆ. ಈ ಸೇವೆಗೆ ಪ್ರತಿಯಾಗಿ ಸಿಗುವುದು ಕೇವಲ ಒಂದಿಷ್ಟು ತಿನ್ನುವುದು, ಕುಡಿಯುವುದು ಮಾತ್ರ. ಈ ಅನುಕೂಲತೆಗಾಗಿ ಈ ಸಮುದಯಾಕ್ಕೆ ಸೇರಿದ ವಿದ್ಯಾವಂತ, ನೌಕರರೂ ಇದರ ನಿವಾರಣೆ ಪ್ರಯತ್ನಿಸುವುದಿಲ್ಲ, ಬದಲಿಗೆ ಈ ಪದ್ಧತಿಯನ್ನು ಪ್ರೋತ್ಸಾಹಿಸುತ್ತಾರೆ.

ಇವರ ಕುಟುಂಬಕ್ಕೆ, ಸೇರಿದ ಕೆಲವು ವಿದ್ಯಾವಂತ ಹುಡುಗಿಯರು. ತಮ್ಮ ತಾಯಿ, ಅಕ್ಕಂದಿರ ಅಸಹ್ಯಕರ

ಜೀವನಕ್ಕೆ ರೋಸಿಹೋಗಿ, ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇನ್ನು ಕೆಲವರು ತಮ್ಮನ್ನು ಮೆಚ್ಚಿದ ಹುಡುಗನ ಜೊತೆ ಓಡಿಹೋಗಿ ಮದುವೆಯಾಗಿದ್ದರೂ, ಪ್ರಭಾವಿ ವ್ಯಕ್ತಿಗಳು ನಡೆದು ಹೋಗಿರುವ ಮದುವೆಯಯನ್ನು ಅನೂರ್ಜಿತಗೊಳಿಸಿ ತಮ್ಮ ಸ್ವಾರ್ಥಕ್ಕಾಗಿ ಮುದ್ರೆಯ ಸಂಸ್ಕಾರ ಮಾಡಿಸಿದ್ದಾರೆ. ಅನಂತರ "ನಿನ್ನನ್ನು ಓದಿಸಿದ್ದು ಸಾಕಿದ್ದು, ಏಕೆ? ನಮ್ಮನ್ನು ಸುಖವಾಗಿ ಸಾಕುತ್ತೀಯ ಎಂದು. ನೀನು ನಮಗಾಗಿ ಜೀವಿಸಬೇಕು ಎಂದು ಹೊಡೆದು ಬಡಿದು ಉಪವಾಸ ಹಾಕಿ ತಮ್ಮ ದಾರಿಗೆ ಬರುವಂತೆ ಮಾಡುವರು. ತಾವುಗಳು ಪ್ರಭಾವಿ ವ್ಯಕ್ತಿಗಳ ಬಳಿ ಮಾಡಿದ ಸಾಲಕ್ಕೆ ಕೆಲವರು ಆಕೆಯನ್ನು ಮೀಸಲಿಡುವರು. ಈ ಊರ ಪಕ್ಕದಲ್ಲಿ ಹಾದು ಹೋಗುವ ರಾಷ್ಟ್ರೀಯ ಹೆದ್ದಾರಿಯಿಂದ ಈ ದಂಧೆ ಮಾಡುವವರ ಸಂಖ್ಯೆ ಹೆಚ್ಚಾಗಿದೆ. ಪ್ರತಿನಿತ್ಯ ಸಂಚರಿಸುವ ನೂರಾರು ವಾಹನಗಳು ರಾತ್ರಿಯಾದಾಗ ರಸ್ತೆ ಬದಿಯಲ್ಲಿಯೇ ಬಿಡಾರ ಹೂಡುವ ದೂರದೂರಿನ ವಾಹನಚಾಲಕ ಮತ್ತು ಸಹಚರರು ಥಳಕು ಬಳುಕಿನ (ಹೆಣ್ಣುಮಕ್ಕಳಿಗೆ) ದೇವದಾಸಿಯರಿಗೆ ಮಾರುಹೋಗಿ ಸಂಬಂಧವನ್ನು ಹೊಂದುತ್ತಾರೆ. ಹಣ ಗಳಿಸಲು ಸುಲಭ ಮಾರ್ಗವೆಂದು ಭಾವಿಸಿದ ಕೆಳಭಾಗದ ಬಹಳಷ್ಟು ಹೆಣ್ಣು ಮಕ್ಕಳು ಈ ವ್ಯವಹಾರದಲ್ಲಿ ಕಡಿಮೆ ಅವಧಿಗೆ ಹೆಚ್ಚು ಗಳಿಸುವ ಆಸೆಯಿಂದ ಬಲಿಪಶುಗಳಾಗಿದ್ದಾರೆ. ಇದರಿಂದ ಮಾರಾಣಾಂತಿಕ ರೋಗವಾದ ಎಚ್.ಐ.ವಿ. ಏಡ್ಸ್‌ನಂತಹ ಕಾಯಿಲೆಗಳಿಗೂ ಒಳಗಾಗಿ ತಮ್ಮ ಸುಖಕರವಾದ ಬದುಕನ್ನು ದುರಂತವಾಗಿಸಿ ಕೊಂಡಿರುವುದು ಅಧ್ಯಯನದಿಂದ ತಿಳಿದು ಬಂದಿರುವ ಸಂಗತಿಯಾಗಿದೆ.

ದೊರೆತಿರುವ ಮತ್ತೊಂದು ಮಾಹಿತಿಯ ಪ್ರಕಾರ ಕೂಡ್ಲಿಗಿ ಪಟ್ಟಣದಲ್ಲಿ "ರಸ್ತೆ ಸಾರಿಗೆ ಸಂಸ್ಥೆಯ ವಾಹನಗಳ 'ತಂಗುದಾಣ' ಆರಂಭಗೊಂಡ ಅನಂತರ ದೂರದ ಊರುಗಳಿಂದ ಬಂದು ರಾತ್ರಿ ಸಮಯ ಉಳಿಯುವ ವಾಹನಚಾಲಕ ಹಾಗೂ ನಿರ್ವಾಹಕರು ದೇವದಾಸಿಯರ ಸಂಬಂಧ ಹೊಂದಿ ಅವರನ್ನು ಎರಡನೇ ಪತ್ನಿಯರನ್ನಾಗಿ ಚೆನ್ನಾಗಿ ನೋಡಿಕೊಳ್ಳುತ್ತಿರುವುದು ಬಹಳಷ್ಟು ಜನರಿದ್ದಾರೆ ಎಂದು ದೇವದಾಸಿಯರೇ ಹೇಳುತ್ತಾರೆ.

'ನೀರಿಗಿಳಿದವನಿಗೆ ಚಳಿಯಾದರೇನು ಮಳೆಯಾದರೇನು' ಎಂಬ ಗಾದೆ ಮಾತಿನಂತೆ ಧರ್ಮದ ಹಿನ್ನೆಲೆಯಲ್ಲಿ ಸಮಾಜವೇ ಒಂದು ಹೆಣ್ಣನ್ನು ಸ್ವೇಚ್ಛೆಯಾಗಿ ಸಾರ್ವಜನಿಕರಿಗೆ ಲೈಂಗಿಕ ಸುಖ ನೀಡಲು ಪರವಾನಿಗೆ ನೀಡಿರುವಾಗ ಸದರಿ ಸಮುದಾಯದ ಹೆಣ್ಣು ಮಕ್ಕಳಿಗೆ ಅದೊಂದು ಮುಜುಗರದ ಸಂಗತಿಯಾಗಿ ಉಳಿದಿಲ್ಲ. ಆದರೆ ಧರ್ಮದ ಹೆಸರಲ್ಲಿ ನಡೆಯುತ್ತಿದ್ದ ಸಂಪ್ರದಾಯಗಳು ಆಧುನಿಕ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳನ್ನು ಸೃಷ್ಟಿಸುತ್ತಿದೆ. ದೇವದಾಸಿಯರಿಗೆ ಹಿಂದಿನ ಸ್ಥಾನಮಾನಗಳು ದೊರೆಯುತ್ತಿಲ್ಲ. ಅಲ್ಲದೇ ಓರ್ವ ವಿಟಪುರುಷನನ್ನು ನಂಬಿ ಬದುಕು ಸಾಗಿಸುವುದು ದುಸ್ತರ ಎಂಬುದನ್ನು ಮನಗಂಡ ಇವರು ತಮ್ಮ ಅಪಾರ ಬೇಡಿಕೆಗಳನ್ನು ನೀಗಿಸಲು ಹೆಚ್ಚು ಹೆಚ್ಚು ಹಣದ ಅಗತ್ಯವೆನಿಸಿದ್ದರಿಂದ ಹೆಣ್ಣಿಗೆ ಮೀರಿದ ನಡತೆಯನ್ನು ಅನುಸರಿಸಬೇಕಾದ ಅನಿವಾರ್ಯತೆ ಒದಗಿ ಬಂದಿರುವುದು ಈ ಸಮಾಜದ ಹಾಗೂ ಸಮುದಾಯದ ದುರಂತವೇ ಸರಿ.

ಅಂದರೆ ಧರ್ಮವು ಈ ಸಮುದಾಯದ ಹೆಣ್ಣು ಮಕ್ಕಳಿಗೆ ವಿಧಿಸದ ಅನಿಷ್ಟ ಆಚರಣೆ ಇಂದು ಬಂದು ವ್ಯವಹಾರವಾಗಿ ಮಾರ್ಪಾಡಾಗುತ್ತಿದೆ. ಇದು ಸಮಾಜದ ಸ್ವಾಸ್ಥತೆಗೆ ಮಾರಕವಾಗಬಹುದು ಎಂಬುದು ಅಂದಿನ ಸ್ವಾರ್ಥಿ ಪುರೋಹಿತಶಾಹಿಗಳಿಗೆ ತಿಳಿದಿರಲಿಲ್ಲ. ಅಂದು ಆರಂಭವಾದ ಅತಂತ್ರದ ಬದುಕಿನ ಪರಿಣಾಮ ಇಂದು ಅನ್ಯರ ಅಸಹಜ ಮಾತುಗಳಿಗೆ ತುತ್ತಾಗಬೇಕಿದೆ. 'ಬದುಕು' ಅನಿವಾರ್ಯ. ಬೇಡವೆಂದರೂ ಅದೇ ಅನಿಷ್ಟ ಪದ್ಧತಿಗೆ

ಒಳಗಾಗಬೇಕಾದ ಪರಿಸ್ಥಿತಿ ಬಂದೊದಗಿದೆ. ಇದರಿಂದ ಬೆರಳೆಣಿಕೆಯಷ್ಟು ದೇವದಾಸಿಯರು ಅಪಾರ ಆಸ್ತಿ, ಹಣ ಮತ್ತು ಹೆಸರನ್ನು ಗಳಿಸಿದರು. ಅವುಗಳಿಂದ ಬೇರೆ ಬೇರೆ ಸಮಸ್ಯೆಗಳು ಎದುರಾಗಿರುವುದು ಅಧ್ಯಯನದಿಂದ ತಿಳಿದುಬಂದಿದೆ. ವಿಟ ಪುರುಷರ ವೇಷದಲ್ಲಿ ಬಂದ ದರೋಡೆಕೋರರು ಮನೆಯಲ್ಲಿದ್ದ ನಗ ನಾಣ್ಯವೆಲ್ಲವನ್ನೂ ದೋಚಿಕೊಂಡು ಹೋಗಿದ್ದನ್ನು ಕೆಲವರು ನೆನಪು ಮಾಡಿಕೊಳ್ಳುತ್ತಾರೆ. ಮತ್ತೊರ್ವ ವಿಟಪುರುಷನು ಶ್ರೀಮಂತ ದೇವದಾಸಿಯನ್ನು ಮತ್ತು ಆಕೆಯ ಎಲ್ಲಾ ಚರ ಆಸ್ತಿಯೊಂದಿಗೆ ಪರಾರಿಯಾದನು. ಕೊನೆಗೆ ಇಬ್ಬರೂ ನಾಪತ್ತೆಯಾಗಿ ಹೋದರು ಎಂಬ ದುರಂತ ಕಥೆಯನ್ನು ಸ್ಮರಿಸಿಕೊಳ್ಳುತ್ತಾ ಈ ಬದುಕು ಯಾರಿಗೂ ಬೇಡವೆಂದು ಹೇಳುತ್ತಾರೆ. ಆದರೆ ಮತ್ತದೆ ಅನಿಷ್ಟದಲ್ಲಿ ಮುಳುಗುತ್ತಿದ್ದಾರೆ

ದೇವದಾಸಿಯೊಬ್ಬಳ ಸೌಂದರ್ಯ ಹಾಗೂ ಶ್ರೀಮಂತಿಕೆಯನ್ನು ನೋಡಿ ಸಹಿಸಲಾರದ ಕೆಲ ಕಿಡಿಗೇಡಿಗಳು ವಿಟ ಪುರುಷರಂತೆ ಮನೆಗೆ ಬಂದು ಮುಖಕ್ಕೆ ಆಸಿಡ್ ಹಾಕಿ ಹೋದ ಧಾರುಣ ಪರಿಸ್ಥಿತಿಯನ್ನು ಉದಾಹರಿಸುತ್ತಾ ಈ ಬದುಕು ಎಷ್ಟು ಶೋಚನೀಯವೆಂದು ಮರುಗುತ್ತಾರೆ. ಒಟ್ಟಾರೆ ದೇವದಾಸಿಯರಾಗಿ ಬಡತನವಿದ್ದರೂ ನೆಮ್ಮದಿಯಿಲ್ಲ, ಶ್ರೀಮಂತಿಕೆಯಿದ್ದರೂ ಸುಖವಿಲ್ಲವೆಂಬುದು ಅಂತಿಮ ಸತ್ಯವೆಂದು ತಿಳಿದಿದ್ದಾರೆ. ಇಷ್ಟಾಗಿಯೂ ಮಧ್ಯವರ್ತಿಗಳ ಸ್ವಾರ್ಥಕ್ಕಾಗಿ ದೇವದಾಸಿಯರು ಬಲಿಯಾಗುವುದು ಇಂದಿಗೂ ತಪ್ಪಿಲ್ಲ.

**ಕೋಷ್ಟಕ ೨೧**

**ಬೇಡ ಬುಡಕಟ್ಟು ದೇವದಾಸಿಯರು ಕೈಗೊಂಡ ಉದ್ಯೋಗಗಳು**

| ಕ್ರ.ಸಂ. | ಕುಟುಂಬಗಳು | ಉದ್ಯೋಗದ ಮಾದರಿಗಳು | ಒಟ್ಟು ಸಂಖ್ಯೆ |
|---|---|---|---|
| ೧ | ೧೦೦೦ | ವ್ಯವಸಾಯ | ೫೨ |
| ೨ | | ಕೃಷಿಕೂಲಿಕಾರರು | ೪೭ |
| ೩ | | ವ್ಯಾಪಾರ ಮಾಡುವವರು (ಉಣಸೇ, ಮಾವು, ತರಕಾರಿ) | ೦೯ |
| ೪ | | ವೇಶ್ಯಾ ವೃತ್ತಿ (ಭೂರಹಿತ) | ೧೦೧ |
| ೫ | | ಸರ್ಕಾರಿ ನೌಕರಿ | ೨೦ |
| ೬ | | ಕಟ್ಟಡ ಕೆಲಸ | ೨೧ |
| ೭ | | ಇತರೆ ಕೆಲಸಗಾರರು (ರಂಗ ಕಲಾವಿದೆ, ಮನೆಕೆಲಸ) | ೭೫೦ |
| | | ಒಟ್ಟು | ೧೦೦೦ |

ಮೇಲಿನ ಕೋಷ್ಟಕದ ಪ್ರಕಾರ ೧೦೦೦ ಜನ ದೇವದಾಸಿಯರಲ್ಲಿ ಅತೀ ಹೆಚ್ಚಿನ ಸಂಖ್ಯೆಯ ೭೫೦ ಇತರೆ ಕೆಲಸಗಾರರಿದ್ದು ಇವರಿಗೆ ಯಾವುದೇ ಒಂದು ನಿಶ್ಚಿತ ಕೆಲಸವಿಲ್ಲದೇ ಸಂದರ್ಭಕ್ಕನುಗುಣವಾಗಿ ನಿರ್ವಹಿಸಬೇಕಾದ ರಂಗವೃತ್ತಿ ಅಥವಾ ಮನೆಕೆಲಸ, ಹೀಗಾಗಿ ನಿತ್ಯದ ದುಡಿಮೆ ಮತ್ತು ಆದಾಯಗಳು ಇಲ್ಲದ ಅನಿಶ್ಚಿತ. ಸ್ಥಿತಿಯಲ್ಲಿಯೇ ಇರುವಂತಹ ಸಂದರ್ಭದಲ್ಲಿ ಬದುಕುತ್ತಿದ್ದಾರೆ. ಇನ್ನು, ವೇಶಾವೃತ್ತಿಯನ್ನು ೧೦೧ ಜನರು

ಅನುಸರಿಸುವುದು, ಕಂಡುಬಂದರೆ, ವ್ಯವಸಾಯ ೫೨ ಮತ್ತು ಕೃಷಿಕೂಲಿಕಾರರು ೪೭, ಕಂಡು ಬಂದು ಇವರ ಸ್ವಲ್ಪ ಮಟ್ಟಿಗೆ ಊಟ, ಬಟ್ಟೆಗೆ ಅನುಕೂಲಕರ ಸ್ಥಿತಿಯಲ್ಲಿ ಬದುಕುವ ಸ್ಥಿತಿಯಲ್ಲಿದ್ದರೆ, ಇನ್ನು ವ್ಯಾಪಾರ ೦೯, ಸರ್ಕಾರಿ ನೌಕರಿಯಲ್ಲಿ ೨೦, ಕಟ್ಟಡ ಕೆಲಸದಲ್ಲಿ ೨೧ ಜನರು ತೊಡಗಿರುವುದು ಕಂಡು ಬಂದಿದೆ. ಒಟ್ಟಾರೆ ಸಂಖ್ಯೆಯ ದೇವದಾಸಿಯರ ಸ್ಥಿತಿ ಆರ್ಥಿಕವಾಗಿ ಉತ್ತಮವಾಗೇನೂ ಇಲ್ಲ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ.

ಒಳಿತೋ ಕೆಡುಕೋ ನಾಲ್ಕು ಜನರಂತೆ ನಾವು ಬದುಕಬೇಕು ಎಂಬ ಎಚ್ಚರಿಕೆಯಿಂದ ಬದುಕು ಸಾಗಿಸುತ್ತಾ ಬಂದಷ್ಟು ಕಾಸು ಗಳಿಸಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಆದರೆ ದುಷ್ಟರ ಕೆಂಗಣ್ಣಿಗೆ ಗುರಿಯಾಗಿ ವಿನಾಕಾರಣ ಪೊಲೀಸ್ ಇಲಾಖೆಯವರ ಜೊತೆಗೂಡಿ ಮನೆಗೆ ದಾಳಿ ಮಾಡಿಸುವುದು, ಕೆಲವೊಮ್ಮೆ ಬೇರೆ ಕಡೆ ದೊರೆತ ಕಳ್ಳತನದ ಸಾಮಾನುಗಳನ್ನು ಉದ್ದೇಶಿತ ದೇವದಾಸಿ ಮನೆಯಲ್ಲಿ ಹಾಕಿಸಿ ದಾಳಿ ಮಾಡಿಸುವುದು ಇವರಿಗೆ ಒದಗಿರುವ ಮತ್ತೊಂದು ಸಮಸ್ಯೆಯಾಗಿದೆ.

ದೇವದಾಸಿಯರ ಸಾಮಾಜಿಕ ಬದುಕೇ ಸಹನೀಯವಾಗಿಲ್ಲ. ಅಂದ ಮೇಲೆ ಆರ್ಥಿಕ ಸ್ಥಿತಿ ಸಮಾಧಾನಕರವಾಗೇನು ಇಲ್ಲ. ಈಗಾಗಲೇ ನೊಂದು-ಬೆಂದ ಬದುಕಿಗೆ 'ಗಾಯದ ಮೇಲೆ ಬರೆ ಎಳೆದಂತೆ' ಎಂಬ ನಾಣ್ಣುಡಿಯಂತೆ ಸಮಾಜದ ನಾನಾ ದುಷ್ಟ ಶಕ್ತಿಗಳು ಒಂದಲ್ಲ ಒಂದು ರೀತಿಯಲ್ಲಿ ಕೂಡುವುದರಿಂದ ನೆಮ್ಮದಿ ಎಂಬುದೇ ಇಲ್ಲ. ಆದರೆ ದೇವದಾಸಿಯರನ್ನು ದುರುಪಯೋಗ ಮಾಡಿಕೊಳ್ಳುತ್ತಿರುವ ಮಧ್ಯವರ್ತಿಗಳ ಬದುಕು ಉತ್ತಮವಾಗಿರುವುದು ದಿಢೀರ್ ಶ್ರೀಮಂತರಾಗಿರುವುದು, ಹಣ ಗಳಿಸುವ ಹೊಸದೊಂದು ಅನಿಷ್ಟ ಮಾರ್ಗವೆಂದರೆ ತಪ್ಪಾಗಲಾರದು. ಏನೇ ಆದರೂ "ಸಮುದ್ರದ ಸಹವಾಸ ಕುಡಿಯುವ ನೀರಿಗೆ ಬರ" ಎಂಬ ಅನುಭವಿಗಳ ಮಾತಿನಂತೆ ಸ್ವೇಚ್ಛಾಚಾರ, ಲೈಂಗಿಕ, ಸುಖದ ಬದುಕು ಕಿಂಚಿತ್ತು ನೆಮ್ಮದಿಯಿಲ್ಲ. ಸಮಾಜದಲ್ಲಿ ಗೌರವವಿಲ್ಲ ಎಂಬಂತಾಗಿದೆ. ದೇವದಾಸಿಯರ ಬದುಕು.

ಈ ಎಲ್ಲಾ ಮಾಹಿತಿಯೊಂದಿಗೆ ದೇವದಾಸರ ಹೆಸರಲ್ಲಿ ಅನ್ಯರು ಅನೇಕ ಮಾರ್ಗಗಳಲ್ಲಿ ಹಣ ಗಳಿಸುವುದು ಆರ್ಥಿಕವಾಗಿ ಸುಧಾರಿಸಿಕೊಂಡಿರುವುದು ಕಂಡುಬಂದಿದೆ. ಜೊತೆಗೆ ಇವರ ಬದುಕಲ್ಲಿ ಆರ್ಥಿಕ ಸುಧಾರಣೆ ಕಂಡುಬಂದರು ಪೋಲೀಸ್ ದಾಳಿ, ಮೋಸಗಾರರು, ವಿಟ ಪುರುಷರು ಕಿಡಿಗೇಡಿಗಳು, ವಿದ್ಯಾರ್ಥಿಗಳು ಮತ್ತು ದುಷ್ಟರಿಂದ ಸಮಸ್ಯೆಗೆ ಸಿಲುಕಿದ್ದಾರೆ.

ಕೂಡ್ಲಿಗಿ ತಾಲೂಕು ತನ್ನದೇ ಆದ ಐತಿಹಾಸಿಕ ಪ್ರಾಮುಖ್ಯತೆಯನ್ನು ಹೊಂದಿದ್ದ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯಲ್ಲಿ ಸೈನಿಕರ ತಂಗುದಾಣವಾಗಿದ್ದ ಕಾರಣ ಅದರ ಪ್ರಭಾವದಿಂದ ಈವರೆಗೂ ಬಹು ಸಂಖ್ಯೆಯಲ್ಲಿ ದೇವದಾಸಿ ಸಂಪ್ರದಾಯಕ್ಕೆ ಒಳಗಾಗುವುದು ಸಾಮಾನ್ಯ ಸಂಗತಿಯಾಗಿದೆ. ಬೇಡ ಸಮುದಾಯದ ದೇವದಾಸಿಯರ ಚಿತ್ರಣವನ್ನು ಪರಿಚಯಿಸುವ ಈ ಅಧ್ಯಾಯದಲ್ಲಿ ಕ್ಷೇತ್ರ ಪರಿಚಯದಿಂದ ಆರಂಭಿಸಿ ಅವರ ಧಾರ್ಮಿಕ, ಸಾಂಪ್ರದಾಯಿಕ, ಸಾಂಸ್ಕೃತಿಕ, ಸಾಮಾಜಿಕ, ಐತಿಹಾಸಿಕ, ಶೈಕ್ಷಣಿಕ, ಆರ್ಥಿಕ ಮತ್ತು ವೈಯಕ್ತಿಕ ಬದುಕನ್ನು ಒಳಗೊಂಡಂತೆ ಸಮಗ್ರ ಮಾಹಿತಿಯನ್ನು ಅಡಕಗೊಳಿಸಲಾಗಿದೆ. ಇವೆಲ್ಲವನ್ನು ಅವಲೋಕಿಸಿದಾಗ ಅಂತಿಮವಾಗಿ ತಿಳಿದುಬರುವ ಸಂಗತಿ ಏನೆಂದರೆ, ಹಿಂದೆ ಇದ್ದ ಗೌರವಾನ್ವಿತ ಸ್ಥಾನವನ್ನು ಕಳೆದುಕೊಂಡು ಇಂದು ದೇವದಾಸಿಯರು ತಮ್ಮ ಬದುಕನ್ನು ತಾವು ಅಂದುಕೊಂಡಂತೆ ಬದುಕಲು ಸಾಧ್ಯವಾಗುತ್ತಿಲ್ಲ. ತಮ್ಮ ಬದುಕನ್ನು

ತಮಗೆ ಸಂಬಂಧವಿಲ್ಲದ ವ್ಯಕ್ತಿಗಳ ನಿಯಂತ್ರಣದಲ್ಲಿ ಬದುಕಬೇಕಾದ ವಿಷಮ ಸ್ಥಿತಿ ಬಂದೊದಗಿದೆ. "ಬಿಸಿ ತುಪ್ಪವನ್ನು ಬಾಯಲ್ಲಿ ಹಾಕಿಕೊಂಡಂತೆ ಅದನ್ನು ಒಪ್ಪಿಕೊಂಡ ಸಂಪ್ರದಾಯವನ್ನು ಸಂಪೂರ್ಣ ಬಿಟ್ಟು ಹೊರ ಬರಲು ಆಗದೆ, ಅದನ್ನೆ ನಂಬಿ ಸಮಾಜದಲ್ಲಿ ಗೌರವಾನ್ವಿತರಾಗಿ ಬದುಕಲು ಆಗದೆ ದ್ವಂದ್ವಕ್ಕೆ ಸಿಕ್ಕ ಬದುಕಾಗಿದೆ. ಬಿಡಬೇಕೆಂದರೂ ಬಿಡಲಾಗದ, ಬಿಟ್ಟರೂ ಸಮಾಜದಲ್ಲಿ ಸಹಜ ಬದುಕನ್ನು ಬದುಕಲಾಗದೆ, ಬದುಕಲು ಪ್ರಯತ್ನಿಸಿದರೂ ನೆಮ್ಮದಿಯಿಂದ ಇರಲಾಗದ 'ಇತ್ತದರಿ ಅತ್ತಪುಲಿ ಎತ್ತ ದಾರಿ' ಎಂಬುದೇ ದೇವದಾಸಿಯರ ಇಂದಿನ ಸ್ಥಿತಿ ಆಗಿದೆ.

ಸುಡುವುದಕ್ಕೆ ಸಣ್ಣದೊಂದು ಕಿಡಿ ಸಾಕು. ಆದರೆ ಅದು ದಗ ದಗಿಸಿ ಉರಿದಾಗ ಯಾರು ನಂದಿಸಲಾಗದ ಕಾಡ್ಗಿಚ್ಚಿನಂತೆ ಇದು ಕೂಡ ಸ್ವಾರ್ಥಿಗಳ ಕ್ಷಣದ ಕಾಮ ತೃಪ್ತಿಗಾಗಿ ಮಾಡಿಕೊಂಡಿರುವ ವ್ಯವಸ್ಥೆಯಾಗಿದ್ದು, ಇಂದು ಯಾವ ಶಕ್ತಿಯು ಅದನ್ನು ಬೇರು ಸಹಿತ ನಿರ್ಮೂಲನ ಮಾಡಲಾಗದ ಸ್ಥಿತಿ ಉಂಟಾಗಿದೆ. ಅಂದಿನ ಉದ್ದೇಶ ಒಂದಿದ್ದರೂ ಇಂದಿನ ಉದ್ದೇಶಗಳು ಹಲವಾರು ಮುಖಗಳನ್ನು ಪಡೆದುಕೊಂಡು ಜಗತ್ತಿನ ಗಮನವನ್ನೇ ಸೆಳೆಯುವಂತೆ ಮಾಡಿದೆ. ಡಬ್ಲ್ಯು.ಎಚ್.ಓ (WHO) ವರದಿಯನ್ನೇ ಗಮನಿಸಿದರೆ ರಾಜ್ಯದಲ್ಲೇ ಬಳ್ಳಾರಿ ಜಿಲ್ಲೆ ಅತಿ ಹೆಚ್ಚು ಹೆಚ್.ಐ.ವಿ. ಏಡ್ಸ್ ರೋಗಿಗಳನ್ನು ಹೊಂದಿರುವ ಜಿಲ್ಲೆಯಾಗಿದೆ. ಅದರಲ್ಲಿ ಕೂಡ್ಲಿಗಿ ತಾಲ್ಲೂಕು ಪ್ರಥಮವಾಗಿದೆ. ಇದಕ್ಕೆ ಕಾರಣ ಈ ಭಾಗದಲ್ಲಿ ಕಂಡು ಬರುವ ಅನಿಷ್ಟ ಪದ್ಧತಿಯಾದ ದೇವದಾಸಿ ಆಚರಣೆಯೆ ಕಾರಣ ಎಂಬುದು ಅಧ್ಯಯನದಿಂದ ಸಾಬೀತಾಗಿದೆ.

ದೇವದಾಸಿಯರ ಕುಟುಂಬಗಳು ಇಂದು ಕ್ಷೋಭೆಗೆ ಒಳಗಾಗಿವೆ. ವಿದ್ಯಾವಂತ ಯುವ ಪೀಳಿಗೆ ಉತ್ತಮ ಸ್ಥಾನಮಾನವನ್ನು ಪಡೆದುಕೊಂಡರು ಸಮಾಜದ ದೃಷ್ಟಿಯಲ್ಲಿ ಅಪ್ಪ ಇಲ್ಲದವ ಎಂಬುದು ಅವರನ್ನು ಸದಾ ಕಾಡುವುದಲ್ಲದೆ ತಲೆ ಎತ್ತಿ ಬದುಕಲಾರದ ಸ್ಥಿತಿ ಉಂಟಾಗಿದೆ. ಇದರಿಂದ ಊರು, ಕೇರಿ, ಸಮುದಾಯದಿಂದ ದೂರಾಗುವುದು ಸಾಮಾನ್ಯವಾಗಿದೆ. ಒಟ್ಟಿನಲ್ಲಿ ಜಗತ್ತಿಗೆ ಅಂಟಿದ ಏಡ್ಸ್‌ನಂತೆ ಬೇಡ ಸಮುದಾಯಕ್ಕೆ ಅಂಟಿದ ದೇವದಾಸಿ ಆಚರಣೆಯೂ ಇವರ ಪಾಲಿಗೆ ಏಡ್ಸ್‌ಮಾರಿಯಾಗಿದೆ.

**೫.೧೦ ಕಲಾಜೀವನ**

ಮಾನವನ ಸಹಜ ಆಸರ-ಬೇಸರಗಳನ್ನು ನೀಗಿಸುವ ಮಾಧ್ಯಮವಾಗಿದ್ದ ರಂಗಭೂಮಿ ಅಂದು ಬಹಳ ಶ್ರೀಮಂತವಾಗಿತ್ತು. ಅಕ್ಷರಸ್ಥರಿಗೆ-ಅನಕ್ಷರಸ್ಥರಿಗೆ ಭೂಮಾಲಿಕರಿಗೆ, ಕೂಲಿಕಾರರಿಗೆ, ಹಳ್ಳಿಗರು ನಗರದವರು ಎಂಬ ಬೇಧವಿಲ್ಲದೆ ಎಲ್ಲರಿಗೂ ಮನರಂಜನೆ ಒದಗಿಸುತ್ತಿತ್ತು. ಧಾರ್ಮಿಕ ಹಿನ್ನೆಲೆಯುಳ್ಳದ್ದು ಭಕ್ತಿಪೂರಕವಾದದ್ದು ಕುಣಿತ, ಹಾಡು ಸಂಭಾಷಣೆಗಳ ಸಂಯೋಜನೆಯಲ್ಲಿ ನೋಡುಗರ ಕಣ್ಣು ಕಿವಿಗಳೆರಡನ್ನು ರಂಜಿಸುತ್ತಿತ್ತು. ಕೆಲವೊಮ್ಮೆ ಸಮಾಜದ ಅಂಕು ಡೊಂಕುಗಳನ್ನು ತಿದ್ದುವ ಜೀವನ ಮೌಲ್ಯಗಳನ್ನು ಎತ್ತಿ ಹಿಡಿಯುವ ಪ್ರಯತ್ನವು ನಾಟಕದ ಉದ್ದೇಶಗಳಲ್ಲಿ ಒಂದಾಗಿತ್ತು. ಇವು ರಂಗಭೂಮಿಯ ಗುಣಾತ್ಮಕ ಅಂಶಗಳಾದರೆ ಹೆಣ್ಣನ್ನು ನಟನೆ, ಸಂಗೀತ, ಕುಣಿತ ಎಂಬ ಮನರಂಜನೆಯ ವಸ್ತುವನ್ನಾಗಿಸಿಕೊಂಡು ತನ್ನ ಅಗತ್ಯಕ್ಕೆ ತಕ್ಕಂತೆ ರಂಜನೆ ಹಾಗೂ ಬೋಗದ ವಸ್ತುವಾಗಿ ಮಾರಾಟಕ್ಕೆ ಇಟ್ಟಂತೆ ಒಂದು ಪ್ರತ್ಯೇಕ ಗುಂಪನ್ನು ಸೃಷ್ಟಿ ಮಾಡಿದ್ದು ಮಹಿಳಾ ಸಮಾಜಕ್ಕೆ ಒದಗಿದ ಒಂದು ದುರಂತವೆಂದೇ ಹೇಳಬೇಕು. ಈ ಹಿಂದೆ ಪ್ರಸ್ತಾಪಿಸಿದಂತೆ ವಿಜಯನಗರ ಸಾಮ್ರಾಜ್ಯದ

ಕಾಲದಿಂದಲೂ ಅದರ ಪ್ರಭಾವದಲ್ಲಿ ಬದುಕುತ್ತಿರುವ ಬಳ್ಳಾರಿ ಜಿಲ್ಲೆಯನ್ನು ಕಲಾವಿದರ ತವರು ಎಂದು ಹೇಳಬಹುದು.

ವಿಜಯನಗರ ಸಾಮ್ರಾಜ್ಯದ ಅಸ್ತಿತ್ವದ ಕಾಲದಿಂದಲೂ ಹೊಸಪೇಟೆ, ಕಮಲಾಪುರ, ಮರಿಯಮ್ಮನಹಳ್ಳಿ, ಕೊಟ್ಟೂರು, ಕೂಡ್ಲಿಗಿ, ಬಳ್ಳಾರಿ ಇನ್ನಿತರ ಪ್ರದೇಶಗಳಲ್ಲಿ ಕಲಾವಿದೆಯರು ತಮ್ಮ ಕಲಾ ವೃತ್ತಿಯನ್ನು ವಂಶಪಾರಂಪರ್ಯವಾಗಿ ಉಳಿಸಿ ಬೆಳೆಸಿಕೊಂಡು ಬಂದ ಕೆಲ ಅವಶೇಷಗಳು ಇಂದಿಗೂ ಇವೆ. ಅದರಲ್ಲೂ ನಾವು ಕೂಡ್ಲಿಗಿಯನ್ನು 'ರಂಗನಟಿಯರ ತವರೂರು' ಎನ್ನುವುದಕ್ಕೆ ರಂಗನಾಯಕಿಯರ ಪರಂಪರೆ, ಅಭಿನಯ ವೃತ್ತಿಯ ಕಲಾ ಕುಟುಂಬಗಳನ್ನು ಇಲ್ಲಿ ಕಾಣಬಹುದಾಗಿದೆ. ರಾಜ್ಯಮಟ್ಟದಲ್ಲಿ ಹೆಸರು ಮಾಡಿ, ಅಕ್ಕ ಪಕ್ಕ ರಾಜ್ಯಗಳಲ್ಲೂ ನಾಟಕವಾಡಿ, ಸಿನಿಮಾ, ಧಾರವಾಹಿಗಳಲ್ಲೂ ಕಾಣಿಸಿಕೊಂಡಿದ್ದಾರೆ. ಕೆಲವರು ರಾಜ್ಯಪ್ರಶಸ್ತಿ ಪಡೆದ ಕಲಾವಿದೆಯರಿದ್ದು ಶ್ರೀಮತಿ ಪಿ.ಪದ್ಮರವರು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಹಾಗೂ ಕರ್ನಾಟಕ ನಾಟಕ ಅಕಾಡಮಿಯ ಸದಸ್ಯಳೂ ಆಗಿದ್ದಾರೆ. ಹಾಗೆ ಶ್ರೀಮತಿ ಬಿ.ಶಿವಕುಮಾರಿ ಕರ್ನಾಟಕ ನಾಟಕ ಅಕಾಡಮಿ ಪ್ರಶಸ್ತಿ ಪಡೆದಿದ್ದಾರೆ. ಶ್ರೀಮತಿ ದುಶೀಲ ಅವರು ವಿಶಾಲ ಕರ್ನಾಟಕ ರಾಜ್ಯ ಪ್ರಶಸ್ತಿ ಪಡೆದಿದ್ದಾರೆ. 'ಮೊದಲು ನಮ್ಮಜ್ಜಿ ನಾಟಕವಾಡ್ತ ಇದ್ಲು, ಆಮೇಲೆ ನಮ್ಮವ್ವ, ಅಥವಾ ದೊಡ್ಡವ್ವ, ಅಥವಾ ಚಿಕ್ಕಮ್ಮ, ಅಕ್ಕ, ಈಗ ನಾನು ಎನ್ನುವ ಉತ್ತರ ದೊರೆತರೂ ಅಭಿನಯದ ಕಲೆ ಬೆಳೆದು ಬಂದ ಬಗೆ, ಇತಿಹಾಸ, ಕೇಳಿದರೆ ಅಶ್ಚರ್ಯವಾಗುವುದು. ಇವರಲ್ಲಿನ ಕೆಲವರಿಗೆ ಕೌಟುಂಬಿಕವಾಗಿ ರಂಗ ಕಲೆಯ ಹಿನ್ನೆಲೆಯಿಲ್ಲ. ಸಂಗೀತ ಕಲಿಯುವ ವ್ಯವಧಾನವೂ ಇವರಿಗಿಲ್ಲ. ಚಿಕ್ಕ ವಯಸ್ಸಿನಲ್ಲಿಯೇ ತಮ್ಮೆಲ್ಲಾ ಕನಸುಗಳಿಗೆ ತಿಲಾಂಜಲಿಯನ್ನಿತ್ತು ತಮ್ಮ ಕುಟುಂಬಗಳನ್ನು ಸಾಕುವ ಹೊಣೆ ಹೊತ್ತು ಮಗನಂತೆ ಇವರು ಕಿತ್ತು ತಿನ್ನುವ ಬಡತನದ ಕಾರಣಕ್ಕಾಗಿ ಬಣ್ಣದ ಬದುಕಿಗೆ ನೂಕಲ್ಪಟ್ಟಿದ್ದಾರೆಯೇ ವಿನಃ ಬಣ್ಣದ ಗೀಳನ್ನು ಹಚ್ಚಿಕೊಂಡು ಆಸಕ್ತಿಯಿಂದ ಬಂದವರಲ್ಲ. ಈ ಬಣ್ಣದ ಬದುಕಿನಿಂದಲೇ ಮನೆಯವರನ್ನು ಸಾಕಿ, ಸಲುಹಿ ತ್ಯಾಗದಲ್ಲಿಯೇ ತಮ್ಮ ಏಳಿಗೆ ಕಂಡ ಮಹಾತ್ಮೆಯರು ಇವರಾಗಿದ್ದು, ತಮ್ಮ ಜೀವನದ ಎಲ್ಲಾ ಕ್ಷಣಗಳು ಬಣ್ಣದಿಂದಲೇ ನಿರ್ಧರಿತವಾಗಿ ವೈಯಕ್ತಿಕತೆಗೆ ಅದೊಂದು ಶಾಪ ಎನ್ನದೇ ವಿಧಿ ಇಲ್ಲ. ಈ ಅಂಶ ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ. ಅನೇಕ ವೇಳೆ ಇವರ ಖಾಸಗಿ ಕಷ್ಟಗಳು ಅವರನ್ನು ರಂಗಭೂಮಿಯಿಂದ ಬೆಳೆಯದಂತೆ ತಡೆ ಹಿಡಿದಿರುವುದೂ ಇದೆ.

ತಮ್ಮ ಬಾಲ್ಯದ ಐದರಿಂದ ಹತ್ತು ವರ್ಷದ ವಯಸ್ಸಿನಲ್ಲಿ ನಾಟಕದಲ್ಲಿ ನೃತ್ಯ ಮಾಡುವುದಕ್ಕೆ ಮಾತ್ರ ಅವಕಾಶ ನೀಡುವುದುಂಟು. ಹಿರಿಯ ಕಲಾವಿದೆಯರು ಅವರುಗಳಲ್ಲಿ ಪ್ರಮುಖರು ನಾಗಮ್ಮ, ಕನಕಮ್ಮ, ದುರುಗವ್ವ, ಚೌಡಮ್ಮ, ಚಿತ್ರಮ್ಮ, ವನ್ನಮ್ಮ, ಜಗಳೂರು ಚೌಡಮ್ಮ ಮುಂತಾದವರ ಹತ್ತಿರ ರಂಗ ಕಲೆ ಕಲಿತು ಜೊತೆಗೆ ಕೆಲವರು ಸಂಗೀತ ಗುರುಗಳ ಹತ್ತಿರವೂ ಹಾಡುಗಳ ತರಬೇತಿ ಹೊಂದಿ, ರೇಡಿಯೋ ಸಿನಿಮಾ ಗೀತೆಗಳನ್ನು ಕೇಳಿ ಕಲಿತು, ನೃತ್ಯ, ನಟನೆ, ಎಲ್ಲಾ ಒಂದು ಅಂದಾಜಿನ ಮೇಲೆ ಕೆಲವರು ತರಬೇತಿ ಅಥವಾ ತಾಲೀಮು ಮಾಡುತ್ತಾರೆ. ಮೊದಲ ರಂಗ ಪ್ರವೇಶ ಹಿರಿಯ ಕಲಾವಿದೆಯರ ಜೊತೆಯಲ್ಲಿ ಹೋಗಿ ಬರಿ ೧೦ ಅಥವಾ ೨೦ ರೂಪಾಯಿಗಳಿಗೆ ನಾಟಕದ ಮಧ್ಯದಲ್ಲಿ ನೃತ್ಯ ಮಾಡುವ ಅವಕಾಶಗಳನ್ನು ಪಡೆಯುವರು. ಇವರಲ್ಲಿ ಸೈ ಎನಿಸಿಕೊಂಡು ಅನಂತರ ಚಿಕ್ಕ ಚಿಕ್ಕ ಪಾತ್ರಗಳನ್ನು ಮಾಡುತ್ತಾ ತರಬೇತಿಯಲ್ಲಿ ಪಳಗಿದವರಾಗಿ

ಕ್ರಮೇಣ ಸಾಮಾಜಿಕ ನಾಟಕಗಳು, ಐತಿಹಾಸಿಕ ನಂತರ ಪೌರಾಣಿಕ ನಾಟಕಗಳಿಗೆ ಪ್ರವೇಶಿಸುತ್ತಾರೆ. ಇವರಲ್ಲಿ ಬಹುಜನರು ಅನಕ್ಷರಸ್ಥರಿದ್ದರೂ ಹೆಸರಾಂತ ಕಲಾವಿದರಾಗಿ ಮೆರೆದಿರುವುದು ಅಚ್ಚರಿಯನ್ನುಂಟು ಮಾಡುವುದು. ಇನ್ನು ಕೆಲವರು ನಾಟಕದ ಸಂಭಾಷಣೆ ಕಲಿಯಲು ಬೇಕಾದಷ್ಟು ವಿದ್ಯೆ ಕಲಿತು ಶಾಲೆ ಬಿಟ್ಟಿರುವವರೂ ಇದ್ದಾರೆ.

ಯಾವುದೇ ಮಾದರಿಯ ನಾಟಕವಿರಲಿ, ಬಳ್ಳಾರಿ, ಹಾವೇರಿ, ದಾವಣಗೆರೆ, ಚಿತ್ರದುರ್ಗ, ರಾಯಚೂರು, ಇಳಕಲ್, ಗಂಗಾವತಿ, ಸಿಂಧನೂರು, ಅಷ್ಟೇಕೆ, ಇಡೀ ಕರ್ನಾಟಕದ ತುಂಬಾ ಎಲ್ಲಾ ಹಳ್ಳಿ ಹಳ್ಳಿಗೂ ಪ್ರಸಿದ್ಧಿ ಪಡೆದು ನೆರೆ ರಾಜ್ಯಗಳಾದ ಆಂಧ್ರ ಮತ್ತು ಮಹಾರಾಷ್ಟ್ರಗಳ ಗಡಿ ಪ್ರದೇಶಗಳಲ್ಲಿ ತಮ್ಮ ಛಾಪು ಮೂಡಿಸಿದ್ದಾರೆ. 'ಕೂಡ್ಲಿಗಿ ಎಂದರೆ ರಂಗ ಕಲಾವಿದೆಯರು, ರಂಗ ಕಲಾವಿದೆಯರೆಂದರೆ ಕೂಡ್ಲಿಗಿ' ಎನ್ನುವಷ್ಟರಮಟ್ಟಿಗೆ ಕರ್ನಾಟಕದಲ್ಲಿ ನಾಟಕ ಎಲ್ಲಿಯೇ ಆಡಲಿ ಅಲ್ಲಿ ಕೂಡ್ಲಿಗಿಯ ರಂಗ ಕಲಾವಿದೆಯರಿದ್ದರೇನೇ ಆ ನಾಟಕಕ್ಕೆ ಕಳೆ ಎಂಬ ಮಾತು ಚಾಲ್ತಿಯಲ್ಲಿದೆ. ಇವರ ಅಭಿನಯದ ಮೋಡಿಗೆ ಒಳಗಾಗದವರೇ ವಿರಳ. ಭಾವಪೂರ್ಣ ಅಭಿನಯದ ಮೂಲಕ ಅಭಿಮಾನಿಗಳ ಬಳಗವನ್ನು ಹೊಂದಿದ್ದಾರೆ ಎಂಥಹುದೇ ನಾಟಕವಾಗಲಿ ಒಂದೇ ದಿನದಲ್ಲಿ ಸಂಭಾಷಣೆ ಕಲಿಯಬಲ್ಲರು. ಅಭಿನಯ ನೃತ್ಯ, ಸಂಗೀತದಲ್ಲಿ ಸಿನಿಮಾ ನಟಿಯರನ್ನು ನಿವಾಳಿಸಿ ಎಸೆಯುತ್ತಾರೆ. ರಂಗ ಸಜ್ಜಿಕೆ ಪ್ರವೇಶಿಸುತ್ತಿದ್ದಂತೆ, ಆಯಾ ಪಾತ್ರ ಸನ್ನಿವೇಶದಲ್ಲಿ ಪರಕಾಯ ಪ್ರವೇಶ ಮಾಡಿ, ಲೀಲಾ ಜಾಲವಾಗಿ ಅಭಿನಯಿಸುವ ಮೂಲಕ ಶ್ರೋತೃಗಳಿಂದ ಚಪ್ಪಾಳೆ, ಮುಯ್ಯಿಯೊಂದಿಗೆ ಮೆಚ್ಚುಗೆ ಗಳಿಸಿ ಕೊಳ್ಳುತ್ತಾರೆ. ಕೂಡ್ಲಿಗಿಯ ನಟಿಯರಿದ್ದರೆ ನಾಟಕ ಯಶಸ್ವಿ ಎಂಬ ನಂಬಿಕೆಗೂ ಪಾತ್ರರಾಗಿದ್ದಾರೆ.

ಸಿನಿಮಾ ನಟಿಯರಿಗಿರುವಂತೆ ಇವರಿಗೆ ವರ್ಷಪೂರ್ತಿ ಬೇಡಿಕೆ ಇರುವುದಿಲ್ಲ. ಸಮೃದ್ಧ ಮಳೆ ಬೆಳೆಯಾಗಿ ರೈತನಿಗೆ ನೆಮ್ಮದಿಯಾದರೆ ಜಾತ್ರೆ ಉತ್ಸವಗಳಲ್ಲಿ ಸಾಮಾಜಿಕ, ಐತಿಹಾಸಿಕ ನಾಟಕಗಳು, ಹಾಗೇ ಊರಿಗೆ ಕೇಡಾದರೆ, ಕಳ್ಳತನ ಬೆಳೆ, ಮಳೆ ಚೆನ್ನಾಗಿ ಬಾರದಿದ್ದರೆ, ಪಾರದರ್ಶಕ ನಾಟಕಗಳ್ನು ಆಡಿಸುತ್ತಾರೆ. ನಾಟಕದ ಋತುಮಾನ ಮೂರೇ ತಿಂಗಳು. ಆಗ ದಿನಕ್ಕೆ ಒಂದರಂತೆ ಮೂವತ್ತೂ ದಿನಗಳಲ್ಲಿ ಬೇರೆ ಬೇರೆ ನಾಟಕಗಳಲ್ಲಿ ಅಭಿನಯಿಸಬಲ್ಲರು. ಒಂದು ಸಾರಿ ನಾಟಕ ಪುಸ್ತಕ ತಿರುವಿ ಹಾಕಿದರೆ ಸಾಕು. ಆ ಸನ್ನಿವೇಶ ಬರುತ್ತಿದ್ದಂತೆ ಸಂಭಾಷಣೆಗಳನ್ನು ತಾನೇ ತಾನಾಗಿ ಹುಟ್ಟಿಕೊಳ್ಳುತ್ತವೆ ಎನ್ನುತ್ತಾರೆ, ಹಿರಿಯ ನಟಿ ಪಿ.ಪದ್ಮ, ರಂಗ ಪ್ರವೇಶಿಸುವ ಸಂದರ್ಭದಲ್ಲಿ ಪಾತ್ರಕ್ಕೆ ಅನುಗುಣವಾಗಿ ಭಾವ ತುಂಬಿಕೊಡು, ಜ್ವರ ಬಂದು ಸುಸ್ತು ಆಗಿದ್ದರೂ ಅದರ ತಾಪವಿಲ್ಲದೇ ಯಾವ ವೈಯಕ್ತಿಕ ಚಿಂತೆ, ದುಃಖ, ದುಮ್ಮಾನ ಎಲ್ಲವೂ ಮಾಯವಾಗಿ ಮನಸ್ಸು ಉಲ್ಲಾಸಭರಿತವಾಗಿ ನಟನೆಯನ್ನು ಲೀಲಾಜಾಲವಾಗಿ ಮಾಡಿ ಮುಗಿಸುತ್ತೇವೆನ್ನುತ್ತಾರೆ. ಹಳ್ಳಿಗಳಲ್ಲಿ ಖರ್ಚು ಮಾಡಿಕೊಂಡು ಕಲಾವಿದೆಯರನ್ನು ಕರೆಯಿಸಿ ಆಡಿಸುವುದು, ಖುಷಿಯ ಸಂಗತಿಯಾಗಿದ್ದು ರಂಗನಾಯಕಿಯರನ್ನು ಸಿನಿಮಾದ ನಾಯಕಿಯರು ಬಂದಷ್ಟು ಸಂಭ್ರಮ, ರಾಜ ಮರ್ಯಾದೆಯಿಂದ ಸತ್ಕರಿಸುವುದು, ಆ ದಿನ ತಮ್ಮ ಬಂಧು ಬಾಂಧವರನ್ನು ಕರೆಯಿಸಿ ಹಬ್ಬದ ವಾತಾವರಣ ನಿರ್ಮಿಸಿ ಹಬ್ಬದ ಅಡುಗೆಯ ಊಟ ಹಾಕಿ, ಉತ್ತಮ ಸಂಭಾವನೆ ಕೊಟ್ಟು, ಕಲಾವಿದೆಯರನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಮುಯ್ಯಿ, ನೆನಪಿನ ಕಾಣಿಕೆ ಜೊತೆಯಲ್ಲಿ ಬಾವಚಿತ್ರ ತೆಗೆಯಿಸಿಕೊಳ್ಳುವುದು, ದವಸ ಧಾನ್ಯಗಳನ್ನು ಕೊಟ್ಟು ಬಹು ಪ್ರೀತಿ, ಸಹಕಾರ ಅಭಿಮಾನದಿಂದ ಬೀಳ್ಕೊಡುವರು. ಈ ರಂಗ ನಟಿಯರಿಗೆ ಅವರ ಧ್ವನಿಯೇ ಆಸ್ತಿಯಾಗಿದ್ದು, ಪೌರಾಣಿಕ ಐತಿಹಾಸಿಕ ನಾಟಕಗಳಲ್ಲಿ ಗಟ್ಟಿ ಧ್ವನಿಯೇ

ಅವರ ಜೀವನ. ಆದ್ದರಿಂದ ಧ್ವನಿ ಕೆಡದಂತೆ ಮುನ್ನೆಚ್ಚರಿಕೆ ವಹಿಸುವುದು ತೀರಾ ಅಗತ್ಯ. ಧ್ವನಿ ಕೆಟ್ಟರೆ ನಾಟಕವೇ ಕೆಟ್ಟಂತೆ. ಅದಕ್ಕಾಗಿ ಸಿಕ್ಕಲ್ಲಿ ನೀರು ಕುಡಿಯುವುದಿಲ್ಲ. ಕಂಡಲ್ಲಿ ತಿನ್ನುವುದಿಲ್ಲ. ಇಷ್ಟೆಲ್ಲಾ ಜಾಗ್ರತೆ ವಹಿಸಿ ನಾಟಕದ ಯಶಸ್ಸಿಗೆ ಕಾರಣರಾಗುತ್ತಾರೆ. ಒಬ್ಬ ನಟಿಯಿಂದ ನಾಟಕ ಕೆಟ್ಟಿತೆಂದರೆ ಅವರ ರಂಗ ಭೂಮಿಯ ನಂಟು ಮುಗಿದಂತೆಯೇ. ಆಕೆಯನ್ನು ಯಾರೂ ನಾಟಕಕ್ಕೆ ಕರೆಯುವುದಿಲ್ಲ ಎನ್ನುತ್ತಾರೆ. ಹಿರಿಯ ನಟಿಯರಾದ ಪಿ.ಪದ್ಮಾ, ಬಿ.ಕೆ.ಜಯಮ್ಮ, ಎಸ್.ಸೊಲ್ಲಮ್ಮ, ದುರುಗಮ್ಮ ಮುಂತಾದವರು.

ಯಾವ ಊರಾದರೂ ಸರಿಯೇ ಮುಂಗಡ ಕೊಟ್ಟು ಇಂಥ ದಿನ ಅಂತ ಹೇಳಿ ಹೋಗುತ್ತಾರೆ. ಆ ದಿನ ಮನೆಯಲ್ಲಿ ಏನೇ ಆಗಿದ್ದರೂ ಹೋಗಲೇಬೇಕು. ಮುಂಗಡ ಎಂದರೆ ಒಪ್ಪಂದ ಇದ್ದಂತೆ. ನಟಿ ಪದ್ಮರವರು ಹೇಳುವಂತೆ ನನ್ನ ಅಣ್ಣ ಸಾಯುವ ದಿನ ಇನ್ನೇನು ಎರಡು ಮೂರು ದಿನ ಎಂದು ಡಾಕ್ಟರ್ ಹೇಳಿದರೂ ಆ ದಿನ ನನಗೆ ಮನೆಯಲ್ಲಿರಲು ಅವಕಾಶವಿಲ್ಲದಂತೆ ಮುಂಗಡ ಕೊಟ್ಟವರು ನಾವು ಆಸ್ತಿ ಪಾಸ್ತಿ ಮಾರಿ ನಾಟಕ ಆರಂಭಿಸಿಕೊಂಡಿದ್ದೇವೆ. ನೀವು ಬರುವುದಿಲ್ಲ ಎಂದರೆ ನಾವು ಕೇಳುವುದಿಲ್ಲ ಎಂದು ಹಠ ಹಿಡಿದು ಕರೆದೊಯ್ದ ಘಟನೆಯನ್ನು, ಮನನೊಂದು ಹೇಳಿದರು. ಈ ಊರಿನಲ್ಲಿ ನಾಟಕ ಮುಗಿದರೆ ಮುಂದಿನ ನಾಟಕಕ್ಕೆ ಸಿದ್ಧರಾಗಬೇಕು. ಬಸ್‌ನಲ್ಲಿಯೇ ವಿಶ್ರಾಂತಿ, ನಾಟಕದ ತಯಾರಿ ನಡೆಯುತ್ತದೆ. ಇವರಲ್ಲಿ ಸಾಮಾಜಿಕ ನಾಟಕದ ನಟಿಯರೇ ಹೆಚ್ಚಾಗಿದ್ದಾರೆ. ಇವು ಆಡಲು ಸುಲಭ, ಪೌರಾಣಿಕ, ಐತಿಹಾಕಿಕ ನಾಟಕ ನಟಿಯರು ಕಮ್ಮಿಯೇ ಎನ್ನಬಹುದು. ಇವುಗಳಿಗೆ ಸಂಭಾವನೆ ಜಾಸ್ತಿ. ಇವು ನಟಿಯರಿಗೆ ತರಬೇತಿ ಇದ್ದಂತೆ ಎನ್ನುವ ಅನುಭವ ಕಲಾವಿದೆಯರಿಂದ ರತಿ ಕಲ್ಯಾಣ, ರಾಮಾಯಣ, ದ್ರೌಪದಿ ವಸ್ತ್ರಾಪಹರಣ, ಗಿರಿಜಾ ಕಲ್ಯಾಣ, ವೀರ ಅಭಿಮನ್ಯು, ರಕ್ತ ದೀಪ, ತ್ರಿಪುರ ಸಂಹಾರ, ಪ್ರಮೀಳಾ ದರ್ಬಾರ, ಪಾರ್ಥ ವಿಜಯ, ಮಾನಿನಿ ಕಲ್ಯಾಣ, ಕಾರ್ತ ವೀರಾರ್ಜುನ ಕಾಳಗ, ಕುರುಕ್ಷೇತ್ರ, ಅಶ್ವಮೇಧ, ಗಂಡುಗಲಿ ಕುಮಾರ ನಾಯಕ, ಜಗಜ್ಯೋತಿ ಬಸವೇಶ್ವರ, ಅಕ್ಕಮಹಾದೇವಿ, ನೀಲಾಂಬಿಕೆ, ಕೊಪ್ಪಳದ ಗವಿಸಿದ್ದೇಶ್ವರ ಮುಂತಾದ ನೂರಾರು ಪ್ರದರ್ಶನ ನೀಡಿ ತಾರೆಗಳಾಗಿ ಮೆರೆದವರಿದ್ದಾರೆ. ಸಾಮಾಜಿಕ ನಾಟಕಗಳಾದ ಗೌರಿ ಗೆದ್ದಳು, ಕವಿ ಮೆಚ್ಚಿದ ಕನ್ಯೆ, ಆಶಾಲತಾ, ಹೋಗಲೇ ಭೀಮಾರ ಗೇಡಿ, ಪ್ರೇಯಸಿಕೊಟ್ಟಳು ಪ್ರೇಮ ಭಿಕ್ಷೆ, ಮುಂತಾದವುಗಳಲ್ಲಿ ಹತ್ಯಾಚಾರದ ದೃಶ್ಯಗಳಿವೆ, ಅಶ್ಲೀಲ ಸಂಭಾಷಣೆ, ಮುಗ್ಧ ಹಳ್ಳಿಗರಲ್ಲಿ ಕೆಟ್ಟ ಭಾವನೆ ಬರುವ ಅವಕಾಶವಿದೆ. ಸಿನಿಮಾದಂತೆ ನಾಟಕಕ್ಕೂ ನಿರ್ಬಂಧಗಳಿರಬೇಕು ಎಂಬ ಒತ್ತಾಯ ಕೂಡ್ಲಿಗಿಯ ರಂಗ ನಟಿಯರದು. ಹೆಚ್ಚಾಗಿ ಸಾಮಾಜಿಕ ನಾಟಕಗಳ ಅಭಿನಯವನ್ನೇ ನೆಚ್ಚಿಕೊಂಡಿರುವವರ ಪಟ್ಟಿಯಲ್ಲಿ ಜ್ಯೋತಿ, ಗೀತಾ, ರಂಗವೀಣೆ, ರಾಧಾ, ಮಾಧವಿ, ಅಂಜಿನಮ್ಮ, ವಿಶಾಲಾಕ್ಷಿ, ವೈ.ಪದ್ಮಾ, ಮಾಲಾವತಿ, ಲಕ್ಷ್ಮಿ, ಸೊಲ್ಲಮ್ಮ, ದುರುಗವ್ವ, ದೊಡ್ಡ ವೆಂಕಮ್ಮ, ದುಶೀಲ, ಶಿವಕುಮಾರಿ, ಮೊದಲಾದ ಅನೇಕರು ಮುಂಚೂಣಿಯಲ್ಲಿದ್ದಾರೆ. ಯಾರಾದರೂ ಈ ವರ್ಷ ನಾಟಕ ರಂಗದಿಂದ ನಿವೃತ್ತಿ, ಘೋಷಿಸಿದರೆ, ಅದೇ ವರ್ಷ ಇಬ್ಬರು ಅಥವಾ ಮೂರು ಹುಡುಗಿಯರು ಸಿದ್ಧರಿರುತ್ತಾರೆ. ಇದು ಕೂಡ್ಲಿಗಿಯ ವಿಶೇಷ.

ಇಂದು ರಂಗ ನಟಿಯರೆಂದರೆ, ಸಿನಿಮಾ ನಾಯಕಿಯರಂತೆ ಇರಬೇಕೆನ್ನುವ ಕಲ್ಪನೆ ಇದೆ. ಗ್ರಾಮೀಣ, ಜನರಲ್ಲಿ ಅಭಿನಯ ಗೌಣವಾಗಿ, ಸನ್ನಿವೇಶವಿರಲಿ, ಬಿಡಲಿ ಸಿನಿಮಾ ಹಾಡಿಗೆ ನೃತ್ಯ ಮಾಡಬೇಕು. ಅಶ್ಲೀಲ ಸಂಭಾಷಣೆ

ಅತ್ಯಾಚಾರ ವಂಚನೆಯಂಥಹ ಅಂಶಗಳ್ನು ವೈಭವೀಕರಿಸುವ ನಾಟಕಗಳು ಹೆಚ್ಚಾಗಿವೆ. ಅದಕ್ಕೆಲ್ಲಾ ಕಾರಣ ಟಿ.ವಿ. ಹಾಗೂ ಸಿನಿಮಾ ಮಾಧ್ಯಮಗಳಾಗಿವೆ ಎಂಬ ಆರೋಪ ನಟಿಯರದಾಗಿದೆ.

ತಮ್ಮ ಬದುಕನ್ನು ಅಭಿನಯಕ್ಕೆ ಮುಡುಪಾಗಿಟ್ಟ ಇವರು ನಾಟಕಗಳನ್ನು ವಿಮರ್ಶಿಸುವ ಹಂತವನ್ನು ತಲುಪಿದ್ದಾರೆ. ಈ ನಟಿಯರ ಮನೆಯಲ್ಲಿ ಎಲ್ಲಿ ನೋಡಿದರೂ ನಾಟಕದ ಪುಸ್ತಕಗಳೇ ಅವೆಲ್ಲವನ್ನು ಸೇರಿಸಿ ಟ್ರಂಕ್‌ಗಳಲ್ಲಿ ತುಂಬಿ ದಸರಾ ಹಬ್ಬದಂದು ಭಕ್ತಿ ಪೂರ್ವಕವಾಗಿ ಅವುಗಳನ್ನು ಪೂಜಿಸುತ್ತಾರೆ. ೧೦, ೧೫, ೨೦, ೩೦ ವರ್ಷಗಳಲ್ಲಿ ಸಾವಿರಾರು ನಾಟಕ ಪ್ರದರ್ಶನ ನೀಡಿದ್ದಾರೆ. ಪ್ರಶಸ್ತಿ ಕೊಡಿ ಎಂದು ಕೇಳುವುದೂ ಇಲ್ಲ. ಆ ವೃತ್ತಿಯಲ್ಲಿ ಇವರು ನಿಸ್ವಾರ್ಥಿಗಳು. ಇವರಲ್ಲಿ ಕೆಲವರು ಸಮಾಜ, ಜನಸೇವೆಗೂ ಇಳಿದಿದ್ದಾರೆ. ಪಿ.ಪದ್ಮ, ಬಿ.ಕೆ.ಜಯಮ್ಮ, ಬಿ.ಶಿವಕುಮಾರಿ, ಕೆ.ದುಶೀಲ ಇವರುಗಳ ಜೊತೆಯಲ್ಲಿ ಹಾಲಿ ಮುಂಚೂಣಿಯಲ್ಲಿರುವ ಕೂಡ್ಲಿಗಿ ತಾಲ್ಲೂಕಿನ ರಂಗ ಕಲಾವಿದೆಯರೆಂದರೆ, ಬಿ.ಕೆ.ಜಯಮ್ಮ, ಕೆ.ಕಮಲಮ್ಮ, ವಿ.ವೆಂಕಮ್ಮ, ಜಿ.ಅಂಜಲಿ, ಕೆ.ಗಂಗಮ್ಮ ವಿರುಪಾಪುರ, ಅಂಜಲಿ ಕೂಡ್ಲಿಗಿ, ಎಸ್.ದುರುಗಮ್ಮ, ನಾಗವೇಣಿ, ನಾಗವಮ ಭಾಗ್ಯಮ್ಮ, ಮಂಜುಳಾ, ಬಸಮ್ಮ ಬಂಡ್ರಿ, ರಂಗವೇಣಿ, ಜ್ಯೋತಿ, ಮಂಜುಳ, ರಾಧ, ಸುಮ, ಮುದ್ದಮ್ಮ, ಕಮಲ, ಬಿ.ಗಂಗಮ್ಮ, ಶಾರದ, ಟಿ.ಹಂಪಮ್ಮ, ವಿಜಯಲಕ್ಷ್ಮಿ, ಶಶಿಕಲಾ, ಕೆ.ನಾಗರತ್ನ ಮುಂತಾದವರನ್ನು ಹೆಸರಿಸಬಹುದು. ಇವರಲ್ಲಿ ಕೆಲವರು ಬಹು ಮನನೊಂದು, ನಮಗೆ ಸಿಗುವ ಸಾಮಾಜಿಕ ಮನ್ನಣೆ, ಗೌರವ ಪ್ರಶಸ್ತಿಗಳೆಲ್ಲವೂ ಕೇವಲ ಭ್ರಮಾಲೋಕದಲ್ಲಿ ವಿಹರಿಸುವಂತೆ, ಮಾಡುವಂಥಹವುಗಳಾಗಿವೆ. ನಮ್ಮ ಮನೆಯವರು ಮದುವೆ ಮಾಡಿಕೊಟ್ಟಿದ್ದರೆ ಈ ಸಮಾಜದ ವಿಭಿನ್ನ ಆಯಾಮಗಳಿಂದ ಶೋಷಣೆಗೆ ಒಳಗಾಗುವುದನ್ನು ತಪ್ಪಿಸಿಕೊಳ್ಳಬಹುದಿತ್ತು ಎಂಬ ನಿಟ್ಟುಸಿರನ್ನು ಬಿಟ್ಟು, ತಾವುಗಳು ಅನುಭವಿಸಬೇಕಾಗಿ ಬರುವ ಕಷ್ಟಗಳ ಸರಮಾಲೆಯ ಕಟ್ಟು ಬಿಚ್ಚಿಟ್ಟಿದ್ದಾರೆ.

ರಂಗಭೂಮಿಯಲ್ಲಿ ಕಲಾವಿಧೆಯರಾಗಿ ಪ್ರವೇಶ ಪಡೆಯುವುದಾಗಲಿ ಅಥವಾ ದೇವದಾಸಿಯರಾಗುವುದಾಗಲಿ ಅವರಿಗೆ ಹೆಮ್ಮೆಯ ವಿಷಯವಲ್ಲ. ಕುಟುಂಬವನ್ನು ಸಾಕುವ ಹೊಣೆಹೊತ್ತು ಅನಿವಾರ್ಯವಾಗಿ ಈ ಕ್ಷೇತ್ರಕ್ಕೆ ಪ್ರವೇಶ ಪಡೆಯುವುದು ಸಂಶೋಧನೆಯಿಂದ ತಿಳಿದು ಬಂದಿದೆ. ತಂದೆ, ತಾಯಿ ಹಾಗೂ ಅಣ್ಣ, ತಮ್ಮಂದಿರು ಸಹಾ ತಮ್ಮ ಕುಟುಂಬದ ಹೆಣ್ಣು ಮಗಳನ್ನು ಇಂತಹ ಅನಿಷ್ಟ ಸಂಪ್ರದಾಯಕ್ಕೆ ಒಪ್ಪಿಸಲು ಹಿಂಜರಿಯದೆ ಬಹಳ ಸಂಭ್ರಮದಿಂದ ವ್ಯವಸ್ಥೆಗೊಳಿಸುತ್ತಾರೆ. ಅಂತು ಈ ದಂಧೆಯಲ್ಲಿ ಒಮ್ಮೆ ಸಿಲುಕಿಕೊಂಡರೆ ಅದರಿಂದ ಹೊರಬರುವುದು ಅಸಾಧ್ಯ. ತಮಗೆ ಯಾವುದೇ ಕಷ್ಟ ಕಾರ್ಪಣ್ಯ, ಸಮಸ್ಯೆಗಳು ಎದುರಾದರು ತನ್ನ ಮೈಯೊಡ್ಡಲೇ ಬೇಕಾದ ಅನಿವಾರ್ಯತೆ ಅವರಿಗೆ ಉಂಟಾಗುತ್ತದೆ. ಕೆಲವು ಸಂದರ್ಭಗಳಲ್ಲಿ ವಿಕೃತ ಮನಸ್ಸಿನ ವ್ಯಕ್ತಿಗಳಿಂದ ಮಾನಸಿಕ ಹಿಂಸೆಗೂ ಒಳಗಾಗುವುದುಂಟು. ಅಂತಹ ಸಮಯದಲ್ಲಿ ಜಾಣತನದಿಂದ ಪಾರಾಗಬೇಕಾಗುತ್ತದೆ. ಇಲ್ಲವಾದರೆ ಅಪಾಯ ತಪ್ಪಿದ್ದಲ್ಲ.

ನಾಟಕಗಳಲ್ಲಿ ನಟಿಸಲು ಅವಕಾಶ ಲಭ್ಯವಾದ ಸೂತ್ರಕ್ಕೆ ದೇವದಾಸಿಯರ ಕಲಾ ಬದುಕು ಸುಖಮಯವಾಯಿತು ಎಂದು ತಿಳಿಯಲಾಗದು. ಏಕೆಂದರೆ ನಿಗದಿತ ಸ್ಥಳಕ್ಕೆ ತಲುಪಲು ಯಾವುದೇ ಸಾರಿಗೆ ವ್ಯವಸ್ಥೆಯನ್ನು ಗ್ರಾಮದವರು ಒದಗಿಸುವುದಿಲ್ಲ. ಹೇಗಾದರೂ ಸರಿ ಅವರು ಸಮಯಕ್ಕೆ ಮುಂಚೆ ತಲುಪಲೇಬೇಕು. ಅಷ್ಟೇ

ಅಲ್ಲ, ಅಂದು ಗ್ರಾಮದಲ್ಲಿ ನಾಟಕಕ್ಕೆ ಸೂಳೆಯರನ್ನು ಕರೆಸಿದ್ದರಂತೆ ಎಂದು ಗಂಡು ಜಾತಿ ಸಂಭ್ರಮಿಸುವುದುಂಟು. ಅಲ್ಲಿಯೂ ಇವರನ್ನು ಕಲಾವಿಧೆಯರು ಎಂದು ಗೌರವಿಸದೆ ನಾಟಕದೋರು, ಪಾತ್ರದವರು, ಸೂಳೆಯರು ಚಿಮಣಿಯರು ಎಂದು ಗಂಡಸರು ಗುಂಪು ಗುಂಪಾಗಿ ಬಂದು ವಿಚಿತ್ರ ರೀತಿಯಲ್ಲಿ ನೋಡುವುದನ್ನು ಸಹಿಸಿಕೊಳ್ಳುವುದನ್ನು ಸಹಿಸಲು ಅಸಾಧ್ಯ ಎಂದು ಕಿರಿಯ ಕಲಾವಿದ ದೇವದಾಸಿಯರು ತಮ್ಮ ಅಸಹನೆಯನ್ನು ತೋಡಿಕೊಳ್ಳುತ್ತಾರೆ.

ಆದರೆ ರಂಗಭೂಮಿಯಲ್ಲಿ ನಟಿಸುವ ಸಂದರ್ಭಗಳಲ್ಲಿ ಕಹಿ ಅನುಭವಗಳನ್ನು ಉಂಟು ಮಾಡುವುದೇ ಹೆಚ್ಚು. ಪುರುಷ ಪಾತ್ರದಾರಿಗಳು ವಿಕೃತ ಮನಸ್ಸಿನಿಂದ ತಮ್ಮ ಚಪಲವನ್ನು ತೀರಿಸಿಕೊಳ್ಳುವ ಪ್ರಯತ್ನ ಮಾಡುವುದುಂಟು. ಅನಗತ್ಯವಾಗಿ ಅಪ್ಪಿಕೊಳ್ಳುವುದು, ತೊಡೆ ಮೇಲೆ ಕೂರಿಸಿಕೊಳ್ಳುವುದು, ಅಂತಹ ಸಂದರ್ಭಗಳಲ್ಲಿ ಸಿಟ್ಟಿನಿಂದ ಬೈದು ಪರಿಸ್ಥಿತಿಯನ್ನು ನಿಭಾಯಿಸಬೇಕಾಗುತ್ತದೆ. ಒಂದು ಪಕ್ಷ ಸಹ ಕಲಾವಿಧನ ವಿಕೃತ ಭಾವನೆಗಳಿಗೆ ಸ್ಪಂದಿಸದೆ ಇದ್ದರೆ ಕೆಲವೊಮ್ಮೆ ಮೇಲೆ ಎತ್ತಿಕೊಂಡಿರುವ ಕಲಾವಿಧೆಯರನ್ನು ನೆಲಕ್ಕೆ ಬೀಳಿಸಿ ಸೇಡು ತೀರಿಸಿಕೊಳ್ಳುವುದುಂಟು. ಶ್ರೀಮತಿ ಲಕ್ಷ್ಮಿ ಎಂಬ ಕಲಾವಿಧೆಯನ್ನು ಒಮ್ಮೆ ರಂಗದಲ್ಲಿಯೇ ಮೇಲೆತ್ತಿ ಕೆಳಗೆ ಬಿಸಾಡಿದ ಪ್ರಯುಕ್ತ ಸೊಂಟದಮೂಳೆ ಮುರಿದು ಒಂದು ತಿಂಗಳವರೆಗೆ ಹೊಸಪೇಟೆ ಆಸ್ಪತ್ರೆಯಲ್ಲಿದ್ದು ಚಿಕಿತ್ಸೆ ಪಡೆಯಬೇಕಾಯಿತು ಎಂಬ ತಮ್ಮ ಅನುಭವವನ್ನು ಹಂಚಿಕೊಂಡರು.

ಹಣಕೊಟ್ಟು ಕರೆಯಿಸಲಾಗಿದೆ ಅವರನ್ನು ಹೇಗೆ ಬೇಕಾದರು ಬಳಸಿಕೊಳ್ಳಬಹುದು ಎಂಬುದು ಸ್ಥಳೀಯ ಕಲಾವಿದರ ಭಾವನೆಯಾಗಿರುತ್ತದೆ. ಅದಕ್ಕಾಗಿ ದೇವದಾಸಿ ಕಲಾವಿಧೆಯರ ಜೊತೆ ನಿಂತು ಫೋಟೋ ತೆಗೆಸಿಕೊಳ್ಳಲು ಒತ್ತಾಯ ಮಾಡುವುದು ಅಶ್ಲೀಲವಾಗಿ ಮಾತನಾಡುವುದು, ಅಮಾನವೀಯವಾಗಿ ವರ್ತಿಸುವುದನ್ನು ಪ್ರತಿಭಟಿಸಿದರೆ ನಿಮಗೆ ಹಣಕೊಟ್ಟು ಕರೆಸಿರುವುದು ಯಾತಕ್ಕ ಎಂದು ಪ್ರಶ್ನಿಸುತ್ತಾರೆ. ನಾಟಕದ ವ್ಯವಸ್ಥಾಪಕರು ಸಕಾಲಕ್ಕೆ ಹಣ ಕೊಡದೆ ಸತಾಯಿಸುವುದು ಸಾಮಾನ್ಯ ಎಷ್ಟೋ ಸಂದರ್ಭಗಳಲ್ಲಿ ಸಂಭಾವನೆಯನ್ನು ಕೊಡದೆ, ಕಲಾವಿದೆಯರು ತಮ್ಮಲ್ಲಿದ್ದ ಚಿನ್ನದ ಆಭರಣವೊಂದನ್ನು ಮಾರಿ ಬಸ್ಸು ಖರ್ಚಿಗೆ ಹಣ ಮಾಡಿಕೊಂಡು ಬಂದ ಕಹಿ ಅನುಭವವನ್ನು ಹೇಳಿಕೊಳ್ಳುತ್ತಾರೆ. ಹಣ ನೀಡಬೇಕಾಗುತ್ತದೆ ಎಂದು ಚಾಕು ತೋರಿಸಿದ ಸಂದರ್ಭಗಳು ಇವೆ. ಆಗ ಸಹಜವಾಗಿ ಕಲಾವಿಧೆಯರು ಹಣ ಹೋದರು ಹೋಗಲಿ ಸಧ್ಯ ನಮ್ಮ ಪ್ರಾಣ ಉಳಿದರೆ ಸಾಕು ಎಂದು ತಪ್ಪಿಸಿಕೊಂಡು ಬಂದಿರುವ ಉದಾಹರಣೆಗಳಿವೆ.

ಕೆಲವು ಸಂದರ್ಭಗಳಲ್ಲಿ ಸಹ ಕಲಾವಿದರು ದೇವದಾಸಿ ಕಲಾವಿಧೆಯರನ್ನು ಗೌರವದಿಂದ ಮನೆಗೆ ಆಹ್ವಾನಿಸಿ ಊಟದ ವ್ಯವಸ್ಥೆ ಮಾಡುವುದುಂಟು. ಆದರೆ ಮನೆಯಲ್ಲಿ ಹೆಣ್ಣು ಮಕ್ಕಳು ಊಟ ಬಡಿಸುವಾಗ ಈ ಕಲಾವಿಧೆಯರನ್ನು ಕೆಟ್ಟದಾಗಿ ನಡೆಸಿಕೊಂಡ ರೀತಿಯನ್ನು ನೆನೆದರೆ ಇನ್ನು ಎಂದೆಂದಿಗೂ ಇಂತಹ ಬದುಕು ಬೇಡ ಎನಿಸದಿರದು. ಕುಟುಂಬದಲ್ಲಿ, ಸಮಾಜದಲ್ಲಿ ನಮ್ಮ ಬಗ್ಗೆ ಒಳ್ಳೆಯ ಭಾವನೆಯೇ ಇಲ್ಲದಿರುವಾಗ ನಾವು ಏಕಾದರೂ ಇಂತಹ ಬದುಕನ್ನು ಆಯ್ಕೆ ಮಾಡಿಕೊಳ್ಳುವುದು ಯಾರಿಗೂ ಬೇಡವೆಂದರೂ ಜೀವನ ನಿರ್ವಹಣೆ ಸಂಸಾರದ ಹೊಣೆ (ತಂದೆ-ತಾಯಿ, ಅಣ್ಣ-ತಮ್ಮ) ಅನಿವಾರ್ಯವಾಗಿ ದೇವದಾಸಿಯರನ್ನು ಈ ಸ್ಥಿತಿಗೆ ತರುತ್ತದೆ.

ದೇವದಾಸಿ ಕಲಾವಿಧೆಯರು ಗೌರವದಿಂದ ಬದುಕಬೇಕೆಂದು ಎಷ್ಟೇ ಪ್ರಯತ್ನಿಸಿದರು ಅದು ಸಾಧ್ಯವಾಗುವುದಿಲ್ಲ.

ಏಕೆಂದರೆ ಪ್ರತಿಯೊಂದು ಹಂತದಲ್ಲೂ ಶೋಷಣೆ ತಪ್ಪಿದ್ದಲ್ಲ. ರಂಗಭೂಮಿಯಿಂದ ತಪ್ಪಿಸಿಕೊಂಡು ಬಂದೆವು ಎನ್ನುತ್ತಿರುವಾಗಲೇ ಊರಿನ ಗೌಡ, ಶ್ರೀಮಂತ, ಶಾನಬೋಗ, ಪಾಟೀಲರು ಹಾಗೂ ಅವರ ಮಕ್ಕಳು ಕಣ್ಣು ಈ ದೇವದಾಸಿ ಕಲಾವಿದೆಯರ ಮೇಲೆ ಬೀಳುತ್ತದೆ. ಬಹಳ ಆಕರ್ಷಣೀಯವಾದ ಹಾಗೂ ಪ್ರಾಯದ ಕಲಾವಿಧೆಯರು ಮೊದಲು ನನಗೆ ಸಲ್ಲಬೇಕು ತನಗೆ ಸಲ್ಲಬೇಕು ಎಂಬ ಪೈಪೋಟಿ ನಡೆಯುವುದೂ ಉಂಟು. ಕಲಾವಿಧೆಯರ ಅನುಭವಕ್ಕೆ ಬಂದ ಘಟನೆಗಳಲ್ಲಿ ಈ ಸಂಬಂಧ ಇಬ್ಬರು ವ್ಯಕ್ತಿಗಳು ಪೈಪೋಟಿ ಪರಸ್ಪರ ದ್ವೇಷಕ್ಕೆ ತಿರುಗಿ ಎರಡು ಗುಂಪುಗಳಾಗಿ ಸಂಘರ್ಷವೇರ್ಪಟ್ಟು ರಕ್ತಪಾತ ನಡೆಯಿತು ಎಂಬ ವಿಷಯವನ್ನು ತಿಳಿಸುತ್ತಾರೆ.

ಬದುಕಿನ ಮೂಲ ಜವಬ್ದಾರಿಯನ್ನು ಅರಿತುಕೊಳ್ಳದ ಅನೇಕ ಪುರುಷರು ಸಂಸಾರಸ್ಥರಾಗಿದ್ದು ಸಹಾ ದೇವದಾಸಿ ಕಲಾವಿದೆಯ ರಂಗದ ಮೇಲಿನ ಒನಪು ಒಯ್ಯಾರಗಳಿಗೆ ಮನಸೋತು ಎಷ್ಟೇ ಖರ್ಚಾದರೂ ಸರಿ ಮನೆ, ಮಠ ಮಾರಿಹೋದರೂ ಸರಿಯೇ ನಾನು ಈಕೆಯನ್ನು ಪಡೆಯಲೇ ಬೇಕು ಎಂಬ ಭ್ರಮೆಗೆ ಒಳಗಾಗಿ ಕಾಡಿಸಿ ಪೀಡಿಸಿ ಕಲಾವಿಧೆಯರನ್ನು ಮದುವೆ ಆಗುವೆ ಎಂದು ಆಸೆ ತೋರಿಸಿ ಕೊನೆಗೆ ತನ್ನ ತೀಟೆ ತೀರಿಸಿಕೊಂಡ ಬಳಿಕ ಊಟವಾದ ಬಳಿಕ ಬಾಳೆ ಎಲೆಯನ್ನು ಬೀಸಿ ಒಗೆಯುವಂತೆ ಮಾಡಿರುವುದರ ಅನುಭವದ ನೋವುಂಡ ಹಲವಾರು ದೇವದಾಸಿ ಕಲಾವಿಧೆಯರು ತಮ್ಮ ಬದುಕನ್ನು ತಾವೇ ಜರಿದುಕೊಳ್ಳಬೇಕಾದ ಪರಿಸ್ಥಿತಿಯನ್ನು ತಲುಪಿದ್ದಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ದೇವದಾಸಿ ಮತ್ತು ದೇವದಾಸಿ ಕಲಾವಿದೆಯರು ತಮ್ಮ ಯೌವನದ ಕಾಲದಲ್ಲಿ ಕುಟುಂಬದವರ ಹಾಗೂ ಸಮಾಜದ ಜನರಿಗಾಗಿ ತಮ್ಮನ್ನೆ ಒಪ್ಪಿಸಿಕೊಂಡು ದುಡಿದು ವಯಸ್ಸಾದ ಬಳಿಕ ಯಾರ ಆಸರೆಯು ಇಲ್ಲದೆ ಅನಾಥರಾಗಿ ಬದುಕಬೇಕಾದ ದುಸ್ಥಿತಿಯನ್ನು ನೆನೆದು ಚಿಂತಾಕ್ರಾಂತರಾಗುತ್ತಾರೆ.

ಇಂತಹ ಪರಿಸ್ಥಿತಿಯನ್ನು ಸುಧಾರಿಸಲು ಕೇವಲ ಸರಕಾರದ ಕಾನೂನುಗಳಿಂದ ಮಾತ್ರ ಸಾಧ್ಯವಿಲ್ಲ. ಜೊತೆಗೆ ಸಮುದಾಯದ ಜನರು ಸುತ್ತಲಿನ ಸಮಾಜವು ಸಹಕಾರ ನೀಡಬೇಕಾದ ಜವಾಬ್ದಾರಿಯಿದೆ. ಈ ಸಂದರ್ಭದಲ್ಲಿ ಮಾರ್ಕ್ಸ್‌ನ ಒಂದು ಹೇಳಿಕೆಯನ್ನು ಪ್ರಸ್ತಾಪಿಸುವುದು ಸೂಕ್ತ ಎನಿಸುತ್ತದೆ. ಮನುಷ್ಯ ಸ್ವಭಾವವು ಅವನ ಸಾಮಾಜಿಕ ಪರಿಸರದಿಂದ ರೂಪಿತವಾಗುತ್ತದೆ ಎಂದಾದರೆ ಅವನ ಸಾಮಾಜಿಕ ಪರಿಸರವೂ ಹೆಚ್ಚು ಮಾನವೀಯವಾಗಿರಬೇಕಾದದ್ದು ಅಗತ್ಯವಾಗಿದೆ ಎಂದಿದ್ದಾರೆ. ಮಹಿಳೆ ತಾನು ಇದೂವರೆಗೆ ಲಭ್ಯವಾದ ಸೀಮಿತ ಅವಕಾಶಗಳಲ್ಲಿ ಅದ್ಭುತವಾದ ಸಾಧನೆಯನ್ನು ಮಾಡಿ ತೋರಿಸಿದ್ದಾರೆ. ಆಕೆಯ ಸಾಮರ್ಥ್ಯದ ಬಗ್ಗೆ ಇದ್ದ ಪೂರ್ವ ಗ್ರಹಿಕೆಗಳಿಗೆ ಕೊನೆ ಹೇಳಿ ಪುರುಷರ ಸರಿಸಮಾನವಾಗಿ ಬದುಕಲು ಅನುವು ಮಾಡಿ ಕೊಡಬೇಕು ಆಗ ಮಾತ್ರ ಆರೋಗ್ಯಕರ ಸಮಾಜ ನಿರ್ಮಿಸಲು ಸಾಧ್ಯವಾಗುತ್ತದೆ.

### ೫.೧೧ ಶೈಕ್ಷಣಿಕ ಜೀವನ

ಶೈಕ್ಷಣಿಕವಾಗಿ ಮುಂದುವರೆದ ಸಮಾಜದಲ್ಲಿ ಯಾವುದೇ ರೀತಿಯ ಅಜ್ಞಾನ, ಮತ್ತು ಮೂಢ ನಂಬಿಕೆಗಳಿಗೆ ಅವಕಾಶ ಇರುವುದಿಲ್ಲ. ಅವಿದ್ಯಾವಂತನಾದವನು ಕಂದಾಚಾರಗಳಿಗೆ ಜೋತು ಬಿದ್ದಿರುತ್ತಾನೆ. ಮನುಷ್ಯ ಜೀವನದ ಪ್ರತೀ ಹಂತದಲ್ಲಿಯೂ ಮಾನವನನ್ನು ಮಾನವೀಕರಣಗೊಳಿಸುವಲ್ಲಿ ಶಿಕ್ಷಣ ಅತೀ ಅವಶ್ಯಕವಾಗಿದೆ. ಇದು ಮನುಷ್ಯನನ್ನು ಅಜ್ಞಾನದಿಂದ ಸುಜ್ಞಾನದತ್ತ ಕೊಂಡೊಯ್ಯುತ್ತದೆ. ಶಿಕ್ಷಣದಿಂದ ಮನುಷ್ಯನ ಮನಸ್ಸು

ವಿಶಾಲವಾಗುತ್ತದೆ. ಯಾವುದೇ ಕಾರ್ಯ ಮಾಡಬೇಕಾದರೂ ವಿದ್ಯಾವಂತನು ಯೋಚನೆ ಮಾಡುತ್ತಾನೆ.

ಈ ಹಿಂದೆ ಇಲ್ಲಿನ ಬೇಡ ಸಮುದಾಯದವರು ಶಿಕ್ಷಣಕ್ಕೆ ಕಡಿಮೆ ಆದ್ಯತೆ ನೀಡಿದ್ದರು. ಇದಕ್ಕೆ ಪೂರಕವಾಗಿ ಈ ಊರಿನಲ್ಲಿ ೨೦-೨೫ ವರ್ಷಗಳ ಹಿಂದೆ ಕೇವಲ ಎರಡು-ಮೂರು ಶಾಲೆಗಳು ಮಾತ್ರ ಇದ್ದವು. ಬೇಡ ಸಮುದಾಯದ ವಿದ್ಯಾರ್ಥಿಗಳ ಸಂಖ್ಯೆ ಬೆರಳೆಣಿಕೆಯಷ್ಟಿತ್ತು. ಈ ಪರಿಸರದ ಮಕ್ಕಳಿಗೆ ಕೇವಲ ಕೆಲವರೇ ರಂಗ ಪ್ರವೇಶಕ್ಕೆ ಅನುಕೂಲವಾಗಲು ಬೇಕಾಗುವಷ್ಟು ಅಕ್ಷರ ಜ್ಞಾನಕ್ಕಾಗಿ ೨ ಅಥವಾ ೩ ನೇ ತರಗತಿ ಹೆಚ್ಚೆಂದರೆ ೫ನೇ ತರಗತಿಯ ವರೆಗೆ ಓದಿಸುತ್ತಿದ್ದರು. ಇನ್ನೂ ಆರ್ಥಿಕವಾಗಿ ಅನುಕೂಲ ಸ್ಥಿತಿಯಲ್ಲಿದ್ದವರು ಮಾತ್ರ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದರು. ಆಧುನಿಕ ಶಿಕ್ಷಣ ಆರಂಭವಾದಾಗ ದೇವದಾಸಿ ಕುಟುಂಬದವರು ತಮ್ಮ ಮಕ್ಕಳನ್ನು ಶಾಲೆಗೆ ನೋಂದಾಯಿಸಲು ಆರಂಭಿಸಿದರೋ ಆಗಲೇ ಸಮಸ್ಯೆಗಳು ಎದುರಾದವು. ಯಾಕೆಂದರೆ, ಮಗುವನ್ನು ಶಾಲೆಯಲ್ಲಿ ನೋಂದಾಯಿಸುವಾಗ ಜಾತಿ ಮತ್ತು ತಂದೆಯ ಹೆಸರನ್ನು ಅಗತ್ಯವಾಗಿ ಸೂಚಿಸಬೇಕಾಗುತ್ತಿತ್ತು. ಅನದಿಕೃತ ತಂದೆಯ ಹೆಸರನ್ನು ಸೂಚಿಸುವುದು ಈ ಸಮಾಜದ ಹೆಂಗಸರಿಗೆ ತುಂಬ ಮುಜುಗರ ತರುತ್ತಿತ್ತು. ಮಕ್ಕಳಿಗೂ ಅವಮಾನವಾಗಿ ತಂದೆ ಇಲ್ಲದೇ ಅನೈತಿಕವಾಗಿ ಹುಟ್ಟಿದವರೆಂಬ ಕೀಳು ದೃಷ್ಟಿಗೆ ಒಳಗಾಗಿ ಮಾನಸಿಕ ಹಿಂಸೆಗೆ ಒಳಗಾಗುತ್ತಿದ್ದರು. ಹಾಗೂ ಶಾಲೆಗೆ ಹೋಗುವುದನ್ನು ನಿಲ್ಲಿಸುತ್ತಿದ್ದರು.

ಅಧ್ಯಯನದಲ್ಲಿ ಕಂಡುಬಂದ ಸಾಕ್ಷರತೆಯ ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

**ಕೋಷ್ಟಕ ೨೨**

**ಬೇಡ ದೇವದಾಸಿ ಕುಟುಂಬದವರ ಶೈಕ್ಷಣಿಕ ಮಟ್ಟ**

| ಶಿಕ್ಷಣ:ಹಂತಗಳು | ಗಂಡು | ಹೆಣ್ಣು | ಒಟ್ಟು | ಶೇಕಡ |
|---|---|---|---|---|
| ಪ್ರಾಥಮಿಕ | ೩೮ | ೧೩೩ | ೧೭೧ | ೯ |
| ಮಾಧ್ಯಮಿಕ | ೧೦೭ | ೨೩೫ | ೩೪೨ | ೧೭ |
| ಪ್ರೌಢ | ೩೧೧ | ೪೩೯ | ೭೫೦ | ೩೮ |
| ಡಿಪ್ಲೊಮೊ | ೧೩೪ | ೭೩ | ೨೦೭ | ೧೧ |
| ಪದವಿಪೂರ್ವ | ೧೧೪ | ೨೦೧ | ೩೧೫ | ೧೬ |
| ಪದವಿ | ೪೬ | ೩೭ | ೮೩ | ೪ |
| ಇತರೆ | ೫೪ | ೩೭ | ೯೧ | ೫ |
| ಒಟ್ಟು | ೮೦೪ | ೧೧೫೫ | ೧೯೫೯ | ೧೦೦ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ, ಅತಿ ಹೆಚ್ಚಾಗಿ ಕಂಡುಬರುವ ಪ್ರೌಢ ಶಿಕ್ಷಣ ಪ್ರಮಾಣ ಶೇ. ೩೮ ರಷ್ಟಿದ್ದು, ಮಾಧ್ಯಮಿಕ ಶಿಕ್ಷಣ ೧೭ ರಷ್ಟು ಹಾಗೂ ಪದವಿ ಪೂರ್ವ ಶಿಕ್ಷಣದ ಪ್ರಮಾಣ ಶೇ. ೧೬ ರಷ್ಟು ಕಂಡು ಬರುತ್ತದೆ. ಡಿಪ್ಲೊಮೊ ಶಿಕ್ಷಣದ ಪ್ರಮಾಣ ಶೇ. ೧೧ರಷ್ಟು. ಪ್ರಾಥಮಿಕ ಶಿಕ್ಷಣ ಪ್ರಮಾಣ ಶೇ. ೯ರಷ್ಟು ಇತರ ಶಿಕ್ಷಣದಲ್ಲಿ ಶೇ. ೫ ರಷ್ಟು ಕಂಡು ಬಂದು ಪದವಿ ಶಿಕ್ಷಣದಲ್ಲಿ ಪ್ರಮಾಣ ಶೇ. ೪ ರಷ್ಟಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಶಿಕ್ಷಣ ಪಡೆದ ಈ ಕುಟುಂಬಗಳ ಹುಡುಗಿಯರು ತಮ್ಮ ಕುಲ ವೃತ್ತಿಯನ್ನು ಮುಂದುವರೆಸಲು ಇಷ್ಟಪಡುತ್ತಿಲ್ಲ. ಮುಂದುವರೆಸಿದರೂ ಅದು ಒತ್ತಾಯದ ಹೇರಿಕೆಯಾಗಿತ್ತೇ ಹೊರತು ಸ್ವ-ಇಚ್ಛೆಯಿಂದಲ್ಲ. ಕೆಲವರು ಮದುವೆ ಮಾಡಿಕೊಳ್ಳಬೇಕೆಂದು ಕಾದು ಯಾರೂ ಬಾರದಿದ್ದಾಗ ಅನಿವಾರ್ಯವಾಗಿ ದೇವದಾಸಿಯರಾಗಿದ್ದಾರೆ. ಜೊತೆಗೆ ಶಿಕ್ಷಣ ಪಡೆದು ಸರ್ಕಾರಿ ನೌಕರಿಯಲ್ಲಿದ್ದೂ ಸಹಾ ಕೆಲ ಯುವತಿಯರು ದೇವದಾಸಿ ಸಂಸ್ಕಾರಕ್ಕೆ ಒಳಗಾಗಿದ್ದಾರೆ. ಕಾರಣ ಪ್ರೀತಿಯಲ್ಲಿ ವೈಫಲ್ಯತೆ, ಅತ್ಯಾಚಾರಕ್ಕೆ ಒಳಗಾಗಿರುವುದು, ಯಾರೂ ಮದುವೆಯಾಗಲು ಮುಂದೆ ಬಾರದೇ ಇರುವುದು, ಇನ್ನು ಕೆಲವರಿಗೆ ಕಾಮತೃಷೆ, ಸಂಗಾತಿಯ ಬೇಡಿಕೆ, ಐಷಾರಾಮ ಜೀವನದ ಬಯಕೆ ಮುಂತಾದ ಕಾರಣಗಳಿಗಾಗಿ ವಿದ್ಯಾವಂತೆಯರಾಗಿದ್ದು, ಆರ್ಥಿಕ ಸ್ವಾವಲಂಬಿಗಳಾಗಿದ್ದರೂ ಸಹ ಜಾತಿ ಮತ್ತು ಕೌಟುಂಬಿಕ ಹಿನ್ನೆಲೆಯಲ್ಲಿ ಪುನಃ ಆ ಸಂಪ್ರದಾಯಕ್ಕೆ ಶರಣಾಗಿದ್ದಾರೆ. ಇಲ್ಲಿ ಸಂಪ್ರದಾಯವು ತನ್ನ ಪ್ರಾಬಲ್ಯತೆಯನ್ನು ಮೆರೆದಿದೆ ಎಂದರೆ ತಪ್ಪಾಗಲಾರದು.

ಈ ಕುಟುಂಬಗಳ ವಿದ್ಯಾವಂತ ಯುವಕರು ತಮ್ಮ ಕುಲ ವೃತ್ತಿಯನ್ನು ವಿರೋಧಿಸುತ್ತಿದ್ದರು. ದೇವದಾಸಿಯರ ಗಂಡು ಮಕ್ಕಳು ಡಾಕ್ಟರ್, ಎಂಜಿನಿಯರಿಂಗ್ ವಕೀಲರು, ಆಗಿದ್ದಾರೆ. ಅಲ್ಲದೇ ವಿದೇಶಗಳಿಗೂ ಹೋದವರಿದ್ದಾರೆ. ಶಾಲಾ ಉಪಾಧ್ಯಾಯರು, ಬ್ಯಾಂಕ್ ಮ್ಯಾನೇಜರ್‌ಗಳೂ, ಪೊಲೀಸ್ ಇಲಾಖೆ, ಉಪನ್ಯಾಸಕರು, ಪ್ರಾಂಶುಪಾಲರು, ಭಾರತ ಆಡಳಿತ ಸೇವೆಯಲ್ಲಿ, ಕರ್ನಾಟಕ ಆಡಳಿತ ಸೇವೆಯಲ್ಲಿ ಇದ್ದಾರೆ. ಇವರುಗಳು ದೇವದಾಸಿ ಪದ್ಧತಿಯುನ್ನು ಬಿಡಲು ಹೇಳಿದರೆ, ನಮ್ಮನ್ನೆಲ್ಲಾ ನೋಡಿಕೊಳ್ಳಿ, ಎಲ್ಲಾ ಬೇಡಿಕೆಗಳನ್ನು ಈಡೇರಿಸಿ ನಮಗೆ ಪರ್ಯಾಯ ವ್ಯವಸ್ಥೆ ಮಾಡಿ ಎಂಬ ಬೇಡಿಕೆ ಇಟ್ಟಾಗ, ತಮ್ಮ ಹೆಂಡತಿ ಮಕ್ಕಳ ಜೊತೆಯಲ್ಲಿ ಬೇರೆ ಊರುಗಳಿಗೆ ಹೋಗಿರುವ ಉದಾಹರಣೆಗಳಿವೆ. ಹೀಗೆ ಶಿಕ್ಷಣ ಪಡೆದಿದ್ದರೂ, ಅವರ ಅಜ್ಞಾನವನ್ನು ಕಿತ್ತುಒಗೆದು ಶೋಷಣೆ ವಿರುದ್ಧ ಸಿಡಿದೇಳಲಾಗದ ಸ್ಥಿತಿಯಲ್ಲಿದ್ದಾರೆ.

**೫:೧೧ ದೇವದಾಸಿಯರ ಸಾಂಸ್ಕೃತಿಕ ಜೀವನ**

ದೇವದಾಸಿಯರ ಬದುಕಿನಲ್ಲಿ ಇಂದು ಬದಲಾವಣೆಗಳಾಗಿವೆ. ನಗರೀಕರಣ, ಕೈಗಾರಿಕೀಕರಣ ಮತ್ತು ಶಿಕ್ಷಣ, ಸೌಲಭ್ಯಗಳೇ ಇದಕ್ಕೆ ಕಾರಣ. ಬೇಡ ಸಮುದಾಯದ ದೇವದಾಸಿಯರ ವಾರ್ಷಿಕ ಹಾಗೂ ಜೀವನಾವರ್ತನ ಆಚರಣೆಗಳ ಹಿಂದೆ ಇದ್ದ ಕಟ್ಟುನಿಟ್ಟಿನ ಪದ್ಧತಿ, ಸಂಪ್ರದಾಯ, ಆಚರಣೆ, ಆಚಾರ ವಿಚಾರಗಳಲ್ಲಿಯೂ ಅಪಾರ ಬದಲಾವಣೆ ಆಗಿರುವುದನ್ನು ಕಾಣಬಹುದಾಗಿದೆ.

**ಆಚರಣೆಗಳು**

ನಂಬಿಕೆಯ ತಳಹದಿಯ ಮೇಲೆ ದೇವದಾಸಿಯರ ಜೀವನದ ಹಲವಾರು ಸಂಪ್ರದಾಯಗಳು ಆಚರಣೆಯಲ್ಲಿವೆ. ಈ ಹಿನ್ನೆಲೆಯಲ್ಲಿ ದೇವದಾಸಿ ಕುಟುಂಬದ ಪೂರ್ವಿಕರು ನಡೆಸಿಕೊಂಡು ಬಂದಿರುವ ಕೆಲವು ಸಂಪ್ರದಾಯ, ಆಚರಣೆಗಳನ್ನು, ಮುಂದುವರೆಸಿಕೊಂಡು ಬರುತ್ತಿರುವರಾದರೂ ಇವುಗಳ ಬಗ್ಗೆ ಸಮಾಜದಲ್ಲಿ ಮೊದಲಿದ್ದ ಭಾವನೆಗಳು ಈಗ ಉಳಿದಿಲ್ಲ.

ಹಿಂದೆ ದೇವದಾಸಿಯರು ದೇವಾಲಯಗಳೊಂದಿಗೆ ಸಂಬಂಧ ಹೊಂದಿದ್ದು, ನಿಯಮ ನಿಷ್ಠೆಯಿಂದ ಜೀವನ ಮಾಡುತ್ತಿದ್ದರು. ದೇವರ ವಿಶೇಷ ದಿನಗಳಲ್ಲಿ ಉಪವಾಸವಿದ್ದು, ವ್ರತಾಚರಣೆ. ಪ್ರತಿ ಶನಿವಾರ, ಕಾರ್ತಿಕ

ಮಾಸದಲ್ಲಿ ಬರುವ ಎಲ್ಲಾ ಸೋಮವಾರ, ಶಿವರಾತ್ರಿ ಹಾಗೂ ಕೃಷ್ಣ ಜನ್ಮಾಷ್ಟಮಿಗಳಂದು ಉಪವಾಸವಿರುತ್ತಿದ್ದರು. ಯುಗಾದಿ, ಗಣೇಶ ಚತುರ್ಥಿ, ದೀಪಾವಳಿ, ದಸರ ಹಬ್ಬಗಳ ಜೊತೆಗೆ ಅವರವರ ಅನುಕೂಲಕ್ಕೆ ತಕ್ಕಂತೆ ದೇವಿಯ ಜಾತ್ರೆಗಳನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಸೊಲ್ಲಮ್ಮನ ಜಾತ್ರೆ, ಊರಮ್ಮನ ಜಾತ್ರೆ, ಬೆನ್ನಳ್ಳಿ ದುರುಗಮ್ಮನ ಜಾತ್ರೆ, ಬಂಡೆ ಚೌಡಮ್ಮನ ಜಾತ್ರೆ, ಗುಳೇಲಕ್ಕಮ್ಮನ ಜಾತ್ರೆಗಳು ಬಹಳ ಪ್ರಮುಖವಾದವುಗಳು. ಈ ಸಂದರ್ಭಗಳಲ್ಲಿ ತಮ್ಮ ಬಂಧು ಬಾಂಧವರನ್ನು ಸೇರಿಸಿಕೊಂಡು. ಮಾಂಸಾಹಾರ ಹಾಗೂ ಮದ್ಯಪಾನ ಸೇವನೆಯೊಂದಿಗೆ ಸಂಭ್ರಮ ಪಡುವರು. ಹೀಗೆ ತಾವು ನಂಬಿರುವ ಸಂಪ್ರದಾಯವನ್ನು ಭಯ ಭಕ್ತಿಯಿಂದ ಆಚರಿಸುತ್ತಿದ್ದುದ್ದನ್ನು ಹಿಂದಿನ ಪೀಳಿಗೆಯ ಜನರಲ್ಲಿ ಕಾಣಬಹುದಾಗಿತ್ತು.

ಅನಂತರ ಓಕಳಿಯಾಟವನ್ನು ಆಂಜನೇಯ ದೇವಸ್ಥಾನದಿಂದ ಸುಮಾರು ೧ ಕಿ.ಮೀ. ದೂರದವರೆಗೆ ಗಂಡಸರೆಲ್ಲಾ ಸೇರಿ ದೇವದಾಸಿಯರಿಗೆ ಓಕಳಿಯನ್ನು ಹಾಕುವುದೂ ಈ ಸಂದರ್ಭದಲ್ಲಿ ದೇವದಾಸಿಯರು ದೇವಸ್ಥಾನದ ಹತ್ತಿರದಲ್ಲಿಯೇ ರೇಷ್ಮೆಸೀರೆ ಬಿಟ್ಟು ಮಾಮೂಲು ಸೀರೆ ಉಡುತ್ತಿದ್ದರು. ಎಲ್ಲರಿಗೂ ಮೈತುಂಬಾ ಓಕಳಿಯಲ್ಲಿ ಮುಳುಗಿಸಿಬಿಡುತ್ತಿದ್ದರು. ಇದು ನೋಡಲು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿತ್ತು. ಬಾವಿಯ ಹತ್ತಿರ ದೇವದಾಸಿಯರಿಗಾಗಿ ಮಾಡಿದ ಸಿಹಿತಿಂಡಿಗಳನ್ನು ಕೊಟ್ಟು ಅವರವರ ಮನೆಗಳಿಗೆ ಹೋಗಿ ಸ್ನಾನ ಮಾಡಿ ಬಟ್ಟೆ ಬದಲಿಸಿ ಮತ್ತೆ ಗುಡಿಗೆ ಬಂದು, ರಾತ್ರಿ ಕಳ್ಳನ ವಿಚಾರಣೆಯ ಘಟನೆಯನ್ನು ಚಿಕ್ಕ ನಾಟಕದೋಪಾದಿಯಲ್ಲಿ ಆಚರಿಸುತ್ತಿದ್ದರು. ತೂಗದಲಿ ವಂಶಜರು ಈ ಕಳ್ಳನ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತಿದ್ದರು. ಅವನನ್ನು ಹಿಡಿದು ತಂದು, ದೇವರ ಆಭರಣಗಳೆಲ್ಲ ಕಳುವಾಗಿವೆ, ಯಾರಿಗೆ ಕೊಟ್ಟದ್ದೀಯ ಎಂಬ ವಿಚಾರಣೆಯನ್ನು ಊರಿನ ಪ್ರಮುಖರು ಮಾಡುತ್ತಾರೆ. ಅದಕ್ಕೆ ಅವನು ಅಲ್ಲಿ ಕುಳಿತಿರುವ ದೇವದಾಸಿಯರ ಗುಂಪಿನಲ್ಲಿ ಒಬ್ಬೊಬ್ಬರಾಗಿ ತೋರಿಸುತ್ತಾ ಹೋಗುತ್ತಾನೆ. ಕೊನೆಗೆ ಒಬ್ಬಳಲ್ಲಿ ಕೊಟ್ಟಿರುವುದು ಖಾತರಿ ಮಾಡಿಕೊಂಡು ಗುಡಿಯ ದೇವರ ಸಾಮಾನುಗಳನ್ನು ವಾಪಸ್ಸು ಪಡೆಯುವ ಶಾಸ್ತ್ರ ಮಾಡುತ್ತಾರೆ. ಹೀಗೆ ಅನೇಕ ಶಾಸ್ತ್ರಗಳಲ್ಲಿ ಹಿಂದೆ ದೇವದಾಸಿಯರೆಲ್ಲ ಬಹು ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಆದರೆ ಈಗ ಎಷ್ಟು ಕರೆದರೂ ಬರುವುದು ಕಷ್ಟವಾಗಿ, ಈ ನಂಬಿಕೆ, ಆಚರಣೆಗಳಲ್ಲಿ ತಮ್ಮ ಶ್ರದ್ದೆ ಭಕ್ತಿಯನ್ನು ಕಳೆದು ಕೊಂಡ ಸಂಕೇತ ಇದಾಗಿದೆ.

ದೇವದಾಸಿಯರು ರಾಮನವಮಿಯಲ್ಲಿ ವಿಶೇಷವಾಗಿ ೫ ದಿನಗಳ ಕಾಲ ದೇವಸ್ಥಾನದಲ್ಲಿ ನಡೆಯುವ ಎಲ್ಲಾ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಪಾಲ್ಗೊಳ್ಳುವರು. ದೇವಸ್ಥಾನದ ಕಾರ್ಯದರ್ಶಿಗಳ ಕರೆಯ ಮೇರೆಗೆ ಬರುವ ಇವರುಗಳು ದೇವರನ್ನು ಹೊರಡಿಸುವಾಗ, ಮುಂಭಾಗದಲ್ಲಿ ಓಲಗದವರು, ಅವರ ಹಿಂದೆ ದೇವದಾಸಿಯರು. 'ದೀವಟಿಗೆ'ಯವರು ಹಾಗೂ ಪಲ್ಲಕ್ಕಿಯ ಎಡ, ಬಲ ಚಾಮರ ಹಿಡಿದು ಪಲ್ಲಕ್ಕಿಯಲ್ಲಿನ ದೇವರ ಉತ್ಸವ ಮೂರ್ತಿಗೆ ಬೀಸುವರು. ಹಿಂದೆ ಈ ಸಂದರ್ಭ ದೇವದಾಸಿಯರು ಹಾಡುವುದೂ ಇತ್ತು. ಸೀತೆ, ರಾಮರ ಮದುವೆ ಕಾರ್ಯಕ್ರಮ ಮರುದಿನ ದೇವರ ಉತ್ಸವ ಮೂರ್ತಿಯನ್ನು ಕೂರಿಸಿ ನಗರದಲ್ಲಿ ಸುತ್ತಿಸಿ, ಪಾದಗಟ್ಟೆಯ ಹತ್ತಿರ ಪೂಜಿಸಿಕೊಂಡು ಹೋಗುವರು. ಹೀಗೆ ಪ್ರತಿ ಕಾರ್ಯಕ್ರಮದ ಎಲ್ಲಾ ಹಂತಗಳಲ್ಲಿ ದೇವದಾಸಿಯರು ಉಪಸ್ಥಿತರಿರುತ್ತಿದ್ದರು. ರಥೋತ್ಸವದ ಮರುದಿನ 'ಬೇಟೆ ಮರ' ತರಲು ಪಕ್ಕದ ಹಳ್ಳಿಯಾದ ಅಮರ ದೇವರ

ಗುಡ್ಡಕ್ಕೆ ಹೋಗುವರು. ಅಲ್ಲಿ ಮೆರವಣಿಗೆಯೊಂದಿಗೆ. ಅಗಸನು ಹಾಸುವ ಸೀರೆಯ ಮೇಲೆಯೇ ನಡೆದು ಹೋಗಬೇಕು. ಅಲ್ಲಿ 'ಮಣೆ ತಿರುಗುವ ಆಟವನ್ನು' ದೇವದಾಸಿಯರಿಂದ ಆಡಿಸುವರು. ಹರಕೆ ಹೊತ್ತವರು ಅಂದುಕೊಂಡ, ಅಗಸ ಹಾಸಿದ ಸೀರೆಯ ಮೇಲೆ ಜಿಲೇಬಿ, ಮೈಸೂರ್‌ಪಾಕ್, ಲಡ್ಡುಉಂಡಿ, ಮಂಡಾಳು ಉಂಡೆ, ಚಕ್ಕಲಿ, ಹೀಗೆ ಒಂದೊಂದನ್ನು ದೂರ ದೂರದಲ್ಲಿ ಇಡಲಾಗುವುದು. ಹೋದ ದೇವದಾಸಿಯರು ಈ ಸೀರೆಯ ಸುತ್ತು ಮೂರು ಸುತ್ತು ಸುತ್ತಿ ದೇವದಾಸಿಯರ ಜೊತೆಗೆ ಪ್ರಥಮವಾಗಿ ದಾಸಪ್ಪನಿದ್ದು, ಆತ ಶಂಖ ಊದುತ್ತಾ ಗಂಟೆ ಬಾರಿಸುತ್ತಾ ಮುಂದೆ ಮುಂದೆ ಹೋದಂತೆಲ್ಲ ದೇವದಾಸಿಯರು ಅವನನ್ನು ಹಿಂಬಾಲಿಸುವರು. ನಂತರ ಕೆಳಗೆ ಸೀರೆಯ ಮೇಲಿಟ್ಟ ಉಂಡೆಗಳನ್ನು ಬಾಯಿಂದ ಕಚ್ಚಿ ತಿನ್ನಬೇಕು. ಹೀಗೆ ಇಟ್ಟ ಉಂಡೆಗಳು ಎಲ್ಲರ ಉಡಿ ತುಂಬಾ ತುಂಬುತ್ತಿತ್ತು. ಅನಂತರ 'ಕುಡಬಿನ ಕಾಳಗ'ವನ್ನು ಆಡುತ್ತಿದ್ದರು, ಎಲ್ಲ ಗಂಡು ಮಕ್ಕಳ ಜೊತೆ ಸೇರಿ ದೇವದಾಸಿಯರು ಪರಸ್ಪರ ತಮಗೆ ಬೇಕಾದವರಿಗೆ ಕಡುಬಿನಿಂದ ಎಸೆದಾಡುವ ಆಟವಾಡುತ್ತಿದ್ದರು. ನಗರ ಪ್ರದಕ್ಷಿಣೆಗೆ ಹೋದ ಶಿವನನ್ನು ಪಾರ್ವತಿ ಮುನಿಸಿನಿಂದ ಒಳಗೆ ಪ್ರವೇಶಿಸಲು ಬಿಡುವುದಿಲ್ಲ. ಆಗ ಪಾರ್ವತಿ ಮತ್ತು ಶಿವನ ಕಡೆಯವರಿಗೆ ಉಂಟಾದ ಕಾಳಗವನ್ನು ಇದು ಪ್ರತಿನಿಧಿಸುತ್ತದೆ. ಒಟ್ಟಿನಲ್ಲಿ ಯಾವುದೇ ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ದೇವದಾಸಿಯರ ಉಪಸ್ಥಿತಿ ಇರುತ್ತಿತ್ತು. ಅದು ಅವರಿಗೆ ಸಲ್ಲುತ್ತಿದ್ದ ಗೌರವವೆಂದು ಭಾವಿಸುತ್ತಿದ್ದರು.

**ಉಡುಗೆ ತೊಡುಗೆಗಳು**

ದೇವದಾಸಿಯರ ಉಡುಗೆ ತೊಡುಗೆಗಳು ತುಂಬಾ ಆಧುನಿಕ ರೀತಿಯಲ್ಲಿವೆ. ತಮ್ಮ ಮಕ್ಕಳಿಗೆ ವಿವಿಧ ವಿನ್ಯಾಸದ ಪ್ಯಾಂಟು, ಶರ್ಟ್. ಇತ್ಯಾದಿ ಹುಡುಗಿಯರಿಗೆ ಚೂಡಿ, ಮಿಡಿ, ನೈಟಿ ಧರಿಸುವುದು ಸಾಮಾನ್ಯವಾಗಿದೆ. ಇವರು ಸಾಮಾನ್ಯವಾಗಿ ಶೃಂಗಾರ ಪ್ರೀಯರಾಗಿದ್ದು. ಯಾವಾಗಲೂ ಹೊಸ ಮಾದರಿಯ ಬಂಗಾರದ ಆಭರಣಗಳನ್ನು, ಸೀರೆ, ಚೂಡಿ ಧರಿಸುವರು, ಅಲ್ಲದೇ ಅಲಂಕಾರ ಸಾಮಗ್ರಿಕೊಳ್ಳುವ, ಕಾಲಿಗೆ ಹೊಸ ಮಾದರಿಯ ಪಾದರಕ್ಷೆಗಳನ್ನು ಖರೀದಿಸುವಲ್ಲಿ ಅವೆರವರಲ್ಲಿಯೇ ಪೈಪೋಟಿ ಇರುತ್ತದೆ. ಮುಂಬೈ ಹಾಗೂ ಬೆಂಗಳೂರುಗಳಲ್ಲಿ ಹುಟ್ಟಿದ ಹೊಸ ಶೋಭಾಚಾರದ ಮಾದರಿಗಳೆಲ್ಲವೂ ಕೆಲವೇ ವಾರಗಳಲ್ಲಿ ಇಲ್ಲಿ ಪ್ರತ್ಯೆಕ್ಷವಾಗಿರುತ್ತವೆ. ಕೈಗೆ ಬಂಗಾರದ ಬಳೆ, ಕಾಲಿಗೆ ಗೆಜ್ಜೆ, ಕಾಲುಂಗುರ, ಕತ್ತಿಗೆ ಚಿನ್ನದ ಸರ, ಮಾಂಗಲ್ಯದ ಸರ, ಬೆರಳಿಗೆ ಉಂಗುರವನ್ನು ತೊಡುತ್ತಾರೆ. ಹಿಂದೆ ಇದ್ದ ಕೆಲ ಬಂಗಾರದ ಒಡವೆಗಳಾದ ವಂಕಿ, ಡಾಬು, ಜಡೆ ಬಂಗಾರ, ಕೆನೆಸರಪಣಿ, ಇಂತಹುಗಳೆಲ್ಲ ಈಗ ಇಲ್ಲವಾಗಿವೆ. ಇವರು ಅಲಂಕೃತರಾಗಿ ದೇವಸ್ಥಾನ, ಬಜಾರ್, ಅಥವಾ ಬಸ್‌ನಿಲ್ದಾಣಗಳಿಗೆ ಬಂದರೆ ಎಲ್ಲರ ಕಣ್ ಮನಗಳನ್ನು ಸೆಳೆಯುವುದು ಸಹಜವಾಗಿದೆ.

**ಊಟೋಪಚಾರ**

ಊಟೋಪಚಾರಕ್ಕೆ ಸಂಬಂಧಿಸಿದಂತೆ ಅನೇಕ ಆಚರಣಾ ಕ್ರಮಗಳಿರುವುದನ್ನು ಗುರುತಿಸಬಹುದಾಗಿದೆ. ಸಾಮಾನ್ಯವಾಗಿ ಇವರು ಮುದ್ರೆ ಒತ್ತಿಸಿಕೊಂಡ ಆಂಜನೇಯನ ದಿನ ಅಂದರೆ ಶನಿವಾರದಂದು ಉಪವಾಸವಿರುವುದು ವಾಡಿಕೆಯಾಗಿದೆ. ಜೊತೆಗೆ ಹಬ್ಬ ಹರಿದಿನ, ರಾಮನವಮಿಗಳಲ್ಲಿ ವಿಶೇಷವಾದ ಸಿಹಿ ಅಡುಗೆಗಳನ್ನು ಮಾಡಿ, ಬಂಧು ಬಳಗದವರನ್ನು ಆಹ್ವಾನಿಸಿ ಸತ್ಕರಿಸುವರು. ಹಬ್ಬದ ಮರುದಿನ ಕರಿ ಎಂದು ಮಾಂಸದ ಅಡುಗೆ

ಸಿದ್ಧಗೊಳಿಸುವರು. ಊಟದಲ್ಲಿ ಕುರಿ ಮಾಂಸ ಹಾಗೂ ಕೋಳಿ ಮಾಂಸವನ್ನು ಹೆಚ್ಚಾಗಿ ಬಳಸುವರು. ಇವರು ತಮ್ಮ ಆರೋಗ್ಯವನ್ನು, ಜೋಪಾನವಾಗಿ ನೋಡಿ ಕೊಳ್ಳುವ ಮೂಲಕ ಸದಾ ಯೌವನಸ್ಥೆಯರಂತೆ ಕಾಣಬೇಕೆಂದು ಎಚ್ಚರಿಕೆ ವಹಿಸುತ್ತಾರೆ. ಕೆಲವರು ಕೊಬ್ಬರಿ, ಅಂಟಿನುಂಡೆ, ಬಾದಾಮಿ, ದ್ರಾಕ್ಷಿ, ಗೋಡಂಬಿ, ತುಪ್ಪ, ಹಣ್ಣುಗಳನ್ನು ಹೆಚ್ಚಾಗಿ ಸೇವಿಸುವರು. ಜೊತೆಗೆ ಕೆಲವರು ಮಾತ್ರ ಮದ್ಯಪಾನ ಸೇವನೆ ಮಾಡುತ್ತಾರೆ. ಇದರಿಂದ ಅವರ ಸೌಂದರ್ಯ ಇಮ್ಮಡಿಗೊಂಡು, ಮೋಹಕ ಚಲುವನ್ನು ಉಳಿಸಿಕೊಳ್ಳಲು ಸಾಧ್ಯವೆಂದು ನಂಬಿದ್ದಾರೆ. ಮನೆಯ ಅಡುಗೆ ರುಚಿಸಿಲ್ಲವೆಂದರೆ, ಕೆಲವರು ಡಾಬಾಗಳಿಂದ ಊಟ ತರಿಸಿಕೊಂಡು ಮಾಡುವುದಿದೆ. ಆದರೆ ಇದು ಎಲ್ಲಾ ದೇವದಾಸಿಯರಿಗೂ ಸಾಧ್ಯವಾಗುವುದಿಲ್ಲವೆಂಬುದು ಸತ್ಯ. ವಿಶೇಷವಾಗಿ ಹೆಣ್ಣು ದೇವತೆಗಳಾದ ಯಲ್ಲಮ್ಮ, ಹುಲಿಗೆಮ್ಮ, ಗಾಳೆಮ್ಮ, ದುರುಗಮ್ಮ, ಸೊಲ್ಲಮ್ಮ, ಊರಮ್ಮ ಮುಂತಾದ ಜಾತ್ರೆಗಳನ್ನು ಬಹು ಸಂಭ್ರಮದಿಂದ ಆಚರಿಸುವರು. ಆ ಸಂದರ್ಭದಲ್ಲಿ ಬಂಧು ಬಳಗದವರನ್ನು ಸೇರಿಸಿ, ಮದ್ಯಪಾನ ಮತ್ತು ಮಾಂಸಾಹಾರದ ವ್ಯವಸ್ಥೆಯನ್ನು ಮಾಡುವುದುಂಟು.

**ಮೈನೆರೆಯುವದು**

ಹೆಣ್ಣಿನ ಜೀವನದ ಎರಡು ಮಹತ್ವದ ಘಟನಗೆಳೆಂದರೆ ಪ್ರೌಢಾವಸ್ಥೆ ಮತ್ತು ಗರ್ಭಾವಸ್ಥೆ. ಈ ಅವಧಿಯಲ್ಲಿ ಹೆಣ್ಣು ದೈಹಿಕವಾಗಿ ಮತ್ತು ಮಾನಸಿಕವಾಗಿ ಬದಲಾವಣೆಗೆ ಒಳಪಡುತ್ತಾಳೆ. ಸೃಷ್ಟಿ ಕ್ರಿಯೆಯಲ್ಲಿ ಹೆಣ್ಣು ಗಂಡಿಗಿಂತ ಭಿನ್ನ ಪಾತ್ರವಹಿಸುವುದರಿಂದ ಹೆಣ್ಣಿನ ಬದುಕಿಗೆ ಸಂಬಂಧಿಸಿದಂತೆ ಈ ಸಂದರ್ಭವನ್ನು ವಿಶಿಷ್ಟವಾಗಿ ಪರಿಗಣಿಸಲಾಗುತ್ತದೆ. ಈ ಸಂದರ್ಭ ಹಲವು ಸಂಪ್ರದಾಯಗಳನ್ನು ಆಚರಿಸಲಾಗುತ್ತದೆ.

ದೇವದಾಸಿ ಮನೆಯ ಹೆಣ್ಣುಮಗಳು ಋತುಮತಿಯಾದಳೆಂದರೆ ಆದ ಘಳಿಗೆ ಹೇಗಿದೆ ಎಂದು ಶಾಸ್ತ್ರ ಕೇಳುವುದರ ಮೂಲಕ ಬಂದ ದೋಷಗಳನ್ನು ಹಲವಾರು ಧಾರ್ಮಿಕ ಕಾರ್ಯಗಳ ಮೂಲಕ ಪರಿಹರಿಸಿಕೊಳ್ಳುತ್ತಾರೆ. ಹುಡುಗಿ ಋತುಮತಿ ಆದ ತಕ್ಷಣ ಅವಳನ್ನು ಮನೆ ಹೊರಗೆ ಕೂರಿಸಿ ಸೋದರ ಮಾವನ ಹೆಂಡತಿಯಿಂದ ತಲೆಗೆ ಎಣ್ಣೆ, ಅರಿಶಿಣದ ನೀರನ್ನು ಹಾಕಿ ಮನೆಯ ಒಂದು ಮೂಲೆಯಲ್ಲಿ ಕೂರಿಸಿ, ಅವಳು ಋತುಮತಿಯಾದ ಬಟ್ಟೆಗಳನ್ನು ಅಗಸರಿಗೆ ದಾನವಾಗಿ ಕೊಡುವರು. ಐದು, ಒಂಬತ್ತು ಅಥವಾ ಹನ್ನೊಂದನೇ ದಿನಗಳವರೆಗೆ ವಿವಿಧ ಆಚರಣೆಗಳನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಅವಳ ಎಲ್ಲಾ ಬಟ್ಟೆಗಳನ್ನು ಅಗಸರೇ ತಮ್ಮ ಬಟ್ಟೆ ಕೊಟ್ಟು ಸ್ವಚ್ಛಗೊಳಿಸಬೇಕೆಂದಿದೆ. ಇದು ಬಹು ದೊಡ್ಡ ಸೂತಕ ಎಂದು ಭಾವಿಸಿ. ಆ ವಂಶಕ್ಕೆ ಸೇರಿದ ಎಲ್ಲಾ ಮನೆಯವರೂ, ತಮ್ಮ ಮನೆಗಳನ್ನು ಸುಣ್ಣ ಬಣ್ಣಗಳಿಂದ ಶುಚಿ ಮಾಡಿ, ಸೂತಕ ಕಳೆದುಕೊಳ್ಳುತ್ತಾರೆ. ಹುಡುಗಿಗೆ ಈ ದಿನಗಳಲ್ಲಿ ಮನಸ್ಸಿಗೆ ಬಯಸಿದ ಸಿಹಿ ತಿಂಡಿಗಳನ್ನು ಬಂಧುಗಳು ತಂದು ಕೊಡುತ್ತಾರೆ. ಸಿಹಿ ತಿನಿಸುಗಳು ಹಾಲು, ಬೆಣ್ಣೆ, ತುಪ್ಪದಲ್ಲಿಯೇ ಸುಖವಾಗಿ ದಿನದಲ್ಲಿ ೩ ಹೊತ್ತು ಉಣಿಸುವರು ೫ ದಿನಗಳ ಬಳಿಕ ೯ ಅಥವಾ ೧೧ನೇ ದಿನಗಳವರೆಗೆ ದಿನಾಲೂ ಕೂರಿಸಿ ಆರತಿ ಮಾಡುತ್ತಾರೆ. ಆ ಸಂದರ್ಭ ಅವರಿಗೆ ಶಕುಂತಲೆ, ಶಾರದೆ, ಲಕ್ಷ್ಮಿ ಹೀಗೆ ವಿವಿಧ ವೇಷಗಳಿಂದ ಅಲಂಕರಿಸುವರು. ಎಲ್ಲಾ ಮುತ್ತೈದೆಯರು ಸೇರಿ ಆರತಿ ಮಾಡಿ, ಹಾಡು ಹೇಳಿ ಎಲೆ ಅಡಿಕೆ, ಹೂ ಹಣ್ಣು ಕುಂಕುಮ ತೆಗೆದುಕೊಂಡು ಹೋಗುವರು. ೯ನೇ ಅಥವಾ ೧೧ನೇ ಕೊನೆಯ ದಿನ ಅವಳಿಗೆ ಎಬ್ಬಿಸುವ ಕಾರ್ಯಕ್ರಮ ಮಾಡುತ್ತಾರೆ. ಆದಿನ ಹುಡುಗಿಗೆ ಹೊಸ ಬಟ್ಟೆಗಳಿಂದ

ಶೃಂಗರಿಸುತ್ತಾರೆ. ಮನೆಯ ಹತ್ತಿರದ ಬಾವಿಗೆ ಬಂಧುಗಳೆಲ್ಲರೂ ವಾದ್ಯ ಸಮೇತ ಹೋಗಿ ಆಕೆಯ ಕೈಯಿಂದ ಗಂಗೆಪೂಜೆ ಮಾಡಿಸುವರು. ಕೊಡವನ್ನು ತುಂಬಿಸಿ ಅದಕ್ಕೆ ಪೂಜಿಸಿ. ಅವಳ ತಲೆಯ ಮೇಲೆ ಹೊರಿಸಿ ಕರೆದುಕೊಂಡು ಬಂದು ಬಾಗಿಲಲ್ಲಿ ನಿಲ್ಲಿಸಿ ಮತ್ತೊಮ್ಮೆ ಕೊಡಕ್ಕೆ ಪೂಜೆಮಾಡಿ ಒಳಕ್ಕೆ ಕರೆದುಕೊಳ್ಳುತ್ತಾರೆ. ರುಚಿಕರವಾದ ಸಿಹಿ ತಿನುಸುಗಳನ್ನು ಮಾಡಿ ಅವಳ ಮುಂದಿರಿಸಿ, ಸಿಗಳೆ ಉಂಡೆ (ನೆನೆಹಾಕಿದ ಸಜ್ಜೆ ಎಳ್ಳು ಮತ್ತು ಬೆಲ್ಲದಿಂದ ಮಾಡಿದ್ದು) ವಿಶೇಷವಾಗಿ ಸಮಾರಂಭಕ್ಕೆ ಬಂದ ಎಲ್ಲರಿಗೂ ಹಂಚುವರು. ಬಂದವರೆಲ್ಲರೂ ತಮ್ಮದೇ ಆದ ನೆನಪಿನ ಕಾಣಿಕೆ (ಮುಯ್ಯು) ಕೊಡುವರು. ಮುತ್ತೈದೆಯರು ಆರತಿ ಬೆಳಗಿ, ನಂತರ ಬಂದ ಎಲ್ಲರಿಗೂ ಸಿಹಿ ಅಡುಗೆ ಊಟ ಬಡಿಸಿ ಕೊನೆಯಲ್ಲಿ ಮತ್ತೊಮ್ಮೆ ಆರತಿ ಮಾಡಿ ಒಳಗೆ ಕರೆದುಕೊಳ್ಳುವರು. ಈ ಸಂದರ್ಭದಲ್ಲಿ ಋತುಮತಿಯಾದ ಹುಡುಗಿ ದೈಹಿಕ ಮತ್ತು ಮಾನಸಿಕವಾಗಿ ಬಹು ಪ್ರೌಢಳಾದಂತೆ ಕಂಡು ಬರುತ್ತಾಳೆ. ಇದಾದ ಬಳಿಕ ತಿಂಗಳು ಅಥವಾ ವರ್ಷದಲ್ಲಿಯೇ ಪ್ರಸ್ಥ ಮಾಡುವ ಕಾರ್ಯ ಹಮ್ಮಿಕೊಳ್ಳುವರು.

**ನಾಮಕರಣ ಸಂಸ್ಕಾರ**

ಜೀವ ವಿಕಾಸದಲ್ಲಿ ಸಂತಾನೋತ್ಪತ್ತಿಗೆ ಅತ್ಯಂತ ಮಹತ್ವವಿದೆ. ಆರೋಗ್ಯಕರ ಸಂತಾನವನ್ನು ಸಹಜವಾಗಿಯೇ ಎಲ್ಲರೂ ಬಯಸುತ್ತಾರೆ. ಸೃಷ್ಟಿ ಕ್ರಿಯೆಗೆ ಸಿದ್ಧಳಾಗುವ ಈಕೆಯ ಆರೈಕೆಯನ್ನು ಅಜ್ಜಿ, ತಾಯಿ ನೋಡಿಕೊಳ್ಳುತ್ತಾರೆ. ಕೆಲವರು ಗರ್ಭವತಿಯಾದ ದೇವದಾಸಿಗೆ 'ಸೀಮಂತ' ಮಾಡುವ ಸಂಪ್ರದಾಯವಿದೆ. ಸಾಮಾನ್ಯವಾಗಿ ಗರ್ಭಿಣಿಯಾಗಿ ೫ ಅಥವಾ ೯ ತಿಂಗಳಲ್ಲಿ ಹೂ ಮುಡಿಸುವ ಶಾಸ್ತ್ರಮಾಡಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿಬರುವರು.

ಮಗುವಿನ ಜನನದ ಅನಂತರ ಬರುವ ಮಾಸನ್ನು ಮನೆ ಹೆಬ್ಬಾಗಿಲ ಮುಂದೆ ಅಗೆದು ಗಡಿಗೆಯಲ್ಲಿ ಹಾಕಿ ಮುಚ್ಚುವರು. ೯ ಅಥವಾ ೧೧ ನೇ ದಿನದಲ್ಲಿ ಮನೆಯನ್ನು ಮೈಲಿಗೆ ಎಂದು ಭಾವಿಸಿ, ಆ ದಿನ ಮನೆಯಲ್ಲಿ ಸುಣ್ಣ ಬಣ್ಣಗಳಿಂದ ಸ್ವಚ್ಛಗೊಳಿಸಿ, ಸಾಯಂಕಾಲ ಗಂಗಮ್ಮನ ಪೂಜೆಯನ್ನು ಐದು ಜನರಿಗಿಂತ ಹೆಚ್ಚು ಜನ ಮುತ್ತೈದೆಯರು ಸೇರಿ ಬಾವಿ ಅಥವಾ ಕೊಳವೆ ಬಾವಿ ಹತ್ತಿರ ಹೋಗಿ ಗಂಗೆ ಪೂಜೆ ಮಾಡಿಕೊಂಡು ಬರುವರು. ಅಲ್ಲಿಯತನಕ ಮನೆಯಲ್ಲಿ ಮಾಂಸದ ಅಡುಗೆ ಮಾಡುವಂತಿಲ್ಲ. ಈ ಪೂಜೆಯಾದ ಬಳಿಕ ಮಾಂಸಾಹಾರ ಸೇವಿಸಲು ಅವಕಾಶವಿದೆ. ಪುರೋಹಿತರ ಸೂಚನೆಯ ಮೇರೆಗೆ ಶುಭ ದಿನದಂದು, ಹುಟ್ಟಿದ ನಕ್ಷತ್ರಕ್ಕನುಗುಣವಾಗಿ ನಾಮಕರಣ ನೆರವೇರಿಸುವರು ಅಂದು ನೆರೆ ಹೊರೆ ಸಂಬಂಧಿಕರನ್ನೆಲ್ಲ ಆಮಂತ್ರಿಸುವರು, ತಾಯಿ, ಮಗುವಿಗೆ, ಹೊಸಬಟ್ಟೆ ಅನುಕೂಲವುಳ್ಳವರು ಚಿನ್ನದ ಆಭರಣಗಳನ್ನು ಉಡುಗೊರೆಯಾಗಿ ಕೊಡುವುದುಂಟು. ಮಗುವಿಗೆ ಸೋದರ ಅತ್ತೆಯಾದವಳು ಹೆಸರನ್ನು ಇಡುವ ರೂಢಿ. ತೊಟ್ಟಿಲಿಗೆ ಶೃಂಗಾರ ಮಾಡಿ ಪೂಜೆ ಮಾಡಿದ ಬಳಿಕ ಎಲ್ಲರಿಗೂ ಸಿಹಿ ಊಟದ ವ್ಯವಸ್ಥೆ ಇರುತ್ತದೆ.

**ಮರಣ ಸಂಸ್ಕಾರ**

ಸೃಷ್ಟಿಯ ಪ್ರತಿಯೊಂದು ಜೀವಿಗೂ ಸಾವು ಅನಿವಾರ್ಯ ಇದು. ವ್ಯಕ್ತಿಯನ್ನು ಜಗತ್ತಿನ ಸಂಬಂಧಗಳಿಂದ ಮುಕ್ತಿಗೊಳಿಸುತ್ತದೆ. ಈ ಸಂದರ್ಭ ಪ್ರತಿಯೊಂದು ಸಮುದಾಯವು ತನ್ನದೇ ಆದ ಸಂಪ್ರದಾಯವನ್ನು ಹೊಂದಿದೆ. ಇಲ್ಲಿ ದೇವದಾಸಿಯರ ಶವವನ್ನು ಹಿಂದೆ ಸುಡುವ ಸಂಪ್ರದಾಯವಿತ್ತು. ಆದರೆ ಈಗ ಹೂಳುವ

ಸಂಪ್ರದಾಯವಿದೆ. ದೇವದಾಸಿಯರು ನಿತ್ಯ ಮುತ್ತೈದೆಯರಾದ್ದರಿಂದ ಸತ್ತಮೇಲೆ ಇವರಿಗೆ ಮೋಕ್ಷ ಹೊಂದುವರೆಂದು ನಂಬಿಕೆ ಇದೆ. ಕೊನೆಯುಸಿರೆಳೆಯುವಾಗ ಬಂಧುಗಳು ಬಾಯಿಗೆ ನೀರು ಬಿಡುವರು ಬಳಿಕ ಮನೆಯ ಹೊರ ಜಗುಲಿಯ ಮೇಲೆ ಶವವನ್ನಿಡುವರು. ಬಂಧು ಬಳಗದವರೆಲ್ಲರೂ ಕೂಡಿ ಶವಸಂಸ್ಕಾರವನ್ನು ನೆರವೇರಿಸುವರು. ಸತ್ತ ಮೂರನೆಯ ದಿನದಂದು ಪ್ರಾಣ ಹೋದ ಸ್ಥಳದಲ್ಲಿ ಸ್ವಲ್ಪ ಹಳ್ಳ ತೆಗೆದು ಹೋತ ಅಥವಾ ಟಗರನ್ನು ಕಡಿದು ಅದರ ರಕ್ತವನ್ನು ಸುರಿಸಿ ಅನಂತರ ಹಳ್ಳವನ್ನು ಮುಚ್ಚುವರು. ಬಳಿಕ ಮಾಂಸದ ಅಡುಗೆಯನ್ನು ಸಿದ್ಧಪಡಿಸುವರು. ಮಾಂಸಹಾರದ ಜೊತೆಗೆ ಮೃತನು ಬಯಸುತ್ತಿದ್ದ ಆಹಾರ ಪದಾರ್ಥಗಳನ್ನು ಕೊಂಡೊಯ್ದು ಸಮಾಧಿಯ ಮೇಲೆ ಬಾಳೆ ಎಲೆಹಾಸಿ ಎಡೆ ಮಾಡುವರು. ಅದನ್ನು ಕಾಗೆಯು ಬಂದು ತಿನ್ನಬೇಕು. ಆಗ ಮೃತಳು ತನಗಿಷ್ಟವಾದುದನ್ನು ಸೇವಿಸಿ ಹೋದಳು ಎಂದು ಭಾವಿಸುತ್ತಾರೆ. ಒಂದು ಪಕ್ಷ ಕಾಗೆ ಬಂದು ಆಹಾರವನ್ನು ಸೇವಿಸದಿದ್ದರೆ ಮೃತಳಿಗೆ ಸದ್ಗತಿಯಿಲ್ಲವೆಂದು ತಿಳಿಯುವರು. ಹನ್ನೊಂದನೆಯ ದಿನದ ತಿಥಿ ಕಾರ್ಯಕ್ರಮಕ್ಕೆ ಮನೆಗೆ ಸುಣ್ಣಬಣ್ಣ ಹಚ್ಚಿ ಗೋಮೂತ್ರವನ್ನು ಪ್ರೋಕ್ಷಣೆ ಮಾಡುವರು. ತಾಮ್ರದ ಕೊಡಕ್ಕೆ ಹೊಸ ಸೀರೆ ರವಿಕೆಯನ್ನು ತೊಡಿಸಿ, ತಾಳಿಕಟ್ಟಿ ಅರಿಶಿಣ ಕುಂಕುಮ ಹಚ್ಚುವುದುಂಟು ಜೊತೆಯಲ್ಲಿ ಮೃತಳ ಛಾಯಾಚಿತ್ರ ಇತ್ತೀಚೆಗೆ ಪಟವನ್ನಿಟ್ಟು ಅದಕ್ಕೆ ಹೂ ಹಾರವನ್ನು ಹಾಕಿ ಬಂಧು ಬಳಗ ಹಾಗೂ ಬಂದಿರುವವರೆಲ್ಲ ಊದಿನಕಡ್ಡಿ ಹಚ್ಚಿ ಪೂಜಿಸುವರು. ಆನಂತರ ಎಲ್ಲರಿಗೂ ಸಿಹಿ ಊಟದ ವ್ಯವಸ್ಥೆ ಮಾಡುವರು. ಹಾಗೆಯೇ ಪ್ರತಿವರ್ಷವು ಹಿರಿಯರ ದಿನವೆಂದು ದಸರ ಹಬ್ಬದಂಗು ಎಡೆ ಹಾಕುವರು.

೫:೧೩ ಆಯ್ದ ದೇವದಾಸಿಯರ ಜೀವನ ಚಿತ್ರಣ

೧. ಬಸಮ್ಮ ವಯಸ್ಸು -೨೪.

ತಾಯಿ ದೇವದಾಸಿ, ಈಕೆಗೆ ಇಬ್ಬರು ಅಣ್ಣಂದಿರು ಒಬ್ಬ ಅಣ್ಣ ಎಂ.ಎ ಓದಿದ್ದಾನೆ. ಆದರೂ ಕೆಲಸವಿಲ್ಲದೆ ಮನೆಗೆ ಹೊರೆಯಾಗಿದ್ದಾನೆ. ಇನ್ನೊಬ್ಬ ವ್ಯವಸಾಯ ಮಾಡುತ್ತಿದ್ದು ಇದರಿಂದ ಕುಟುಂಬದ ನಿರ್ವಹಣೆಗೆ ಸಾಲದೆ ಜೊತೆಗೆ ತಾಯಿಯ ಕುಡಿತದ ಚಟದಿಂದಾಗಿ ಕುಟುಂಬದ ಸಾಲದ ಹೊರೆ ಹೆಚ್ಚಾಗಿದೆ. ಮನೆ ಬಾಳ್ವೆ ನಡೆಯುವುದು ಕಷ್ಟವಾಗಿದ್ದು, ಈಕೆಗೆ ಮದುವೆಯಾಗುವ ಬಯಕೆ ಇದ್ದರೂ ಆ ಬಗ್ಗೆ ಕನಸಿನಲ್ಲಿಯೂ ಯೋಚಿಸದಂತಹ ಪರಿಸ್ಥಿತಿ ಇದೆ. ತೀರಾ ಬಡತನದಿಂದ ೬ನೇ ತರಗತಿ ಓದಿದ್ದರೂ ಉಪವಾಸವಿರಲಾರದೆ ಮನೆ ಮಂದಿಯ ಬಯಕೆ ಮತ್ತು ಸುಖಕ್ಕಾಗಿ ದೇವದಾಸಿ ಸಂಸ್ಕಾರಕ್ಕೆ ಒಳಪಟ್ಟು ತನ್ನ ೧೨ನೇ ವಯಸ್ಸಿನಲ್ಲಿ ಸಂಸ್ಕಾರವಾಗಿ ೨ ತಿಂಗಳ ನಂತರ ಇದೇ ಊರಿನ ರಾಜಕೀಯ ದುರೀಣನಿಂದ ಕನ್ಯತ್ವ ಹೊಡೆಯುವ ಕಾರ್ಯಕ್ರಮ ನಡೆದು ಅವನಿಂದ ಪಡೆದ ೩೦ ಸಾವಿರ ರೂಪಾಯಿಗಳು ಹಾಗೂ ಪುಕ್ಕಟೆಯಾಗಿ ಕುಡಿಯುವ ಅವಕಾಶ ದೊರೆತ ಕಾರಣ ಮನೆ ಮಂದಿಯೆಲ್ಲ ಕುಡಿತದ ಚಟಕ್ಕೆ ಒಳಗಾಗಿ ಆ ವ್ಯಕ್ತಿ ಕರೆದಲ್ಲಿಗೆ ತನ್ನ ತಂಗಿಯನ್ನು ಬಿಟ್ಟು ಬರುವುದೇ ಅವರ ಕೆಲಸವಾಗಿದೆ. ಕುಟುಂಬದ ಹೊಣೆ ಸಂಪೂರ್ಣ ಇವಳೇ ಹೊತ್ತು ಸಾಲದೆನ್ನುವಂತೆ ನಾಟಕಗಳಿಗೂ ಹೋಗಲು ಪ್ರಾರಂಭಿಸಿದಳು. ಅಲ್ಲಿ ಜನಪ್ರಿಯತೆ ಗಳಿಸಿ ಇವಳನ್ನು ನೋಡಲು ಜನ ಕಾತರಿಸುತ್ತಿದ್ದರು ಬಹು ಸೌಂದರ್ಯವತಿಯಾದ ಈಕೆ ಹೆಚ್ಚು ಹಣ ಗಳಿಸಿ ಅವಳ ತಾಯಿಯ ಹತ್ತಿರ ಹಣ ಜಮ ಮಾಡಿ ಅಣ್ಣಂದಿರಿಗೆ ಹಣ ಬೇಕಾದಾಗಲೆಲ್ಲಾ ತಾಯಿಯ ಬಳಿ ಪುಸಲಾಯಿಸಿ ಹಣ ಪಡೆಯುವುದು. ಕುಡಿಯುತ್ತಾ, ತಿನ್ನುತ್ತಾ

ಐಷಾರಾಮ ಜೀವನ ನಡೆಸುತ್ತಿದ್ದಾರೆ. ಇವಳು ತನಗಾಗಿ ಏನನ್ನೂ ಮಾಡಿಸಿಕೊಳ್ಳಲಿಲ್ಲ. ಅವರುಗಳ ಸುಖದಲ್ಲೇ ನೆಮ್ಮದಿಯನ್ನು ಕಾಣುತ್ತಿದ್ದಳು. ಹೀಗಾಗಿ ಏನೇ ನಿಗಾವಹಿಸಿದರೂ ತನ್ನ ಹದಿನೈದನೇ ವಯಸ್ಸಿನಲ್ಲಿ ಈಕೆ ಗರ್ಭಧರಿಸಿದಳು. ಇದರಿಂದ ಇರಿಸು ಮುರಿಸುಗೊಂಡ ತಾಯಿ ಮತ್ತು ಅಣ್ಣತಮ್ಮಂದಿರು ನೀನೇ ಪರದೇಶಿಯಂತೆ ಪುನಃ ನಿನ್ನ ಮಕ್ಕಳನ್ನು ಪರದೇಶಿ ಮಾಡುವಿಯಾ, ನಿನ್ನನ್ನು ನೋಡಿಕೊಳ್ಳಲು ನಾವಿಲ್ಲವೇ? ಮತ್ತೆ ಮಕ್ಕಳೇಕೆ? ನಿನಗೆ ಅವು ಹುಟ್ಟಿದರೂ ಅವುಗಳನ್ನು ಸಾಕಿ ಸಲಹುವವರು ಯಾರಿದ್ದಾರೆ? ನಮ್ಮ ಕೈಯಲ್ಲಿ ಅದೆಲ್ಲಾ ಆಗುವುದಿಲ್ಲ ಎಂಬ ತಾತ್ಸಾರದ ನೋಟದಿಂದ ಆಕೆಯನ್ನು ಗರ್ಭಪಾತ ಮಾಡಿಸಿಕೊಳ್ಳಲು ಒತ್ತಾಯಿಸಿದರು ಕಾರಣ ಇವು ದುಡಿಮೆಗೆ ಅಡ್ಡಿ ಪಡಿಸುವ ಅಂಶಗಳಾಗಿರುವುದರಿಂದ ಜೊತೆಗೆ ಆಕೆಯನ್ನು ಆರೈಕೆ ಮಾಡಿ ದುಡಿಯಬೇಕಾದ ಪ್ರಸಂಗ ಬರಬಹುದೆಂಬ ಭಾವನೆಯಿಂದ ಜೊತೆಗೆ ಆಕೆ ಮತ್ತು ಮಗುವನ್ನು ತಾವೇ ಸಾಕಬೇಕಾದೀತೆಂದು ಇದೆಲ್ಲಾ ಆಗದ ಮಾತೆಂದು ಮಗುವನ್ನು ತೆಗೆಯಿಸಲು ಹಠ ಹಿಡಿದರು. ಆದರೆ ಈಕೆ ಬಹುಕಷ್ಟದಿಂದ ತನ್ನ ಮಗುವನ್ನು ಉಳಿಸಿಕೊಳ್ಳಲು ತಾನು ದುಡಿಯುವ ವೇಳೆಯಲ್ಲಿ ಚೆನ್ನಾಗಿ ಮಜ ಮಾಡಿದ ತಾಯಿ ಅಣ್ಣಂದಿರು ಆಕೆಯನ್ನು ದೂರಮಾಡಲು ಮುಂದಾದಾಗ ಆಕೆ ಬೇರೆಯಾಗಿ ಮಗುವಿಗೆ ಜನ್ಮ ನೀಡಿದಳು. ಆಕೆಯ ಆರೈಕೆಗೆ ಹಣವಿಲ್ಲದೆ ಯಾರೂ ಹತ್ತಿರ ಸುಳಿಯದ ಕಾರಣ ೨ ತಿಂಗಳಲ್ಲಿಯೇ ಮಗು ತೀರಿಹೋಗಿತು. ಮಗು ಸತ್ತ ಕೊರಗಿನಲ್ಲಿದ್ದ ಈಕೆ ಪುನಃ ಈಕೆಯನ್ನು ಕರೆದುಕೊಂಡ ತಾಯಿ ನೀನು ಹೀಗೇ ಸುಮ್ಮನೇ ಕೂತುಕೊಂಡರೆ ಹೇಗೆ ಎಂಬ ಬೈಗಳ ಸುರಿ ಮಳೆಯೊಂದಿಗೆ ಅಣ್ಣಂದಿರ ಒತ್ತಡಕ್ಕೆ ಮಣಿದು ತಾವೇ ಕರೆತಂದ ಗಿರಾಕಿಗಳ ಜೊತೆ ಪುನಃ ದಂಧೆಗೆ ಇಳಿದಳು. ಅನಿವಾರ್ಯವಾಗಿ ಒಂದು ತಿಂಗಳಲ್ಲೇ ಈಕೆಗೆ ಜ್ವರ ಶುರುವಾಗಿ ಮಾನಸಿಕ ಮತ್ತು ದೈಹಿಕವಾಗಿ ವಿಪರೀತ ನೋವಿನಿಂದ ಸಂಕಟ ಅನುಭವಿಸಿ ಬಂದ ಗಿರಾಕಿಗಳ ಜೊತೆಗೆ ತಾನು ಹೋಗುವುದಿಲ್ಲವೆಂದರೂ ಇವಳು ಬೇಕಂತನೇ ನಾಟಕ ವಾಡುತ್ತಾಳೆಂದು ಹಂಗಿಸಿ ಪುನಃ ಗಿರಾಕಿಗಳ ಜೊತೆ ಕಳುಹಿಸುತ್ತಿದ್ದರು. ಔಷದೋಪಚಾರ ಅಥವಾ ಚಿಕಿತ್ಸೆಯನ್ನು ಆಕೆಗೆ ನೀಡದೆ ಆಕೆಯ ಮೇಲೆ ಬರೀ ಸಿಟ್ಟನ್ನು ಮಾತ್ರ ತೋರ್ಪಡಿಸುತ್ತಾ ಹಿಂದೆ ತಾನು ದುಡಿಯುತ್ತಿದ್ದಾಗ ಎಷ್ಟು ಪ್ರೀತಿಯಿಂದ ನೋಡಿ ಕೊಳ್ಳುತ್ತಿದ್ದ ತಾಯಿ ಅಣ್ಣಂದಿರು ಈಗ ಕೀಳಾಗಿ ಕಾಣುತ್ತಾ ನಿನ್ನನ್ನು ದುಡಿಯುವ ಸಲುವಾಗಿಯೇ ದೇವರನ್ನು ಹೊರಿಸಿದ್ದೇವೆ. ದುಡಿಯುವುದೇ ನಿನ್ನ ಕೆಲಸವೆಂದು ಅಮಾನವೀಯವಾಗಿ ವರ್ತಿಸುತ್ತಾ ಈಗ ನೀನು ಅನುಭವಿಸುತ್ತಿರುವುದೆಲ್ಲಾ ನಿನ್ನ ಹಣೆಬರಹ ನಾವೇನೂ ಮಾಡಲು ಸಾಧ್ಯವಿಲ್ಲ. ಬಂದದ್ದನ್ನೇಲ್ಲಾ ಅನುಭವಿಸು ಎಂದು ಆಕೆಯನ್ನು ಕೊಠಡಿಯಲ್ಲಿ ಕೂಡಿ ಹಾಕಿದ್ದಾರೆ. ಆಕೆ ಈಗ ಸಂಪೂರ್ಣ ಹಾಸಿಗೆಯನ್ನು ಹಿಡಿದು ಕೊನೆ ದಿನಗಳನ್ನು ಎಣಿಸುತ್ತಿದ್ದಾರೆ. ಆಕೆಯ ಅಣ್ಣಂದಿರು ದುಡಿಮೆಯ ಅನ್ಯ ಮಾರ್ಗಗಳನ್ನು ಹುಡುಕುತ್ತಿದ್ದಾರೆ.

**೨. ಭೀಮಕ್ಕ -ವಯಸ್ಸು ೨೦.**

ಈಕೆಯ ತಂದೆತಾಯಿಗಳಿಗೆ ಇಬ್ಬರು ಮಕ್ಕಳು. ಇವಳು ಮತ್ತಿವಳ ಅಣ್ಣ. ವ್ಯವಸಾಯವೇ ಇವರ ಮುಖ್ಯ ಕಸಬು. ೩ ಎಕರೆ ಜಮೀನಿದೆ. ಒಣ ಬೇಸಾಯವಿದ್ದೂ ತಾಯಿ ಕೂಲಿಗೆ ಹೋಗಿ ಜೀವನ ಸಾಗಿಸುತ್ತಿದ್ದಾರೆ. ಅದರಲ್ಲಿಯೇ ನನಗೆ ಶಾಲೆಗೆ ಕಳುಹಿಸಿ ಓದಲು ಪ್ರೋತ್ಸಾಹಿಸಿದರು. ಕಾರಣ ಇವಳು ಬುದ್ಧಿವಂತಳು ಮುಂದೆ ನಮಗೆ ರಕ್ಷಣೆ ಕೊಟ್ಟು ಚೆನ್ನಾಗಿ ನೋಡಿಕೊಳ್ಳುತ್ತಾಳೆಂಬ ಕಾರಣಕ್ಕಾಗಿ ಮಗ ಹಿರಿಯವನಾಗಿದ್ದರೂ ತಮ್ಮನ್ನು

ಸಾಕುತ್ತಾನೆಂಬ ಭರವಸೆ ಅವರಿಗಿರಲಿಲ್ಲ. ಸೊಸೆ ಬಂದಮೇಲೆ ನಮ್ಮನ್ನು ನಿರ್ಧಾಕ್ಷಿಣ್ಯವಾಗಿ ನೋಡಿಕೊಂಡು ಹೊಡೆಯುವುದು ಬೈಯುವುದು ಮಾಡಿದ್ದರಿಂದ ಜೊತೆಗೆ ಮಗಳು ಗಂಡ ಮನೆಗೆ ಹೋದರೆ ಪಡಬಾರದ ಕಷ್ಟ ಪಡಬೇಕಾಗುವುದು, ಕೂಲಿಗೆ ಹೋಗಬೇಕು, ಗಂಡನಿಂದ ಹಿಂಸೆ ಅನುಭವಿಸಬೇಕೆಂದು ಜೊತೆಗೆ ಮದುವೆ ಮಾಡಲು ಹಣವಿಲ್ಲದ ಕಾರಣ, ಇಷ್ಟು ದಿನ ಕಷ್ಟಪಟ್ಟು ಕೀಳು ಜೀವನ ಸಾಗಿಸಿದ್ದೇವೆ ಇನ್ನಾದರೂ ಮಗಳಿಂದ ಸುಖ ಜೀವನ ಸಾಗಿಸಬಹುದೆಂದು ಮಗಳು ೭ನೇ ತರಗತಿ ಓದುತ್ತಿರುವಾಗಲೇ ದೇವದಾಸಿ ಸಂಸ್ಕಾರಕ್ಕೆ ಒಳಪಡಿಸಿದಾಗ ಅಂದು ಏನೋ ಮಾಡುತ್ತಿದ್ದಾರೆಂದು ಸಂಭ್ರಮಪಟ್ಟ ಈಕೆಗೆ ನಂತರ ತಿಳಿಯಿತು ನರಕ ಜೀವನದ ಪ್ರಾರಂಭ.

ಈ ಸಂಸ್ಕಾರವಾದರೂ, ಕಂಡ ಕಂಡ ವ್ಯಕ್ತಿಗಳನ್ನು ಕೂಡದೆ ಮೊದಲೇ ತಾಯಿಯ ಹತ್ತಿರ ತಾಕೀತು ಮಾಡಿ ಮನಸ್ಸಿಗೆ ಬಂದವರೊಡನೆ ಮಾತ್ರ ಕೂಡಿಕೊಳ್ಳುತ್ತಾ ಹೇಗೋ ಎಸ್.ಎಸ್.ಎಲ್.ಸಿ ಯ ತನಕ ಓದಿಕೊಂಡು ಖಾಸಗಿ ಸಂಸ್ಥೆಯಲ್ಲಿ ಉದ್ಯೋಗಕ್ಕೆ ಸೇರಿಕೊಂಡು ಅಲ್ಲಿ ನಿಮ್ಮ ಯಜಮಾನರ ಹೆಸರೇನು? ಎಂದು ಕೇಳುವವರ ಸಂಖ್ಯೆ ಹೆಚ್ಚಾಗಿದ್ದಕ್ಕಾಗಿ ಮೊದಲಿನಿಂದಲೂ ಪರಿಚಯವಿದ್ದ ಗೆಳೆಯನನ್ನು ಮಾಡಿಕೊಂಡು ಅವನನ್ನು ಖಾಯಂ ಗಂಡನೆಂದು ಎಲ್ಲರಿಗೂ ತೋರಿಸಲು ಶುರುಮಾಡಿದಾಗ ಅಲ್ಲಿಂದ ಅವನ ಹಣ ಸೆಳೆತ ಪ್ರಾರಂಭವಾಯಿತು. ಮನೆಯವರೊಂದು ಕಡೆಯಾದರೆ ಇನ್ನೊಂದು ಕಡೆ ಗಂಡನೆಂದು ಸಮಾಜಕ್ಕೆ ಪರಿಚಯಿಸಿದ ವ್ಯಕ್ತಿಯಿಂದ ಹಣದ ಸೆಳೆತ ಮತ್ತು ಶೋಷಣೆ ಹೀಗೆ ಜೀವನವನ್ನು ನೂಕುತ್ತಾ ಎರಡು ಹೆಣ್ಣುಮಕ್ಕಳಿಗೆ ಜನ್ಮ ಕೊಟ್ಟು ಅವು ತನ್ನಂತೆಯೇ ಆಗಬಾರದೆಂಬ ಕಾಳಜಿಯನ್ನಿಟ್ಟುಕೊಂಡು ಅವರನ್ನು ವಿದ್ಯಾವಂತರನ್ನಾಗಿ ಮಾಡಿ ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳುವಂತೆ ಮಾಡುವುದೇ ನನ್ನ ಗುರಿಯಾಗಿ ಯಾರ ಕೆಟ್ಟ ದೃಷ್ಟಿ ಅವರ ಮೇಲೆ ಬೀಳದಂತೆ ಎಚ್ಚರ ವಹಿಸುತ್ತಿದ್ದೇನೆಂದು ಹೇಳಿದಳು. ಮನೆಯವರಿಗಿಂತ ಗಂಡನೆಂದು ಸಮಾಜಕ್ಕೆ ಪರಿಚಯ ಮಾಡಿಕೊಟ್ಟವನಿಂದ ಅನುಭವಿಸಬೇಕಾದ ಹಿಂಸೆ ಹೆಚ್ಚಾಗಿದ್ದು, ಅವನಿಗೆ ಮದುವೆ ಮಾಡಿ ಸಂಸಾರ ತೂಗಿಸಲು ಬೇಕಾದ ದವಸ, ದಾನ್ಯ ಇತ್ಯಾದಿ ಬಟ್ಟೆ, ಹಣ ಎಲ್ಲವನ್ನೂ ಕೊಟ್ಟು ನೋಡಿ ಕೊಳ್ಳಬೇಕಾದುದು ನನ್ನ ಜವಾಬ್ದಾರಿಯಾಗಿದೆ. ಇಲ್ಲದಿದ್ದರೆ ಕುಡಿದು ಎಲ್ಲಿ ಬೇಕೆಂದರಲ್ಲಿ ಬಾಯಿಗೆ ಬಂದಂತೆ ಮಾತನಾಡುತ್ತಾನೆ. ಜೀವನದಲ್ಲಿ ಜಿಗುಪ್ಸೆ ಬಂದು ಈ ಜೀವನವೇ ಸಾಕೆನಿಸಿದಂತಾಗಿದೆ ಎಂಬ ತನ್ನ ಕಣ್ಣೀರಿನಿಂದ ಮನದಾಳದ ನೋವನ್ನು ತೊಡಿಕೊಂಡಳು.

**೩. ದುರುಗಮ್ಮ-೪೦ ವರ್ಷ ವಯಸ್ಸು.**

ಈಕೆಯ ತಂದೆ ತಾಯಿಗೆ ಮೂರು ಜನ ಮಕ್ಕಳು. ಈಕೆ ಹಿರಿಯ ಮಗಳು. ಒಬ್ಬ ತಮ್ಮ ಒಬ್ಬ ತಂಗಿ ಈಕೆಗೆ ವಂಶಪಾರಂಪರ್ಯವಾಗಿ ದೇವದಾಸಿ ಪದ್ಧತಿ ಇದ್ದುದರಿಂದ ಆ ಸಂಸ್ಕಾರಕ್ಕೆ ಒಳಪಡುವುದು ಅನಿವಾರ್ಯವಾಗಿತ್ತು. ಆಕೆಯ ಮನೆಯವರು ಬಡತನದಿಂದ ಗುಡಿಸಲು ಮನೆಯಲ್ಲಿ ವಾಸಿಸುತ್ತಾ ೨ ಎಕರೆ ಒಣ ಬೇಸಾಯ ಇದ್ದರೂ ಅದರಲ್ಲಿ ಜೀವನ ನಿರ್ವಹಣೆಯಾಗದೇ ಕಷ್ಟ ನೀಗಿಸಿಕೊಳ್ಳಲು ಈಕೆ ವೇಶ್ಯಾವೃತ್ತಿ ಕೈಗೊಳ್ಳುವುದು ಅನಿವಾರ್ಯವಾಗಿ ಗುಡಿಸಲನ್ನು ತೆಗೆಯಿಸಿ ಮನೆ ಕಟ್ಟಿಸಿದಳು. ತನ್ನ ತಮ್ಮನಿಗೆ ವ್ಯವಸಾಯ ಮಾಡಲು ಎತ್ತಿನ ಬಂಡಿಯನ್ನ ಕೊಡಿಸಿ ತಂಗಿಗೆ ಟಿ.ಸಿ.ಹೆಚ್ ತನಕ ಓದಿಸಿ ಅವಳನ್ನು ಟೀಚರ್ ಆಗಿ ಮಾಡಿದಳು. ಅನಂತರ

ತಮ್ಮನಿಗೆ ಮದುವೆ ಮಾಡಿ ಆತನಿಗೆ ೩ ಜನ ಮಕ್ಕಳು. ಈಕೆಗೂ ೨ ಗಂಡು ೧ ಹೆಣ್ಣು ಮಗು ಹುಟ್ಟುವ ತನಕ ಅವಿಭಕ್ತ ಕುಟುಂಬದಲ್ಲಿಯೇ ಜೀವಿಸುತ್ತಾ ಮನೆಯ ಯಜಮಾನಿಯಾಗಿ ಬರುವ ಸಮಸ್ಯೆಗಳನ್ನೆಲ್ಲಾ ಬಗೆಹರಿಸುವ ಸಲುವಾಗಿ ಹೆಚ್ಚು ದುಡಿಯುವ ಭರದಲ್ಲಿ ಪುರುಷರನ್ನು ಬದಲಿಸುವುದು ಸಹಜವಾಯಿತು. ಹೆಸರಿಗೆ ಒಬ್ಬ ಆಂಧ್ರ ವ್ಯಕ್ತಿಯನ್ನ ಖಾಯಂ ಆಗಿ ಇಟ್ಟುಕೊಂಡಿದ್ದರೂ, ಅವನಿಂದ ಬರುವ ಆದಾಯ ಬಹು ಕಡಿಮೆಯಾದಾಗ ನೀನು ಮನೆಗೆ ಬರಬೇಡವೆಂದು ತಾಕೀತು ಮಾಡಿದಳು. ಈ ಸಿಟ್ಟಿನಿಂದ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದ. ಆತನು ಒಂದು ದಿನ ಬೇಸಿಗೆಯಲ್ಲಿ ಹೊರಗೆ ಮಗುವಿನೊಂದಿಗೆ ಪರದೆ ಕಟ್ಟಿಕೊಂಡು ಮಲಗಿದ್ದನ್ನು ಖಾತರಿಪಡಿಸಿಕೊಂಡು ಆ ವ್ಯಕ್ತಿ ಆಸಿಡ್‌ನ್ನು ಕೈಯಲ್ಲಿ ಹಿಡಿದು ಮಧ್ಯರಾತ್ರಿ ಬಂದು ಪರದೆಯ ಮೇಲೆ ಎರಚಿ ಓಡಿ ಹೋಗಿದ್ದ. ಇದು ಆಕೆಯ ಕೈ ಮುಖದ ಮೇಲೆ ಬಿದ್ದು ಸುಟ್ಟುಹೋಗಿದೆ. ಈ ಗುರುತು ಈಗಲೂ ಆಕೆಯ ಕೈ ಮತ್ತು ಮುಖದ ಮೇಲೆ ಇದೆ. ಈ ಘಟನೆಯಿಂದ ಬಹುವಾಗಿ ನೊಂದು ತನ್ನ ತಂಗಿ ಉತ್ತಮ ಸಂಬಂಧ ನೋಡಿಮದುವೆ ಮಾಡಬೇಕು. ತನ್ನ ಜೀವನದಂತೆ ಆಕೆಯನ್ನು ಮಾಡಬಾರದೆದು ಪ್ರಯತ್ನಿಸಿದರೂ ಯಾರೂ ಮದುವೆ ಮಾಡಿಕೊಳ್ಳಲು ಮುಂದೆ ಬರದ ಕಾರಣ ವಯಸ್ಸಾದಂತೆ ಆಕೆಗೂ ಟೀಚರ್ ಆಗಿ ಕೆಲಸ ಮಾಡುತ್ತಿದ್ದರೂ ಅನಿವಾರ್ಯವಾಗಿ ಕೆಟ್ಟ ದಾರಿ ತುಳಿಯಬೇಕಾಯಿತು. ಕದ್ದು ಒಬ್ಬನನ್ನು ಪ್ರೀತಿಸಿ ಬಸುರಿಯಾದ ವಿಷಯ ತಿಳಿದು ಗರ್ಭಪಾತ ಮಾಡಿಸಿ ದೇವರ ಸಂಸ್ಕಾರಕ್ಕೆ ಒಳಪಡಿಸಲು ಹೇಳಿದರೆ ಆಕೆ ಇದಕ್ಕೆ ತೀವ್ರವಾಗಿ ಪ್ರತಿರೋಧ ವ್ಯಕ್ತಪಡಿಸಿದಳು. ಪುನಃ ಅದೇ ವ್ಯಕ್ತಿಗೆ ಎರಡನೇ ಸಲ ಗರ್ಭಧರಿಸಿದಾಗ ತಾಯಿ ಮತ್ತು ಅಣ್ಣ ಸಹನೆ ಕಳೆದುಕೊಂಡು ಆಕೆಯ ಕೈಕಾಲು ಕಟ್ಟಿ ಗರ್ಭಪಾತ ಮಾಡಿಸಿ, ದೇವದಾಸಿ ಸಂಸ್ಕಾರಕ್ಕೊಳಪಡಿಸಲಾಯಿತು. ದೇವದಾಸಿಯಾಗುವುದು ತಪ್ಪೆಂದು ಗೊತ್ತಿದ್ದರೂ ಪರಿಸ್ಥಿತಿಯ ಕೈಗೊಂಬೆಯಾಗಿ ಜೀವಿಸುತ್ತಾ ಪದೇ ಪದೇ ಗರ್ಭಧರಿಸಿ ತೆಗೆಯಿಸಿದ ಕಾರಣ ಆಕೆಗೆ ಮಕ್ಕಳಾಗುವುದಿಲ್ಲವೆಂದು ಡಾಕ್ಟರ್ ಹೇಳಿದ್ದಾರೆ. ಈಗ ಅಕ್ಕನ ಜೊತೆಯಲ್ಲಿ ತಾನು ಒಬ್ಬ ದೇವದಾಸಿಯಾಗಿ ಜೀವನ ಸಾಗಿಸುತ್ತಿದ್ದಾಳೆ.

**೪. ದೇವಮ್ಮ-೪೫ ವರ್ಷ.**

ತಾಯಿ ದೇವದಾಸಿ ವಂಶ ಪಾರಂಪರ್ಯವಾಗಿ ಮನೆತನದಿಂದ ಬಂದದ್ದು ದೇವದಾಸಿ ಪದ್ಧತಿಯಾಗಿದ್ದರಿಂದ ಇವರುಗಳ ಮನೆತನದಲ್ಲಿ ಪ್ರತಿ ಹಿರಿಯ ಮಗಳಿಗೆ ಖಾಯಂ ಆಗಿ ದೇವದಾಸಿ ಸಂಸ್ಕಾರ ಮಾಡುವರು. ಈಕೆಯ ತಾಯಿಗೆ ಆರು ಜನ ಮಕ್ಕಳು. ೩ ಹೆಣ್ಣು, ೩ ಗಂಡು ವಕ್ಕಳು. ಈಕೆಯ ಹಿರಿಯ ಮಗಳು. ಮನೆಯ ಬಡತನ, ಆಹಾರ, ಬಟ್ಟೆಯ ಅಭಾವದಿಂದಾಗಿ ಈಕೆಗೆ ೧೪ ವಯಸ್ಸಿನಲ್ಲಿ ದೇವದಾಸಿ ಸಂಸ್ಕಾರಕ್ಕೆ ಒಳಪಡಿಸಿದರು. ಬಹು ಸೌಂದರ್ಯವತಿಯಾದ ಈಕೆಯ ಸಂಗಕ್ಕೆ ಬಹುಜನ ಕಾದಿದ್ದು ಕನ್ಯತ್ವ ಒಡೆಯಲು ಪೈಪೋಟಿಯೂ ನಡೆದಿತ್ತು. ಈಕೆಯನ್ನು ಮದುವೆಯಾಗಲು ಸಹ ಆ ಸಮುದಾಯದ ಯುವಕರು ಕೇಳಿದ್ದರು. ಆದರೂ ತಾಯಿಯ ಹಠದ ಮೇರೆಗೆ ದೇವದಾಸಿಯಾಗಿ ಬಿಡುವಿಲ್ಲದೇ ವೇಶ್ಯಾವೃತ್ತಿಯಲ್ಲಿ ತೊಡಗುವುದು, ಬಿಡುವಿಲ್ಲದೇ ದುಡಿಯುವುದು, ಅನಿವಾರ್ಯವಾಗಿತ್ತು. ಸರಿಯಾದ ನಿದ್ದೆ, ಊಟ ಇಲ್ಲದೇ ಹಣಗಳಿಸುವ ಆಸೆಯಿಂದ, ಮನೆ ಮಂದಿಯಲ್ಲಾ ಐಶಾರಾಮದ ಜೀವನ ಕಳೆಯಲು ಕಾರಣಳಾಗಿದ್ದಳು. ಆಕೆಯ ತಾಯಿಯೇ ಹಣದ ಎಲ್ಲಾ ಜವಬ್ದಾರಿಯನ್ನು ಹೊತ್ತು, ಹೊಲ ಕೊಂಡು, ಮನೆ ರಿಪೇರಿ ಮಾಡಿಸಿ, ಒಮ್ಮೊಮ್ಮೆ ದಿನಕ್ಕೆ ೫೦೦೦ ರೂಗಳ ವರೆಗೆ ದುಡಿದದ್ದೂ

ಉಂಟು. ತನ್ನ ತಂಗಿ ಎರಡನೆಯವಳು ಚೆನ್ನಾಗಿ ಓದಿಸಿ ಕೆಲಸ ಕೊಡಿಸಿ ಮುದುವೆ ಮಾಡಬೇಕೆಂಬ ಆಸೆ ಆಕೆಯದು. ವೇಶ್ಯಾವೃತ್ತಿಯಿಂದ ಪಡಬೇಕಾದ, ಅನುಭವಿಸಬೇಕಾದ ನೋವು ಈಕೆಗೆ ಬೇಡ, ತನ್ನ ಮನೆಯಲ್ಲಿ ಇದು ತನಗೆ ಕೊನೆಯಾಗಲಿ ಎಂಬ ಉದ್ದೇಶ ಹೊಂದಿ, ಯಾವುದಕ್ಕೂ ಕೊರತೆ ಬಾರದಂತೆ ತಮ್ಮ, ತಂಗಿಯರನ್ನು ಓದಿಸಲು ತೊಡಗಿದಳು. ಅವರಿಗೆ ಏನೂ ಕಡಿಮೆ ಇಲ್ಲದಂತೆ ನೋಡಿಕೊಳ್ಳಲು ತಾಯಿಗೆ ನಿಗಾ ವಹಿಸುವಂತೆ ಹೇಳುತ್ತಿದ್ದಳು. ೯ನೇ ತರಗತಿ ಓದುತ್ತಿದ್ದ, ೨ನೇಯವಳು ತಂಗಿ ಒಬ್ಬ ಹುಡುಗನನ್ನು ಪ್ರೀತಿಸಿ, ಅವನೊಂದಿಗೆ ಓಡಿ ಹೋದಳು. ಇದರಿಂದ ಬಹು ನೊಂದ ಈಕೆ, ಪುನಃ ತಂಗಿಯನ್ನು ಮನೆಗೆ ವಾಪಸ್ಸು ಕರೆತರುವ ವ್ಯವಸ್ಥೆ ಮಾಡಿ, ಆಕೆಗೆ ಬಹು ಪರಿಪರಿಯಲ್ಲಿ ಬುದ್ಧಿ ಹೇಳಿ, ಆತ ದುಡಿಯದಿರುವ ವ್ಯಕ್ತಿ. ಪುನಃ ನಿನ್ನನ್ನು ವೇಶ್ಯಾವೃತ್ತಿಗೆ ಹಚ್ಚುವನು. ಅವನನ್ನು ಮರೆತು ಚೆನ್ನಾಗಿ ಓದು, ನೌಕರಿ ತೆಗೆದುಕೊಂಡು ಉತ್ತಮ ಜೀವನ ಸಾಗಿಸೆಂದು ಬುದ್ಧಿ ಹೇಳಿ, ಅವನಿಗೂ, ತನ್ನ ತಂಗಿಯನ್ನು ಇನ್ನೊಮ್ಮೆ ಮಾತನಾಡಿಸಿದರೆ ಚೆನ್ನಾಗಿರುವುದಿಲ್ಲವೆಂಬ ಬೆದರಿಕೆಯನ್ನು ಹಾಕಿದಳು.

ಒಮ್ಮೆ ಮನೆ ಮಂದಿಯನ್ನೆಲ್ಲಾ ಸಿನಿಮಾಕ್ಕೆಂದು ಕರೆದುಕೊಂಡು ಹೋದಾಗ, ಹೇಗೊ ಮಾಡಿ ಮನೆಯಲ್ಲಿಯೇ ಉಳಿದ ಈಕೆಯ ತಂಗಿ, ತನ್ನ ಪ್ರೇಮಿಗೆ ಮನೆಯಲ್ಲಿ ಯಾರೂ ಇಲ್ಲದ್ದನ್ನು ತಿಳಿಸಿ ಮನೆಗೆ ಕರೆಯಿಸಿಕೊಂಡು ಅವನೊಡನೆ ಮನೆಯಲ್ಲಿ ಚಕ್ಕಂದ ಆಡಲು ಶುರು ಮಾಡಿದಳು. ಸಿನಿಮಾದಿಂದ ಬಂದ ದೇವಮ್ಮ ಇದನ್ನೆಲ್ಲಾ ಕಣ್ಣಾರೆ ನೋಡಿ, ಆ ಹುಡುಗನನ್ನು ಕೈಗೆಸಿಕ್ಕ ವಸ್ತುವನ್ನು ಎತ್ತಿಕೊಂಡು ಅದರಿಂದ ತಳಿಸಿ, ಹೊರಹಾಕಿ, ತಂಗಿಯ ಸ್ಥಿತಿ ನೋಡಿ ಬಹುವಾಗಿ ನೊಂದು, ನಾನು ಏತಕ್ಕಾಗಿ ದುಡಿಯಬೇಕು? ಮನೆಯಲ್ಲಿ ಮತ್ತೊಬ್ಬಳು ವೇಶ್ಯೆಯಾಗುತ್ತಿರುವುದರಿಂದ ನಾನೇಕೆ ಜೀವಿಸಬೇಕೆಂದು ತೀರ್ಮಾನಿಸಿ ಜಿಗುಪ್ಸೆಯಿಂದ ಸೀಮೆ ಎಣ್ಣೆ ಮೈಗೆಲ್ಲ ಸುರುವಿಕೊಂಡು ಹಾಡುಹಗಲೇ ಸುಟ್ಟುಕೊಂಡು ಸತ್ತಳು. ಈಕೆಯ ಅನಂತರ ಮನೆಯ ಖರ್ಚನ್ನು ನೀಗಿಸಿಕೊಂಡು ಹೋಗಲು ಅನಿವಾರ್ಯವಾಗಿ ಈಕೆಯ ಎರಡನೇ ತಂಗಿಗೆ ಆಕೆಯ ತಾಯಿ ದೇವದಾಸಿ ಸಂಸ್ಕಾರಕ್ಕೆ ಒತ್ತಾಯಪೂರ್ವಕವಾಗಿ ತೊಡಗಿಸಿದಳು.

**೬. ಪೂರ್ಣಿಮಾ-ದೇವಮ್ಮಳ ತಂಗಿ**

ತನ್ನ ಅಕ್ಕಳ ಸಾವಿನಿಂದ ಆಘಾತಕ್ಕೊಳಗಾಗಿದ್ದರೂ, ಮನೆಯವರ ಒತ್ತಾಯಕ್ಕಾಗಿ ಅಕ್ಕ ಸತ್ತ ಎರಡು ತಿಂಗಳಲ್ಲಿ ದೇವದಾಸಿ ಸಂಸ್ಕಾರ ಮಾಡಿಸಿಕೊಂಡಳು ಈಕೆಯೂ ಬಹು ಸುಂದರಿಯಾದ ಕಾರಣ ಮಧ್ಯವರ್ತಿಗಳ ಸಹಾಯದಿಂದ ಬಹು ವಿಟ ಪುರುಷರು ಈಕೆಗೆ ಕಾಯುತ್ತಿದ್ದುದ್ದೂ ಉಂಟು. ದಿನಕ್ಕೆ ೪ ಅಥವಾ ೫ ಜನ ವಿಟ ಪುರುಷರನ್ನು ತೃಪ್ತಿ ಪಡಿಸುತ್ತಾ, ಹೋದಂತೆಲ್ಲಾ ತಾಯಿಗೆ ಬಹು ಖುಷಿ, ಮತ್ತೆ ತಮ್ಮ ಜೀವನ ಸುಖದ ಸುಪ್ಪತ್ತಿನಿಂದ ತೇಲಾಡುವಂತಾಯಿತೆಂಬ ಭರವಸೆಯಿಂದ ಬೀಗುವಂತಾಯಿತು. ಇದರಿಂದ ತನ್ನ ಸಂಬಂಧಿಕರೊಡನೆ ಸೇರಿ ತಾಯಿ ತನ್ನ ಸಹಪಾಟಿಗಳನ್ನು ಸೇರಿಸಿ, ಪ್ರತಿನಿತ್ಯ ಕುಡಿಯುವುದು, ತಿನ್ನುವುದು, ಹೆಚ್ಚಾಯಿತು. ಈ ಹಣವನ್ನು ಶೇಖರಿಸಿಡುವುದು, ಆಸ್ತಿಪಾಸ್ತಿ ಕೊಳ್ಳುವುದು, ಭವಿಷ್ಯದ ಬಗ್ಗೆ ಇವರಿಗೆ ಅಷ್ಟೊಂದು ಆಸಕ್ತಿ ಇಲ್ಲ. "ಇದ್ದರೆ ನವಾಬ ಇಲ್ಲದಿದ್ದರೆ ಪಕೀರ" ಎಂಬ ಗಾದೆಯಂತೆ ಇಲ್ಲಿನವರೆಲ್ಲಾ ಬಹುತೇಕ ಜೀವನ ನಡೆಸುವರು.

ದುಡಿಮೆಗೆ ನಿಂತು ಮೂರು ವರ್ಷಗಳ ಬಳಿಕ ಈಕೆ ಗರ್ಭಿಣಿಯಾಗಿ ಒಂದು ಗಂಡು ಮಗುವಿಗೆ ಜನ್ಮ

ಕೊಟ್ಟಳು. ಮಗನಿಗೆ ಉತ್ತಮ ಶಾಲೆಗೆ ಸೇರಿಸಿ ಯಾವುದೇ ಕೊರತೆ ಬಾರದಂತೆ ಸಾಕಿದಳು. ಕೆಲ ಪರಿಚಯದ ವಿಟ ಪುರುಷರೊಂದಿಗೆ ದೊಡ್ಡ ಪಟ್ಟಣಗಳಿಗೆ ಹೋಗುವುದು ಇಲ್ಲಿನವರಿಗೆ ಸಾಮಾನ್ಯವಾಗಿರುವಂತೆ, ಇವಳು ಸಹ ಹಾಗೆ ಹೋದಾಗಲೆಲ್ಲಾ ಮಗನಿಗಾಗಿ ಹೊಸ ನಮೂನೆಗಳ ಆಟದ ಸಾಮಾನುಗಳು, ಬಟ್ಟೆ, ಬರೆ, ತಂದು ಕೊಟ್ಟು ಆತನನ್ನು ಸಾಕುವ ಹೊಣೆಯನ್ನು ತಾಯಿಗೆ ವಹಿಸಿ, ಆಕೆ ಕೆಲ ಮಹಿಳಾ ಸಂಘಗಳಿಗೆ ಸೇರಿ, ಅದರಲ್ಲೂ ಸೃಷ್ಟಿ ಮಹಿಳಾ ಸಂಘಕ್ಕೆ ಸೇರಿ, ಅವರಲ್ಲಿ ಪ್ರಮುಖ ಸ್ಥಾನ ಪಡೆದು ಹೆಚ್ಚು ಜವಬ್ದಾರಿಯುತ ಕೆಲಸದ ಹೊರೆ ಹೊತ್ತು. ತನ್ನ ಸಹೋದ್ಯೋಗಿಗಳೊಂದಿಗೆ ನಿರೋದ್‌ಗಳ ಹಂಚಿಕೆ, ಈ ರೀತಿ ಸರಬರಾಜು ಮಾಡುವುದು. ಹಣ ಪಡೆದು ಬ್ಯಾಂಕ್‌ಗೆ ಕಟ್ಟಿ, ಮೊದಲಾದ ಸಮಾಜ ಕಾರ್ಯದ ಕೆಲಸದಲ್ಲಿ ತನ್ನನ್ನು ತೊಡಗಿಸಿಕೊಂಡಳು. ಇವಳೊಂದಿಗೆ ಸಂಬಂಧವಿಟ್ಟುಕೊಂಡಿದ್ದ ವಿಟ ಪುರುಷರಲ್ಲಿ ಒಬ್ಬರಾದ ಬಳ್ಳಾರಿಯ ಅಪರಾಧಿ ಪಟ್ಟಿಗೆ ಸೇರಿದವನೊಬ್ಬ, ಈಗಾಗಲೇ ಈ ಪ್ರವೇಶದ ಒಬ್ಬಳನ್ನು ವಂಚಿಸಿ ನಾಪತ್ತೆ ಮಾಡಿದ್ದ. ಸಂಗತಿ ಗೊತ್ತಿದ್ದೂ, ಮನೆಯವರ ಮಾತನ್ನು ತಿರಸ್ಕರಿಸಿ ಅವನ ಜೊತೆಯಾದಳು. ಒಮ್ಮೆ ಈತ ಬಳ್ಳಾರಿಗೆ ಬರಲು ಹೇಳಿದ. ಆಕೆ ತಡಮಾಡದೇ ತಾಯಿ, ತಂಗಿ ಮಗನಿಗೆ ಹೇಳದೆ, ಬಹು ಆಕರ್ಷಕವಾಗಿ ಶೃಂಗರಿಸಿಕೊಂಡು, ಒಡವೆಗಳನ್ನೆಲ್ಲಾ ಹಾಕಿಕೊಂಡು ನಾಳೆಗೆ ವಾಪಸ್ಸು ಬರುವುದಾಗಿ ಹೇಳಿ ಹೋದವಳು ಬರಲೇ ಇಲ್ಲ. ಮೂರು ದಿನಗಳ ಅನಂತರ ಬಳ್ಳಾರಿಗೆ ಹೋಗಿ ಪೋಲೀಸ್ ಠಾಣೆಯಲ್ಲಿ ವಿಚಾರಿಸಿದಾಗ, ಆತನಾಗಲೇ ಪೋಲೀಸರಿಗೆ ಶರಣಾಗಿದ್ದ, ಅಲ್ಲಿ ನಡೆದ ಕತೆಯನ್ನು ಪೋಲೀಸರು ಹೇಳಿದರು. ಆಕೆಯನ್ನು ತನ್ನ ಗೆಳೆಯರ ಜೊತೆ ಸೇರಿ, ಅವರ ವಿಕೃತ ಕಾಮಕ್ಕೆ ಆಕೆಯ ಜೀವನವನ್ನು ಬಲಿ ತೆಗೆದುಕೊಂಡು, ಆಕೆಯ ಹೆಣವನ್ನು ಸುಟ್ಟು ಹಾಕಿದ ವಿಷಯವನ್ನು ತಿಳಿಸಿದರು. ಇದನ್ನು ಪುನಃ ಬಳ್ಳಾರಿಯ ಪೋಲೀಸರು ಆಕೆಯ ಮನೆಯನ್ನು ಹುಡುಕಿಕೊಂಡು ಬಂದು, ಅವಳ ಮನೆಯವರಿಗೆಲ್ಲ ವಿಷಯ ತಿಳಿಸಿ, ಇದರಿಂದ ದಿಗ್ಭ್ರಾಂತರಾಗಿ ದಿಕ್ಕು ತೋಚದವರಂತೆ, ಆಕೆಯ ಮನೆಯವರು, ಮಗನೂ ಸೇರಿದಂತೆ ನಲುಗುತ್ತಿದ್ದಾರೆ.

**೭. ಸೀತಮ್ಮ-೫೦ ವರ್ಷ ವಯಸ್ಸು**

ವಂಶಪಾರಂಪರ್ಯವಾಗಿ ದೇವದಾಸಿ ಪದ್ಧತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಹಿಂದೆ ಬ್ರಿಟಿಷ್ ಅಧಿಕಾರಿಗಳ ಜೊತೆಯಲ್ಲಿಯೂ ಸಂಬಂಧವಿರಿಸಿಕೊಂಡಿದ್ದರು. ಇವರ ಮನೆಯ ದೇವದಾಸಿ ಹೆಣ್ಣು ಮಕ್ಕಳನ್ನು ಬ್ರಿಟಿಷ್ ಅಧಿಕಾರಿಗಳು ನಮ್ಮ ದೇಶಕ್ಕೆ ಕರೆದೊಯ್ಯುತ್ತೇವೆ. ಕಳುಹಿಸಿಕೊಡಿ ಎಂದು ಕೇಳುತ್ತಿದ್ದರಂತೆ, ಈ ಹಿನ್ನೆಲೆಯಲ್ಲಿ ಬಂದ ಸೀತಮ್ಮ ಈಕೆಯ ತಾಯಿ ದೇವದಾಸಿಯಾಗಿದ್ದು, ಸಮಾಜದ ಬಹುದೊಡ್ಡ ದೊಡ್ಡ ಗಣ್ಯ ವ್ಯಕ್ತಿಗಳೊಂದಿಗೆ ಇವರು ಸಂಬಂಧ ಹೊಂದಿದ್ದರು. ಒಬ್ಬ ಮಗ ಮತ್ತು ಒಬ್ಬ ಮಗಳು, ಹಿರಿಯವರೇ ಸೀತಮ್ಮ ೬ನೇ ತರಗತಿಯವರೆಗೆ ಓದಿದ್ದರು. ಆಕೆಯನ್ನು ನೋಡಲು ಎರಡು ಕಣ್ಣುಗಳು ಸಾಲದೆಂಬಂತಹ ಸೌಂದರ್ಯವತಿ ಅವಳಾಗಿದ್ದು, ಆಕೆಯ ಗುರುಗಳ ಹಿತವಚನಕ್ಕೆ ಕಟ್ಟುಬಿದ್ದು, ನಾನು ದೇವದಾಸಿಯಾಗುವುದಿಲ್ಲ ಎಂದು ಹಠಮಾಡಿದರೂ ಮನೆಯವರು ಕೇಳದೇ ಒಡೆದು ಬಡಿದು, ಕೊಠಡಿಯಲ್ಲಿ ಕೂಡಿಹಾಕಿ ದೇವದಾಸಿಯಾಗಲು ಒಪ್ಪುವತನಕ ಬಾಗಿಲನ್ನು ತೆಗೆಯದೇ ಬಂಧಿಸಿದ್ದರು. ಬಹು ಒತ್ತಾಯದಿಂದ ದೇವದಾಸಿ ಸಂಸ್ಕಾರಕ್ಕೆ ಒಳಪಡಿಸಿದರು. ಆ ಕೇರಿಯಲ್ಲಿ ಇವರ ಮನೆ ಎಂದರೆ ಯಜಮಾನತ್ವದಿಂದ ಕೂಡಿದ್ದೇನ್ನಬಹುದು. ಬರುವ

ಘನವಿಟಪುರುಷರೆಲ್ಲಾ ಇಲ್ಲಿಗೆ ಬಂದು, ಇಲ್ಲಿಂದ, ಸೀತಾಳ ತಾಯಿಯ ನಿರ್ದೇಶನದ ಮೇರೆಗೆ ಬೇರೆ ಬೇರೆ ಮನೆಗಳಿಗೆ ಕಳುಹಿಸಲಾಗುತ್ತಿತ್ತು ಮಗಳಿಂದ ತೋಟ, ಮನೆ, ಹೀಗೆ ದೊಡ್ಡ ಆಸ್ತಿ ಮಾಡಿದ್ದು, ರಾಜಕೀಯದಲ್ಲೂ ಮೆಂಬರ್ ಆಗಿ ಗೆದ್ದು, ಅಧಿಕಾರ ಚಲಾಯಿಸುತ್ತಿದ್ದದ್ದು ಇದೆ. ಈಕೆಯನ್ನು ಜನ ನೋಡಲು ಕಾತರಿಸುತ್ತಿದ್ದರು. ಅಷ್ಟೊಂದು ಚೆಲುವೆ ಈಕೆ. ಕೇವಲ ಬಹು ದೊಡ್ಡ ಅಧಿಕಾರಿಗಳು ಶ್ರೀಮಂತರಿಗೆ ಮಾತ್ರ ಕೈಗೆಟಕುವ ಈಕೆ. ೨ ಹೆಣ್ಣು ಮಕ್ಕಳಿಗೆ ೨ ಗಂಡು ಮಕ್ಕಳಿಗೆ ಜನ್ಮವಿತ್ತು, ಅವರಿಗೆ ವಿದ್ಯಾಭ್ಯಾಸಕ್ಕಾಗಿ, ಹೆಚ್ಚು ಒತ್ತು ನೀಡಿದಳು. ಮಗ ಒಬ್ಬ ಪಿ.ಯು.ಸಿ, ಇನ್ನೊಬ್ಬ ಎಂ.ಎ. ಓದಿಕೊಂಡಿದ್ದು, ತನ್ನ ೪೫ನೇ ವಯಸ್ಸಿನಲ್ಲಿ ಒಬ್ಬ ಶ್ರೀಮಂತ ಸರ್ಕಾರಿ ಅಧಿಕಾರಿಯನ್ನು, ಅವನಿಗೆ ಹೆಂಡತಿ, ಮಕ್ಕಳು ಇದ್ದರೂ ಈಕೆಯ ಮೋಹಕ್ಕೆ ಒಳಗಾಗಿ ಆತ ತನ್ನವರನ್ನೆಲ್ಲಾ ಬಿಟ್ಟು ಅವರನ್ನು ಲೆಕ್ಕಿಸದೇ ಈಕೆಯನ್ನು ಮದುವೆಯಾಗಿ ಹೆಂಡತಿಯ ಸ್ಥಾನಕೊಟ್ಟ. ಇದನ್ನು ತಿಳಿದ ಆತನ ಹೆಂಡತಿ ಈ ವೆಸನದಲ್ಲಿ ಸಾವನ್ನಪ್ಪಿದಳು. ಮಕ್ಕಳು ಅವನ ಮುಖ ನೋಡಲು ಆಗದೇ ಅವನಿಂದ ದೂರವಾದರು. ಈಕೆಯ ಸಂಬಂಧ ಬೆಳೆಸುವ ಮೊದಲು ಆ ವ್ಯಕ್ತಿ, ಆಳು, ಕಾಳು, ಕಾರು, ಎಂಬ ಭರ್ಜರಿ ಆಸಾಮಿಯಾಗಿದ್ದವನು. ಮೂರು ನಾಲ್ಕು ವರ್ಷಗಳಲ್ಲಿಯೇ ನಿವೃತ್ತನಾದ ಅನಂತರದ ಎರಡು ವರ್ಷಗಳಲ್ಲಿ ಎಲ್ಲವನ್ನು, ಎಲ್ಲರನ್ನು ಕಳೆದುಕೊಂಡು ತನ್ನೂರಿಗೆ ಅಥವಾ ಎಲ್ಲಿಗಾದರೂ ಹೋಗಬೇಕಾದರೆ, ಬಸ್ ಕಾಯುತ್ತಾ ನಿಂತಿರುತ್ತಾನೆ. ಸೀತಳನ್ನು ಮದುವೆಯಾಗಿ ಆಕೆಯ ಹೆಣ್ಣು ಮಕ್ಕಳಿಗೆ ಮದುವೆಮಾಡಿಕೊಟ್ಟು, ಮಗನಿಗೆ ಓದು, ಕೆಲಸವೆಂದು, ಹೀಗೆ ಹಣವೆಲ್ಲಾ ಕಳೆದುಕೊಂಡು ಬರಿಗೈಯಾದ ಕಾರಣ ಆತನನ್ನು ಈಗ ಅನಾಸಕ್ತಿ, ಅಗೌರವದಿಂದ ನಡೆಸಿಕೊಳ್ಳುತ್ತಿದ್ದಾರೆ. ಎಲ್ಲವನ್ನೂ ಕಳೆದುಕೊಂಡು ಆತನಿಗೆ ಈಗ ಜ್ಞಾನೋದಯವಾಗಿ, ದುಃಖಿಸುತ್ತಿದ್ದಾನೆ. ಕೊನೆಕಾಲದಲ್ಲಿ ಸೀತಮ್ಮ ಮಕ್ಕಳಿಂದ ದೂರವಾಗಿ ಕಾಯಿಲೆಗೆ ಬಿದ್ದು ನರಳುತ್ತಿದ್ದಾಳೆ.

**೮. ಚೌಡಮ್ಮ-೨೦ ವರ್ಷ**

ತಾಯಿ ದೇವದಾಸಿ ೫೦ ವರ್ಷ ೩ಜನ ಹೆಣ್ಣು ಮಕ್ಕಳು, ಮನೆಯ ಅಕ್ಕಪಕ್ಕದವರ ಐಷಾರಾಮದ ಬದುಕಿನ ಆಕರ್ಷಣೆಯಿಂದ ಸುಖಜೀವನಕ್ಕಾಗಿ ಹಿರಿಮಗಳನ್ನು ೧೨ನೇ ವಯಸ್ಸಿನಲ್ಲಿ ದೇವದಾಸಿಯಾಗಿ ಮಾಡಿದಳು. ತಿಳುವಳಿಕೆ ಇಲ್ಲದ ಕಾರಣ ೧೩ನೇ ವಯಸ್ಸಿನಲ್ಲಿ ಗರ್ಭಧರಿಸಿ ಗಂಡು ಮಗುವಿಗೆ ಜನ್ಮ ಕೊಡುವ ಸಂದರ್ಭದಲ್ಲಿ ವಿಪರೀತ ರಕ್ತಸ್ರಾವವಾಗಿ ಸಾವನ್ನಪ್ಪಬೇಕಾಯಿತು. ಮುಂದೆ ಮನೆಯನ್ನು ತೂಗಿಸಿಕೊಂಡು ಹೋಗುವ ಉತ್ತರಾಧಿಕಾರಿಯನ್ನಾಗಿ ೩ನೇ ಮಗಳನ್ನು ಪುನಃ ದೇವದಾಸಿಯನ್ನಾಗಿ ಮಾಡಲಾಯಿತು. ಆಕೆ ಬಹು ಪ್ರಿತಿಯಿಂದ ತನ್ನ ಅಕ್ಕಳ ಮಗುವನ್ನು ಆರೈಕೆ ಮಾಡಿ, ಜೊತೆಗೆ ತಾಯಿ ಮತ್ತು ತಂಗಿಯನ್ನು ಯಾವ ಕೊರತೆ ಇಲ್ಲದಂತೆ ನೋಡಿ ಕೊಳ್ಳತೊಡಗಿದಳು. ಮಕ್ಕಳಾದರೆ, ಮನೆಯ ಖರ್ಚಿಗೆ ಹಣ ಹೊಂದಿಸುವುದು ಕಷ್ಟವೆಂದು ಆಕೆ ಅಕ್ಕನ ಮಗನನ್ನೇ ತನ್ನ ಮಗನೆಂದು ಭಾವಿಸಿ, ಅವನ್ನನು ಚೆನ್ನಾಗಿ ಓದಿಸಲು ಉತ್ತಮ ಶಾಲೆಗೆ ಸೇರಿಸಿದಳು. ಅವನ ಪಿ.ಯು.ಸಿ. ಪ್ರಥಮ ತರಗತಿಯಲ್ಲಿ ಓದುತ್ತಿದ್ದಾಗ ಈಕೆ ಅನಾರೋಗ್ಯಕ್ಕೆ ತುತ್ತಾಗಿ HIV ಯಿಂದ ಜರ್ಜರಿತಳಾಗಿ, ಮನೆಯ ಖರ್ಚಿಗಾಗಿ ಆ ಹುಡುಗ, ಓದುವುದನ್ನು ನಿಲ್ಲಿಸಿ, ಕಿರಾಣಿ ಅಂಗಡಿಗೆ ಸೇರಿ ದುಡಿಯಲಾರಂಭಿಸಿದಳು. ಅದರಿಂದ ಅಜ್ಜಿ ಚಿಕ್ಕಮ್ಮ ಇಬ್ಬರನ್ನು ಸಾಕಲು ಪ್ರಾರಂಭಿಸಿದ. ಒಂದು ವರ್ಷ

ಅಂಗಡಿಯಲ್ಲಿದ್ದ, ಒಂದು ದಿನ ಅಂಗಡಿಯಲ್ಲಿ ಅವನ ಕಾಲಿನ ಮೇಲೆ ಕಬ್ಬಿಣ ಬಿದ್ದು, ಕಾಲು ತುಂಬಾ ನೋವಾಯಿತು. ಅವನನ್ನು ಹೋಸಪೇಟೆಯ ನೂರು ಹಾಸಿಗೆಯ ಆಸ್ಪತ್ರೆಗೆ ದಾಖಲು ಮಾಡಿ, ಬಂದರು ಇತ್ತ ಅವನ ದೊಡ್ಡ ಚಿಕ್ಕಮ್ಮ ಮರುದಿನ ತೀರಿಕೊಂಡಳು. ಈ ವಿಷಯ ಆ ಹುಡುಗನಿಗೆ ತಿಳಿಸದೇ ಮಣ್ಣು ಮಾಡಿದರು. ಇನ್ನು ಹೊಸಪೇಟೆಯಲ್ಲಿ ದಾಖಲು ಮಾಡಿದ ಹುಡುಗನನ್ನು ಹಣಕೊಟ್ಟು ಕರೆದುಕೊಂಡು ಬರಲು, ಅಕ್ಕನ ಶವಸಂಸ್ಕಾರ, ೩ ದಿನದಲ್ಲಿ ತಿಥಿ ಮಾಡಲು ಈ ಎಲ್ಲಾ ಕಾರಣಕ್ಕಾಗಿ ಕಿರಿಯಚಿಕ್ಕಮ್ಮ ೧೩ ವರ್ಷದಲ್ಲಿ ಒಬ್ಬ ಸಾಹುಕಾರನಿಗೆ ಹೆಣ್ಣು ಮಾಡುವ ಶಾಸ್ತ್ರ ಮಾಡಿ, ಅದರಿಂದ ಬಂದ ಹಣದಿಂದ ಕಾರ್ಯಗಳೆಲ್ಲ ಮುಗಿಸಿ ಆ ಹುಡುಗನನ್ನು ಕರೆತಂದು, ತಾಯಿಯನ್ನು ಸಾಕಲು ಅಕ್ಕನ ಮಗನ ಆರೈಕೆಗೆ ಅವಳು ವೇಶ್ಯೆಯಾಗಿ ದಂದೆ ನಡೆಸುವುದು ಅನಿವಾರ್ಯವಾಗಿದೆ. ಇನ್ನು ಜಗತ್ತನ್ನೇ ಅರಿಯದ ಅಸುಳೆಯ ಕಂದಮ್ಮಗಳಂತಿದ್ದ ಇವರು ಅಮಾನವೀಯ ಜಗತ್ತಿನ ದರ್ಶನ ಮಾಡಿ ಪರಿಣಾಮ ಹೃದಯ ಹೀನತೆಯಿಂದ ವರ್ತಿಸುವ ಅವಕಾಶವಿದೆ.

**೯. ಯಶೋಧಮ್ಮ ೪೫ ವರ್ಷ.**

ತಾಯಿ ದೇವದಸಾಸಿ ಇಬ್ಬರು ಮಕ್ಕಳು ಅಣ್ಣ ತಂಗಿ ಮಗಳು ಒಬ್ಬಳೇ ಆದ ಕಾರಣ ಮನೆಯಲ್ಲಿ ಬಿಡುವ ಉದ್ದೇಶ ಹೊಂದಿ, ಮಗಳು ೧೧ನೇ ವಯಸ್ಸಿನವಳಾಗಿದ್ದಾಗ ಆಕೆ ಅಕ್ಕಪಕ್ಕದ ಕಲಾವಿಧೆಯರನ್ನು ಅವರ ಥಳಕು ಬಳುಕಿ ಜೀವನ ನೋಡಿ ತಾನೂ ಕಲಾವಿದೆ ಆಗುವ ಆಸೆಯಿಂದ ತಾಯಿ ಒಪ್ಪಿಗೆ ಪಡೆದು, ಹಿರಿಯ ಕಲಾವಿದೆಯರ ಸಂಗದಲ್ಲಿ ಊರೂರುಗಳಿಗೆ ಹೋಗಿ ೧೦ ರೂ, ೧೫ ರೂ ಗಳಿಗೆ ನೃತ್ಯ ಮಾಡುತ್ತಾ ಚಿಕ್ಕ ಚಿಕ್ಕ ಪಾತ್ರಗಳಿಗೆ ಅವಕಾಶಗಿಟ್ಟಿಸಿಕೊಳ್ಳುತ್ತಾ ಹಾಡು ಹೇಳಲು ಸಂಗೀತಕ್ಕೆ ಬಳ್ಳಾರಿಯ ಮಾಸ್ತರರಲ್ಲಿ ತರಬೇತಿ ಪಡೆದು ನಾಟಕದ ಸಂಭಾಷಣೆ ಮತ್ತು ಹಾಡುವುದನ್ನು ಆತ ಕಲಿಸಿದ. ಬರಬರುತ್ತಾ ಆತ ನಿನ್ನನ್ನು ಇಷ್ಟಪಟ್ಟಿದ್ದೇನೆ. ಮದುವೆಯಾಗುತ್ತೆನೆಂದ. ಆಕೆ ನನ್ನಲ್ಲಿ ಆ ಭಾವನೆ ಇಲ್ಲ ಎಂದರೂ ಆತ ಕೇಳದೇ ಪಟ್ಟು ಹಿಡಿದ ನನ್ನನ್ನು ದೂರೀಕರಿಸಿದ. ಇದರಿಂದ ನಾಟಕಗಳಲ್ಲಿ ಅವಕಾಶಗಳಿಲ್ಲದಾಗಿ, ನಾನೇ ಮನಸೋತು ಆತನಿಗೆ ಮದುವೆಯಾಗುವ ವಿಚಾರ ಮಾಡುತ್ತಿದ್ದೆ. ಅಷ್ಟರಲ್ಲಿ ನನ್ನ ತಾಯಿ ತೀರಿಕೊಂಡರು. ಅಣ್ಣ ಅತ್ತಿಗೆ ನನ್ನನ್ನು ಸೇರುತ್ತಿರಲಿಲ್ಲ. ಹಣ ಕೊಟ್ಟಾಗ ಮಾತ್ರ ಪ್ರೀತಿಸುವುದು. ಆನಂತರ ಪುನಃ ದ್ವೇಷಿಸುವುದು ಮಾಡುತ್ತಿದ್ದರು. ಇದಕ್ಕೆ ಬೇಸತ್ತು ನಾನು ಬಳ್ಳಾರಿಯ ಸಂಗೀತ ಮಾಸ್ಟರ್‌ರಿಗೆ ಮದುವೆಯಾಗಿ ಆತನ ಜೊತೆಯಲ್ಲಿ ಬಳ್ಳಾರಿಯಲ್ಲಿದ್ದು ಆತನ ಜೊತೆ ಜೊತೆಯಾಗಿ ನಾಟಕಗಳಿಗೆ ಹೋಗುತ್ತಿದ್ದ. ಸ್ವಲ್ಪ ದಿನಗಳ ನಂತರ ಆ ಮಾಸ್ಟರ್‌ನಿಗೆ ಮದುವೆಯಾಗಿ ಮಕ್ಕಳಾಗಿದ್ದ ವಿಷಯ ತಿಳಿಯಿತು. ಹೆಂಡತಿ ಮಕ್ಕಳು ಬಳ್ಳಾರಿಯ ಹತ್ತಿರ ಹಳ್ಳಿಯಲ್ಲಿದ್ದರು. ಅವರು ನನ್ನ ಮನೆಗೆ ಬರಲು ಶುರು ಮಾಡಿದರು. ಇದರಿಂದ ಮನಸ್ಸಿಗೆ ಬೇಸರವಾಗಿ ನನ್ನ ತವರಿಗೆ ಬಂದರೆ. ಇಲ್ಲಿ ಅಣ್ಣ ವಿಪರೀತ ಕುಡಿಯುವುದನ್ನು ಕಲಿತಿದ್ದ, ಮನೆಯಲ್ಲಿನ ತಟ್ಟೆ, ಚೆಂಬುಗಳನ್ನು ಸಹ ಮಾರಿ ಕುಡಿಯುತ್ತಿದ್ದ ಇಷ್ಟು ಕೆಳ ಮಟ್ಟಕ್ಕೆ ಇಳಿದಿದ್ದನ್ನ ನೋಡಲಾಗದೇ ಪುನಃ ಬಳ್ಳಾರಿಗೆ ಹೋದೆ. ನಾಟಕ ಆಡಿ ಗಳಿಸಿದ ಅಲ್ಪಸ್ವಲ್ಪ ಹಣವನ್ನು ಬ್ಯಾಂಕ್‌ನಲ್ಲಿಟ್ಟಿದ್ದೆ. ಆತನ ಹೆಂಡತಿ ಮಕ್ಕಳ ಉಪವಾಸ ಅದಕ್ಕೆ ಇಗಕ್ಕೆ ಎಂದರೆ ಆಗಾಗ ಹಣ ಕಸಿದುಕೊಂಡು ಹೋಗುತ್ತಿದ್ದರು. ಹೀಗೆ ಸ್ವಲ್ಪ ದಿನಗಳ ಅನಂತರ ಅವನು ವಿಪರೀತವಾಗಿ ಕುಡಿಯುವುದನ್ನು

ಕಲಿತು, ನಾಟಕಗಳಿಗೆ ಹೋದಾಗ ನನ್ನ ಜೊತೆಯಲ್ಲಿ ಬಂದು ನೀನು ಅವನನ್ನು ನೋಡುತ್ತಿ ಎಂದು ಸಂಶಯದಿಂದ ಅಲ್ಲೆಲ್ಲಾ ಒಡೆದು ಬಡಿಯುವುದು ಮಾಡುತ್ತಿದ್ದ. ಇದನ್ನು ನೋಡಿ ರೋಸಿದ ಜನರು ಇನ್ನೊಮ್ಮೆ ನೀನೊಬ್ಬಳೇ ಬಂದರೆ ನಾಟಕಕ್ಕೆ ಕರೆಯುತ್ತೇವೆ. ಅವನು ಬಂದರೆ ಬೇಡ ಎಂದರು. ಅನಿವಾರ್ಯವಾಗಿ ಜೀವನ ನಿರ್ವಹಣೆಗಾಗಿ ಅವನನ್ನು ಮನೆಯಲ್ಲಿಯೇ ಬಿಟ್ಟು ಹೋಗಲು ಶುರುಮಾಡಿದೆ. ಅದನ್ನು ಸಹಿಸದೇ ಒಂದು ಹಳ್ಳಿಯಲ್ಲಿ ನಾಟಕವಿದ್ದಾಗ ಕುಡಿದು ಅಲ್ಲಿಗೆ ಬಂದು ಒಡೆದು ಅವಾಚ್ಯಶಬ್ದಗಳಿಂದ ಬೈಯಲು ಶುರು ಮಾಡಿದ. ನಾಟಕಕ್ಕೇ ಅಡ್ಡಿಪಡಿಸಲು ಯತ್ನಿಸಿದ್ದನ್ನು ನೋಡಿ ಕೋಪಗೊಂಡ ಹಳ್ಳಿಗರು ಅವನನ್ನು ಕಂಬಕ್ಕೆ ಕಟ್ಟಿ ಹೊಡೆದು ನಾಟಕ ಆಡಿಸಿ, ಬೆಳಿಗ್ಗೆ ಆ ಹಳ್ಳಿಯವರೇ ನನ್ನ ತವರೂರಿಗೆ ಬಿಟ್ಟು ಬಂದರು. ನಾನು ತವರಿಗೆ ಹೋದರೆ ಅಲ್ಲಿಗೆ ಬಂದು ಮತ್ತೆ ಪೀಡಿಸುವನೆಂದು ನನಗೆ ಪರಿಚಯವಿದ್ದ ಗಂಗಾವತಿಯ ಗೆಳತಿಯ ಜೊತೆ ಅಲ್ಲಿಗೆ ಹೋದೆ. ನಾನು ತವರಿಗೆ ಹೋಗಿರಬಹುದೆಂದು ಸಂಗೀತ ಮಾಸ್ಟರ್ ಇಲ್ಲಿಗೆ ಬಂದು, ನನ್ನ ಅಣ್ಣ ಅತ್ತಿಗೆಯನ್ನು ಕೇಳಿ ನೀವೇ ಏನೋ ಮಾಡಿದ್ದೀರಿ. ಅವಳು ಕಾಣಲಿ ಕೊಲೆ ಮಾಡುತ್ತೇನೆಂದು ಬಾಯಿ ಮಾಡಿ ಹೋದ ಸಂಗತಿ ತಿಳಿದು ಪುನಃ ನಾನು ತವರೂರಿಗೆ ಬಂದು ಸೇರಿದೆ. ಇಲ್ಲಿಯೂ ನನಗೆ ಬಹುಜನರು ಬಂದು ನಾಟಕಗಳಿಗೆ ಕರೆದೊಯ್ಯುತ್ತಿದ್ದರು. ಆಗ ನನ್ನ ಅಣ್ಣನ ವರ್ತನೆ ಮಿತಿ ಮೀರಿತು. ಕುಡಿಯುವುದು ಹೆಚ್ಚಾಗಿ ನನ್ನ ಸೀರೆಗಳನ್ನು (೫೦೦, ೩೦೦ರೂ ಬೆಲೆಬಾಳುವ ಸೀರೆಯನ್ನು) ೨೫, ೫೦ ರೂಗಳಿಗೆ ಮಾರುವುದು, ಒಡವೆ ಮಾರುವುದು, ಮನೆಯಲ್ಲಿ ಪಾತ್ರೆ, ಇತರೆ ಸಾಮಾನು ಮಾರಿ ಕುಡಿಯುವುದನ್ನು ಮುಂದುವರಿಸಿದ ಅತ್ತಿಗೆ ಯಾವಾಗಲೂ ನನ್ನ ಮೇಲೆ ಸಿಡುಕು ತೋರಿಸುತ್ತಿದ್ದಳು. ನಾನು ನಾಟಕಕ್ಕೆ ಹೋಗಬೇಕಾದ ಊರಿಗೆ ಅಣ್ಣ ಮೊದಲೇ ಹೋಗಿ ಯಶೋಧಗೆ ಆರಾಮಿಲ್ಲ. ತೋರಿಸಲು ಹಣ ಬೇಕೆಂದು ನಾಟಕಕ್ಕೆ ಮುಂಚೆ ಹಣ ಪಡೆದು ಕೊಳ್ಳುತ್ತಿದ್ದ. ಇದನ್ನು ಸಹಿಸದೇ ಕೇಳಿದಾಗ ನನ್ನನ್ನು ಹೊಡೆದು ಅಶ್ಲೀಲವಾಗಿ ಬೈಯುತ್ತಿದ್ದ. ಜೀವನದಲ್ಲಿ ಪ್ರೀತಿ, ಪ್ರೇಮ ವಾತ್ಸಲ್ಯಗಳಿಲ್ಲದೇ, ಬೇಸತ್ತು ಒಂದು ನಿರ್ಧಾರಕ್ಕೆ ಬಂದು ಊರ ಹೊರಗಿನ ಬಾವಿಗೆ ಹಾರಲು ರಾತ್ರಿ ಹೋದೆ. ಪರಿಚಯವಿದ್ದ ಲಿಂಗಾಯತ ಅವಿವಾಹಿತ ವ್ಯಕ್ತಿ ನನ್ನನ್ನು ತಡೆದು ಮನೆಗೆ ಕರೆತಂದು ಅಣ್ಣ ಅತ್ತಿಗೆಗೆ ಬೈದು ಪುನಃ ಆತನ ಜೊತೆಯಲ್ಲಿ ನನ್ನನ್ನು ಕರೆದೊಯ್ದು ಬೇರೆ ಮನೆಮಾಡಿ ಇಟ್ಟು ಅವನೇ ಗಂಡನಾಗಿ ನೋಡಿಕೊಂಡ. ಸುಮಾರು ೬ ವರ್ಷಗಳಾಗಿರಬಹುದು. ಆತನಲ್ಲಿ ಸ್ವಲ್ಪ ಸುಖ ಕಂಡೆ. ಆದರೆ ಮಕ್ಕಳಾಗಲಿಲ್ಲ. ಒಂದು ರಾತ್ರಿ ನನಗೆ ತಲೆನೋವಾಗಿದೆ ಎಂದು ಹೇಳಿದಾಗ, ಆತ ಗುಳಿಗೆ ತರಲು ಹೋದವನು ತಿರುಗಿ ಬರಲೇ ಇಲ್ಲ. ಬಜಾರ್‌ನಲ್ಲಿ ಗುಳಿಗೆ ತೆಗೆದುಕೊಂಡು ಬರುತ್ತಿದ್ದಾಗ, ಎದೆ ನೋವು ಕಾಣಿಸಿಕೊಂಡು ನೆಲದ ಮೇಲೆ ಬಿದ್ದು ಹೊರಳಾಡಿ ಪ್ರಾಣ ಬಿಟ್ಟನಂತೆ. ಆಗ ಆತನ ಅಕ್ಕ, ತಮ್ಮಂದಿರು ಅಣ್ಣ ಬಂದು ಶವ ತೆಗೆದುಕೊಂಡು ಹೋದರೆಂದರು. ನನಗೆ ದುಃಖ ತಡೆಯಲಾಗಲಿಲ್ಲ. ಅಣ್ಣನ ಹತ್ತಿರ ಬಂದರೆ, ನಮ್ಮ ಮನೆಗೆ ಬೀಗ ಹಾಕಿ, ಅತ್ತಿಗೆ ತನ್ನ ಮಕ್ಕಳ ಜೊತೆ ತವರಿಗೆ ಸೇರಿದ್ದಾಳೆ. ಅಣ್ಣನೂ ನಂತರ ಹೋದನೆಂದು ಅಲ್ಲಿಯವರು ಹೇಳಿದರು ಈಗ ನಾನು ಆ ಮನೆಯ ಬೀಗ ತೆಗೆದು ಇಲ್ಲಿಯ ಒಬ್ಬಂಟಿಗಳಾಗಿ ವಾಸಿಸುತ್ತಿದ್ದೇವೆ. ತಾಯಿ ಮಾಡಿದ ಹೊಲ ೪ ಎಕರೆ ವ್ಯವಸಾಯ ಮಾಡಿಸಲು ಹಣವಿಲ್ಲದೇ ಬೀಳು ಬಿಟ್ಟು, ಅವರಿವರು ಹೇಳಿದ ಕೆಲಸ ಮಾಡುತ್ತಾ ಬಂದಿದ್ದವರಲ್ಲಿ ಅಷ್ಟಿಷ್ಟು ಮಾಡಿಕೊಂಡು ಜೀವಿಸುತ್ತಿದ್ದೇನೆ. ಇಂತಹ ಜೀವನ ಯಾವ ವೈರಿಗೂ ಬೇಡ ಎನ್ನುವುದು ನನ್ನ ಆಶಯ ಎಂದು ಹೇಳುತ್ತಾಳೆ.

೧೦. ತುಳಸಿ-ವಯಸ್ಸು ೩೦

ದೇವದಾಸಿಯಾಗಿ ಸಿಕ್ಕಾಪಟ್ಟೆ ದುಡಿಮೆಯಲ್ಲಿ ತೊಡಗಿದಳು. ತಂದೆ ತಾಯಿಗಳಿಲ್ಲ. ತಮ್ಮಂದಿರಿಬ್ಬರೇ ಇದ್ದರು ಅವಳಿಂದ ಹಣ ಪಡೆದು ಕುಡಿಯುವುದನ್ನು ಕಲಿತು ಯಾವಾಗಲೂ ಕುಡಿದಿರುವುದೇ ಅವರ ಕೆಲಸ. ಹಿರಿಯ ತಮ್ಮನಿಗೆ ಮದುವೆ ಮಾಡಿದಳು. ಹೆಂಡತಿ ಅವನ ಜೊತೆ ಜೀವಿಸಲಾರದೇ ತವರಿಗೆ ಹೋಗಿ ಸೇರಿದಳು. ಅವನು ವಿಪರೀತ ಕುಡಿದು ಹುಚ್ಚನಂತೆ ಮಾನಸಿಕ ಅಸ್ವಸ್ತನಾಗಿ ತಿರುಗಲಾರಂಭಿಸಿದ. ಇನ್ನೊಬ್ಬ ದೇಶಾಂತರ ಹೋದ. ಇವರ ವ್ಯಸನದಲ್ಲಿ ಜೀವನ ನಿರ್ವಹಣೆಗಾಗಿ ಕಂಡ ಕಂಡ ಗಂಡಸರ ಜೊತೆಯಲ್ಲಿ ಕೂಡುವುದು ಕುಡಿಯುವುದು, ಮಾಡಲಾರಂಭಿಸಿದಳು ಆಕೆಗೆ ಬಟ್ಟೆಗಳ ಮೇಲೆಯೂ ಎಚ್ಚರಿಕೆ ಇರುತ್ತಿರಲಿಲ್ಲ. ಕೆಲವು ಸಲ ಬೀಟ ಬಳಿಯಲ್ಲಿ ಬೀಳುತ್ತಿದ್ದದ್ದೂ ಉಂಟು. ಎಚ್ಚರವಾದಾಗ ಮನೆಗೆ ಹೋಗುವುದು ಸಾಮಾನ್ಯವಾಗಿತ್ತು. ಒಂದು ದಿನ ಸಿನಿಮಾಕ್ಕೆ ಎಂದು ಹೋದವಳು ಅಲ್ಲಿಂದ ಒಬ್ಬ ಗಂಡು ಮಗನ ಹಿಂದೆ ರಾಷ್ಟ್ರೀಯ ಹೆದ್ದಾರಿಗೆ ಹೋಗಿ ಅವನ ಜೊತೆ ಕೂಡಿಕೊಂಡು ವಿಪರೀತ ಕುಡಿದು ಅಲ್ಲಿಯೇ ಬಿದ್ದಳಂತೆ, ಆ ರಸ್ತೆಯಲ್ಲಿ ಹೋಗೋ, ಬರೋ ಸಿಖ್ ಲಾರಿ ಡ್ರೈವರ್, ಕ್ಲೀನರ್‌ಗಳು ಆಕೆಯ ಮೇಲೆ ಅತ್ಯಾಚಾರ ಎಸಗಿ, ಬೆಳಗಿನ ಜಾವದಲ್ಲಿ ಒಬ್ಬ ಲಾರಿಯವನು ಆಕೆಯ ಮೇಲೆಯೇ ಲಾರಿ ಹೊಡೆದು ಹೋಗಿಬಿಟ್ಟಿದ್ದ. ಬೆಳಿಗ್ಗೇ ರಸ್ತೆ ಬದಿ ಓಡಾಡುವ ಜನ ನೋಡಿ ಪೋಲೀಸರಿಗೆ ತಿಳಿಸಿದರು. ಆಕೆಯ ಶವಸಂಸ್ಕಾರ ಮಾಡಲು ಯಾರೂ ಮುಂದೆ ಬರದಿದ್ದಾಗ, ಕೊನೆಗೆ ಪೋಲೀಸರು ಆ ವ್ಯವಸ್ಥೆಯನ್ನು ಮಾಡಬೇಕಾಯಿತು. ಹೀಗೆ ದೇವದಾಸಿಯಾದ್ದರಿಂದ ಆಕೆ ಧಾರಣವಾದ ಸಾವನ್ನು ಸಾಯಬೇಕಾಯ್ತು.

೧೧. ಸಾವಿತ್ರಿ-ವಯಸ್ಸು ೩೫

ಬಹು ಶ್ರೀಮಂತಳು, ಅವಿಭಕ್ತ ಕುಟುಂಬದಲ್ಲಿದ್ದು, ಒಬ್ಬ ಬಳ್ಳಾರಿ ಕಡೆಯ ಹಳ್ಳಿಯವ ರೆಡ್ಡಿಯವನು ಆಕೆಗೆ ೩೦ ತೊಲೆ ಬಂಗಾರವನ್ನು ಮೈಮೇಲೆ ಮಾಡಿಸಿ ಹಾಕಿದ್ದ. ಬಹು ಶ್ರೀಮಂತಿಕೆಯ ಜೀವನ ನಡೆಸಿದ ಈಕೆ, ಅವಿಭಕ್ತ ಕುಟುಂಬದಲ್ಲಿ ಜಗಳವಾಗಿ ಎಲ್ಲರೂ ಬೇರೆ ಬೇರೆಯಾದರು. ಈಕೆ ತನ್ನ ನಾಲ್ಕು ಜನ ಮಕ್ಕಳಲ್ಲಿ ೩ ಗಂಡು ೧ ಹೆಣ್ಣು ಹುಡುಗಿಯನ್ನು ಕರೆದುಕೊಂಡು ಇಲ್ಲಿಯತನಕ ಆಕೆ ಗಳಿಸಿದ್ದು ಆಸ್ತಿಯ ಹಂಚಿಕೆಯಲ್ಲಿ ಎಲ್ಲರೂ ಪಡೆದುಕೊಂಡಿದ್ದು ಈಕೆಗೆ ಬಹು ಕಡಿಮೆ ಆಸ್ತಿ ಬಂದಿತು. ಕಾರಣ ನೀನು ಮುಂದೆ ಹೆಚ್ಚು ಗಳಿಸುತ್ತೀಯ, ಇವರು ಏನು ಇಲ್ಲ ಎಂದು ಹಿರಿಯರು ಈಕೆ ವಿಷಯದಲ್ಲಿ ತಾರತಮ್ಯ ಮಾಡಿದ್ದರು. ಹೋಗಲಿ ಬಿಡೆಂದು ಈಕೆ ರೆಡ್ಡಿಯನ್ನು ನಂಬಿಕೊಂಡಿದ್ದಳು. ಆ ಸಮಯದಲ್ಲಿಯೇ ರೆಡ್ಡಿಯ ಸಾವು ಆಕೆಗೆ ಗರಬಡಿದಂತೆ ಮಾಡಿತು. ಮುಂದಿನ ಜೀವನಕ್ಕಾಗಿ ಆಕೆ ಅನಿವಾರ್ಯವಾಗಿ ನಾಟಕ ರಂಗದತ್ತ ತನ್ನ ಗಮನ ಹರಿಸುವಂತಾಗಿ, ನಾಟಕಗಳಿಗೆ ಹೋಗಲು ಶುರು ಮಾಡಿದರು. ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವವರಿಲ್ಲವೆಂದು ಜೊತೆಯಲ್ಲಿಯೇ ಕರೆದೊಯ್ಯಲು ಪ್ರಾರಂಭಿಸಿದಳು. ಹೋದ ಸ್ಥಳಗಳಲ್ಲಿ ಕೆಲ ಗಂಡಸರು ಆಕೆಯ ಮನ ಒಲಿಸಿ, ಅಷ್ಟಿಷ್ಟು ಹಣ ನೀಡಿ ಕುಡಿತದ ಅಭ್ಯಾಸವಿದ್ದ ಈಕೆಗೆ ಎಚ್ಚರವಿಲ್ಲದಷ್ಟು ಕುಡಿಸಿ ಯಾವುದಾದರೊಂದು ಮನೆಯಲ್ಲಿ ಆಕೆಯನ್ನು ಕರೆದೊಯ್ದು ಮಕ್ಕಳಿಗೆ ತಿನ್ನಲು ಬಿಸ್ಕೇಟ್, ಅದು ಇದು ಕೊಟ್ಟು ೫, ೧೦ ಜನ ಆಕೆಯ ಮೇಲೆ ಅತ್ಯಾಚಾರ ಮಾಡಿದ್ದಿದೆ. ಮಕ್ಕಳು ತಾಯಿ ಹತ್ತಿರ ಬರದಂತೆ ಅವರನ್ನು ಕಾಯಲು ಒಬ್ಬನನ್ನು

ಬಿಡುತ್ತಿದ್ದರು. ಪುನಃ ಆಕೆಗೆ ಎಚ್ಚರವಾದಾಗ ಮಕ್ಕಳನ್ನು ಕರೆದುಕೊಂಡು ಬರುವುದು. ಬಹು ಅಸ್ತವ್ಯಸ್ಥ ಜೀವನ ನಡೆಸುವುದು. ಮಕ್ಕಳು ಪರದೇಶಿಗಳಂತಾಗಿದ್ದರು. ಪುನಃ ಆಕೆಯ ಸಂಬಂಧಿಕರು ಆ ಮಕ್ಕಳನ್ನು ಸಾಕಲು ಪ್ರಾರಂಭಿಸಿದ್ದಾರೆ. ಆಕೆಯು ಈಗ ಕಾಯಿಲೆಯಿಂದ ನರಳುತ್ತಿದ್ದು, ಬಹು ಹೀನಾಯ ಸ್ಥಿತಿಯಲ್ಲಿ ಬದುಕುತ್ತಿದ್ದಾಳೆ.

**೧೨. ಬಸಮ್ಮ-೬೦ ವರ್ಷ ವಯಸ್ಸು.**

ಈಕೆಗೆ ೬ಜನ ಮಕ್ಕಳು ೩ ಗಂಡು ೩ ಹೆಣ್ಣು. ದೊಡ್ಡ ಮಗಳಿಗೆ ರಶ್ಮಿ ೧೩ ವರ್ಷ ವಯಸ್ಸು. ದೇವರನ್ನು ಹೊರಿಸಿದ್ದಾರೆ. ಮೊದಲಿದ್ದ ಗುಡಿಸಲು ಮನೆ ಹೋಗಿ ಮಾಳಿಗೆಯ ಮನೆ ಕಟ್ಟಿಸಿದ್ದಳು. ತಂಗಿಯರಿಗೆ ಶಾಲೆಗೆ ಓದಲು ಕಳುಹಿಸಿದರು. ಆಸ್ತಿ ಕೊಂಡು ೮ ಎಕರೆ ಹೊಲ ಅದರಲ್ಲಿ ೩ ಜನ ತಮ್ಮಂದಿರಿಗೆ ವ್ಯವಸಾಯಕ್ಕೆ ಬೇಕಾಗುವ ಎಲ್ಲಾ ಎತ್ತು ಬಂಡಿ ಸಾಮಗ್ರಿಗಳನ್ನು ಕೊಡಿಸಿದಳು. ಅವರಿಗೆ ಮದುವೆಯನ್ನು ಮಾಡಿದಳು. ಎಲ್ಲರೂ ಒಂದೇ ಮನೆಯಲ್ಲಿ ಒಟ್ಟಿಗೆ ಇದ್ದರು. ನೋಡಲು ಸುಂದರವಾಗಿದ್ದ ಈಕೆಗೆ ಆಂಧ್ರ ಕಡೆಯಿಂದ ಬಹು ಶ್ರೀಮಂತ ಕುಳಗಳ ಸಂಬಂಧ ಹೊಂದಿ, ಅವರಿಂದ ಒಡವೆಗಳನ್ನು, ಒಮ್ಮೆ ಉಟ್ಟ ಸೀರೆ ಮತ್ತೆ ಸೇರುವುದು ಕಷ್ಟ. ರಸ್ತೆಗೆ ಬಂದರೆ, ಎಲ್ಲರ ಕಣ್ಣು ಅವಳ ಮೇಲೆಯೇ ಇರುತ್ತಿತ್ತು. ಆಕೆಗೆ ಒಬ್ಬ ಗಂಡು ಮಗುವಾಯ್ತು. ಆದರೆ ಇದ್ದಕ್ಕಿದ್ದಂತೆ ಆಕೆಗೆ ಕಾಯಿಲೆ ಬಂತು ಅದರಿಂದ ಗುಣಮುಖಳಾಗಲು ಆಕೆ ಗಳಿಸಿದ್ದ ಎಲ್ಲಾ ಹಣ ಒಡವೆಯನ್ನು ಕಳೆದುಕೊಂಡರೂ ಗುಣವಾಗದೇ ತನ್ನ ೩೫ನೇ ವಯಸ್ಸಿನಲ್ಲಿ ಕೊನೆಯುಸಿರೆಳೆದಳು. ಈ ಒತ್ತಿಗಾಗಲೇ ಆಕೆಯ ತಮ್ಮಂದಿರು ೩ ಜನ ಮದುವೆಯಾಗಿ ಮಕ್ಕಳಾಗಿದ್ದರೂ, ಹೊಲದಲ್ಲಿ ಅಷ್ಟಕ್ಕಷ್ಟೇ ಜವಬ್ದಾರಿ ಇಲ್ಲದೇ ಕೆಲಸ ಮಾಡುತ್ತಿದ್ದ ಪರಿಣಾಮ ಅದನ್ನೇ ನೆಚ್ಚಿ ಜೀವಿಸುವುದು ಕಷ್ಟವಾಯ್ತು. ಅದಲ್ಲದೇ ದಿನಂಪ್ರತಿ ಮನೆಗೆ ಬರುವ ವ್ಯಕ್ತಿಯಿಂದ ಸಿಗುತ್ತಿದ್ದ ಪುಕ್ಕಟೆಯ ಕುಡಿತ, ರುಚಿ ರುಚಿಯಾದ ಊಟ, ಇವುಗಳಿಂದ ಅವರು ಸಂಪೂರ್ಣ ಸೋಮಾರಿಗಳಾಗಿ ದುಡಿಯಲಾಗದವರಂತೆ ತಮ್ಮ ೨ನೇ ತಂಗಿಯನ್ನು ದೇವದಾಸಿ ಸಂಸ್ಕಾರಕ್ಕೆ ಒಳಪಡಿಸಲು ತಾಯಿಯೂ ಅವರ ಜೊತೆ ಸೇರಿ ಒತ್ತಾಯ ಪಡಿಸಿದ್ದಕ್ಕಾಗಿ ಈಕೆ ೯ನೇ ತರಗತಿ ಓದಿದ್ದರೂ ಪರಿಸ್ಥಿತಿಯ ಅನಿವಾರ್ಯತೆಗೆ ಒಪ್ಪಿಕೊಂಡಳು.

**೧೩. ಕಮಲ - ವಯಸ್ಸು ೩೦ ವರ್ಷ**

೧೫ನೇ ವಯಸ್ಸಿನಲ್ಲಿ ಈಕೆಗೆ ದೇವದಾಸಿ ಸಂಸ್ಕಾರ ಮಾಡಿದರು. ದಾವಣಗೆರೆಯ ಆಗರ್ಭ ಶ್ರೀಮಂತ ಈಕೆಗೆ ೫೦,೦೦೦ ರೂ ಕೊಟ್ಟು ಹೆಣ್ಣು ಮಾಡಿದ. ಪುನಃ ಅವರ ಮನೆಯಲ್ಲಿ ಐಶ್ವರ್ಯ ಲಕ್ಷ್ಮಿಯ ಕುಣಿತ ಶುರುವಾಯ್ತು. ಇದು ಬಹುಕಾಲದಲ್ಲಿಯೇ ಆಕೆಯ ಅಣ್ಣಂದಿರು ಹೆಂಡತಿ ಮಕ್ಕಳಿದ್ದರೂ, ಜವಬ್ದಾರಿ ಮರೆತು ಕುಡಿದು ಬೀಳುವುದನ್ನು ಈಕೆ ಸಹಿಸದೇ ಅವರಿಂದ ದೂರು ಹೋಗಬೇಕೆಂದು ಹೆಣ್ಣು ಮಾಡಿದವನ ಹಿಂದೆ ದಾವಣಗೆರೆಗೆ ಹೋಗಿ ಅವನ ಜೊತೆಯಲ್ಲಿಯೇ ಒಂದು ಬೇರೆ ಮನೆ ಬಾಡಿಗೆಗೆ ತೆಗೆದುಕೊಂಡು ೨ನೇ ಪತ್ನಿಯಂತೆ ಇರಲು ಪ್ರಾರಂಭಿಸಿದಳು. ಆತನಿಗೆ ಬೇರೆ ಸಂಸಾರ ಇದ್ದರೂ ಈಕೆಗೆ ಯಾವ ಕೊರತೆ ಇಲ್ಲದಂತೆ ಸಾಕುತ್ತಿದ್ದ ಇವಳಿಗೆ ಇಬ್ಬರು ಹೆಣ್ಣು ಮಕ್ಕಳಾದವು. ಆಕೆ ಅಲ್ಲಿಗೆ ಹೋಗಿ ೪ ವರ್ಷಗಳಲ್ಲಿಯೇ ಆತ ಆಕ್ಸಿಡೆಂಟ್ ಆಗಿ ತನ್ನ ಎರಡೂ ಕಾಲುಗಳನ್ನು ಕಳೆದುಕೊಂಡ. ಅವನನ್ನು ಆತನ ಹೆಂಡತಿ ಮಕ್ಕಳು ತಮ್ಮ ಆರೈಕೆಯಲ್ಲಿ ಇಟ್ಟುಕೊಂಡರು. ಮುಂದಿನ ದಾರಿ ಕಾಣದೇ ಪುನಃ ಆಕೆ ತನ್ನ ತವರಿಗೆ ಬಂದಳು. ಇಲ್ಲಿಗೆ ಬಂದರೂ, ತನ್ನ ಅಮ್ಮ

ಅಣ್ಣಂದಿರ ಹತ್ತಿರ ಹೋಗದೇ ಬೇರೆ ಮನೆ ಮಾಡಿ ಜೀವಿಸಲು ಪ್ರಾರಂಭಿಸಿದಳು. ಒಂದು ಮನೆಯನ್ನು ಕೊಂಡುಕೊಂಡು ಕೆಲ ವ್ಯಕ್ತಿಗಳ ಸಂಪರ್ಕದಲ್ಲಿ ಜೀವನ ಮಾಡಲಾರಂಭಿಸಿದಳು. ಹಿರಿಯ ಮಗಳು ಈಗ ೮ನೇ ತರಗತಿ ಓದುತ್ತಿದ್ದಾಳೆ. ಕಿರಿಯ ಮಗಳು ಈಗ ೬ನೇ ತರಗತಿ ಓದುತ್ತಿದ್ದಾಳೆ. ಇತ್ತೀಚೆಗೆ ಕಮಲಾಗೆ ಜ್ವರ ಬರಲಾರಂಭಿಸಿದ್ದವು ತೋರಿಸಿಕೊಂಡಾಗ HIV ಸೋಂಕು ತಗಲಿದ ವಿಷಯ ತಿಳಿದು ಬಹು ನೊಂದು, ಗಳಿಸಿದ್ದೆಲ್ಲಾ ಆಸ್ಪತ್ರೆಗೆ ಖರ್ಜಾಗಿದೆ. ಆಕೆಯ ಅಣ್ಣಂದಿರು ಇಬ್ಬರು ಕುಡಿದು ಕುಡಿದು ತೀರಿಹೋದರು. ಇನ್ನೇನು ಆಗೋ ಹೀಗೋ ಎನ್ನುವಂತಿದ್ದಾಳೆ. ಊಟ ಮಾಡಲೂ ಗತಿ ಇಲ್ಲದಂತಾದ ಪರಿಸ್ಥಿತಿ ಅನಿವಾರ್ಯವಾಗಿ ಆಕೆಯ ಮಮತಾ ೧೨ ವರ್ಷದ ಮಗಳಿಗೆ ನಾಟಕ ಆಡಲು ಕಳುಹಿಸುತ್ತಿದ್ದಾಳೆ. ಅಷ್ಟು ಚಿಕ್ಕ ಹುಡುಗಿ ನಾಟಕ ಆಡಲು ಹೋಗಿ ರಣ ಹದ್ದುಗಳ ಕೈಗೆ ಸಿಕ್ಕು, ನಲುಗಿ ತನ್ನ ತಾಯಿ ತಂಗಿಗೋಸ್ಕರ ಹಾಗೆಯೇ ಜೀವನ ಮುಂದೂಡುತ್ತಿದ್ದಾಳೆ. ಕುಣಿದು ನಲಿದು ಹಾಡಬೇಕಾದ ವಯಸ್ಸಿನಲ್ಲಿ, ಕಾಯಿಲೆಗೆ ಬಿದ್ದ ತಾಯಿ, ತಂಗಿಯನ್ನು ನೋಡಿಕೊಳ್ಳುವುದುಕ್ಕಾಗಿ, ಬಿಡುವಿಲ್ಲದೇ ದುಡಿಯುತ್ತಿದ್ದಾಳೆ. ಹಾಲಿ ಈಗ ನಾಟಕಗಳಿಗೆ ಹೋಗುತ್ತಿದ್ದಾಳೆ.

**೧೪. ರತ್ನಮ್ಮ-ವಯಸ್ಸು ೪೫ ವರ್ಷ**

ತಾಯಿ ದೇವದಾಸಿ, ಅವಿವಾಹಿತನೊಬ್ಬ ಎಲ್ಲಿಂದಲೋ ಬಂದು ಇಲ್ಲಿಯೇ ಆಕೆಯ ಜೊತೆಯಲ್ಲಿ ಗಂಡನಂತೆ ಇರತೊಡಗಿದೆ. ೮ ಜನ ಮಕ್ಕಳು ೪ ಹೆಣ್ಣು ೪ ಗಂಡು ಇಲ್ಲಿನ ಸಂಪ್ರದಾಯದಂತೆ ಸಾಮಾನ್ಯವಾಗಿ ಎಲ್ಲಿಯೂ ಹಿರಿಯಮಗಳಿಗೆ ದೇವದಾಸಿ ಸಂಸ್ಕಾರ ಮಾಡಿ ಅದರಂತೆ ತಮ್ಮ ಹಿರಿ ಮಗಳನ್ನು ಶಾಲೆಗೆ ಸೇರಿಸಿ ಆಗಾಗ ನಾಟಕಗಳಿಗೆ ಹೋಗುವ ರಂಗ ಕಲಾವಿದೆಯರ ಸಂಘದಿಂದ ಸಂಗೀತ ಕಲೆಯ ಬಗೆ ಆಸಕ್ತಿ ಇಟ್ಟು ಹಾಡುಗಳನ್ನು ಬಹು ಇಂಪಾಗಿ ಹಾಡುವುದನ್ನು ಕಲಿತಳು. ಓದಿನಲ್ಲೂ ಬಹು ಜಾಣೆಯಾಗಿದ್ದ ಈಕೆ ಹೈಸ್ಕೂಲ್‌ಗೆ ಹೋದಾಗ, ಅಲ್ಲಿಯೂ ಶಾಲಾ ದಿನಾಚರಣೆ ಕಾರ್ಯಕ್ರಮಗಳಲ್ಲಿ ಏಕಪಾತ್ರಾಭಿನಯ, ನೃತ್ಯ, ನಾಟಕ ಆಡುವಾಗ, ಎಲ್ಲರೂ ಮೆಚ್ಚಿಗೆ ವ್ಯಕ್ತಪಡಿಸುತ್ತಿದ್ದರು. ಈಕೆಯ ಬಗ್ಗೆ ತಿಳಿದ ಅಲ್ಲಿನ ಮುಖ್ಯೋಪಾಧ್ಯಾಯರು ಈಕೆಯ ಜೀವನ ಹಾಳಾಗಬಾರದು ಸರ್ಕಾರಿ ನೌಕರಿಗೆ ಸೇರಿದರೆ ಪ್ರಜ್ಞಾವಂತಳಾಗಿ ಒಳ್ಳೆಯದಾಗುವುದೆಂಬ ಕಾರಣ TCH ನ್ನು ಸೇರಿಸಿದರು ಅದನ್ನು ಮುಗಿಸಿದ ತಕ್ಷಣ ಅವಳಿಗೆ ನೌಕರಿ ಸಿಕ್ಕಿತು. ಅವಳನ್ನು ಪಕ್ಕದ ಊರಿಗೆ ಹಾಕಿದಲ್ಲಿ, ಅಲ್ಲಿ ಒಬ್ಬ ಸಂಗೀತ ಟೀಚರ್ ಜೊತೆ ಪರಿಚಯವಾಗಿ ಮೊದಲು ಸಂಗೀತವೆಂದರೆ ಪಂಚಪ್ರಾಣವಾದ ಕಾರಣ ಇಬ್ಬರಿಗೂ ಪರಿಚಯವಾಗಿ ಸ್ನೇಹಿತರಾದರು. ಸ್ನೇಹ ಪ್ರೇಮವಾಗಿ ಅಂತರ್‌ಜಾತಿ ವಿವಾಹವನ್ನು ಬಹು ಗುಪ್ತವಾಗಿ ಒಂದು ದೇವಸ್ಥಾನದಲ್ಲಿ ಮಾಡಿಕೊಂಡರು. ಈ ವಿಷಯ ಆಕೆಯ ತಾಯಿಗೆ ತಿಳಿಯುತ್ತಿದ್ದಂತೆ ಬಹು ಕೋಪ, ರೋಷದಿಂದ ರಾಜಕೀಯ ವ್ಯಕ್ತಿಗಳ ಸಹಾಯದಿಂದ ಆಕೆಯನ್ನು ಕೂಡ್ಲಿಗಿಗೆ ವರ್ಗಾವಣೆ ಮಾಡಿಸಿಕೊಳ್ಳಲಾಯಿತು. ಆ ಹೊತ್ತಿಗಾಗಲೇ ಅವಳು ಗರ್ಭವತಿಯಾಗಿದ್ದರಿಂದ ಅದನ್ನು ತೆಗೆಸುವ ಕುರಿತು ಮನೆಯಲ್ಲಿ ಸಂಘರ್ಷವೇ ನಡೆಯಿತು. ಆಕೆಯನ್ನು ನೋಡಲು ಬಂದ ಸಂಗೀತ ಟೀಚರ್‌ನ್ನು ಇನ್ನೊಮ್ಮೆ ಇಲ್ಲಿಗೆ ಬಂದರೆ ಗತಿ ಕಾಣಿಸುವುದಾಗಿ ಬೆದರಿಕೆ ಹಾಕಿ, ಆತನನ್ನು ಅಲ್ಲಿಂದ ಓಡಿಸಿದರು. ಮನೆಯಲ್ಲಿ ತಮ್ಮ ತಂಗಿಯರನ್ನೆಲ್ಲ ಸಾಕುವ ಜವಬ್ದಾರಿ ಈಕೆಗೆ ಹೋರಿಸಲಾಯಿತು. ಎಲ್ಲರನ್ನೂ ಓದಿಸಲು, ಸಾಕಲು, ಬಟ್ಟೆ ಬರೆ ಮುಂತಾಗಿ ಸಂಬಳದಲ್ಲಿಯೇ ಸಾಕಾಗದೇ ಇದ್ದಾಗ, ಪುನಃ ದೇವರ ಸಂಸ್ಕಾರ ಮಾಡಿದರು. ಒತ್ತಡಕ್ಕೆ ಮಣಿದು

ಅನಿವಾರ್ಯವಾಗಿ, ಇಷ್ಟವಿಲ್ಲದಿದ್ದರೂ, ಪರ ಪುರುಷರ ಸಂಬಂಧ ಬೆಳೆಸಿ, ತಮ್ಮಂದಿರಿಗೆ ಉತ್ತಮ ಜೀವನ ನೀಡಿ, ತಂಗಿಯರಿಗೆಲ್ಲ ಮದುವೆ ಮಾಡಿ ಮನೆ ಕಟ್ಟಿಸಿ, ಅವರಿಗಾಗಿ ಜೀವನವನ್ನು ಮುಡುಪಾಗಿಟ್ಟು ದುಡಿಯತೊಡಗಿದಳು. ಅನಂತರ ಬಂದ ಆಕೆಯ ತಮ್ಮಂದಿರ ಹೆಂಡತಿಯರು ವಿವಿಧ ಕಾರಣಕ್ಕಾಗಿ ಆಕೆ ಮತ್ತು ಮಗನನ್ನು ಮನೆಯಿಂದ ಹೊರ ಹಾಕಿದರು. ಮಗ ಅಂತರ್ಜಾತಿ ವಿವಾಹವಾಗಿ ಹುಡುಗಿಯನ್ನು ತಂದು ಮನೆಯಲ್ಲಿರಿಸಿದ. ಆ ಹುಡುಗಿಯ ಜೊತೆ ಹೊಂದಾಣಿಕೆಯಾಗದೇ ಪುನಃ ಆಕೆ ಇನ್ನೊಬ್ಬ ಪುರುಷನೊಂದಿಗೆ ಬೇರೆ ಮನೆ ಮಾಡಿಕೊಂಡು ಒಂಟಿ ಜೀವನ ಸಾಗಿಸುತ್ತಿದ್ದಾಳೆ. ಜೀವನದಲ್ಲಿ ಎಷ್ಟೆಲ್ಲಾ ಕನಸುಗಳನ್ನು ಕಂಡು ಅವೆಲ್ಲ ನನಸಾಗದೆ ಆತ್ಮಸ್ಥೈರ್ಯ, ಗೌರವ, ಆದರ ಕಳೆದುಕೊಂಡು ಅಪಹಾಸ್ಯಕ್ಕೆ ಗುರಿಯಾಗಿ ಆರ್ಥಿಕವಾಗಿ ಸಂಬಳವಿದ್ದರೂ ಅನಾಥೆ, ಅಶಕ್ತಳಂತೆ ಬದುಕಲು ಆಕೆಯ ಆ ಪರಿಸರವೇ ಕಾರಣವೆಂದು ಆಕೆ ಹೇಳುವಳು.

**೧೫. ಭಾರತಿ-ವಯಸ್ಸು ೨೨ ವರ್ಷ**

ಅಜ್ಜಿ, ತಂದೆ ತಾಯಿಗೆ ೫ ಜನ ಮಕ್ಕಳು. ೨ ಗಂಡು ೩ ಹೆಣ್ಣು. ಹಿರಿಯ ಮಗ ಕೂಲಿಗೆ ಹೋಗುತ್ತಾನೆ. ತಂದೆ ತಾಯಿ ೨ ಎಕರೆ ಹೊಲವಿದ್ದು ಅದರಲ್ಲಿ ವ್ಯವಸಾಯಕ್ಕೆ ನಿತ್ಯ ಹೋಗಿ ದುಡಿದರೂ, ಹೊಟ್ಟೆಗೆ ಆಗುವಷ್ಟು ದವಸ ಧಾನ್ಯ ಬೆಳೆಯವುದಿಲ್ಲ. ೨ನೇ ಮಗಳು ಭಾರತಿ, ಆಕೆ ೯ನೇ ತರಗತಿ ಓದುತ್ತಿದ್ದಾಗ, ಅಜ್ಜಿ ತೀರಿದಳು. ಆಕೆಯ ಶವಸಂಸ್ಕಾರ, ೩ ದಿನದ ಕಾರ್ಯ ಇವುಗಳಿಗಾಗಿ ಹಣ ಬೇಕಾಯ್ತು ೯ನೇ ತರಗತಿ ಓದುತ್ತಿದ್ದ ಈ ಹುಡುಗಿಯ ಮೇಲೆ ಅಲ್ಲಿಯ ರಾಜಕೀಯ ಧುರೀಣನೊಬ್ಬನ ಕಣ್ಣು ಬಿದ್ದು, ಆಕೆಯನ್ನು ಇನ್ನು ಓದಿಸಿ, ಕೆಲಸ ಕೊಡಿಸುತ್ತೇನೆಂದು ಆಸೆ ತೋರಿಸಿ, ಶವಸಂಸ್ಕಾರಕ್ಕೆ ಹಣ ನೀಡಿ, ೩ ದಿನದ ಕರ್ಮ ಮಾಡುವಾಗ ಈಕೆಯನ್ನು ಹೊಸಪೇಟೆ ವಸತಿಗೃಹಕ್ಕೆ ಕರೆದೊಯ್ದು ಮನೆಯಲ್ಲಿ ಸತ್ತಕಾರ್ಯ ನಡೆದರೆ, ಪರ ಊರಲ್ಲಿ ಮಗಳ ಶೀಲ ಹರಣವಾಗಿತ್ತು. ನೊಂದ ತಂದೆತಾಯಿ, ಒಳ್ಳೆ ದಿನ ನೋಡಿ ದೇವದಾಸಿ ಸಂಸ್ಕಾರ ಮಾಡಿದರು. ಆದರೆ ಅವನ ವರ್ತನೆಯನ್ನು ಸಹಿಸದ ಆ ಬಾಲಕಿ ಎಷ್ಟೋ ಸಲ ಊರಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ್ದೂ ಇದೆ. ಸ್ವತಃ ಅವಳೇ ಹೇಳಿದಂತೆ ಅವನು ಒಂದು ತರಹ ವಿಕೃತ ಕಾಮಿ, ಬಹು ಕ್ರೂರವಾಗಿ ವರ್ತಿಸುತ್ತಾನೆ. ಅವನ ಸಂಗ ಬೇಡವೆಂದು ತಂದೆ ಹತ್ತಿರ ಬೇಡಿಕೊಂಡರೂ ಸಾಲ ಪಡೆದ ಅನಿವಾರ್ಯತೆ ಜೊತೆಗೆ ಅವನಷ್ಟು ಇತರರು ಕೊಡುವುದಿಲ್ಲ. ಎಲ್ಲ ಸರಿ ಹೋಗುವುದು ನೀನು ಸಹಿಸಿಕೊ ನಿನಗೆ ಓದಿಸಿ, ಕೆಲಸ ಕೊಡಿಸುತ್ತಾನೆಂಬ ಮಾತುಗಳು ನನ್ನ ಓದು, ಈ ಹಿಂಸೆಯ ಜೊತೆ ಹೇಗೆ ಸಾಗಿತು. ಪಿ.ಯು.ಸಿ. ಪಾಸಾದೆ. ಒಂದು ಗಂಡುಮಗು ಹುಟ್ಟಿತು. ಆತನನ್ನು ನೆಚ್ಚಿಕೊಳ್ಳುವಲ್ಲಿ ಲಾಭವಿಲ್ಲವೆಂದರಿತ ನನ್ನವರು ಬೇರೆ ಗಿರಾಕಿಗಳನ್ನು ಹುಡುಕಿ ತಂದವರಲ್ಲಿ ಮೊದಲನೆಯವನು ಬರಿ ಮೊದಲ ಸಲ ಕನ್ಯತ್ವದ ಹುಡುಗಿಯನ್ನು ಹುಡುಕುವ ಸ್ವಭಾವ, ಹೀಗಾಗಿ ಬರುವುದನ್ನು ನಿಲ್ಲಿಸಿದ. ಅನಿವಾರ್ಯವಾಗಿ ನಾನು ಬೇರೆಯವರ ಜೊತೆ ದಿನಕ್ಕೆ ೩ ಅಥವಾ ೪ ಜನರನ್ನು ಸಹ ಸಂತೈಸುವ ಸಾಮರ್ಥ್ಯ ಪಡೆದೆ. ಇದರಿಂದ ವರ್ಷಕ್ಕೆ ಕಡಿಮೆ ಎಂದರೆ ೧ ಲಕ್ಷಕ್ಕೂ ಹೆಚ್ಚು ದುಡಿದೆ. ನನ್ನ ತಂಗಿಗೆ ಮದುವೆ ಮಾಡಿದೆ. ನನ್ನ ಮಗ ಈಗ ೬ ವರ್ಷದವನು. ಅವನಿಗೆ ಕಾನ್‌ವೆಂಟ್ ಸ್ಕೂಲ್‌ನಲ್ಲಿ ದುಬಾರಿ ಬಟ್ಟೆಗಳು, ಶ್ರೀಮಂತ ಜೀವನಕ್ಕೆ ಅಣಿ ಮಾಡಿದ್ದೇನೆ. ತಂಗಿಗೆ ೧ ಲಕ್ಷ ವರದಕ್ಷಿಣೆ ಕೊಟ್ಟು ವಿವಾಹ ಮಾಡಿ, ಹೊಸ ಮನೆಕಟ್ಟಿಸಿ, ತಮ್ಮನಿಗೆ ಎಸ್.ಎಸ್.ಎಲ್.ಸಿ. ಓದಿಸಿದೆ. ವ್ಯವಹಾರ ಮಾಡಲು ಬಿಟ್ಟಿದ್ದೇನೆ. ಮೊದಲು ನಮಗೆ

ಮಲಗಲು ಚಾಪೆ ಸಹ ಇರುತ್ತಿರಲಿಲ್ಲ. ಈಗ ಮನೆಮಂದಿ ಎಲ್ಲರೂ ಸುಖಮಯ ಜೀವನ ಸಾಗಿಸುತ್ತಿದ್ದಾರೆ. ಈಗ ೨ನೇ ತಂಗಿಯ ಮದುವೆಗೆ ೨ ಲಕ್ಷ ಇಟ್ಟಿದ್ದೇನೆ. ನನ್ನ ಸಾವು ಯಾವಾಗ ಬರುವುದೋ ಯಾರಿಗೆ ಗೊತ್ತು. ಈಗ HIV ಯಿಂದ ಬಹಳ ಗೆಳತಿಯರು ಕೊನೆಯುಸಿರೆಳೆದಿದ್ದಾರೆ. ಇದನ್ನು ಕಂಡು ಹೆದರಿ ಸುಮ್ಮನಿರುವಂತಿಲ್ಲ. ಆದದ್ದಾಗಲಿ, ಎಷ್ಟು ದಿನವಿದ್ದರೂ ಸಾಯಲೇಬೇಕಲ್ಲ. ಆ ಬಗ್ಗೆ ಯೋಚಿಸದೇ ದುಡಿಯುತ್ತಿದ್ದೇನೆ. ಮಗನ ಬಗ್ಗೆ ಬಹು ಕಾಳಜಿ ವಹಿಸಿ, ಆತನಿಗೆ ಹೇಳಿಕೊಡಲು ಈಗ ನರ್ಸರಿ ತರಬೇತಿಗೆ ಪ್ರವೇಶ ಮಾಡಿಸಿ, ಈ ವರ್ಷದಲ್ಲಿ ಅದನ್ನು ಮುಗಿಸಿದೆ. ನನ್ನ ವ್ಯವಹಾರಗಳು ನನ್ನ ಓದಿಗೆ ಅಡ್ಡ ಬಂದಿಲ್ಲ. ಇದೇ ನನ್ನ ಪಾಲಿಗೆ ಸಂತೋಷ. ಇದಕ್ಕೆ ನನ್ನ ಗುರುಗಳ ಸಹಕಾರವೂ ಇದೆ. ಪುರುಷರನ್ನು ಬದಲಿಸುವ ಬಗ್ಗೆ ಬೇಸರಿಕೆ ಬಂದು. ಇತ್ತೀಚೆಗೆ ಒಬ್ಬನನ್ನು ಖಾಯಂ ಆಗಿ ಮಾಡಿಕೊಂಡಿದ್ದೆ. ಅವನಿಗೆ ತಮ್ಮ ಖರ್ಚು ನಿಭಾಯಿಸಲಾಗದೇ ಬೇಡವೆಂದು ಹೋದ. ಪುನಃ ಮತ್ತೆ ಮೊಬೈಲ್ ಸಂಪರ್ಕದ ಮೂಲಕ Call girl ನಂತೆ ಈಗಾಗಲೇ ಹಿರಿಯರಾದ ಗಿರಾಕಿಗಳು ದಾವಣಗೆರೆ, ಬೆಂಗಳೂರು, ಹರಿಹರ, ಆಂಧ್ರದ ಕಡೆ ಗಂಗಾವತಿ, ಸಿರಗುಪ್ಪದಲ್ಲಿ ಇವರುಗಳ ಕರೆ ಬಂದಾಗ, ಹೊಸಪೇಟೆ ಚಿತ್ರದುರ್ಗ, ಬೆಂಗಳೂರುಗಳ ಹೋಟಲ್‌ಗಳಿಗೆ ಬುಕ್ ಆಗುತ್ತೇನೆ. ಇದು ಜೀವನ ನಡೆಸಲು ಅನಿವಾರ್ಯವಾಗಿದೆ. ಹೀಗೆ ನನ್ನ ಜೀವನ ಸಾಗಿದೆ. ಮುಂದೆ ಏನಾಗುವುದೋ ಗೊತ್ತಿಲ್ಲ. ಈ ಪದ್ಧತಿಯು ನನ್ನಲ್ಲಿ ಬಹು ಬೇಸರ ಮೂಡಿಸಿದೆ. ಆದ್ರೂ ನನ್ನೊಬ್ಬಳ ಕಷ್ಟ, ತ್ಯಾಗದಿಂದ ಇತರ ಕುಟುಂಬದ ಸದಸ್ಯರ ಜೀವನ ಸುಗಮವಾಗಿ ಸಾಗುತ್ತಿರುವುದು ಸಮಾಧಾನಕರ ಎನಿಸುತ್ತದೆ.

**೧೬. ಬಸಮ್ಮ-೫೦ ವರ್ಷ ವಯಸ್ಸು**

ತಾಯಿ ದೇವದಾಸಿ, ೨ ಹೆಣ್ಣು ೨ ಗಂಡು ಮಕ್ಕಳು. ೨ ಹೆಣ್ಣು ಮಕ್ಕಳಿಗೆ ಮುದ್ರೆ ಹಾಕಿಸಲಾಗಿತ್ತು. ಹಿರಿಯವಳು. ನಾಟಕಗಳಿಗೆ ಹೋಗುವುದು ಬಹು ಚೆಲುವೆ. ಈಕೆ ಹೋದಲೆಲ್ಲಾ ಬಹು ಆಕರ್ಷಕವಾದ ಹುಡುಗಿ ಅಲಂಕಾರದಿಂದ ಅವರನ್ನು ಆಕರ್ಷಿಸುತ್ತಿದ್ದಳು. ಮುಟ್ಟಿದರೆ ಮಾಸುವಳೆಂಬಂತಹ ಸೌಂದರ್ಯವತಿ, ಈಕೆಗೆ ಮನೆಯಲ್ಲಿ ನಾಲ್ಕು ಜನ ಉನ್ನತ ಅಧಿಕಾರಿಗಳು ಖಾಯಂ ಆಗಿ ಬರುತ್ತಿದ್ದರು. ಆ ನಾಲ್ಕು ಜನ ಬಹು ಅನ್ಯೂನ್ಯತೆಯಿಂದ ಆಕೆ ಜೊತೆ ವ್ಯವಹಾರ ಮಾಡಿಕೊಂಡು ಹೋಗುತ್ತಿದ್ದರು. ಆಕೆಗೆ ಉಣಿಸುವುದು, ಅಲಂಕಾರ ಮಾಡುವುದು ಸಿನಿಮಾಕ್ಕೆ ಕರೆದುಕೊಂಡು ಹೋಗುವುದು, ಊರುಗಳ ಮೇಲೆ ಹೋಗುವುದು, ಹೀಗೆ ಈ ನಾಲ್ಕು ಜನರಲ್ಲಿ ಅರಣ್ಯ ಇಲಾಖೆ ರೇಂಜರ್ ಒಬ್ಬ ಇವನು ಆಕೆಗೆ ಉಡುಗೊರೆಯಾಗಿ ಇದೇ ಕೂಡ್ಲಿಗಿ ಅರಣ್ಯದಲ್ಲಿ ಎಲ್ಲೂ ಇಲ್ಲದಂತಹ ಅಪರೂಪದವಾದ ಮನೆ ಕಟ್ಟಿಸಿಕೊಟ್ಟ. ಇದನ್ನು ಇಲ್ಲಿಯ ಜನ ಬಾಯಿ ತೆರೆದು ನೋಡುತ್ತಿದ್ದರು. ಒಬ್ಬೊಬ್ಬರು ಒಂದೊಂದು ಉಡುಗೊರೆ ಕೊಟ್ಟಿದ್ದರು ಇನ್ನೊಬ್ಬ ತಮ್ಮನಿಗೆ ಸರ್ಕಾರಿ ಕೆಲಸ ಕೊಡಿಸಿದ್ದ. ಇನ್ನೊಬ್ಬ ಬಂಗಾರದ ಆಭರಣ ಹೀಗೆ ಆಕೆಯನ್ನು ಸುಖದ ಉಯ್ಯಾಲೆಯಲ್ಲಿ ತೂಗಿಸುತ್ತಿದ್ದರು. ಆಕೆಗೆ ಸ್ನಾನ ಮಾಡಿಸುವುದು, ಎಲ್ಲವೂ ಅವರುಗಳೇ ಮಾಡುತ್ತಿದ್ದರು. ಒಮ್ಮೊಮ್ಮೆ ೪ ಜನರಲ್ಲಿ ಸೇರುವ ಸಂದರ್ಭ ಬಂದಾಗ ಬಹು ಸಹಕಾರಿ ಅವಳ ಜೊತೆಯಲ್ಲಿ ಸುಖ ಪಡೆದು ಅನ್ಯೂನ್ಯತೆಯಿಂದ ಇದ್ದುದನ್ನು ಜನರಿಗೆ ನೋಡುವುದು ಬಹು ಮೋಜಿನ ವಿಷಯವಾಗಿತ್ತು. ಈಕೆಗೆ ಮಕ್ಕಳಾದ ಮೇಲೆಯೇ ಆಕೆಯ ೬ ಜನ ಮಕ್ಕಳಿಗೆ ಚೆನ್ನಾಗಿ ಓದಿಸಿ ೪ ಜನರಿಗೆ ಕೆಲಸಗಳನ್ನು ಕೊಡಿಸಿದ್ದಾರೆ. ಅವರನ್ನು ದಾವಣಗೆರೆಯಲ್ಲಿ ಓದಲು ಹಾಕಿ

ಒಳ್ಳೆಯ ಸಂಸ್ಕಾರದಿಂದ ಈ ಪರಿಸರದ ಪ್ರಭಾವ ಬೀರದಂತೆ ಸಾಕುತ್ತಿದ್ದಾರೆ. ಈಗ ಅವರುಗಳಿಲ್ಲ. ಆದೆರ ಈಕೆ ಅವರ ನೆನಪಿನಲ್ಲಿ ಇನ್ನು ಅದೇ ವೈಯಾರದಿಂದ, ಆಕರ್ಷಣೆಯಿಂದ ಜೀವಿಸುತ್ತಿದ್ದಾಳೆ ಮಕ್ಕಳೆಲ್ಲರು ಹತ್ತಿರವಿಲ್ಲ. ಹಿಂದೆ ಬರುತಿದ್ದವರು ವರ್ಗಾವಣೆಯ ಪ್ರಯುಕ್ತ ದೂರ ಹೋದವರು ಈಗೀಗ ಸಂಬಂಧ ಕಳಚಿಕೊಂಡಿದ್ದಾರೆ. ಅವರುಗಳ ನೆನಪಿನಲ್ಲಿ ಒಬ್ಬಂಟಿಗಳಾಗಿ ಆ ದೊಡ್ಡ ಮನೆಯಲ್ಲಿ ಒಂಟಿಯಾಗಿ ಜೀವನ ಸಾಗಿಸುತ್ತಿದ್ದಾಳೆ.

ಈ ದೇವದಾಸಿಯರ ಚಿತ್ರಣವನ್ನು ಕಂಡಾಗ ಎಲ್ಲರಲ್ಲಿ ಸಾಮಾನ್ಯವಾಗಿ ಕಂಡು ಬರುವ ವಿಷಯವೆಂದರೆ, ಹಸಿವು, ಬಡತನ, ಮೂಢನಂಬಿಕೆ, ಬಾಹ್ಯ ಪ್ರಚೋದನೆ, ನಿರಕ್ಷರತೆಗೆ ಒಳಗಾಗಿ, ದೇವದಾಸಿ ಸಂಪ್ರದಾಯಕ್ಕೆ ಒಳಗಾದವರು ಇವರಾಗಿದ್ದಾರೆ. ನಮಗೆ ತಿಳಿದು ಬರುವ ಸಂಗತಿ ಎಂದರೆ ಈ ದರಿದ್ರ ಸಂಪ್ರದಾಯಿ, ವೃತ್ತಿಗೆ ಒಳಗಾದ ಮಹಿಳೆಯರನ್ನು ಅಮಾನವೀಯತೆಯ ಪರಿಸರದಲಿ, ನಿರ್ದಯಯವಾಗಿ ನಡೆಸಿಕೊಳ್ಳುತ್ತ, ಈ ಜಾಲದಿಂದ ಹೊರಬರಬೇಕೆಂದು ನಿರ್ಧಾರ ತೆಗೆದುಕೊಂಡರೂ ಹೊಟ್ಟೆ ಕೇಳಬೇಕಲ್ಲ? ಒತ್ತಡಗಳು ಬಿಡಬೇಕಲ್ಲ? ಸುಖಿ ಸುಸಂಸ್ಕೃತ ಜೀವನದ ಪರಿಚಯವಿಲ್ಲದೇ, ಜೀವನದ ಸಿಹಿ, ಕಹಿಯನ್ನು ಹಂಚಿಕೊಂಡು ಮುನ್ನೆಡೆಯುವ ಸಂಗಾತಿ ಇಲ್ಲದೆ, ವ್ಯವಹಾರಿಕವಾಗಿ ತಮ್ಮ ದೇಹವನ್ನು ಅಡವಿಡುವುದು, ಭಾವನೆಗಳನ್ನು ಬತ್ತಿಸಿಕೊಂಡು ಹಾಸುಂಡು ಬೀಸಿ ಎಸೆಯುವ ಬಾಳೆ ಎಲೆಯಂತೆ, ಎಸೆಯಲ್ಪಡುವ ಇವರುಗಳು ಇದರ ದುಷ್ಪರಿಣಾಮಗಳನ್ನು ಒಬ್ಬಂಟಿಗರಾಗಿ ನಿಭಾಯಿಸಿಕೊಂಡು ಹೋಗುವ ಅನಿವಾರ್ಯತೆ, ಯೌವ್ವನ, ಸೌಂದರ್ಯ, ಆಕರ್ಷಕ ಗುಣಗಳಿದ್ದರೆ ಮಾತ್ರ ಜೀವನ ಸುಗಮ. ಇಲ್ಲದಿದ್ದರೆ ಹಲವಾರು ಸಂಕಷ್ಟಗಳ ಮಧ್ಯ ನಿರ್ದಯಿ ಸಮಾಜದೊಳಗೆ ಬದುಕು ಬವಣೆಗಳಿಂದು ಕೊನೆಗಾಣುವುದು ಸಾಮಾನ್ಯವಾಗಿದೆ. ಇವರಿಗೂ ಹೃದಯ, ಮನಸ್ಸಿಗಳಿವೆ, ನೋವು ಸಮಸ್ಯೆಗಳನ್ನು ಅರಿತು ಈ ಬಗ್ಗೆ ಮಾನವೀಯತೆಯಿಂದ ನಡೆದುಕೊಳ್ಳಬೇಕಾದ ಅನಿವಾರ್ಯತೆ ತುಂಬಾ ಇದೆ.

**ಟಿಪ್ಪಣಿಗಳು**

೦೧. Bellary District Gazetter, p-695, Govt of Mysore, 1972

೦೨. ತ.ರಾ.ಸು. ಬಾರ್ಬೋಸ್ ಕಂಡ ವಿಜಯನಗರ, ಪು. ೨೩, ೧೯೫೩

೦೩. ಅದೇ, ಪು.೩೪

೦೪. ಶೈಲಜಾ ಹಿರೇಮಠ, ಸ್ತ್ರೀಕಥನ, ಪು.೬೨, ೨೦೦೩

೦೫. ಅಮುಕ್ತ ಮೌಲ್ಯದ, ಶ್ರೀಕೃಷ್ಣ ದೇವರಾಯ, ಅನು: ನಿರುಪಮಾ ಆರತಿ ಪಬ್ಲಿಕೇಷನ್, ಪು.೫೪, ೧೯೯೪

೦೬. ಶೈಲಜಾ ಹಿರೇಮಠ, ಸ್ತ್ರೀಕಥನ, ಪು.೬೨, ೨೦೦೩

೦೭. ತ.ರಾ.ಸು. ಬಾರ್ಬೋಸ ಕಂಡ ವಿಜಯನಗರ, ಪು.೩೧,೩೨, ೧೯೫೩

ಅಧ್ಯಾಯ ೬

## ದೇವದಾಸಿ ಸಂಪ್ರದಾಯದ ನಿವಾರಣೆ : ಒಂದು ಚಾರಿತ್ರಿಕ ಹಿನ್ನೋಟ, ಮತ್ತು ಅಧ್ಯಯನದ ಫಲಿತ ಹಾಗೂ ಸಲಹೆಗಳು

## ದೇವದಾಸಿ ಸಂಪ್ರದಾಯದ ನಿವಾರಣೆಗಾಗಿ ಕೈಗೊಂಡ ಕ್ರಮಗಳ ಚಾರಿತ್ರಿಕ ಹಿನ್ನೋಟ

### ಪೀಠಿಕೆ

ದೇವದಾಸಿ ಪದ್ಧತಿ ಸಮಾಜದಲ್ಲಿ ಅನೇಕ ದುಷ್ಪರಿಣಾಮಗಳನ್ನು ಉಂಟುಮಾಡಿದೆ. ಸ್ತ್ರೀಯರನ್ನು ಲೈಂಗಿಕ ಶೋಷಣೆಗೆ ಒಳಪಡಿಸಿ, ಇವರ ಮಕ್ಕಳು ತಂದೆ ಇಲ್ಲದೇ ಹುಟ್ಟಿದವರೆಂಬ ಕಳಂಕದ ಜೊತೆಗೆ ಜೀವನವಿಡೀ ಅವಮಾನಕ್ಕೆ ಒಳಗಾಗಬೇಕಾಗಿದೆ. ಸ್ತ್ರೀ ಪುರುಷರು ವ್ಯವಸ್ಥಿತ ಶೋಷಣೆಗೆ ಒಳಗಾಗುವಂತೆ ಮಾಡಿದೆ. ಕೌಟುಂಬಿಕ ಜೀವನಕ್ಕೆ ಧಕ್ಕೆಯುಂಟಾಗುವುದೇ ಅಲ್ಲದೇ, ವ್ಯಕ್ತಿಯ ದೇಹ ಮತ್ತು ಮನಸ್ಸುಗಳ ಶಕ್ತಿ ಕುಗ್ಗುತ್ತದೆ, ಇದು ಸಿಫಿಲಿಸ್. ಗೊನೆರಿಯಾ, ಏಡ್ಸ್‌ನಂತಹ ಮಾರಣಾಂತಿಕ ರೋಗಗಳನ್ನು ಹರಡುತ್ತಿದೆ. ನೈತಿಕ ಅಧಃಪತನ ಉಂಟಾಗುತ್ತದೆ. ಇದರ ನಿವಾರಣೆ ಮಾಡುವುದು ಸಾರ್ವಜನಿಕ ಸಭ್ಯತೆ ಹಾಗೂ ನೀತಿಯ ದೃಷ್ಟಿಯಿಂದ ತುಂಬಾ ಅಗತ್ಯವಾದುದು. ಇದರ ನಿರ್ಮೂಲನ ಅಸಾಧ್ಯವೆಂಬ ಭಾವನೆ ಇದ್ದರೂ, ಅದರ ಸುಧಾರಣೆ ಸಾಧ್ಯ ಎಂಬ ದೃಢ ಖಾತರಿಯಿಂದ ಈ ದಿಸೆಯಲ್ಲಿ ವ್ಯಾಪಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ಪುರುಷ ವರ್ಗಕ್ಕೆ ಸಂಬಂಧಪಟ್ಟಂತೆ, ಈ ಪದ್ಧತಿಯ ಪ್ರಾಬಲ್ಯ ಕೆಳವರ್ಗದವರಿಗಿಂತ ಮೇಲುವರ್ಗದವರಲ್ಲಿ ಹೆಚ್ಚಾಗಿದ್ದರೆ, ಸ್ತ್ರೀವರ್ಗಕ್ಕೆ ಸಂಬಂಧಪಟ್ಟಂತೆ ಮೇಲು ವರ್ಗಕ್ಕಿಂತ ಕೆಳವರ್ಗದಲ್ಲಿ ಹೆಚ್ಚು ಪ್ರಚಲಿತದಲ್ಲಿರುವುದು ಸ್ವಾಭಾವಿಕವಾಗಿದೆ.

ಆರಂಭದಲ್ಲಿ ರಾಜರುಗಳ ವಿಲಾಸ ಜೀವನ ತಮಗೂ ದಕ್ಕಬೇಕೆಂಬ ಆಸೆಯಿಂದ ಪುರೋಹಿತರು ರಾಜರುಗಳನ್ನು ಅನುಸರಿಸಿ ದೇವದಾಸಿ ಪದ್ಧತಿಯನ್ನು ಹುಟ್ಟುಹಾಕಿದರು. ಈ ಪದ್ಧತಿಯು ದೇವಾಲಯ ಹಾಗೂ ಆ ಹುಡುಗಿಯರ ಕುಟುಂಬಗಳಿಗೆ ನಿಯಮಿತವಾದ ಆದಾಯದ ಮೂಲವಾಯಿತು. ಅಲ್ಲದೆ, ಅನೇಕಾನೇಕ ವ್ಯಕ್ತಿಗಳ ಆಕಾಂಕ್ಷೆಯೂ ನೆರವೇರುತ್ತಿತ್ತು. ಜೊತೆಗೆ ಖುಷಿಯೂ ದೊರೆಯುತ್ತಿತ್ತು. ಹೀಗಾಗಿ ಈ ಪದ್ಧತಿಯನ್ನು ರದ್ದುಪಡಿಸುವುದಿರಲಿ, ನಿಯಂತ್ರಿಸುವ ಪ್ರಯತ್ನಗಳು ಕೂಡ ನಡೆಯಲೇ ಇಲ್ಲ.

ಈ ಸಮಸ್ಯೆಯ ಪರಿಹಾರಕ್ಕೆ ಚಾಣಕ್ಯ ಮತ್ತು ಚಂದ್ರಗುಪ್ತರನ್ನು ಕೇಳಿದರೆ. ನಗರಗಳ ಜನಸಂಖ್ಯೆಯ ಅನುಪಾತಕ್ಕೆ ಸರಿಯಾದ ಗಾತ್ರದ ಕಾಮಾಟಿಪುರ ಪ್ರತಿಯೊಂದು ನಗರಕ್ಕೆ ಇರಬೇಕು ಎಂದು ಅವರು ಹೇಳುತ್ತಾರೆ. ಆದರೆ ಇದು ನಗರದಿಂದ ಸಾಕಷ್ಟು ದೂರ ಇರಬೇಕು. ಸರ್ಕಾರಕ್ಕೆ ಸಾಕಷ್ಟು ಹಣ ಬರುವಂತಹ ಕಟ್ಟುನಿಟ್ಟಾದ ಪರವಾನಗಿ ವ್ಯವಸ್ಥೆ ಇರಬೇಕು ಎಂದಿದ್ದಾರೆ.

## ೬.೧ ಜೈನ ಮತ್ತು ಬೌದ್ಧ ಧರ್ಮದ ಕಾಲದ ನಿವಾರಣಾ ಕ್ರಮಗಳು

ಧರ್ಮದ ಕಾಲದಲ್ಲಿ ರೂಢಿಯಲ್ಲಿದ್ದ ಸಾಮಾಜಿಕ, ಧಾರ್ಮಿಕ ಶೋಷಣೆ ವಿರುದ್ಧ ಆಂದೋಲನ ಮಾಡಿದ, ಮಹಾವೀರ, ಬುದ್ಧರಿಬ್ಬರೂ ಸ್ತ್ರೀ ಶೋಷಣೆ, ಜಾತೀಯತೆ ವಿರುದ್ಧ ಹೋರಾಡಿ, ಸ್ತ್ರೀಯರಿಗೂ ಮೋಕ್ಷ ಲಭ್ಯ ಎಂದು ಬೌದ್ಧ ಭಿಕ್ಷುಣಿಯರ ಸಂಘವನ್ನು ಸ್ಥಾಪಿಸಿ, ಮಹಿಳೆಯರು ಇಲ್ಲಿ ಸ್ವಲ್ಪಮಟ್ಟಿಗೆ ಆತ್ಮಸ್ಥೈರ್ಯದಿಂದ ಬಾಳಲು, ಸಂಘಟಿತರಾಗಲು ಒಂದು ಅವಕಾಶ ಬಂದಿತು.

ಒಮ್ಮೆ 'ಆಂಬ್ರಪಾಲಿ' ಎಂಬ ದೇವದಾಸಿಯು ಭಗವಾನ್ ಬುದ್ಧನ ಬಳಿ ಬಂದು ಅಂಜಿಕೆಯಿಂದಲೇ ಅವರ ಕಾಲಿಗೆ ಎರಗಿ. ತಮ್ಮಿಂದ ನಾನು ಪರಿವರ್ತಿತಳಾಗಿದ್ದೇನೆ. ನೂರಾರು ಸಂಸಾರಗಳ ದುಃಖಕ್ಕೆ ನಾನು ಕಾರಣಳಾಗಿದ್ದೇನೆ ಮತ್ತು ನಾನೂ ದುಃಖಿತಳಾಗಿದ್ದೇನೆ. ಇಂತಹ ಪರಿಸ್ಥಿತಿಯಲ್ಲಿಬದುಕು ಅನಿತ್ಯವೆಂಬ ಸತ್ಯದ ಬೆಳಕನ್ನು ನನಗೆ ತೋರಿಸಿದ್ದೀರಿ. ಭಿಕ್ಷು ಸಂಘದೊಡನೆ ನಮ್ಮ ಮನೆಗೆ ಆಗಮಿಸಿ ಆತಿಥ್ಯ ಸ್ವೀಕರಿಸಬೇಕು. ನನ್ನನ್ನು ಪಾವನಳನ್ನಾಗಿ ಮಾಡಬೇಕು ಎಂದು ಬೇಡಿದಳು. ಬುದ್ಧ ಆಗಬಹುದೆಂದರು. ಅಲ್ಲಿದ್ದ ಶಿಷ್ಯನೊಬ್ಬ 'ಗುರುಗಳೇ ಅವಳು ರಾಜನರ್ತಕಿ, ನೂರಾರು ಧನಿಕರನ್ನು, ರಾಜರನ್ನು, ಯುವಕರನ್ನು, ತನ್ನ ಸೌಂದರ್ಯದಿಂದ ಬುಟ್ಟಿಗೆ ಹಾಕಿಕೊಂಡವಳು. ಅವಳೊಬ್ಬ ವೇಶ್ಯೆ, ಅವಳ ಅಪ್ರತಿಮ ಸೌಂದರ್ಯಕ್ಕೆ ಮೋಹಗೊಂಡು ಐಶ್ವರ್ಯವನ್ನು, ಮಾನವನ್ನು, ಕಳೆದುಕೊಂಡವರು ಸಂಸಾರಿಗಳಷ್ಟೇ ಅಲ್ಲ, ಸಂನ್ಯಾಸಿಗಳೂ ಇದ್ದಾರೆ'. ಹೀಗಿರುವಾಗ ಅವಳ ಆತಿಥ್ಯವನ್ನು ಸನ್ಯಾಸಿಗಳಾದ ನಾವು ಸ್ವೀಕರಿಸುವುದು ಸರಿಯೇ? ಎಂದು ಕಳವಳ ವ್ಯಕ್ತಪಡಿಸಿದ. ಭಗವಾನ್ ಬುದ್ಧ ಹೀಗೇಳಿದರು. "ನನಗವಳು ಒಂದು ಜೀವಿಯಾಗಿ ಕಾಣುತ್ತಿದ್ದಾಳೆ, ಹೆಚ್ಚೆಂದರೆ ಒಂದು ಹೆಣ್ಣು ಜೀವಿಯಾಗಿ ಕಾಣುತ್ತಾಳೆ". ನೀನು ಅವಳನ್ನು ವೇಶ್ಯೆಯಾಗಿ ಕಂಡರೆ ನೀನು ಭಿಕ್ಷುವಾಗಿರಲು ಯೋಗ್ಯನಲ್ಲ. ಸಂನ್ಯಾಸಿಯಾಗಿ ಮುಂದುವರೆಯಲು ಅರ್ಹನಲ್ಲ ಎಂದು ಸ್ತ್ರೀಯರನ್ನು ಮಾನವೀಯತೆಯಿಂದ ಕಂಡಿರುವುದನ್ನು ನೋಡಬಹುದಾಗಿದೆ. ಜೊತೆಗೆ ವೇಶ್ಯೆಯರ ಬಗ್ಗೆ ಕೀಳಿರಿಮೆ ಭಾವನೆ ಸಲ್ಲದೆಂಬ ಸಂದೇಶವನ್ನು ಹೇಳಿದ್ದಾರೆ.

## ೬. ೨ ವಚನ ಚಳುವಳಿ ಕಾಲಘಟ್ಟದ ನಿವಾರಣಾ ಕ್ರಮಗಳು

ಪುರೋಹಿತ ವರ್ಗ ದುಡಿಯಲಾರದೆ, ಕಷ್ಟಪಡದೆ, ಐಷಾರಾಮದ ಜೀವನ ಸಾಗಿಸುವುದು, ದುಡಿಯುವ ವರ್ಗ ಕಷ್ಟದಲ್ಲಿದ್ದು ಶೋಷಣೆಗೆ ಒಳಗಾಗಿರುವುದನ್ನು ಶರಣರು ಖಂಡಿಸಿ, ಇದೆಂಥ ನ್ಯಾಯ? ಎಂದು ಪ್ರಶ್ನಿಸಿ ಪುರೋಹಿತವರ್ಗದ ಶೋಷಣೆ ನಿರ್ಮೂಲನಕ್ಕೆ ಒಂದು ಮಾರ್ಗ ಹುಡುಕುವುದು ಅನಿವಾರ್ಯವಾಗಿತ್ತು. ಧರ್ಮದ ಹೆಸರಿನಲ್ಲಿ ಉಂಟಾಗಿದ್ದ ಶೋಷಣೆಯ ವಿರುದ್ಧ ಶರಣರು ಧಾರ್ಮಿಕ ಆಂದೋಲನವನ್ನೇ ಮಾಡಿದ್ದಾರೆ. ಬಸವಣ್ಣನವರ ಮುಖಂಡತ್ವದಲ್ಲಿ ಜರುಗಿದ ಈ ಆಂದೋಲನವು ಬಹಳ ಮಹತ್ವಪೂರ್ಣವಾದುದು. ಧರ್ಮದ ಹೆಸರಿನಲ್ಲಿ ಶೋಷಣೆಯನ್ನು ಪ್ರತಿಭಟಿಸಿ, ಸಾಮಾಜಿಕ ಮೂಢ ನಂಬಿಕೆಗಳ ವಿರುದ್ಧ ಹೋರಾಟ ಮಾಡಿ, ಜನತೆಯಲ್ಲಿ ಜಾಗೃತಿಯನ್ನುಂಟು ಮಾಡಿದ್ದಾರೆ.

ಇಕ್ಕುಳ ಕೈಮುಗಿದರೇನು? ಭ್ರತ್ಯಾಚಾರಿಯಾಗಬಲ್ಲುದೇ ? ಎಂದು ಬಸವಣ್ಣನವರು ಕೇಳುತ್ತಾರೆ. ಇಕ್ಕುಳದಿಂದ ಏನನ್ನಾದರೂ ಓಡಿಯಬೇಕಾದರೆ ಅದು ಕೈ ಮುಗಿಯುತ್ತದೆ. ಅದರ ಕೈ ಮುಗಿಯುವಿಕೆಯ ಹಿಂದೆ ಯಾವುದೋ ಒಂದು ಉದ್ದೇಶ ಇದ್ದೇ ಇರುತ್ತದೆ ಎಂಬ ಹೋಲಿಕೆಯೊಡನೆ ವಿವರಿಸಿದ್ದಾರೆ.

ಸೂಳೆ ಸಂಕವ್ವ, ತನ್ನ ಬದುಕಿನ ಅನಿವಾರ್ಯತೆಯಿಂದ ಬೇಸತ್ತು, ಜೀವನ ಶೈಲಿಯನ್ನು ಬದಲಿಸಿಕೊಂಡ ಧೀಮಂತೆ. ಬಸವಣ್ಣನವರಂತೂ ಪರಸ್ತ್ರೀಯರನ್ನು ಒಲ್ಲೆನೆನ್ನುವ ಛಲ ಶರಣರಿಗಿರಬೇಕು ಎಂದು ಸಾರಿ ಹೇಳಿ, ಆಗ ಸಾಕಷ್ಟು ಪ್ರಚಲಿತವಾಗಿದ್ದ ಸೂಳೆಗಾರಿಕೆಯ ಬಗ್ಗೆ ಉಗ್ರ ತಿರಸ್ಕಾರ ತೋರಿಸಿದರು. ಅವರ ಅನೇಕ ವಚನಗಳಲ್ಲಿ ವೇಶ್ಯೆಯರನ್ನು 'ಚಿತ್ತ ಚಾಂಚಲ್ಯಕ್ಕೆ' ಒಂದು ಸಂಕೇತವಾಗಿ ಬಳಸಿರುವುದನ್ನು ಕಾಣಬಹುದು.

"ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವನು!
ಹಲವು ದೈವದ ಎಂಜಲ ತಿಂಬವರೇನೆಂಬೆ
ಕೂಡಲಸಂಗಮದೇವಾ?"[೧]

"ಕೂಸುಳ್ಳ ಸೂಳೆ ಧನದಾಸೆಗೆ ಒತ್ತೆಯ ಕೊಂಡರೆ,
ಕೂಸಿಂಗಲ್ಲ, ಬೊಜಗಂಗಲ್ಲ!
ಕೂಸನ್ನೊಮ್ಮೆ ಸಂತೈಯ್ಸುವಳು ಬೋಜಗನೊಮ್ಮೆ ನೆರೆವಳು,
ಧನದಾಸೆ ಬಿಡದು ಕೂಡಲಸಂಗಮದೇವಾ!"[೨]

ಎಂದು ಇಲ್ಲಿ ಹೊಟ್ಟೆಯ ಪಾಡಿಗಾಗಿ ವೇಶ್ಯೆಯಾದವರ ಸ್ಥಿತಿ ಕನಿಕರಹುಟ್ಟಿಸಿದರೆ, ಲೋಭಿಗಳಾದ ಹೆಂಗಸರನ್ನು ತಿರಸ್ಕಾರವನ್ನು ತರುತ್ತದೆ.

ಬಸವಣ್ಣನವರು ಬಿಜ್ಜಳನ ರಾಜನರ್ತಕಿಯಾಗಿದ್ದ 'ರೂಪವತಿ' ಎಂಬ ಹೆಸರಿನ ಗಣಿಕೆಯೋರ್ವಳ ಮನಃ ಪರಿವರ್ತನೆ ಮಾಡಿದರು ಆನಂತರ ಆಕೆ ತನ್ನ ನರ್ತನೆ ಕೇವಲ ಶಿವನಿಗೆ ಮೀಸಲು ಎಂದಿದ್ದು ಗಮನಾರ್ಹ. ಬಿಜ್ಜಳನಿತ್ತ ಮುತ್ತಿನಹಾರವನ್ನು ತಿರಸ್ಕರಿಸಿ ಪ್ರತಿಭಟನೆಯನ್ನು ಸೂಚಿಸಿದ್ದು, ಈಗ ಇತಿಹಾಸದಲ್ಲಿ ಸಿಗುವ ದಾಖಲೆ. (ಟಿ.ವಿ. ಸಿಂಗ ಠಾಕೂರ್ ಅವರ ನಿರ್ದೇಶಿಸಿದ ಜಗಜ್ಯೋತಿ ಬಸವೇಶ್ವರ ಚಲನಚಿತ್ರದಲ್ಲಿ ಈ ಸನ್ನಿವೇಶವಿದೆ)

ಬಸವಣ್ಣನವರು ೧೨ ಸಾವಿರಕ್ಕೂ ಹೆಚ್ಚು ದೇವದಾಸಿಯರನ್ನು ಅನಿಷ್ಟ ಸಂಪ್ರದಾಯದಿಂದ ಮುಕ್ತಗೊಳಿಸಿ, ಅವರನ್ನು ಕಾಯಕ ಮಾರ್ಗಾವಲಂಬಿಗಳನ್ನಾಗಿ ಮಾಡಿದರು. ಎಂಟುನೂರು ವರ್ಷಗಳ ಹಿಂದೆಯೇ ಇದು ಸಾಧ್ಯವಾಗಿತ್ತೆನ್ನಲಾಗಿದೆ. ಆದರೆ ಇಂದಿನ ಸರ್ಕಾರಕ್ಕೆ ಏಕೆ ಸಾಧ್ಯವಾಗುತ್ತಿಲ್ಲ ಎಂದು ಬಿ.ಎಲ್.ಪಾಟೀಲರು ಕೇಳುವುದು ಸೂಕ್ತವಾಗಿದೆ.

ನರ್ತನ ಪರಂಪರೆಯಲ್ಲಿಯೇ ಹುಟ್ಟಿದ ಮಹಾಜ್ಞಾನಿ ಅಲ್ಲಮಪ್ರಭು ಮಾಯಾದೇವಿ ಎಂಬ ನರ್ತಕಿ (ದೇವದಾಸಿ)ಯ ಮನಃ ಪರಿವರ್ತನೆಯ ಮಾಡಿದ್ದರ ಉಲ್ಲೇಖ, ಚಾಮರಸ ಕವಿಯ 'ಪ್ರಭುಲಿಂಗಲೀಲೆ'ಯಲ್ಲಿಯೂ ಹರಿಹರ ಕವಿಯ 'ಪ್ರಭುದೇವರ ರಗಳೆ'ಯ ಕಾಮಲತೆ, ಅಲ್ಲಮರ ಪ್ರಸಂಗದಲ್ಲಿಯೂ ಇದೆ. ಇವರಷ್ಟೇ ಅಲ್ಲದೇ ಕವಿಗಳು, ಸಮಾಜ ಚಿಂತಕರು, ಸುಧಾರಕರು, ಸಂತರು, ದೇವದಾಸಿ ಪದ್ಧತಿಯ ಬಗ್ಗೆ ಲಕ್ಷ ಹರಿಸಿದ್ದು, ಇತಿಹಾಸವನ್ನು ಅವಲೋಕಿಸಿದಾಗ ಸ್ಪಷ್ಟವಾಗುತ್ತದೆ.

**೬.೩ ಮಧ್ಯಯುಗದ ಮುಸ್ಲಿ ದೊರೆಗಳು ಕೈಗೊಂಡ ನಿವಾರಣಾ ಕ್ರಮಗಳು**

ಭಾರತೀಯ ಸಮಾಜದಲ್ಲಿ ಮುಸ್ಲಿಂರ ಆಳ್ವಿಕೆಯು ಪ್ರಬಲವಾದಾಗ ಧರ್ಮಾಂಧತೆಯ ಕಾರಣವಾಗಿ ದೇವಸ್ಥಾನಗಳು ನೆಲ ಸಮವಾದಾಗ ಈ ಪದ್ಧತಿಗೆ ತಡೆಬಿತ್ತು. ಔರಂಗಜೇಬನು ದೇವದಾಸಿ ಪದ್ಧತಿಯನ್ನು ನಾಶಪಡಿಸಲು, ಹಿಂದುಗಳ ಮೇಲಿನ ದ್ವೇಷದಿಂದ ಸಾವಿರಾರು ಹಿಂದೂ ದೇವಾಲಯಗಳನ್ನು ನಾಶಪಡಿಸಿದ ಅವುಗಳೊಂದಿಗೆ ಸಂಬಂಧ ಹೊಂದಿದ್ದ ಎಲ್ಲಾ ದೇವದಾಸಿಯರನ್ನು ಮತ್ತು ಅವರಿಗೆ ಸಂಬಂಧದ ಎಲ್ಲವನ್ನೂ ನಾಶ ಮಾಡಲು ಪ್ರಯತ್ನಿಸಿದ. ಹಾಡುವುದು, ನೃತ್ಯ ಮಾಡುವುದರ ವಿರುದ್ಧ ಆಜ್ಞೆಗಳನ್ನು ಜಾರಿ ಮಾಡಿ, ನೃತ್ಯದ ಹುಡುಗಿಯರು ಮದುವೆ ಮಾಡಿಕೊಳ್ಳಲು ಆಜ್ಞೆ ಮಾಡಿದ. ಒಪ್ಪದವರನ್ನು ತನ್ನ ರಾಜ್ಯದಿಂದ ಹೊರ ಹಾಕಿದ. (ಎಲಿಯಟ್-೧೮೬೭ -೨೮೩) ಈ ಕಾರ್ಯ ದೇವದಾಸಿ ಪದ್ಧತಿ ನಾಶಪಡಿಸಲು ನೆರವಾಯಿತು.

**೬. ೪ ಬ್ರಿಟಿಷರ ಆಳ್ವಿಕೆಯ ಅವಧಿಯಲ್ಲಿ ಕೈಗೊಂಡ ನಿವಾರಣಾ ಕ್ರಮಗಳು**

ಬ್ರಿಟಿಷರು ಭಾರತಕ್ಕೆ ವ್ಯಾಪಾರದ ಸಲುವಾಗಿ ಬಂದು, ಈಸ್ಟ್ ಇಂಡಿಯಾ ಕಂಪನಿ ಸ್ಥಾಪಿಸಿದರು. ಇಲ್ಲಿನ ಅಭದ್ರ ರಾಜಕೀಯ ಪರಿಸ್ಥಿತಿಯನ್ನು, ತಮ್ಮ ಕುಟಿಲ ನೀತಿಯಿಂದ ತಮ್ಮ ಸಾಮ್ರಾಜ್ಯ ಸ್ಥಾಪಿಸುವಲ್ಲಿ ಯಶಸ್ವಿಯಾಗಿ, ಇವರ ಪ್ರಜಾಪ್ರಭುತ್ವ ನೀತಿ, ಸಮಾನತೆ, ಸ್ವಾತಂತ್ರ್ಯ, ವೈಚಾರಿಕ ಹಾಗೂ ಜಾತ್ಯಾತೀತ ಮುಂತಾದ ಧೋರಣೆಗಳು ಭಾರತೀಯ ಸಮಾಜದ ಮೇಲೆ ಪ್ರಭಾವ ಬೀರಿ, ಸ್ತ್ರೀಯರ ಸ್ಥಾನಮಾನ ಸುಧಾರಿಸ ತೊಡಗಿದವು. ಪುರುಷರಂತೆ ಸ್ತ್ರೀಯರಿಗೂ ಶಿಕ್ಷಣ, ಉದ್ಯೋಗ, ವಿವಾಹ, ಸಾರ್ವಜನಿಕ ಜೀವನ, ಎಲ್ಲಾ ರಂಗಗಳಲ್ಲಿ ಹಕ್ಕುಗಳನ್ನು ಪಡೆಯಲಾರಂಭಿಸಿದರು. ಸ್ತ್ರೀಯರ ಸಮಸ್ಯೆಗಳಾದ ಬಾಲ್ಯವಿವಾಹ, ವಿಧವಾ ಪುನರ್ವಿವಾಹ, ಸತಿಸಹಗಮನ, ಪರದಾಪದ್ಧತಿ ದೇವದಾಸಿ ಪದ್ಧತಿಗಳನ್ನು ಶಾಸನಗಳ ಮೂಲಕ ತೊಡೆದುಹಾಕಲು ಯತ್ನಿಸಿದರು.

೧೯ನೇ ಶತಮಾನದ ವೇಳೆಗೆ ಬ್ರಿಟಿಷ್ ಚಕ್ರಾದಿಪತ್ಯಕ್ಕೆ ದೇಶವು ಆಧೀನವಾದ ನಂತರದಲ್ಲಿ ಮಾತ್ರವೇ "ದೇವದಾಸಿಯರಾಗಿ ಸಮರ್ಪಿಸಿಕೊಳ್ಳುವ ಹುಡುಗಿಯರ ವಯೋಮಾನ ಇಂತಿಷ್ಟು ಇರಬೇಕೆಂಬ ನಿಯಮಬಂದದ್ದು, ಆದರೆ ತಪ್ಪು ವಯಸ್ಸನ್ನು ಬರೆಯಿಸುವುದರ ಮೂಲಕ ಅಥವಾ ಧಾರ್ಮಿಕ ನೆಲೆಯಿಂದ ಅನುಮತಿಯನ್ನು ಪಡೆಯುವುದರ ಮೂಲಕ ಈ ನಿಯಮವನ್ನು ಹುಡುಗಿಯ ತಂದೆ ತಾಯಿಗಳು ಹಾಗೂ ಪೋಷಕರು ಗಾಳಿಗೆ ತೂರಿಬಿಟ್ಟರು. ಇದಕ್ಕೆ ಮದ್ರಾಸು ರಾಜ್ಯಾಡಳಿತದ ಅಧೀನದಲ್ಲಿದ್ದ ಬಳ್ಳಾರಿಯ ಪ್ರದೇಶಗಳಲ್ಲಿ ಸಾಕಷ್ಟು ನಿದರ್ಶನಗಳು ದೊರೆತಿವೆ"[೩].

ಇಷ್ಟಾದರೂ ನಿವೃತ್ತ ದೇವದಾಸಿಯರಿಗೆ ಬಡ ಕುಟುಂಬಗಳಿಂದ ಹೆಣ್ಣುಮಕ್ಕಳನ್ನು ಕೊಳ್ಳುವುದು, ಅವರಿಗೆ ತರಬೇತಿ ನೀಡಿ ದೇವಾಲಯದ ಸೇವೆಗೆ ನಿಲ್ಲುವಂತೆ ಒತ್ತಾಯ ಮಾಡುವುದು ಕಷ್ಟದ ಕೆಲಸವಾಗಿತ್ತು. ಹುಡುಗಿಯರನ್ನು ಸಮರ್ಪಿಸುವಂಥ ವ್ಯಾಜ್ಯಗಳನ್ನು ೧೮೬೦ ರಲ್ಲಿ ಮದ್ರಾಸ್ ಹೈಕೋರ್ಟ್ ಕೈಗಿತ್ತಿಕೊಂಡು ವ್ಯವಹರಿಸಿದೆ. ತಾವು ದೇವದಾಸಿಯರು ಮಾತ್ರವೇ ಎಂದು ಸಾಧಿಸಲು ಮಾಡಿದ ಫಿರ್ಯಾದುಗಳನ್ನು ಕೋರ್ಟ್ ಸಾರಾಸಗಟಾಗಿ ಯಾವುದೇ ವಿಚಾರಣೆಯಿಲ್ಲದೆ ತಿರಸ್ಕರಿಸಿತು. ಉದಾಹರಣೆಗೆ ೧೮೬೦ರಲ್ಲಿ ಹದಿನೇಳು ವರ್ಷದ ಹುಡುಗಿಯೊಬ್ಬಳು, ಪಗೋಡ ದೇವಸ್ಥಾನದ ಧರ್ಮಾಧಿಕಾರಿಗಳು ತನ್ನ ತಾಯಿಯ ವಾರಸುದಾರಳಾದ ತನಗೆ

ದಾಸಿಯಾಗಲು ಬಿಡುತ್ತಿಲ್ಲ ಎಂದು ಕೋರ್ಟ್‌ಗೆಳೆದಳು. ದಾಸಿಯಾಗಲು ಅವಕಾಶವನ್ನು ಮಾಡಿಕೊಡುವಂತೆ ಹಾಗೂ ಆ ವೃತ್ತಿ ಸಂಬಂಧೀ ಮಾನ ಮರ್ಯಾದೆ, ಸ್ಥಾನ-ಮಾನ ಅನುಕೂಲಗಳನ್ನು ಒದಗಿಸಿಕೊಡುವಂತೆ ಧರ್ಮಾಧಿಕಾರಿಗಳ ಮೇಲೆ ಒತ್ತಾಯ ಹೇರಬೇಕೆಂದು ಆಕೆ ಹೈಕೋರ್ಟಿನ ಮುಂದೆ ಪ್ರಾರ್ಥಿಸಿಕೊಂಡಳು. ಆದರೆ ಹೀಗೆ ಅವಕಾಶ ನೀಡುವುದರ ಪರಿಣಾಮ ಸೂಳೆಗಾರಿಕೆಗೆ ಬಹಿರಂಗವಾಗಿಯೇ ನೀಡಿದ ಪರವಾನಿಗಿಯಾದೀತು ಎಂಬುದರ ಭೂಮಿಕೆಯ ಮೇಲೆ ಕೋರ್ಟ್ ಅವಳ ದೂರನ್ನು ಸಂಪೂರ್ಣವಾಗಿ ತಳ್ಳಿಹಾಕಿತು.

**೬. ೫ ಸಮಾಜ ಸುಧಾರಕರು ಕೈಗೊಂಡ ನಿವಾರಣಾ ಕ್ರಮಗಳು**

ಭಾರತೀಯ ಸಮಾಜ ಅನುಭವಿಸುತ್ತಿದ್ದ ಸಮಸ್ಯೆಗಳಿಗೆ ಪ್ರತಿಯಾಗಿ ಸುಧಾರಣೆಗಳತ್ತ ಗಮನಹರಿಸಿ, ಸ್ತ್ರೀಯನ್ನು ಸಮಸ್ಯಾ ಮುಕ್ತರನ್ನಾಗಿಸಲು, ಜಾಗೃತಿ ಮೂಡಿಸಲು ಕಂಕಣಬದ್ಧರಾದ ಸಮಾಜ ಸುಧಾರಕರು ಹುಟ್ಟಿದರು.

೧೯ನೇ ಶತಮಾನವನ್ನು ಸಮಾಜ ಸುಧಾರಣೆಯ ಶತಮಾನ ಎನ್ನಲಾಗಿದೆ. ರಾಜಾರಾಂ ಮೋಹನರಾಯ್, ಈಶ್ವರ ಚಂದ್ರ ವಿದ್ಯಾಸಾಗರ, ಮಹಾದೇವ ಗೋವಿಂದ, ರಾನಡೆ, ಕರ್ವೆಯವರಂತಹ ಎಷ್ಟೋ ಮಹಾಪುರುಷರು ಸ್ತ್ರೀಯರ ಸ್ಥಾನಮಾನಗಳ ಬದಲಾವಣೆಗೆ ಹಲವಾರು ಪ್ರಯತ್ನಗಳನ್ನು ಮಾಡಿದರು. ಮದ್ರಾಸ್ ಪ್ರಾಂತ್ಯದಲ್ಲಿ ೧೮೯೨ ರಲ್ಲಿ ಸ್ಥಾಪನೆಗೊಂಡ ಮದ್ರಾಸ್ ಹಿಂದೂ ಸಮಾಜ ಸುಧಾರಣಾ ಸಂಸ್ಥೆಯ ಆಶ್ರಯದಲ್ಲಿ ಶ್ರೀ ಆರ್. ವೆಂಕಟರತ್ನಂ ನಾಯುಡು (೧೮೬೨-೧೯೩೯) ರವರು ಈ ದುಷ್ಟ ಸಾಮಾಜಿಕ ಪದ್ಧತಿಯ ವಿರುದ್ಧ ಹೋರಾಡುವ ಸಾಹಸವನ್ನು ತೋರಿದರು.

ದೇವದಾಸಿ ಪದ್ಧತಿ ವಿರುದ್ಧ ಹೋರಾಡುತ್ತಾ, ಹಾಗೂ ಪಾನ ಸಂಯಮವನ್ನು ಪ್ರತಿಪಾದಿಸುತ್ತಾ ಸಮಾಜ 'ಶುದ್ಧೀಕರಣ' ಚಳುವಳಿಯೊಂದನ್ನು ಅವರು ಆರಂಭಿಸಿದರು., ಬೊಂಬಾಯಿ ಮೊದಲಾದ ಪ್ರಾಂತ್ಯಗಳಲ್ಲೂ ಇಂತಹ ಸಂಸ್ಥೆಗಳು ಸ್ಥಾಪಿತವಾದರೂ, ಈ ಪದ್ಧತಿಯ ವಿರುದ್ಧ ಯಾವುದೇ ಚಳುವಳಿಯನ್ನು ನಡೆಸಿದ್ದುದರ ನಿದರ್ಶನಗಳಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ, ಈ ಸಮಾಜ ಸುಧಾರಣಾ ಚಳುವಳಿಗಳು ಈ ಪದ್ಧತಿಯ ಮೇಲೆ ಬೀರಿದ ಪ್ರಭಾವವಂತೂ ತೀರಾ ಅತ್ಯಲ್ಪ.

ಬ್ರಿಟಿಷ್ ಸರ್ಕಾರ "ನಂದಿ ಭೋಗನಂದೀಶ್ವರಸ್ವಾಮಿ ದೇವಾಲಯದ ರಥೋತ್ಸವ ಸಮಯದಲ್ಲಿ ದೇವಸ್ಥಾನದಲ್ಲಿ ತಾಫೆಸೇವೆ ಅಥವಾ ನೃತ್ಯಸೇವೆ ಮಾಡುತ್ತಿದ್ದ ವೃತ್ತಿನಿರತ ಮಹಿಳೆಯರನ್ನು ಅವರ ತಾತ್ಕಾಲಿಕವಾದ ಈ ಉದ್ಯೋಗದಿಂದ ೧೮೯೨ ಫೆಬ್ರವರಿಯಲ್ಲಿ ವಿಮುಕ್ತಗೊಳಿಸಲಾಯಿತು"[೪]. ಇದರಿಂದ ಉಳಿತಾಯದ ಹಣವನ್ನು ಇದಕ್ಕಿಂತ ಹೆಚ್ಚು ಉಪಯುಕ್ತವಾದ ಉದ್ದೇಶಗಳಾದ ನೈರ್ಮಲ್ಯ ವ್ಯವಸ್ಥೆ ಮತ್ತು ದೇವಾಲಯದ ಉಳಿದ ಅಗತ್ಯತೆಗಳಿಗಾಗಿ ಉಪಯೋಗಿಸಲಾಯಿತು. ನಂಜನಗೂಡಿನ ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಾಲಯದ ತಸದಿಕ್ ಪಟ್ಟಿಯನ್ನು ೧೮೯೯ರಲ್ಲಿ ಪರಿಷ್ಕರಣ ಮಾಡಲಾಯಿತು. ದೇವಾಲಯದ ಸಿಬ್ಬಂದಿಯಾಗಿದ್ದ ನೃತ್ಯ ಸೇವೆಯಲ್ಲಿದ್ದ ದೇವದಾಸಿಯರು ಇನ್ನು ಮುಂದೆ ದೇವಾಲಯಗಳಲ್ಲಿ ತಾಫೆ ಸೇವೆಯನ್ನು ಆಚರಿಸಲು ಅವಕಾಶ ನೀಡಬಾರದೆಂದು ಮುಜರಾಯಿ ಅಧೀಕ್ಷಕ ಮತ್ತು ಕಾರ್ಯದರ್ಶಿಗಳು ಆದೇಶ ನೀಡಿದರು. ಆದರೆ ಅವರಿಗೆ ಕೊಡುತ್ತಿದ್ದ ಭತ್ಯವನ್ನು ಅವರ ಜೀವಮಾನಪರ್ಯಾಂತ ಮುಂದುವರೆಸಬೇಕೆಂದೂ, ಆ ಹುದ್ದೆಗಳು

ಅದರ ಸಾವಿನಿಂದ ತೆರವಾದ ಪಕ್ಷದಲ್ಲಿ ಅದನ್ನು ಭರ್ತಿ ಮಾಡಬಾರದೆಂದು ನಿರ್ದೇಶನವಿತ್ತರು. ಏಪ್ರಿಲ್ ೧೯೦೯ರಲ್ಲಿ ಸರ್ಕಾರಿ ಆಜ್ಞೆಯಲ್ಲಿ ಈ ರೀತಿ ಗಮನಿಸಲ್ಪಟ್ಟಿದೆ. ದೇವದಾಸಿಯರನ್ನು ದೇವಸ್ಥಾನಗಳಲ್ಲಿ ಸೇವಸಲ್ಲಿಸಲು ನೇಮಿಸಿದ್ದುದರ ಮೂಲ ಉದ್ದೇಶಗಳು ಏನೇ ಇದ್ದರೂ ಆ ಕಾಲದಲ್ಲಿ ದೇವಸ್ಥಾನಗಳಲ್ಲಿ ಅವರ ಅನೀತಿಯುತವಾದ ನಡೆವಳಿಕೆಯಿಂದ ಅವರನ್ನು ದೇವಸ್ಥಾನಗಳ ಎಲ್ಲಾ ರೀತಿಯ ಸೇವೆಗಳಿಂದಲೂ ಮುಕ್ತಗೊಳಿಸಿದ್ದುದು ಸಂಪೂರ್ಣವಾಗಿ ಸಮರ್ಥಿಸಲ್ಪಟ್ಟಿದೆ. ಈ ಸ್ತ್ರೀಯರ ಸೇವೆಯು ಕೆಲವು ಮುಖ್ಯವಾಗಿ ದೇವಸ್ಥಾನಗಳಲ್ಲಿ ೧೫ ವರ್ಷಗಳಿಂದಲೂ ಇಲ್ಲದೇ ಹೋದರೂ ಜನರು ಅಂತಹ ಸೇವೆಯ ಇಲ್ಲದಿರುವಿಕೆಗೆ ಒಗ್ಗಿಕೊಂಡಿರುವುದು ಗಮನಿಸಲ್ಪಟ್ಟಿತು. ದೇವಾಲಯದಲ್ಲಿ ತಾಫೆ ಸೇವೆ ಸಲ್ಲಿಸುತ್ತಿದ್ದ ವ್ಯಕ್ತಿಗಳಿಗೆ ವಿಶೇಷವಾಗಿ ಇನಾಮಾಗಿ ಕೊಟ್ಟ ಭೂಮಿ ಅಥವಾ ಉಳಿದ ಇನಾಮುಗಳನ್ನು ಅವರಿಗೆ ನೀಡಲಾಯಿತು. ಮುಜರಾಯಿ ದೇವಾಲಯಗಳಲ್ಲಿ ಆಚರಿಸುತ್ತಿದ್ದ ಗೆಜ್ಜೆ ಪೂಜೆಯಂತಹ ಕಾರ್ಯವು ನರ್ತಕಿಯನ್ನು ವೇಶ್ಯಾವೃತ್ತಿಯ ಜೊತೆ ಸಂಬಂಧ ಕಲ್ಪಿಸುತ್ತದೆ ಎಂಬ ಕಾರಣ ನೀಡಿ ಅದನ್ನು ೧೯೧೦ರಲ್ಲಿ ಸರ್ಕಾರವು ನಿಷೇಧಿಸಿತು. ಇದಕ್ಕೆ ಮೊದಲು ೧೮೮೦ ರಲ್ಲಿ ಸಿಡಿ ಕಾರ್ಯಗಳನ್ನು ನಿಷೇಧಿಸಲು ಮುಖ್ಯ ಕಮೀಷನರರು ಜಿಲ್ಲಾ ದಂಡಾಧಿಕಾರಿಗಳಿಗೆ ಅಧಿಕಾರವನ್ನು ಕೊಟ್ಟಿದ್ದರು. 'ಸಿಡಿ' ಎಂದರೆ ಒಂದು ದೊಡ್ಡ ಕಂಬದ ತುದಿಗೆ ಅಡ್ಡಲಾಗಿ ಸುತ್ತಲೂ ತಿರುಗಬಲ್ಲ ಇನ್ನೊಂದು ಮರ (ತೊಲೆ) ವನ್ನು ತಿರುಗಣೆಯ ಸಹಾಯದಿಂದ ಸಿಕ್ಕಿಸುತ್ತಾರೆ. ಹರಕೆ ಹೊತ್ತ ವ್ಯಕ್ತಿಯ ಬೆನ್ನಿಗೆ ಮೃದ್ವಸ್ಥಿಯನ್ನು ಅಡ್ಡ ಕಂಬದ ಒಂದು ತುದಿಯಲ್ಲಿರುವ ಕಬ್ಬಿಣದ ಕೊಕ್ಕಿಗೆ ಸಿಕ್ಕಿಸಿ ಹಗ್ಗದ ಸಹಾಯದಿಂದ ತಿರುಗಣೆಯನ್ನು ತಿರುಗಿಸುವುದರ ಮೂಲಕ ವ್ಯಕ್ತಿಯು ತಿರುಗುವಂತೆ ಮಾಡುತ್ತಾರೆ. ೧೯೨೭ ರ ಹಿಂದೂ ಧಾರ್ಮಿಕ ಮತ್ತು ಧರ್ಮಾರ್ಥಕ ದತ್ತಿ ಅಧಿ ನಿಯಮದ ಪ್ರಕಾರ ಮದ್ರಾಸ್ - ಕರ್ನಾಟಕ ಪ್ರಾಂತ್ಯದಲ್ಲಿ ಆಚರಿಸುವುದು ಶಿಕ್ಷಾರ್ಹವಾಗಿತ್ತು. ವಿಶಾಲ ಕರ್ನಾಟಕದಲ್ಲಿ ಸೇರಿಕೊಂಡಂತಹ ಪ್ರದೇಶಗಳ ಮೇಲೆ ಅದುವರೆಗೂ ಬಳಕೆಯಲ್ಲಿದ್ದ ಅಧಿನಿಯಮಗಳಿಂದ ಅಷ್ಟೇನೂ ಪರಿಣಾಮ ಉಂಟಾಗಲಿಲ್ಲ.

ಮೈಸೂರು ಒಡೆಯರ ಮನೆತನದ ಅರಸುಗಳು, ಈ ಪದ್ಧತಿಯನ್ನು ಬುಡ ಸಮೇತ ಕಿತ್ತು ಹಾಕಲು ಪ್ರಯತ್ನಿಸಿದ ದಾಖಲೆಗಳಿವೆ. ೧೮೯೨ ರಲ್ಲಿ ನಂದಿಬೆಟ್ಟದ 'ಯೋಗನಂದೀಶ್ವರಸ್ವಾಮಿ' ದೇವಾಲಯದಲ್ಲಿ ನೃತ್ಯಸೇವೆ ಸಲ್ಲಿಸುತ್ತಿದ್ದ ನರ್ತಕಿಯ ನೇಮಕಾತಿಯನ್ನು ಅಂದಿನ ಮೈಸೂರಿನ ರಾಜರ ಸರ್ಕಾರ ರದ್ದು ಮಾಡಿತು. ಅವರಿಂದ ಉಳಿದ ಹಣ, ದೇವಸ್ಥಾನದ ಸ್ವಚ್ಛತೆಗೆ ಮತ್ತು ಇತರೆ ಉಪಯುಕ್ತ ಕೆಲಸಗಳಿಗೆ ಉಪಯೋಗಿಸಬೇಕೆಂದು ಆದೇಶ ಮಾಡಿತು.

ದೇವದಾಸಿ ಪದ್ಧತಿ ವಿರುದ್ಧ, ಪ್ರಪ್ರಥಮಬಾರಿಗೆ ಮೈಸೂರಿನಲ್ಲಿ ಸಮರ ಸಾರಲಾಯಿತು. ೧೯೦೪, ೧೯೦೭ ರಲ್ಲಿ ಹೆಣ್ಣು ಮತ್ತು ಮಕ್ಕಳನ್ನು ಅನೀತಿಯ ಕೆಲಸಗಳಿಗೆ ದುರುಪಯೋಗಪಡಿಸಿ ಕೊಳ್ಳುವುದರ ವಿರುದ್ಧ ಅಂತರ್ ರಾಷ್ಟ್ರೀಯ ಮಟ್ಟದ ಒಂದು ಶೃಂಗಸಭೆ ಕರೆಯಲಾಯಿತು. ೧೯೧೦ ರಲ್ಲಿ ಅಂದಿನ ಮೈಸೂರು ಮಹಾರಾಜರು ದೇವದಾಸಿ ಪದ್ಧತಿಯ ವಿರುದ್ಧ ಮೊತ್ತ ಮೊದಲಿಗೆ ಒಂದು ಶಾಸನವನ್ನು ಜಾರಿಗೆ ತಂದರು. ತಮಿಳುನಾಡು, ಆಂಧ್ರ, ಕೊಚ್ಚಿ, ತಿರುವಾಂಕೂರುಗಳ ಅರಸರು ಪದ್ಧತಿಯ ವಿರುದ್ಧ ಶಾಸನಗಳನ್ನು ತಂದರು.

ದೇವದಾಸಿ ಅಥವಾ ವೇಶ್ಯಾ ಸಮಸ್ಯೆಗೂ ಗಾಂಧಿಜೀಯವರು ಶುದ್ಧ ಜೀವನ ಸಂಹಿತೆಯನ್ನು ಪರಿಹಾರವಾಗಿ

ಸೂಚಿಸುತ್ತಾ, ಒಬ್ಬ ವೇಶ್ಯೆ ನೇರವಾಗಿ ಗಾಂಧಿಗೆ ನಾವು ಅತ್ಯಲ್ಪ ಕಾಲದಲ್ಲಿ ಈ ವೃತ್ತಿಯಿಂದಾಗಿ ೧೫-೨೦ ರೂ ಸಂಪಾದಿಸುತ್ತೇವೆ. ನಿಮ್ಮ ಚರಕ ನಮಗೇನು ಕೊಡುತ್ತದೆ? ಎಂಬ ಸವಾಲನ್ನು ಹಾಕಿದಳು. ಇದು ಗಾಂಧಿಯ ಮರ್ಮಕ್ಕೆ ತಾಗಿದ್ದ ಮಾತು. ಇಂಥ ಸ್ತ್ರೀಯರಿಗೆ ಪುನರ್ವಸತಿ ಕೇಂದ್ರಗಳನ್ನು ಸ್ಥಾಪಿಸಬೇಕೆಂದು ಗಾಂಧಿ ಮಹಿಳಾ ಸ್ವಯಂ ಸೇವಕಿಯರಿಗೆ ಒತ್ತಾಯಿಸಿದರು. ಸಾಕಷ್ಟು ಆರ್ಥಿಕ ಭದ್ರತೆ ಇಲ್ಲದ ಇವರ ಸ್ಥಿತಿಯನ್ನು ಪುರುಷವರ್ಗ ದುರುಪಯೋಗಪಡಿಸಿಕೊಳ್ಳುವ ಸಾಧ್ಯತೆ ಇದೆ ಎಂದು ಕೆಳಜಾತಿ ವರ್ಗಗಳ ನೆಲೆಯಲ್ಲಿ ಉಳಿದಿರುವ ದೇವದಾಸಿ, ಸಮಸ್ಯೆಗಳ ಪರಿಹಾರವು ಬದುಕುವ ಪ್ರಾಥಮಿಕ ಅವಶ್ಯಕತೆಗಳಲ್ಲಿ ಸ್ವಾವಲಂಬಿಯಾಗಿರುವುದನ್ನು ಅವಲಂಬಿಸಿದೆ ಎಂಬ ಅರಿವು ಗಾಂಧಿಗೆ ಇತ್ತು. ಈ ಕಾರಣಕ್ಕಾಗಿಯೇ ಗ್ರಾಮೀಣ ಬಡ ರೈತ ಹೆಂಗಳೆಯರ ಬದುಕು ಸ್ವಾವಲಂಬಿಯಾಗುವಂತೆ 'ಖಾದಿ' ಚಳುವಳಿಯನ್ನು ರೂಪಿಸಿದ ಗಾಂಧಿ ವೇಶ್ಯಾ ಸಮಸ್ಯೆಯ ಪರಿಹಾರಕ್ಕೂ, ಸ್ವಾವಲಂಬಿ ಜೀವನವಿಧಾನಕ್ಕೂ ಮಾದರಿಯಾಗಿ ಉತ್ತರವಾಗಿ ಇಟ್ಟರು.

ಬ್ರಿಟಿಷ್ ಸರ್ಕಾರ "೧೯೦೬-೦೭ ರಲ್ಲಿ ನಡೆದ ವಿಶ್ವರಾಷ್ಟ್ರೀಯ ಸಂಕೀರ್ಣದ ನಂತರದಲ್ಲಿ ಬ್ರಿಟಿಷ್ ಸರಕಾರ ಈ ಪದ್ಧತಿಯನ್ನು ರದ್ದು ಮಾಡುವ ಕಾನೂನು ಅಧಿನಿಯಮವನ್ನು ಜಾರಿಗೊಳಿಸಿತು. ವೇಶ್ಯಾವಾಟಿಕೆ ಯಾವುದೇ ರೂಪದಲ್ಲಿ ಅಸ್ತಿತ್ವದಲ್ಲಿದ್ದರೂ ಸರಿ ಅದನ್ನು ರದ್ದುಗೊಳಿಸಬೇಕೆಂಬ ತೀರ್ಪನ್ನು ಈ ಸಂಕೀರ್ಣ ಪ್ರಕಟಿಸಿತು. ೧೯೧೨ ರಲ್ಲಿ ನ್ಯಾಯವಾದಿಗಳ ಸಂಘಟನೆಯ ಮೂವರು ಸದಸ್ಯರಾಗಿದ್ದ ಮಾಣಿಕ್ ಜಿ. ದಾದಾ ಭಾಯ್, ಮುಧೋಳ್‌ಕರ್, ಹಾಗೂ ಮೆಡಕಿಯವರು ಈ ವಿಷಯವನ್ನು ಕುರಿತು ವೈಸ್‌ರಾಯರ ಸಭೆಯಲ್ಲಿ ಮೂರು ಪ್ರತ್ಯೇಕ ಮಸೂದೆಗಳನ್ನು ಮಂಡಿಸಿದರು"[೫]. ಈ ಮಸೂದೆಯ ಪರವಾದ ಜನಾಭಿಪ್ರಾಯಗಳನ್ನು ಕ್ರೋಢೀಕರಿಸಿದ ಅನಂತರ ಸರ್ಕಾರವು ೧೯೧೩ ರಲ್ಲಿ ತಾನೇ ಹೊಸದೊಂದು ಮಸೂದೆಯನ್ನು ತಯಾರಿಸಿ ಆಯ್ಕೆ ಸಮಿತಿಯ ಎದುರು ಪ್ರಸ್ತುತಪಡಿಸಿತು. ಈ ಆಯ್ಕೆ ಸಮಿತಿಯು ಮಾರ್ಚ್ ೧೯೧೪ ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಆದರೆ ಈ ಮಸೂದೆಯನ್ನು ಮತ್ತೊಮ್ಮೆ ಜನಾಭಿಪ್ರಾಯ ಸಂಗ್ರಹಕ್ಕೆ ಒಳಪಡಿಸಲಾಯಿತು. ಕಾನೂನು ಅಧಿನಿಯಮಗೊಳಿಸುವುದನ್ನು ನಿಧಾನಗೊಳಿಸುವುದು ಬಹುಶಃ ಅವರ ಉದ್ದೇಶವಾಗಿತ್ತು. ಅನಂತರದಲ್ಲಿ ಮೊದಲನೆಯ ಮಹಾಯುದ್ಧ ಆರಂಭವಾದದ್ದೇ ನೆಪವಾಗಿ ಈ ಮಸೂದೆಯು ದಶಕದಷ್ಟು ದೀರ್ಘಕಾಲ ಬೆಳಕನ್ನೇ ಕಾಣಲಿಲ್ಲ. ೧೯೨೨ರಲ್ಲಿ ಡಾ.ಗೋರೆಯವರು ವೈಸ್‌ರಾಯ್ ಸಭೆಯ ಮುಂದೆ ಮತ್ತೊಂದು ಮಸೂದೆ ತಯಾರಿಸಿ ಪ್ರಸ್ತುತಪಡಿಸಿದರು. ಎಷ್ಟೋ ದೀರ್ಘ ಚರ್ಚೆಗಳ ನಂತರದ ಜನಾಭಿಪ್ರಾಯಕ್ಕೆ ಅದನ್ನು ಒಪ್ಪಿಸಲು ಸಮ್ಮತಿ ದೊರೆಯಿತು. ಅಷ್ಟೇ ಆದರೂ ಕಾನೂನು ಅಧಿನಿಯಮಗೊಳ್ಳಲೇ ಇಲ್ಲ.

ಬ್ರಿಟಿಷ ಸುಧಾರಕರು ಈ ಪದ್ಧತಿಯ ವಿರುದ್ಧ ಕೆಲಸ ಮಾಡಿದ್ದಾರೆ. ಕ್ಯಾಥರಿನ್ ಮೆಯೋ ಅವರ 'ಮದರ್ ಇಂಡಿಯಾ' ಮತ್ತು 'ಸ್ಲಮ್ಸ ಆಫ್ ದಿ ಗಾಡ್ಸ್' ಗ್ರಂಥಗಳಲ್ಲಿ ಈ ಪದ್ಧತಿಯ ಬಗ್ಗೆ ವಿಚಿತ್ರ ಮೌಢ್ಯ ಎಂದು ವರ್ಣಿಸಲಾಗಿದೆ. ಅಬೆದುಬಾಯ್ಸ್ ಅವರ 'ಹಿಂದೂ ಮ್ಯಾನರ್ಸ್' 'ಕಸ್ಟಮ್ಸ್ ಅಂಡ್ ಸರ್ಮನೀಸ್' ಗ್ರಂಥಗಳಲ್ಲಿ ದೇವದಾಸಿಯರನ್ನು 'ಸೂಳೆ' ಯರೆಂದು ಪರಿಗಣಿಸಿದ್ದರ ಬಗ್ಗೆ ಉಲ್ಲೇಖವಿದೆ. ೧೯೨೨ ರಲ್ಲಿ ಡಾ.ಅನಿಬೆಸೆಂಟ್ ಎಂಬ ತರುಣಿ ಬ್ರಿಟನ್ನಿನಿಂದ ಇಲ್ಲಿಗೆ ಆಗಮಿಸಿ, ಈ ಪದ್ಧತಿಯ ವಿರುದ್ಧ ಸಾಮಾಜಿಕ ಪ್ರತಿಷ್ಠಿತರ ಸಹಿಯನ್ನು ಸಂಗ್ರಹಿಸಿದಳು.

೧೯೨೪ ರಲ್ಲಿ ಭಾರತೀಯ ದಂಡ ಸಂಹಿತೆಯಲ್ಲಿ ತಿದ್ದುಪಡಿಯೊಂದನ್ನು ತರಲಾಯಿತು. ೩೭೨ ಹಾಗೂ ೩೭೩ ನೇ ಕಲಮಿನಲ್ಲಿ ದೇವಾಲಯಗಳಿಗೆ ಹಾಗೂ ಪೂಜಾ ವಿಗ್ರಹಗಳಿಗೆ ಹುಡುಗಿಯರನ್ನು ಸರ್ಮಪಿಸುವ ಆಚರಣೆಯು ಕೊನೆಗೊಮ್ಮೆ ವೇಶ್ಯಾವೃತ್ತಿಯನ್ನು ಕೈಗೊಳ್ಳುವ ವಿಧಾನವಾಗಿ ಮಾರ್ಪಡಾಗುವ ಈ ಪದ್ಧತಿಯು ಅನೈತಿಕವಾದುದು ಎಂದು ಘೋಷಿಸಿದೆ. ಯಾರೇ ಆದರೂ ಹದಿನೆಂಟು ವರ್ಷಗಳಿಗೂ ಕಡಿಮೆ ವಯೋಮಾನದವರನ್ನು ಕೊಳ್ಳುವುದು ಅಥವಾ ಮಾರುವುದು, ಅನಂತರದಲ್ಲಿ ಯಾವುದಾದರೊಂದು ದಿನ ಅವಳನ್ನು ಬಳಸಿಕೊಳ್ಳಬಹುದೆಂದು ಸಾಕುವುದು, ಈ ಮೊದಲಾದ ಚಟುವಟಿಕೆಗಳಿಗೆ ತೊಡಗುವುದು ಶಿಕ್ಷಾರ್ಹರೆನಿಸುತ್ತಾರೆ. ೧೨ ವರ್ಷಗಳಿಗೂ ಕಡಿಮೆ ವಯಸ್ಸಿನ ಹುಡುಗಿಯರನ್ನು ಸಮರ್ಪಿಸುವ ಪದ್ಧತಿಯನ್ನು ಸಂಪ್ರದಾಯವಾದಿಗಳು ನಡೆಸುತ್ತಾ ಬಂದಿರುವಾಗ ಭಾರತೀಯ ದಂಡ ಸಂಹಿತೆಯ ಈ ಒಂದು ತಿದ್ದುಪಡಿಯಿಂದಾಗಿ ಸಹಜವಾಗಿಯೇ ಇಂಥ ಸಮರ್ಪಣೆಗೆ ಅಡ್ಡಿಯೊದಗಿಸಿತು. ಕನ್ಯೆಯರ ತಂದೆ ತಾಯಿಯರು ಹಾಗೂ ಪೋಷಕರೆನಿಸಿದವರು ಇದನ್ನು ವಿಪರೀತವಾಗಿ ವಿರೋಧಿಸಿದರು. ಅಪ್ರಾಪ್ತ ವಯಸ್ಸಿನ ಹುಡುಗಿಯರಿಗೆ ಗಾಯನ ನರ್ತನಗಳನ್ನು ಕಲಿಸುತ್ತಾ ಹಾಗೂ ಹೀಗೂ ಅವಳಿಗೆ ಹದಿನೆಂಟು ತುಂಬುವವರೆಗೂ ಕಾಯ್ದು ಆ ಕೂಡಲೇ ಅವಳನ್ನು ದೇವದಾಸಿಯನ್ನಾಗಿ ಮಾಡುವ ಪರಿಪಾಠ ಹೆಚ್ಚುತ್ತಾ ಹೋಯಿತು.

ಸಮಾಜ ಸುಧಾರಿತರು ೨೦ನೇ ಶತಮಾದ ಮೊದಲರ್ಧ ಭಾಗದವರೆಗೂ ಶ್ರೀ. ಇ.ವಿ.ರಾಮಸ್ವಾಮಿಯವರಂಥಹ ಸಮಾಜ ರಾಜಕೀಯ ಚಿಂತಕರ ಮಹತ್ತರವಾದ ಪ್ರಭಾವ ಸಾಮಾಜೋಧಾರ್ಮಿಕ ಸಂಸ್ಥೆಗಳ ಮೇಲೆ ಪರಿಣಾಮಕಾರಿಯಾಗಿಯೇ ಇತ್ತು. ರಾಮಸ್ವಾಮಿಯವರನ್ನು ಜನ ಪ್ರೀತಿಯಿಂದ 'ಪೆರಿಯಾರ್' ಎಂದೇ ಕರೆಯುತ್ತಿದ್ದರು. ಪೆರಿಯಾರ್‌ರವರು ಆರಂಭಿಸಿದ ಆತ್ಮಗೌರವ ಚಳುವಳಿಯು ದೇವದಾಸಿಯ ಪ್ರಸ್ತಾಪವನ್ನು ಕೈಗೆತ್ತಿಕೊಂಡಿತು. ಈ ಪದ್ಧತಿಯ ವಿರುದ್ಧ ಅಪಾರವಾದ ಜನಾಭಿಪ್ರಾಯವನ್ನು ಹುಟ್ಟು ಹಾಕಲಾಯಿತು. ಜಿಲ್ಲಾ ಮಂಡಳಿಗಳು ಹಾಗೂ ಪುರಸಭೆಗಳು ಸಹ ತಮ್ಮ ಪೂರ್ಣ ಬೆಂಬಲವನ್ನು ನೀಡಿದ್ದವು.

೨೦ನೇ ಶತಮಾನದ ಕೊನೆಯಲ್ಲಿ ವಿಜ್ಞಾನ, ಧರ್ಮ ಮತ್ತು ರಾಜಕೀಯ ಸುಧಾರಣೆ, ಕ್ರೈಸ್ತ ಧರ್ಮ ಪ್ರಚಾರಕರ ಸದಸ್ಯರಲ್ಲಿ ಮತ್ತು ಮಹಿಳಾ ಸಾಮಾಜಿಕ ಕಾರ್ಯಕರ್ತರುಗಳಲ್ಲಿ ಮೇಲುಜಾತಿಯ ಪದ್ಧತಿಗಳನ್ನು ಮತ್ತು ಮಾವನೀಯತೆಯ ಆಧಾರಗಳ ಹವ್ಯಾಸಗಳನ್ನು ಬೆಲೆ ಕೊಡದಿರುವ ಹಾಗೆ, ಅಪ್ರಾಪ್ತ ಲೈಂಗಿಕತೆ ಕುರಿತು ಅವರು ವೈದ್ಯಕೀಯ ವರದಿಗಳನ್ನು ಪ್ರಕಟಿಸಲು ಪ್ರಾರಂಭಿಸಿದರು. ದೇವಾಲಯ ಅರ್ಪಣಾ ನಿಷೇಧದ ಶಾಸನಬದ್ದ ಹೋರಾಟವನ್ನು ಡಾ.ಎಸ್.ಮುತ್ತುಲ ಸ್ವಾಮರೆಡ್ಡಿ ವಹಿಸಿಕೊಂಡರು. ತಮ್ಮ ಗುರಿ ಸಾಧಿಸಲು ಪ್ರಾದೇಶಿಕ, ರಾಜಕೀಯ ಪಕ್ಷಗಳು, ಬ್ರಿಟಿಷ್ ತಂತ್ರಗಳನ್ನು ಮತ್ತು ಅವರ ಪತ್ರಿಕೋದ್ಯಮದ ಜಾಣ್ಮೆಗಳನ್ನು ಸುಧಾರಣಾ ಚಳುವಳಿಯ ಮುಂದಾಳುಗಳು ಎಚ್ಚರಿಕೆಯಿಂದ ಬಳಸಿಕೊಂಡರು. ೧೯೩೪ ರ ದೇವದಾಸಿ ಕಾನೂನಿನಲ್ಲಿ ಈ ರೀತಿ ಹೇಳಲಾಗಿತ್ತು, ಯಾವೊಬ್ಬ ಮಹಿಳೆಯನ್ನು ಶಾಸ್ತ್ರದ ಹೆಸರು ಹೇಳಿ ಅವಳ ಮನಸ್ಸಿನ ವಿರುದ್ಧವಾಗಿ ದೇವದಾಸಿಯನ್ನಾಗಿಸುವುದು ದಂಡನಾರ್ಹ. ಇಂತಹ ಶಾಸ್ತ್ರ ವಿಧಿಗಳಿಗೆ ಬೆಲೆ ಇರುವುದಿಲ್ಲ. ಇಂತಹ ದೇವದಾಸಿ ಪದ್ಧತಿ ಮತ್ತು ಅಪ್ರಾಪ್ತ ವಯಸ್ಕ ಮಕ್ಕಳ ಮೇಲೆ ನಡೆಯುವ ಅನಾಚಾರವನ್ನು ಖಂಡಿಸಿ ಪ್ರಚಾರ ಮಾಡಿದ "ಆಲ್ ಇಂಡಿಯಾ ಉಮನ್ಸ್ ಕಾನ್ಫರೆನ್ಸ್" ೧೯೩೧ ರಲ್ಲಿ ಖಂಡಿಸಿತು.

ಬ್ರಿಟಿಷ್ ಸರ್ಕಾರ ೧೯೩೬ ರಲ್ಲಿ ಮದ್ರಾಸ ವಿಧಾನ ಪರಿಷತ್ತಿನಲ್ಲಿ ದೇವದಾಸಿ ಪದ್ಧತಿಯನ್ನು ನಿರ್ಮೂಲನ ಮಾಡಲು ಸರ್ವಾನುಮತದಿಂದ ವಿಧೇಯಕವೊಂದನ್ನು ಅಂಗೀಕರಿಸಿತು. 'ಸಮಾಜ ಸುಧಾರಕ' ಹಾಗೂ ಗಾಂಧಿವಾದಿಯಾದ ಗಣೇಶಗೋವಿದ ಕಾರ ಖಾನೀಸ್ ಅವರು ದೀನದಲಿತರು ಏಳಿಗೆ ಹಾಗೂ ದೇವದಾಸಿಯರ ವಿಮೋಚನೆಗಾಗಿ ತನ್ನ ಜೀವನವನ್ನೇ ಮುಡುಪಾಗಿಟ್ಟು, ಬಿಜಾಪುರ ಜಿಲ್ಲೆಯಲ್ಲಿ ಹೋರಾಟ ನಡೆಸಿ ಈ ಪದ್ಧತಿ ಕಾನೂನು ಬಾಹಿರವೆಂದು ಶಾಸನ ಮಾಡಿಸಲು ಅಪಾರವಾಗಿ ಶ್ರಮಿಸಿದರು. ಹೀಗೆ ಅಧಃಪತನಕ್ಕೆ ನೂಕಲ್ಪಡುವ ಹೆಣ್ಣುಮಕ್ಕಳಿಗೆ ರಕ್ಷಣೆ ನೀಡಿ, ಮದುವೆ ಮಾಡಿ, ಅವರ ಗೌರವಯುತ ಜೀವನ ನಡೆಸಲು ಬಿಜಾಪುರದಲ್ಲಿ 'ಅಹಲ್ಯೋದ್ಧಾರ' ಮಂದಿರ ಸ್ಥಾಪಿಸಲಾಯಿತು.

೧೯೨೮ರ ನಂತರದಲ್ಲಿ ನಡೆದ ಆತ್ಮಗೌರವ ಚಳುವಳಿಯ ಪ್ರತಿಯೊಂದು ವರ್ಷಾವಧಿ ಸಮ್ಮೇಳನದಲ್ಲೂ ವೇಶ್ಯಾಪದ್ಧತಿಯನ್ನು ಖಂಡಿಸುವುದರ ಜೊತೆಗೆ ಅವರನ್ನು ಮುಕ್ತಗೊಳಿಸಿ ಮದುವೆ ಮಾಡಿ ಎಂದು ಒತ್ತಾಯ ತಂದಿತು. ಲೋಕಸಭೆಯಲ್ಲೂ ಈ ಬಗ್ಗೆ ಪ್ರಭಾವ ಬೀರುವ ವ್ಯಕ್ತಿಗಳು ಬಹಳವಾಗಿಯೇ ಇದ್ದರು. ಆದರೆ, ಈ ಕಾನೂನುಗಳು ಪ್ರಾಮಾಣಿಕವಾಗಿ ಒತ್ತಾಯ ತಂದರೂ ಹುಡುಗಿಯರ ಸಮರ್ಪಣೆಯನ್ನು ತಡೆಯುವಲ್ಲಿ ಪೂರ್ಣ ಪ್ರಮಾಣದ ಯಶಸ್ಸನ್ನು ಪಡೆಯಲಾಗಲಿಲ್ಲ. 'ಸ್ವಾತಂತ್ರ್ಯ ಬಂದ ಅನಂತರ', ಕೆಳಜಾತಿಯವರಲ್ಲಿ ಹಾಗೂ ಹಿಂದುಳಿದ ಸಮುದಾಯಗಳಲ್ಲಿ ಗಣನೀಯವಾದ ಸಾಮಾಜಿಕ ಬದಲಾವಣೆಯಾದ ಮೇಲೆ ಈ ಪದ್ಧತಿ ನಿಂತು ಹೋಯಿತು. ಈ ರೀತಿಯ ಸಮರ್ಪಣೆಯನ್ನು ತಡೆಯಲು ಪರಿಶಿಷ್ಟ ಜಾತಿಯ ಯುವಕರು ವ್ಯವಸ್ಥಿತ ಪ್ರತಿಭಟನೆಯನ್ನು ಮಾಡಿರುವ ನಿದರ್ಶನಗಳಿವೆ.

**೬. ೬ ಸ್ವಾತಂತ್ರ್ಯಾನಂತರ ಕೈಗೊಂಡ ಕ್ರಮಗಳು**

ದೇವದಾಸಿ ಪದ್ಧತಿಯಲ್ಲಿ ಬಡ ಕುಟುಂಬಗಳ ಹೆಣ್ಣು ಮಕ್ಕಳು ದೇವತೆಗಳಿಗೆ ಮದುವೆಯಾಗಿ ಅನಂತರ, ವೇಶ್ಯೆಯರಾಗಿ ಹಳ್ಳಿಗರ ಅನುಕಂಪದ ಮೇಲೆ ಬದುಕ ಬೇಕಿದೆ. ೧೬,೦೦೦ ಕ್ಕೂ ಹೆಚ್ಚು ದೇವದಾಸಿಯರು ಕರ್ನಾಟಕ ರಾಜ್ಯದಲ್ಲಿದ್ದಾರೆ. ಸಾಮಾಜಿಕ, ಆರ್ಥಿಕ ಪುನರ್ವಸತಿಯನ್ನು ದೇವದಾಸಿಯರಿಗೆ ಒದಗಿಸಲು ರಾಜ್ಯ ಸರ್ಕಾರವು ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದೆ. ಅವರಿಗೆ ನಿವೇಶನಗಳನ್ನು ಒದಿಗಿಸುವುದು, ಮನೆಗಳನ್ನು ಕಟ್ಟಿಕೊಡುವುದು, ಅವರ ಮಕ್ಕಳಿಗೆ ಶಿಕ್ಷಣ ಸೌಲಭ್ಯ ಒದಗಿಸುವುದು. ಈ ರೀತಿಯ ಕಾರ್ಯಗಳನ್ನು ಅವುಗಳು ಒಳಗೊಂಡಿವೆ. "ಇತ್ತೀಚೆಗೆ ಕರ್ನೂಲ್ ಜಿಲ್ಲೆಯ ಅದೋನಿಯಲ್ಲಿ ದೇವದಾಸಿ ಮನೆಗಳ ಬಡಾವಣೆಯೊಂದು ಅಸ್ತಿತ್ವಕ್ಕೆ ಬಂದಿದೆ. ಇಂತಹ ವಿಶೇಷ ಬಡಾವಣೆಗಳನ್ನು ಕಟ್ಟಿಸಿ ಪ್ರತ್ಯೇಕತೆಯನ್ನುಂಟು ಮಾಡುವುದು ಪ್ರಶ್ನಾರ್ಹವಾದರೂ ಅನಿವಾರ್ಯವಾಗಿತ್ತು"[೬].

ಕರ್ನಾಟಕ ದೇವದಾಸಿ (ಸಮರ್ಪಣಾ ನಿಷೇಧ) ಕಾಯ್ದೆ ಎಂಬ ಇನ್ನೊಂದು ಮಸೂದೆಯನ್ನು ೧೯೮೨ ರಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಜಾರಿಗೆ ತಂದಿತು. ಈ ಕಾನೂನು ಪ್ರಕಾರ ಯಾವುದೇ ದೇವತೆಗೆ, ದೇವಾಲಯಕ್ಕೆ, ಮಹಿಳೆಯರನ್ನು, ಬಾಲಕಿಯರನ್ನು, ಅರ್ಪಿಸುವುದು ನಿಷೇಧಗೊಂಡಿದೆ. ಯಾರಾದರೂ ಇಂತಹ ಆಚರಣೆಗೆ ನೇರವಾಗಿ ಇಲ್ಲವೇ ಅಪರೋಕ್ಷವಾಗಿ ನೆರವು ನೀಡಿದರೆ, ಅಂತವರಿಗೆ ರೂ. ೨೦೦೦ ದಿಂದ ರೂ. ೫೦೦೦ ಗಳ ವರೆಗೆ ದಂಡ ವಿಧಿಸಲಾಗುತ್ತದೆ. ಮತ್ತು ಸೆರೆಮನೆಗೆ ತಳ್ಳಲಾಗುತ್ತದೆ. ಈ ಕಾನೂನಿನ ಅಡಿಯಲ್ಲಿ

ದೇವದಾಸಿಯರಿಗೆ ಪುನರ್ವಸತಿ ಕಾರ್ಯ ಕ್ರಮಗಳನ್ನು ನಿಯೋಜಿಸಲಾಗಿದೆ. ಕರ್ನಾಟಕ ಸರಕಾರದ ಸಮಾಜ ಕಲ್ಯಾಣ ಇಲಾಖೆಯು ಈ ಬಗ್ಗೆ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ದೇವದಾಸಿಯರನ್ನು ಮದುವೆಯಾಗುವವರಿಗೆ ರೂ. ೩೦೦೦ ಗಳ ಪ್ರೋತ್ಸಾಹ ಹಣವನ್ನು ನೀಡುವುದಲ್ಲದೇ, ಅವರು ಹಾಗೂ ಅವರ ಮಕ್ಕಳಿಗೆ ಅನುಕೂಲಕರವಾದ ಅನೇಕ ಯೋಜನೆಗಳು ಈ ಕಾರ್ಯಕ್ರಮದಲ್ಲಿ ಸೇರಿವೆ.

ಇಷ್ಟೆಲ್ಲಾ ಸುಧಾರಣಾ ಕ್ರಮಗಳನ್ನು ಕೈಗೊಂಡಿದ್ದರೂ ದೇವದಾಸಿ ಪದ್ಧತಿಯನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗಿಲ್ಲ. ಇನ್ನೂ ಜೀವಂತವಾಗಿದ್ದು, ಇದರ ಚಿಹ್ನೆಗಳು ಇಂದಿಗೂ ಉಳಿದಿವೆ. ದೇವತೆಗಳಿಗೆ ಬಾಲಕಿಯರನ್ನು ಅರ್ಪಿಸುವ ರೂಢಿಯೂ ಈಗಲೂ ಮುಂದುವರೆದಿದ್ದು, 'ಧಾರ್ಮಿಕ ವೇಶ್ಯಾವೃತ್ತಿ'ಯು 'ವ್ಯಾಪಾರಿ ವೇಶ್ಯಾವೃತ್ತಿ' ಯಾಗಿ ಮಾರ್ಪಾಡು ಹೊಂದಿದೆ. ತಾವು ಏನೇ ಮಾಡಿದರೂ ಅದು ದೇವರ ಸೇವೆಯೇ ಎಂದು ಭಾವಿಸುತ್ತಾರೆ. ಹೀಗಾಗಿ ಸಾಮಾಜಿಕ ಕಳಂಕವಿಲ್ಲವೆಂಬ ನಂಬಿಕೆ. ಜೊತೆಗೆ ಬಡತನದ ಕಾರಣವೂ ಸೇರಿದೆ. ಮುಂಬಾಯಿಯಂಥ ಮಹಾನಗರದಲ್ಲಿರುವ ಕೆಂಪು ದೀಪದ ಬಡಾವಣೆಯಲ್ಲಿ ನಡೆಸಿದ ಸಮಾಜ ಶಾಸ್ತ್ರೀಯ ಸರ್ವೇಕ್ಷಣೆಯಿಂದ ಅಲ್ಲಿರುವ ವೇಶ್ಯೆಯರಲ್ಲಿ ೧ /೩ ಪಾಲು ವೇಶ್ಯೆಯರು ದೇವದಾಸಿಯರಾಗಿದ್ದಾರೆಂದು ತಿಳಿದು ಬಂದಿದೆ.

ಇಂದು ದೇವದಾಸಿಯರನ್ನು ವೇಶ್ಯೆಯರಂತೆ ಪರಿಗಣಿಸಿ, ಹಾಗೆ ನಡೆಸಿಕೊಳ್ಳುತ್ತಿರುವುದು ಸಾಮಾನ್ಯವಾಗಿದೆ. ಈ ದೇವದಾಸಿ ಪದ್ಧತಿಯಡಿಯಲ್ಲಿ ವೇಶ್ಯಾವಾಟಿಕೆ ದಂಧೆ ವಿಸ್ತೃತಗೊಳ್ಳುತ್ತಿದೆ. ಹೀಗೆ ವೇಶ್ಯಾಪದ್ಧತಿಯು ಸಾಮಾಜಿಕ ಧಾರ್ಮಿಕ ಪದ್ಧತಿಗಳೊಂದಿಗೆ ಸೇರಿಕೊಂಡಿದ್ದು, ವೇಶ್ಯೆಯರನ್ನು ಅವರ ಬಂಧನದಿಂದ 'ವಿಮುಕ್ತಿ' ಗೊಳಿಸಬೇಕಾದರೆ, ಅದಕ್ಕೂ ಮೊದಲು ಈ ಅನಿಷ್ಟಕರ ಪದ್ಧತಿಗಳನ್ನು ತೊಡೆದು ಹಾಕಬೇಕಾಗುವುದು. ದೇವದಾಸಿ ಪದ್ಧತಿ, ಬಸವಿ ಪದ್ಧತಿ, ಜೋಗತಿಯರ ಪದ್ಧತಿ, 'ಕುಲೀನರ' ಪದ್ಧತಿ ಅಥವಾ ಪಾತ್ರದವರ ಪದ್ಧತಿ, ಗೆಜ್ಜೆಪೂಜೆ, ಬಾಲ್ಯವಿವಾಹ, ವಿಧವಾ ಪುನರ್‌ವಿವಾಹ ನಿಷೇಧ, ವರದಕ್ಷಿಣೆ, ಬಹುಪತ್ನಿತ್ವ, ದ್ವಿಪತ್ನಿತ್ವ, ಬೆತ್ತಲೆಸೇವೆ ಮುಂತಾದ ಸಾಮಾಜಿಕ ಹಾಗೂ ಧಾರ್ಮಿಕ ಹಿನ್ನೆಲೆಯ ಪದ್ಧತಿಗಳು ವೇಶ್ಯಾ ಸಮಸ್ಯೆಯ ಬೆಳವಣಿಗೆಗೆ ಪೂರಕವಾಗಿರುವುದರಿಂದ ಅವುಗಳನ್ನು ತೊಡೆದು ಹಾಕುವುದು ಅವಶ್ಯವೆಂದು, ಈ ನಿಟ್ಟಿನಲ್ಲಿ ಹಲವಾರು ಕಾನೂನು ಕ್ರಮಗಳನ್ನು ಪುರಾತನ ಕಾಲದಿಂದಲೂ ಆಧುನಿಕ ಕಾಲದ ವರೆಗೆ ಇದರ ನಿರ್ಮೂಲನೆಗಾಗಿ ಈ ಕೆಳ ಕಂಡ ಪ್ರಮುಖ ಶಾಸನಗಳನ್ನು ಮಾಡಲಾಗಿದೆ.

೧. "ಭಾರತೀಯ ದಂಡಸಂಹಿತೆ"ಯಲ್ಲಿ- ಕೆಲವು ಅಧಿನಿಯಮಗಳನ್ನು ಸೇರ್ಪಡೆ ಮಾಡಿ (೩೫೪, ೩೬೬, ೩೭೩, ೩೭೫,ಮತ್ತು ೪೯೫) ಅವುಗಳ ಪ್ರಕಾರ ಅನೈತಿಕ ಲೈಂಗಿಕ ಸಂಬಂಧವನ್ನು ದಂಡಾರ್ಹವಾದ ಹಾಗೂ ಕಾನೂನುಬಾಹಿರ "ಅಪರಾಧ" ವೆಂದು ಪರಿಗಣಿಸಲಾಗಿದೆ. ವೇಶ್ಯಾವೃತ್ತಿಯ ಉದ್ದೇಶಕ್ಕಾಗಿ ೧೮ ವರ್ಷಗಳ ಒಳಗಿನ ಕನ್ಯೆಯರನ್ನು ಅಕ್ರಮವಾಗಿ ಸ್ವಾಧೀನ ಪಡಿಸಿಕೊಳ್ಳುವವರಿಗೆ, ಮಾರುವವರಿಗೆ, ಹಾಗೂ ಕೊಂಡುಕೊಳ್ಳುವವರಿಗೆ ಕಾನೂನು ಪ್ರಕಾರ ೧೦ ವರ್ಷದೊಳಗಿನ ಕಾರಾಗೃಹ ಶಿಕ್ಷೆಯನ್ನು ಹಾಗೂ ದಂಡವನ್ನು ವಿಧಿಸುವ ಅವಕಾಶವಿದೆ. ೨೧ ವರ್ಷದೊಳಗಿನ ಕನ್ಯೆಯರನ್ನು ವಿದೇಶಗಳಿಗೆ ಮಾರುವುದನ್ನು ಕೂಡ ಇದೇ ರೀತಿ ದಂಡಿಸಲಾಗುವುದು.

೨. ಮುಂಬೈ ವೇಶ್ಯಾವೃತ್ತಿ ನಿರ್ಮೂಲನಾ ಕಾಯ್ದೆ- ೧೯೨೩ ಈ ಕಾಯ್ದೆಯ ಪ್ರಕಾರ ವೇಶ್ಯಾಗೃಹಗಳನ್ನು ನಡೆಸುವುದು, ವೇಶ್ಯಾಗೃಹಗಳಿಗೆ ಹೆಣ್ಣು ಮಕ್ಕಳನ್ನು ಪೂರೈಕೆ ಮಾಡುವುದು ವೇಶ್ಯಾವಾಟಿಕೆಗಳಲ್ಲಿ ತೊಡಗುವುದು. ಇವೆಲ್ಲವೂ ದಂಡನಾರ್ಹವಾದ ಅಪರಾಧಗಳೆನಿಸುತ್ತವೆ.

೩. ನೈತಿಕ ಹಾಗೂ ಸಾಮಾಜಿಕ ಸ್ವಾಸ್ಥ್ಯಸಂಘದ ಪಾತ್ರ -ಇಂಗ್ಲೆಂಡಿನ "ನೈತಿಕ ಹಾಗೂ ಸಾಮಾಜಿಕ ಸ್ವಾಸ್ಥ್ಯ ಸಂಘ"ವು ೧೮೭೫ ರ ಹೊತ್ತಿಗೆ ಭಾರತದಲ್ಲಿಯೂ ತನ್ನ ಚಟುವಟಿಕೆಗಳನ್ನು ಆರಂಭಿಸಿದ್ದಲ್ಲದೆ, ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವ ಹಾಗೂ ಸಾರ್ವಜನಿಕ ನೈತಿಕತೆಯನ್ನು ಕಾಯ್ದುಕೊಳ್ಳುವ ದೃಷ್ಟಿಯಿಂದ ಸ್ತ್ರೀಯರ 'ಲೈಂಗಿಕ ವ್ಯವಹಾರವನ್ನು' ಸಂಪೂರ್ಣ ನಿಷೇಧಿಸಬೇಕೆಂದು ಶಿಫಾರಸು ಮಾಡಿತು. ಈ ಸಂಘದ ಒತ್ತಡದಿಂದಾಗಿ ಭಾರತದಲ್ಲಿ ನೆಲೆಯೂರಿದ್ದ ಬ್ರಿಟಿಷ್ ಸೈನಿಕರ ಲೈಂಗಿಕ ತೃಪ್ತಿಗಾಗಿ ಭಾರತೀಯ ಹಾಗೂ ಜಪಾನೀ ಕನ್ಯೆಯರ ಪೂರೈಕೆ ಮಾಡುವುದು ಸ್ಥಗಿತಗೊಂಡಿತು.

ದೇಶಕ್ಕೆ ಸ್ವಾತಂತ್ರ್ಯನಂತರ ೧೯೫೧ ರಿಂದಲೂ ತನ್ನ ಸಮ್ಮೇಳನಗಳನ್ನು ಜರುಗಿಸುತ್ತಾ ಬರುತ್ತಿದ್ದು ಸಾಮಾಜಿಕ ಹಾಗೂ ನೈತಿಕ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳುವ ಅಗತ್ಯವನ್ನು ಒತ್ತಿ ಹೇಳುತ್ತದೆ. ಈ ಸಂಬಂಧವಾಗಿ ಅದು ಹಲವಾರು ಪ್ರಸ್ತಾಪಗಳನ್ನು ಹಾಗೂ ಸಲಹೆಗಳನ್ನೂ ಕೂಡ ಮುಂದಿಡುತ್ತಾ ಬಂದಿದೆ. ದೇಶದ ಹಲವಾರು ರಾಜ್ಯಗಳಲ್ಲಿ ಜಾರಿಯಲ್ಲಿದ್ದ ಲೈಂಗಿಕ ಚಟುವಟಿಕೆಗೆ ನಿಗ್ರಹಣ ಕಾಯ್ದೆಗಳ ಲೋಪ ದೋಷಗಳ ಬಗ್ಗೆ ಸರ್ಕಾರದ ಗಮನ ಸೆಳೆದ ಈ ಸಂಘವು ಅವುಗಳನ್ನು ಪರಿಣಾಮಕಾರಿಯಾಗಿಸುವ ಅಗತ್ಯವಿದೆ ಎಂದು ಘೋಷಿಸಿತು. ೧೯೫೩ ರಲ್ಲಿ ಜರುಗಿದ ಈ ಸಂಘದ ಸಮ್ಮೇಳನದಲ್ಲಿ ವೇಶ್ಯಾವಾಟಿಕೆಯನ್ನು ಸಂಪೂರ್ಣವಾಗಿ ತೊಡೆದು ಹಾಕಬೇಕೆಂದು ಆಗ್ರಹಿಸಲಾಯಿತು.

೪. ಮಹಿಳೆಯರ ಮತ್ತು ಹೆಣ್ಣು ಮಕ್ಕಳ ಅನೈತಿಕ ಮಾರಾಟ ನಿಗ್ರಹ ಕಾಯ್ದೆ ೧೯೫೬ ಇದು ಸಂಸತ್ತಿನ ಅನುಮೋದನೆ ಪಡೆದ ಮಹಿಳೆಯರ ಮತ್ತು ಹೆಣ್ಣು ಮಕ್ಕಳ ಅನೈತಿಕ ಮಾರಾಟ ನಿಗ್ರಹ ಕಾಯ್ದೆ ಯು ೧೯೫೮ ರ ಮೇ ೧ ರಿಂದ ಆಚರಣೆಗೆ ಬಂದಿತು. ಈ ಕಾಯ್ದೆಯಂತೆ ವೇಶ್ಯಾವೃತ್ತಿಯನ್ನು ಯಾವುದೇ ರೂಪದಲ್ಲಿಯೂ ಆಚರಿಸುವಂತಿಲ್ಲ.

೫. ಬೆತ್ತಲೆ ಸೇವೆಯ ಮೇಲೆ ನಿರ್ಬಂಧ - ರೇಣುಕಾಂಬಾ ದೇವತೆಯ ಹೆಸರಿನಲ್ಲಿ ಹರಕೆ ಹೊತ್ತ ಸ್ತ್ರೀಯರು ಬೆತ್ತಲೆಯಾಗಿ ಬಂದು 'ದೇವರ ಸೇವೆ' ಮಾಡುತ್ತಿದ್ದ ಪದ್ಧತಿ ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿಯ ರೇಣುಕಾಂಬಾ ದೇವಾಲಯದಲ್ಲಿ ವರ್ಷಕ್ಕೊಮ್ಮೆ ಫಾಲ್ಗುಣ ಶುದ್ಧ ನವಮಿಯ ದಿನ ಜರುಗುತ್ತಿದ್ದ ಜಾತ್ರೆಯಂದು ಹರಕೆ ಹೊತ್ತ ನೂರಾರು ಯುವತಿಯರು ಮತ್ತು ಸ್ತ್ರೀಯರು ದೇವಾಲಯದ ಪಕ್ಕದ ಹರಿಯುವ ನೀರು ಅಥವಾ ಕೆರೆಯಿಂದ ಸ್ನಾನಮಾಡಿ ಬೆತ್ತಲೆಯಾಗಿಯೇ ನಡೆದು ಬಂದು ದೇವರ ಸೇವೆ ಮಾಡುವುದು ಪದ್ಧತಿಯಾಗಿತ್ತು. ಹಾಗೆ ಸೇವೆ ಮಾಡುವವರಲ್ಲಿ ಬಹಳಷ್ಟು ಮಂದಿಯನ್ನು ವೇಶ್ಯಾವೃತ್ತಿಗೆ ಬಳಸಲಾಗುತ್ತಿತ್ತು. ಈ ಸಂಬಂಧವಾಗಿ ೧೯೮೬ ರಲ್ಲಿ ಉಂಟಾದ ಪ್ರತಿಭಟನೆಯ ಕೋಲಾಹಲದಿಂದಾಗಿ ರಾಜ್ಯ ಸರ್ಕಾರವು ಹೇರಿದ ನಿರ್ಬಂಧದಿಂದಾಗಿ ಈ ಆಚರಣೆ ಮರೆಯಾಗುತ್ತಾ ಬಂದಿತು.

ದೇವದಾಸಿ ಪದ್ಧತಿಯ ಪುನರ್ವಸತಿ ಕರಣಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ೫ ರಿಂದ

೧೫ ವರ್ಷ ಮಕ್ಕಳಿಗಾಗಿ ಸವದತ್ತಿಯಲ್ಲಿ ಸರ್ಟಿಫೈಡ್ ಶಾಲೆಯನ್ನು ತೆರೆಯಲಾಗಿದೆ. ೧೮ ರಿಂದ ೩೫ ವರ್ಷದೊಳಗಿನ ದೇವದಾಸಿಯರಿಗಾಗಿ ಅಥಣಿಯಲ್ಲಿ ಸ್ಟೇಟ್ ಹೋಮ್ಸ್ ಮತ್ತು ಮನೋಲಿ, ಕಟಕೋಳ, ಯಾದವಾಡ ಮತ್ತು ಕೌಜಲಗಿಗಳಲ್ಲಿ ತಲಾ ಒಂದೊಂದು ತರಬೇತಿಕೇಂದ್ರವನ್ನು ಸ್ಥಾಪಿಸಲಾಗಿದೆ.

ಬೊಂಬಾಯಿ ಮತ್ತಿತರ ಕಡೆಗಳಿಗೆ ದೇವದಾಸಿಯರನ್ನು ವೇಶ್ಯಾವಾಟಿಕೆಗಳಿಗೆ ಸಾಗಿಸುವುದನ್ನು ತಪ್ಪಿಸಲು ಬೆಳಗಾಂ ಮತ್ತು ಬೀದರ್‌ನಲ್ಲಿ ಎರಡು ವಿಶೇಷ ಘಟಕಗಳನ್ನು ರಚಿಸಲಾಗಿದೆ. ದೇವದಾಸಿ ಪದ್ಧತಿಯನ್ನು ಅನುಸರಿಸುವವರಿಗೆ ಮೂರು ವರ್ಷ ಸೆರೆಮನೆವಾಸ ಹಾಗೂ ಎರಡು ಸಾವಿರ ರೂಪಾಯಿ ಜುಲ್ಮಾನೆ ಅಥವಾ ದಂಡ ವಿಧಿಸಿ, ಈ ಪದ್ಧತಿಗೆ ಪ್ರೋತ್ಸಾಹಿಸಿದವರಿಗೆ ೫ ವರ್ಷ ಸೆರೆಮನೆವಾಸ ಹಾಗೂ ೫ ಸಾವಿರ ರೂಪಾಯಿ ದಂಡ ವಿಧಿಸಬಹುದಾಗಿದೆ. ಈ ಅನಿಷ್ಟ ಪದ್ಧತಿಯ ವಿರುದ್ಧ ಸಾಕಷ್ಟು ಪ್ರಚಾರ ಕಾರ್ಯ ನಡೆಸಲಾಗುತ್ತಿದೆ.

ಕರ್ನಾಟಕ ರಾಜ್ಯದಲ್ಲಿ ೧೯೯೦-೯೧ ಸಾಲಿನಲ್ಲಿ ದೇವದಾಸಿಯರ ಪುನರ್ ವಸತಿಗಾಗಿ ಐದು ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು. ಅದಕ್ಕಾಗಿ ೧.೫ ಕೋಟಿ ರೂ. ವೆಚ್ಚ ಮಾಡಲಾಗಿದೆ. ಬಳ್ಳಾರಿ, ರಾಯಚೂರು, ಧಾರವಾಡ, ಬೆಳಗಾಂ ಮತ್ತು ಬಿಜಾಪುರ ಜಿಲ್ಲೆಗಳು ಈ ಯೋಜನೆಯ ವ್ಯಾಪ್ತಿಯಡಿಗೆ ಸೇರಿದವು. ದೇವದಾಸಿಯ ಸ್ವಯಂ ಉದ್ಯೋಗ ಯೋಜನೆಯಡಿ ತರಬೇತಿ ಕೊಡಲಾಗುವುದು. ಹಾಗೂ ಪುನರ್‌ವಸತಿ ಕಲ್ಪಿಸಲಾಗುವುದು. ಈ ಸಂದರ್ಭದಲ್ಲಿ ಹರಿಜನ ಗಿರಿಜನ ಅಭಿವೃದ್ಧಿ ನಿಗಮದ ವತಿಯಿಂದ ಲಭ್ಯವಾದ ಅಧಿಕೃತ ಅಂಕಿ ಅಂಶಗಳ ಪೈಕಿ ಬಳ್ಳಾರಿ ಜಿಲ್ಲೆಯಲ್ಲಿ ೧೬೩೫ ದೇವದಾಸಿಯರನ್ನು ಗುರುತಿಸಲಾಗಿದೆ. ಹೊಸಪೇಟೆಯಲ್ಲಿ ೨೪೨, ಹಗರಿಬೊಮ್ಮನಹಳ್ಳಿಯಲ್ಲಿ ೧೮೯, ಹರಪನಹಳ್ಳಿಯಲ್ಲಿ ೧೬೦, ಕೂಡ್ಲಿಗಿಯಲ್ಲಿ ೧೮೦, ಬಳ್ಳಾರಿ ತಾಲ್ಲೂಕಿನಲ್ಲಿ ೧೬೦, ಸಂಡೂರು ತಾಲ್ಲೂಕಿನಲ್ಲಿ ೧೨೧, ಹಡಗಲಿ ತಾಲ್ಲೂಕಿನಲ್ಲಿ ೧೪೩ ಮತ್ತು ಶಿರಗುಪ್ಪ ತಾಲ್ಲೂಕಿನಲ್ಲಿ ೧೧೫ ದೇವದಾಸಿಯರನ್ನು ಗುರುತಿಸಲಾಗಿದೆ. ದೇವದಾಸಿಯರ ಮಕ್ಕಳಿಗಾಗಿ ಪ್ರತ್ಯೇಕವಾಗಿ ಒಂದು ನವೋದಯ ಮಾದರಿ ಶಾಲೆಯನ್ನು ಬಳ್ಳಾರಿ ಜಿಲ್ಲೆಯಲ್ಲಿ ಪ್ರಾರಂಭಿಸಲು ಉದ್ದೇಶಿಸಲಾಗಿದೆ. ಆ ಶಾಲೆಯಲ್ಲಿ ವಸತಿ ಮತ್ತು ಊಟದ ವ್ಯವಸ್ಥೆ ಮಾಡಲು ಗುರಿಯಿಟ್ಟುಕೊಳ್ಳಲಾಗಿದೆ. ಹೀಗೆ ದೇವದಾಸಿ ಪದ್ಧತಿಯನ್ನು ಬೇರು ಸಹಿತವಾಗಿ ಕೀಳಲು ಯತ್ನಿಸಲಾಗಿದೆ. ಇವುಗಳಲ್ಲದೇ ಹಲವಾರು ಸುಧಾರಣಾ ಕ್ರಮಗಳನ್ನು ಕೈಗೊಳ್ಳಲಾಗಿದೆ.

**೬. ೭ ಕರ್ನಾಟಕದಲ್ಲಿ ಕೈಗೊಂಡ ನಿವಾರಣಾ ಕ್ರಮಗಳು**

**೧. ಅನಾಥಾಲಯ**

ದೇವದಾಸಿಯರ ಮಕ್ಕಳು ಭಿಕ್ಷುಕರಾಗಿ, ಇಲ್ಲವೇ ಬೀದಿ ಪಾಲಾಗಿ, ತಾಯಂದಿರ ದಂಧೆಗೆ ಬೀಳುತ್ತಾರೆ. "ಸರಕಾರ ಹೀಗಾಗದಿರಲೆಂದೇ ಅನಾಥಾಲಯಗಳನ್ನು ತೆರೆದಿದೆ ೫ ರಿಂದ ೧೮ ವರ್ಷ ವಯಸ್ಸಿನ ಮಕ್ಕಳಿಗೆ ಇಲ್ಲಿ ಆಶ್ರಯ ಕೊಡುತ್ತಾರೆ. ಈ ಅನಾಥಾಲಯದ ಖರ್ಚನ್ನು ೯೦ % ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ನೋಡಿಕೊಳ್ಳುತ್ತವೆ"[೬]. ಈ ಮಕ್ಕಳ ಪಾಲನೆ ಪೋಷಣೆಯ ದೈನಂದಿನ ಖರ್ಚನ್ನು ಸಮಾಜ ಕಲ್ಯಾಣ ಇಲಾಖೆ ತುಂಬುತ್ತದೆ. ಉಳಿದ ಹಣವನ್ನು ಸಮಾಜ ಕಲ್ಯಾಣ ಇಲಾಖೆಯು ಅನುದಾನವಾಗಿ ಕೊಡುತ್ತದೆ.

## ೨. ಕ್ರಿಶ್ಚಿಯನ್ ಮಕ್ಕಳ ನಿಧಿ

೧೯೩೮ ರಲ್ಲಿ ಚೈನಾ ಮತ್ತು ಜಪಾನ್‌ಗಳ ನಡುವೆ ಯುದ್ಧ ನಡೆದಾಗ ಅನೇಕರು ವಸತಿಹೀನರಾದರು. ಮಕ್ಕಳು ಪಡಬಾರದ ಕಷ್ಟಪಟ್ಟರು. ಮಕ್ಕಳ ಗೋಳಾಟವನ್ನು ದೂರ ಮಾಡಲು ರಿಚಮಂಡ್‌ನ ವರ್ಜೀನಿಯಾ ನಗರದ ದಿ.ಡಾ. ಕ್ಯಾಲವಿಟ್ ಜೆ. ಕ್ಲಾರ್ಕ್ ಎಂಬುವರು 'ಚೀನಾ ಚಿಲ್ಡ್ರನ್ಸ್ ಫಂಡ್' ಸ್ಥಾಪಿಸಿದರು. ಈ ಸಂಸ್ಥೆಯ ಧನ ಸಂಗ್ರಹಿಸಿ ನೂರಾರು ಮಕ್ಕಳನ್ನು ಪುನರ್ವಸತಿಗೊಳಿಸಿತು. ಇದರ ಧ್ಯೇಯೋದ್ದೇಶ ಸಫಲಗೊಂಡು ಮುಂದೆ ವಿಸ್ತೃತವಾಗಿ 'ಕ್ರಿಶ್ಚಿಯನ್ ಚಿಲ್ಡ್ರನ್ ಫಂಡ್' ಎಂಬ ಹೊಸ ಹೆಸರಿನಿಂದ ವಿಶ್ವದಾದ್ಯಂತ ಜಾತಿಭೇದವಿಲ್ಲದೆ ಎಲ್ಲ ಮಕ್ಕಳಿಗೂ ಸಹಾಯ ಮಾಡತೊಡಗಿತು. ದೊಡ್ಡ ಶ್ರೀಮಂತರ ದೇಣಿಗೆಯೂ ಸಲ್ಲತೊಡಗಿತು. ಮಕ್ಕಳ ವಸತಿ ಗೃಹಗಳು, ಕುರುಡ ಕಿವುಡರ ಶಾಲೆಗಳು, ಶಿಶುವಿಹಾರಗಳು. ವೃತ್ತಿ ಶಿಕ್ಷಣ, ಪ್ರಾಥಮಿಕ ಮತ್ತು ಯೋಜನೆಗಳನ್ನು ಹಮ್ಮಿಕೊಂಡಿತು. ವಿಶ್ವದ ಪ್ರತಿ ಮಗುವೂ ಬೆಳೆದು ಸಮಾಜದ ಒಳ್ಳೆಯ ಪ್ರಜೆಯಾಗಬೇಕೆಂಬುದೇ ಈ ಸಂಸ್ಥೆಯ ಗುರಿ. ಈ ಸಂಸ್ಥೆ ಮಕ್ಕಳಿರುವಲ್ಲಿಗೆ ಹೋಗಿ ನೆರವು ನೀಡುತ್ತದೆ. ಆರೋಗ್ಯ ಸುಧಾರಣೆ, ಹಲ್ಲುಗಳ ರಕ್ಷಣೆ, ಮಕ್ಕಳನ್ನು ಸಾಕುವ ಬಗ್ಗೆ ಸಲಹೆ, ಮಾರ್ಗದರ್ಶನ, ಆರೋಗ್ಯ ಶಿಕ್ಷಣ, ಪೌಷ್ಠಿಕ ಆಹಾರ ಮತ್ತು ಆರ್ಥಿಕ ಯೋಜನೆಗಳ ಬಗ್ಗೆ ಹೆಚ್ಚು ಲಕ್ಷ್ಯ ನೀಡುತ್ತದೆ. ಪ್ರತಿ ಮಗುವಿಗೂ ಆಹಾರ, ಉಡುಪು, ಪುಸ್ತಕಗಳು ಹಾಗೂ ವೃತ್ತಿ ಶಿಕ್ಷಣ ತರಬೇತಿಗಾಗಿ ತಿಂಗಳಿಗೆ ಹತ್ತು ಡಾಲರ್‌ಗಳ ಧನ ಸಹಾಯ ನೀಡುವುದು ಈ ಸಂಸ್ಥೆ ಕರ್ನಾಟಕದಲ್ಲಿರುವ ದೇವದಾಸಿಯರ ಮಕ್ಕಳಿಗೂ ಸಹಾಯ ಮಾಡಲು ಮುಂದೆ ಬಂದಿದೆ. ನಮ್ಮ ಕರ್ನಾಟಕದ ೩೦,೦೦೦ ಮಕ್ಕಳನ್ನು ಸಿ.ಸಿ.ಎಫ್ ದತ್ತು ತೆಗೆದುಕೊಂಡಿದ್ದು ಅದರಲ್ಲಿ ದೇವದಾಸಿಯರ ೫೨೦ ಮಕ್ಕಳೂ ಸೇರಿದ್ದಾರೆ.

ತನ್ನ ಸದಸ್ಯ ರಾಷ್ಟ್ರದ ಶ್ರೀಮಂತರನ್ನು ಪೋಷಕರಾಗುವಂತೆ ಸಿ.ಸಿ.ಎಫ್ ಮನ ಒಲಿಸುತ್ತದೆ. ಇಂಥ ಪೋಷಕರು ತಲಾ ಒಬ್ಬೊಬ್ಬ ಮಗುವನ್ನು ದತ್ತು ತೆಗೆದುಕೊಳ್ಳುತ್ತಾರೆ. ಅವರಿಗಾಗಿ ೧೦ ಡಾಲರ್ ಕೊಡುತ್ತಾರೆ. ಪೋಷಕ ಹಾಗೂ ಮಗುವಿನ ನಡುವೆ ಪತ್ರ ವ್ಯವಹಾರವಿರುತ್ತದೆ. ನಿನ್ನನ್ನು ನೀನು ಪ್ರೀತಿಸುವಂತೆ ನಿನ್ನ ನೆರೆ ಹೊರೆಯವರನ್ನೂ ಪ್ರೀತಿಸು ಎಂಬುದೇ ಈ ಸಿ.ಸಿ.ಎಫ್ ದ ಉದಾತ್ತ ತತ್ವ.ನವದೆಹಲಿಯಲ್ಲಿ ಸಿ.ಸಿ.ಎಫ್ ದ ಮುಖ್ಯ ಕೇಂದ್ರವಿದ್ದು ಶ್ರೀ ಸಿ.ಎಸ್.ಗೋಜೇರ ಅವರು ಅದರ ನಿರ್ದೇಶಕರಾಗಿದ್ದಾರೆ.

## ೩. ಶಿಕ್ಷಣ ಸೌಲಭ್ಯ

ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಳಿ ಓದು ಬಿಟ್ಟಿರುವ, ಓದಬೇಕೆನ್ನುವ ಮಹಿಳೆಯರಿಗೆ ಸಂಕ್ಷಿಪ್ತ ಶಿಕ್ಷಣ ಯೋಜನೆ ರೂಪಿಸಿದೆ. ೧೮ ರಿಂದ ೩೦ ವರ್ಷ ವಯಸ್ಸಿನ ಮಹಿಳೆಯರಿಗ ನಾಲ್ಕನೆಯ ತರಗತಿ, ಏಳನೆಯ ತರಗತಿ, ಹತ್ತನೆಯ ತರಗತಿ ಹಂತದಲ್ಲಿ ತರಬೇತಿ ನೀಡಿ, ಅವರ ವಿದ್ಯಾಭ್ಯಾಸ ಮುಂದುವರೆಯುವಂತೆ ಮಾಡುವ ಯೋಜನೆಯಲ್ಲಿ ದೇವದಾಸಿಯರಿಗೂ ಮತ್ತವರ ಮಕ್ಕಳಿಗೂ ಸಂಕ್ಷಿಪ್ತ ಶಿಕ್ಷಣ ಕೊಡುವ ಅವಕಾಶ ನೀಡಲಾಗಿದೆ. ಮೆಟ್ರಿಕ್ ಪರೀಕ್ಷೆಯಲ್ಲಿ ಪಾಸಾದವರಿಗೆ ಉದ್ಯೋಗ ಕೊಟ್ಟು ಗೌರವದಿಂದ ಬದುಕಲು ಅವಕಾಶ ಮಾಡಿಕೊಡುವರು. ಇಂಥ ಶಿಕ್ಷಣಕ್ಕಾಗಿ ಬರುವವರಿಗೆ, ಸಂಸ್ಥೆಯಲ್ಲಿ ವಾಸಮಾಡಲು ಬರುವವರಿಗೆ ತಿಂಗಳಿಗೆ ೫೦೦ ರೂ ಕೊಡುವರು. ವಸತಿ ಇಲ್ಲದೆ ಕೇವಲ ತರಬೇತಿ ಪಡೆಯಲು ಬರುವವರಿಗೆ ೨೦೦ ರೂ ವಸತಿ ಇಲ್ಲವೇ

ಕೇವಲ ತರಬೇತಿ ಪಡೆಯುವವರಿಗೆ ೬೦ ರೂ. ಗಳಂತೆ ಭತ್ಯ ಕೊಡುತ್ತಾರೆ.

**೪. ತರಬೇತಿ ಯೋಜನೆ**

ಕರ್ನಾಟಕ ಸಮಾಜ ಕಲ್ಯಾಣ ಸಲಹಾ ಮಂಡಳಿಯು ಜೀವನದ ಹಲವಾರು ಪ್ರಸಂಗಗಳಲ್ಲಿ ಕಷ್ಟಕ್ಕೀಡಾದ ಸ್ತ್ರೀಯರಿಗೆ ಉದ್ಯೋಗ ದೊರಕಿಸಿಕೊಡಲು, ಸ್ವಂತ ಉದ್ಯೋಗದಲ್ಲಿ ತೊಡಗಲು ಅನುಕೂಲವಾಗುವಂತೆ ತರಬೇತಿ ಕೊಡಲು ದೇವದಾಸಿಯರಿಗಾಗಿ ಒಂದು ಕೇಂದ್ರ ತೆರೆದಿದೆ. ೬೦ % ಖರ್ಚನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ನೋಡಿಕೊಳ್ಳುವವು.

**೫. ಉದ್ಯೋಗ ತರಬೇತಿ ಯೋಜನೆ**

ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ೧೮ ರಿಂದ ೩೦ ವರ್ಷ ವಯಸ್ಸಿನ ದೇವದಾಸಿಯರಿಗೆ ಉದ್ಯೋಗ ತರಬೇತಿ ನೀಡಲು ಧನ ಸಹಾಯ ಒದಗಿಸುವರು. ೧೫೦೦೦ ರೂ ಗಳ ಅನುದಾನದ ಒಂದು ವರ್ಷದ ಅವಧಿಯ ತರಬೇತಿ ಕೊಡುವರು. ೧೯೮೫-೮೬ ನೇ ಸಾಲಿಗೆ ನಿಪ್ಪಾಣಿಯಲ್ಲಿ ದೇವದಾಸಿಯರಿಗಾಗಿ ಒಂದು ಯೋಜನೆ ಮಂಜೂರು ಮಾಡಲಾಗಿತ್ತು. ಬಟ್ಟೆಗಳನ್ನು ಹೊಲಿಸುವುದು. ಕುಶಲ ಕಲೆಗಳಲ್ಲಿ ತರಬೇತಿ, ಬೆರಳಚ್ಚು ಹಾಗೂ ಶೀಘ್ರಲಿಪಿ ತರಬೇತಿ, ಗೃಹ ಕೈಗಾರಿಕೆಗಳಲ್ಲಿ ತರಬೇತಿ, ಕೊಡುವರು. ೧೫೦ ರೂಗಳ ಸ್ಟೈಫಂಡರಿ ತರಬೇತಿಯ ಅವಧಿಯಲ್ಲಿ ಅವರಿಗೆ ನೀಡುವರು. ಇಲ್ಲಿ ತರಬೇತಿ ಹೊಂದಿದ ದೇವದಾಸಿಯರು ಸ್ವಾವಲಂಬಿಗಳಾಗಿ ಉದ್ಯೋಗಗಳಲ್ಲಿ ತೊಡಗಿ ಮರ್ಯಾದೆಯ ಜೀವನ ನಡೆಸುವರು.

ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ಸ್ವಂತ ಉದ್ದಿಮೆಗಳನ್ನು ಆರಂಭಿಸುವ ಮಹಿಳೆಯರಿಗೆ ಧನಸಹಾಯ ನೀಡುವುದು. ಅನುದಾನವನ್ನು ಸಾಲದ ರೂಪದಲ್ಲಿ, ಉದ್ದಿಮೆಗೆ ಬೇಕಾದ ಎಲ್ಲಾ ಸಾಧನ ಸಾಮಗ್ರಿಗಳನ್ನು ಕೊಳ್ಳಲು ನೀಡುವುದು. ಸಾಲದ ರೂಪದಲ್ಲಿ ನೀಡಿದ ಹಣಕ್ಕೆ ಮೂರು ವರ್ಷಗಳವರೆಗೆ ಬಡ್ಡಿ ಕೊಡಬೇಕಾಗಿಲ್ಲ. ದೇವದಾಸಿಯರ ಏಳಿಗೆಗಾಗಿ ಒಂದು ಹೈನುಗಾರಿಕೆಯ ಘಟಕ ಆರಂಭಿಸಲು ಯೋಜಿಸಲಾಗಿದೆ. ಈ ಘಟಕದಲ್ಲಿ ೨೦ ಜನ ಮಹಿಳೆಯರಿಗೆ ಎಮ್ಮೆ ಅಥವಾ ಹಸುಗಳನ್ನು ಕೊಳ್ಳಲು ಆರ್ಥಿಕ ಸಹಾಯ ನೀಡುವರು.

ಸಣ್ಣ ಕೈಗಾರಿಕೆ ಆರಂಭಿಸುವ ಸಂಸ್ಥೆಗಳಿಗೆ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ಮೂರು ಲಕ್ಷ ರೂಪಾಯಿಗಳವರೆಗೆ ಅನುದಾನ ನೀಡುವುದು ಕರ್ನಾಟಕ ಸಮಾಜ ಕಲ್ಯಾಣ ಸಲಹಾ ಮಂಡಳಿಯು ಇಂಥ ಯೋಜನೆಯನ್ನು ಮಾಡಿಕೊಂಡು ನಿಪ್ಪಾಣಿಯಲ್ಲಿ ದೇವದಾಸಿಯರಿಗೆ ಉದ್ಯೋಗ ಕಲ್ಪಿಸಲು ಒಂದು ಬೀಡಿ ತಯಾರು ಮಾಡುವ ಯೋಜನೆ ರೂಪಿಸಿದೆ. ಉದ್ಯೋಗಸ್ಥ ಮಹಿಳೆಯರಿಗೆ ಆಶ್ರಯಕ್ಕಾಗಿ ವಸತಿಯನ್ನು ನೀಡಲು ಕೇಂದ್ರ ಸರ್ಕಾರ ೬೫% ರಾಜ್ಯ ಸರ್ಕಾರ ೧೨% ರಂತೆ ಹಣವನ್ನು ಆರ್ಥಿಕ ನೆರವಿನ ರೂಪದಲ್ಲಿ ಕೊಡುವರು. ವಸತಿ ಗೃಹದ ಮೇಲೆ ವಿಚಾರಣೆಗಾಗಿ ವಾರ್ಡನ್, ಅವರ ವೇತನ. ಗೃಹಬಾಡಿಗೆ, ಮನರಂಜನೆ ಕಾರ್ಯಕ್ರಮ, ಹಾಗೂ ಗ್ರಂಥ ಭಂಡಾರಗಳ ವೆಚ್ಚವನ್ನು ತುಂಬುವರು. ಒಟ್ಟು ೧೦.೦೦೦ ರೂಪಾಯಿಗಳವರೆಗೆ ಅನುದಾನ ಕೊಡುವರು. ಈ ಎಲ್ಲಾ ಯೋಜನೆಗಳು ಯಶಸ್ವಿಯಾಗಲಿಕ್ಕೆ ದೇವದಾಸಿಯರು ಸಂಘಟಿತರಾಗಲಿಕ್ಕೆ ಒಂದು ಸಂಸ್ಥೆ ನೋಂದಾಯಿಸಿ ಕೊಳ್ಳಬೇಕು. ದೇವದಾಸಿಯರು, ಅನಾಥ ಮಹಿಳೆಯರು, ನಿರಾಶ್ರಿತ ವಿಧವೆಯರು ಸೇರಿ 'ಸಾವಳಿ' ಎಂಬ ಒಂದು ಸಂಸ್ಥೆ ೧೯೮೮ ನೇ ಸಾಲಿನ ಜೂನ್ ೪ ರಂದು ನೋಂದಾಯಿಸಿಕೊಂಡಿದ್ದಾರೆ. ಈ

ಸಂಸ್ಥೆಗೆ ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ಎಲ್ಲ ಷರತ್ತುಗಳನ್ನು ಮಾನ್ಯ ಮಾಡಿ ಶಿಶು ಕಲ್ಯಾಣ ಕೇಂದ್ರಗಳನ್ನು ೧೯೮೮ರಲ್ಲಿ ಮಂಜೂರು ಮಾಡಿದೆ.

**೬. ಸಲಹಾ ಸಮಿತಿ**

ಅನಕ್ಷರಸ್ಥರೂ, ಮೂಢನಂಬಿಕೆಯವರೂ, ಬಡವರಲ್ಲಿ ಹೆಚ್ಚಾಗಿ ದೇವದಾಸಿಯಾಗುವರು. ಈ ಜನ ದಲಿತರಲ್ಲಿ ಹಿಂದುಳಿದವರಲ್ಲಿ ಹೆಚ್ಚಾಗಿ ಸಿಗುವರು ಇವರಿಗೆ ಸರಿಯಾದ ಮಾರ್ಗದರ್ಶನ ಮಾಡಲು ಒಂದು ಸಲಹಾ ಸಮಿತಿ ರೂಪಿಸಲಾಗಿದೆ. ಬೆಳಗಾವಿ ಜಿಲ್ಲೆಯ ಮಹಿಳಾ ಸಮಾಜ ಸುಧಾರಕರನ್ನು ಸದಸ್ಯರನ್ನಾಗಿ, ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಳಿಯ ಸದಸ್ಯರೊಬ್ಬರನ್ನು ಅಧ್ಯಕ್ಷರನ್ನಾಗಿ ಮಾಡಲಾಗಿದೆ.

**೭. ಸಮನ್ವಯ ಸಮಿತಿ**

ದೇವದಾಸಿಯರ ಏಳಿಗೆಗಾಗಿ ದುಡಿಯುವ ಸ್ವಯಂ ಸೇವಾ ಸಂಸ್ಥೆಗಳ ಕಾರ್ಯ ಕ್ರಮಗಳನ್ನು ಸಮನ್ವಯಗೊಳಿಸಲು ಒಂದು ಸಮನ್ವಯ ಸಮಿತಿಯನ್ನು ರಚಿಸಲಾಗಿದೆ. ಇದರಲ್ಲಿ ಬೆಳಗಾವಿ ಜಿಲ್ಲೆಯ ವರಿಷ್ಠ ಅಧಿಕಾರಿಗಳು, ಸಮಾಜ ಕಲ್ಯಾಣ ಮಂಡಳಿಯ ಕಲ್ಯಾಣಾಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆಯ ಹಾಗೂ ಪರಿಶಿಷ್ಠ ವರ್ಗ ಮತ್ತು ಪಂಗಡದ ಆದಿಮ ಜಾತಿಯ ಕ್ಷೇಮಾಭಿವೃದ್ಧಿ ಇಲಾಖೆಯ ಅದಿಕಾರಿಗಳ ಪ್ರತಿನಿಧಿಗಳು ಇರುವರು.

**೮. ಸ್ವಯಂಸೇವಾ ಸಂಸ್ಥೆಗಳು**

ದೇವದಾಸಿ ಎಂಬ ಹೀನ ಸಂಪ್ರದಾಯವನ್ನು ಬೇರು ಸಹಿತ ಕಿತ್ತು ಹಾಕಬೇಕೆಂದು ಕೆಲವು ವಿಚಾರವಂತರು ಸ್ವಯಂ ಸೇವಾ ಸಂಸ್ಥೆಗಳನ್ನು ಸ್ಥಾಪಿಸಿ, ಜನತೆ ಮತ್ತು ಸರ್ಕಾರದ ಸಹಾಯ ಪಡೆದು ದುಡಿಯುತ್ತಿದ್ದಾರೆ. ನೊಂದ ನೋವು ನೋಯದವರೆತ್ತ ಬಲ್ಲರೆಂಬಂತೆ ನೋವಿಂದ ಬಂದ ಜನ ಈ ಕಾರ್ಯದಲ್ಲಿ ತೊಡಗಿದಾಗ ಮಾತ್ರ ಇದರ ಅಳಿವು ಸಾಧ್ಯವೆನಿಸುವುದು.

**೯. ಅಥಣಿಯ ವಿಮೋಚನಾ ಸಂಘ**

ಅಥಣಿ ವಿಮೋಚನಾ ದೇವದಾಸಿ ಪುನರ್ವಸತಿ ಸಂಘ ದೇಶದ ಏಕೈಕ ಸಂಸ್ಥೆ ಎಂಬ ಹೆಗ್ಗಳಿಕೆಗೆ ಗುರಿಯಾಗಿ ದೇವದಾಸಿ ಮುಗ್ಧ ಹೆಣ್ಣುಮಕ್ಕಳ ವಿಮೋಚನೆಗಾಗಿ ಮಾನವೀಯ ಪ್ರಯತ್ನವೊಂದು ಅಥಣಿಯಲ್ಲಿ ನಡೆದಿದೆ. ಈ ವಿಷಯದ ಮೇಲೆ ಪಿ.ಹೆಚ್.ಡಿ ಮಹಾಪ್ರಂಬಂಧ ಬರೆಯಲು ಅಧ್ಯಯನ ಕೈಗೊಂಡಿದ್ದ ಜೋಗನ್‌ಶಂಕರ ಅವರು ಇದಕ್ಕೆಲ್ಲ ಕಾರಣ ಹಸಿವು, ಬಡತನ, ಮೂಢನಂಬಿಕೆ, ಮೂಢಭಕ್ತಿ, ಬಾಹ್ಯಪ್ರಚೋಧನೆ, ನಿರಕ್ಷರತೆ ಕಾರಣ ಎಂದು ತಿಳಿದು ಅಥಣಿ ಕಾಲೇಜಿನಲ್ಲಿ ತಮ್ಮ ಜೊತೆ ಕೆಲಸ ಮಾಡುತ್ತಿದ್ದ ಸಿದ್ದಣ್ಣ ಉತ್ನಾಳ, ಆ ಊರಿನ ಪ್ರಸಿದ್ಧ ವಕೀಲರಾದ ಬಿ.ಎಲ್.ಪಾಟೀಲ, ಎಂ.ಬಿ.ಪಾಟೀಲರ ನೆರವಿನಿಂದ ೨೩-೩-೧೯೮೫ ರ ದಿನ ವಿಮೋಚನಾ ದೇವದಾಸಿಯರ ಪುನರ್ವಸತಿ ಸಂಘ ಸ್ಥಾಪಿಸಿದರು.

**ಸಂಘದ ಧ್ಯೇಯ ಧೋರಣೆಗಳು**

೧. ದೇವದಾಸಿಯರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಮಟ್ಟ ಮೇಲಕ್ಕೇರಿಸುವುದು.

೨. ದೇವದಾಸಿಯರ ಸರ್ವಾಂಗೀಣ ಅಭ್ಯುದಯಕ್ಕಾಗಿ ದಾನಿಗಳಿಂದ ಅನುದಾನ ಪಡೆದು ಈ ಅನಿಷ್ಠ ಪದ್ಧತಿ

ತೊಡೆದು ಹಾಕುವುದು.

೩. ಅಸ್ಪೃಶ್ಯತೆ ವಿರುದ್ಧ ಹೋರಾಟ ನಡೆಸುವುದು.

೪. ಪುಸ್ತಕ, ಪತ್ರಿಕೆ ಪ್ರಕಟನೆ, ಪ್ರಚಾರ ಮಾಡುವ ಮೂಲಕ ದೇವದಾಸಿ ಪದ್ಧತಿಯ ವಿರುದ್ಧ ವೈಚಾರಿಕ ಸಮರ ಸಾರುವುದು.

೫. ದೇವದಾಸಿಯರಿಗಾಗಿ, ವಿಧವೆಯರಿಗಾಗಿ, ನಿರ್ಗತಿಕರಿಗಾಗಿ, ಹಿಂದುಳಿದ ವರ್ಗಗಳ ಮಹಿಳೆ ಮತ್ತು ಮಕ್ಕಳಿಗಾಗಿ ವಿಶೇಷ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು ಶಿಕ್ಷಣ ಸಂಸ್ಥೆಗಳನ್ನು ತೆರೆಯುವುದು. ವಿವಿದೋದ್ದೇಶಗಳ ಸಹಕಾರಿ ಸಂಘ ಸ್ಥಾಪಿಸುವುದು.

೬. ದೇವದಾಸಿಯರ ಮಕ್ಕಳಿಗೆ ವಿಶೇಷವಾಗಿ ಅಲ್ಲದೇ ಇನ್ನಿತರ ಮಹಿಳೆ ಹಾಗೂ ಮಕ್ಕಳಿಗಾಗಿ ಶೈಕ್ಷಣಿಕ ವೈದ್ಯಕೀಯ ಸೌಲಭ್ಯ ಒದಗಿಸುವುದು ಮತ್ತು ಅವರಿಗೆ ಮೂಲಭೂತ ನಾಗರಿಕ ಹಕ್ಕು ದೊರೆಯುವಂತೆ ಮಾಡುವುದು.

೭. ಸಂಘದ ಉದ್ದೇಶಗಳಿಗನುಸಾರವಾಗಿ ಸರಕಾರಿ ಅರೆ ಸರಕಾರಿ ಹಾಗೂ ದೇಶ ವಿದೇಶಗಳ ಸಾರ್ವಜನಿಕ ಸಂಘ ಸಂಸ್ಥೆಗಳಿಂದ ಹಣ ಸಂಪಾದಿಸುವುದು.

೮. ಮಹಿಳೆಯರ ಹಾಗೂ ಮಕ್ಕಳ ಅಭ್ಯುದಯಕ್ಕಾಗಿ ಇರುವ ಕೇಂದ್ರ ಹಾಗೂ ರಾಜ್ಯ ಸರಕಾರಗಳ ನೀತಿ ಸಂಹಿತೆ. ಹಾಗೂ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಸಹಾಯಮಾಡುವುದು

**ಈ ಸಂಘದ ಸಾಧನೆಗಳು**

೧. ಸಿ ಸಿ ಎಫ್ ನ ಯೋಜನೆಯ ಅಡಿಯಲ್ಲಿ ವಿಮೋಚನಾ ಸಂಘ ದತ್ತು ತೆಗೆದುಕೊಂಡು ೫೨೧ ಮಕ್ಕಳಲ್ಲಿ ಬಾಲವಾಡಿಯಲ್ಲಿ ೪೪೩ ಮಕ್ಕಳು ೧ ರಿಂದ ೧೦ನೇ ತರಗತಿಯಲ್ಲಿ ಮೂರು ಮಕ್ಕಳು ಬೇರೆ ಬೇರೆಯಾಗಿ ಮೂಗ ಹಾಗೂ ಕಿವುಡರ ಶಾಲೆಗಳಲ್ಲಿ ಓದುತ್ತಿದ್ದಾರೆ. ಎಲ್ಲಾ ಮಕ್ಕಳಿಗೂ ರೋಗ ಪ್ರತಿರೋಧಕ ಚುಚ್ಚುಮದ್ದು ನೀಡುತ್ತಿದ್ದಾರೆ. ಫಲಾನುಭವಿ ಮಕ್ಕಳ ಕುಟುಂಬದ ಎಲ್ಲಾ ಸದಸ್ಯರಿಗೆ ಉಚಿತ ಔಷದೋಪಚಾರದ ವ್ಯವಸ್ಥೆ ಮಾಡಲಾಗಿದೆ. ದೇವದಾಸಿ ಮಹಿಳೆಗೆ ಬೃಹತ್ ಏಡ್ಸ್‌ರೋಗ ತಪಾಸಣಾ ಶಿಬಿರ ಏರ್ಪಡಿಸಲಾಗಿತ್ತು.

೨. ಸಂಘದ ಆಶ್ರಯದಲ್ಲಿ ನಾಲ್ಕು ಮಹಿಳಾ ಮಂಡಳಿಗಳು, ನಾಲ್ಕು ಮಯಸ್ಕ ಶಿಕ್ಷಣ ಕೇಂದ್ರಗಳು, ನಾಲ್ಕು ರಾಷ್ಟ್ರೀಯ ಭಾವೈಕ್ಯತಾ ಶಾಲೆಗಳು, ಎರಡು ಶಿಶುವಿಹಾರಗಳು, ಕೆಲಸ ಮಾಡುತ್ತಿವೆ. ಇದಕ್ಕೆ ಪೂರಕವಾಗಿ ವಿಮೋಚನಾ ಗ್ರಂಥಾಲಯ ಪುಸ್ತಕ ಪತ್ರಿಕೆಗಳ ಪ್ರಕಾಶನವನ್ನು ಸ್ಥಾಪಿಸಲಾಗಿದೆ. ಮಹಿಳೆಯರಿಗಾಗಿ ಒಂದು ಹಾಲು ಉತ್ಪಾದನಾ ಘಟಕ, ಒಂದು ಹೊಲಿಗೆ ತರಬೇತಿ ಕೇಂದ್ರ ಸ್ಥಾಪಿಸಲಾಗಿದೆ.

೩. ಒಟ್ಟು ೧೩ ದೇವದಾಸಿ ಮದುವೆಗಳು ನಡೆದಿವೆ. ೨೫ ಜನ ದೇವದಾಸಿಯರು ಈ ಅನಿಷ್ಟ ಪದ್ಧತಿಯಿಂದ ಸಂಪೂರ್ಣ ಮುಕ್ತರಾಗಿ ಸುಖ ಜೀವನ ನಡೆಸುತ್ತಿದ್ದಾರೆ. ಎರಡು ಬಡ ಕುಟುಂಬಗಳಿಗೆ ಜನತಾ ಮನೆ ಕಟ್ಟಿಸಿಕೊಡಲಾಗಿದೆ.

೪. ಪ್ರತಿವರ್ಷ ಮಕ್ಕಳಿಗಾಗಿ ಬೇಸಿಗೆ ರಜಾದಿನ ಶಿಬಿರ ಏರ್ಪಡಿಸಲಾಗುವುದು. ಈ ಶಿಬಿರದಲ್ಲಿ ಮಕ್ಕಳು ಪರಸ್ಪರ ಕೂಡಿಕೊಂಡು ಆಟ, ಪಾಠ, ಚಿತ್ರಕಲೆ, ಕರಕುಶಲಕಲೆ, ಸಂಗೀತ, ಮುಂತಾದ ಕಾರ್ಯಕ್ರಮಗಳಲ್ಲಿ

ಪಾಲ್ಗೊಂಡು ಹೊಸ ಹೊಸ ಅನುದಾನ ಪಡೆಯುವರು.

೫. ಸಪ್ತಸಾಗರ ಗ್ರಾಮದ ಮಂಜುಳಾ ಕುರಣಿ ಎಂಬ ಫಲಾನುಭವಿ ಮಗುವಿನ ಅಣ್ಣ ವಿಠ್ಠಲ ಕುರಣಿ ಎಂಬ ೨೨ ವರ್ಷ ವಯಸ್ಸಿನ ಯುವಕನಿಗೆ ಇದ್ದ ಹೃದಯ ನಾಳದ ತೊಂದರೆಯನ್ನು ಮೀರಜ ಆಸ್ಪತ್ರೆಗೆ ಸೇರಿಸಿ ಗುಣ ಪಡಿಸಲಾಯಿತು.

**೧೦. ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಮೈರಾಡ ಸ್ವಯಂಸೇವಾ ಸಂಸ್ಥೆ**

ಇವುಗಳ ಸಹಯೋಗದಲ್ಲಿ ೧೯೯೧ ರಿಂದ ೨೦೦೦ ವರೆಗೆ ದೇವದಾಸಿ ಪುನರ್ವಸತಿ ಯೋಜನೆಯನ್ನು ಕೈಗೊಂಡಿತ್ತು. ಬೆಳಗಾವಿ ಜಿಲ್ಲೆಯ ಘಟಪ್ರಭಾದಲ್ಲಿ ಕೇಂದ್ರ ಕಛೇರಿಯ ಆರಂಭದೊಂದಿಗೆ ದೇವದಾಸಿ ಪುನರ್ ವಸತಿಯೋಜನೆಯನ್ನು ಕೈಗೊಂಡಿತ್ತು. ಅಲ್ಲದೇ ಬೇರೆ ಜಿಲ್ಲೆಗಳಲ್ಲಿಯೂ ಇಂಥ ಯೋಜನೆಯನ್ನು ಸರ್ಕಾರ ಜಾರಿಗೊಳಿಸಿತು. ಈ ಯೊಜನೆಯ ಅಂಗವಾಗಿ ದೇವದಾಸಿ ಮಹಿಳೆಯರ ಸಮೀಕ್ಷೆ ಕಾರ್ಯ ಕೈಕೊಳ್ಳಲಾಯಿತು. ಆದರೆ ಫಲಾನುಭವಿಗಳಾಗಿದ್ದ ದೇವದಾಸಿಯರಲ್ಲಿ ಈ ಯೋಜನೆಯ ಬಗೆಗೆ ವಿಶ್ವಾಸ ಮೂಡಿಸುವುದೇ ಒಂದು ದೊಡ್ಡ ಕೆಲಸವಾಗಿತ್ತು ಎಂದು ಯೋಜನೆಯ ಅಧಿಕಾರಿಗಳು ತಮ್ಮ ಅನುಭವ ಹಂಚಿಕೊಳ್ಳುತ್ತಾರೆ. ಈಗಲೂ ಈ ಸಂಸ್ಥೆ ತನ್ನ ಕಾರ್ಯವನ್ನು ಮುಂದುವರೆಸಿದೆ.

**೧೧. ಮಾಸ್ ಸಂಸ್ಥೆ**

ಯಾವುದೇ ಯೋಜನೆಯ ಫಲಾನುಭವಿಗಳು ಕಾರ್ಯಕ್ರಮದ ಪಾಲುದಾರರಾಗಬೇಕೆ ಹೊರತು ಫಲವನ್ನಷ್ಟೇ ಅನುಭವಿಸುವ ಫಲಾನುಭವಿಗಳಾಗಬಾರದು. ಈ ಹಿನ್ನೆಲೆಯಲ್ಲಿ ಯೋಜನೆಯ ನಂತರವೂ ಪುನರ್ವಸತಿ ಕಾರ್ಯಕ್ರಮಗಳು ಮುಂದುವರೆದುಕೊಂಡು ಹೋಗಬೇಕು ಎಂಬ ಸದಾಯಶದಂದಿಗೆ ೨೦ ಜನ ಮಾಜಿ ದೇವದಾಸಿಯರನ್ನೊಳಗೊಂಡ ಮಹಿಳಾ ಅಭಿವೃದ್ಧಿ ಮತ್ತು ಸಂಸ್ಥೆ (ಮಾಸ್) ಆರಂಭಗೊಂಡಿದೆ. ಈ ಸಂಸ್ಥೆಗೆ ಜಿಲ್ಲೆಯ ಉನ್ನತ ಅಧಿಕಾರಿಗಳು ಮತ್ತು ನಿಡಸೋಸಿ ಮಠದ ಶಿವಲಿಂಗಸ್ವಾಮಿಗಳು, ಮೈರಾಡ ಸಂಸ್ಥೆಯ ಕಾರ್ಯನಿರ್ವಾಹಕ ನಿರ್ದೇಶಕರು ಗೌರವ ಸದಸ್ಯರಾಗಿದ್ದಾರೆ. ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಮತ್ತು ಮೈರಾಡ ಸಂಸ್ಥೆಯ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಸಂಸ್ಥೆ ದೇವದಾಸಿ ಪುನರ್ವಸತಿ ಯೋಜನೆಯ ಕಾಲಕ್ಕೆ ಆರಂಭಿಸಲಾಗಿದ್ದ ಯೋಜನೆಗಳ ಜತೆಗೆ ಇನ್ನೂ ಹಲವಾರು ಯೋಜನೆಗಳನ್ನು ರೂಪಿಸಿ ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಸಕ್ರೀಯಕಾರ್ಯ ನಿರ್ವಹಿಸುತ್ತಿದೆ. ದೇವದಾಸಿಯರಿಂದ, ದೇವದಾಸಿಯರಿಗಾಗಿ, ದೇವದಾಸಿಯರ ಶ್ರೇಯೋಭಿವೃದ್ಧಿಗೋಸ್ಕರ ಕಾರ್ಯ ನಿರ್ವಹಿಸುತ್ತಿರುವ 'ಮಾಸ್' ಸಂಸ್ಥೆ ದೇವದಾಸಿಯರ ಬದುಕಿನಲ್ಲಿ ಆತ್ಮವಿಶ್ವಾಸ ತುಂಬುತ್ತಿದೆ. ಅಷ್ಟೇ ಅಲ್ಲ. ಈ ಅನಿಷ್ಟ ಪದ್ಧತಿಯ ಮುಂದುವರಿಕೆಗೆ ಬಹುದೊಡ್ಡ ತೊಡಕಾಗಿಯೂ ಪರಿಣಮಿಸಿದೆ.

ಮಾಸ್‌ನ ಮಾಜಿ ದೇವದಾಸಿಯರು ನಮಗೆ ಬಂದ ದುಸ್ಥಿತಿ ನಿಮಗೂ ಬರಬಾರದು ಎಂಬ ತಿಳುವಳಿಕೆಯನ್ನು ಪ್ರತಿ ಜಾತ್ರೆಗಳಲ್ಲಿಯೂ ದೇವದಾಸಿಯಾಗುವವರಿಗೆ ನೀಡುತ್ತಿದ್ದಾರೆ. ತಿಳುವಳಿಕೆಗೆ ಬಗ್ಗದವರು ಪೊಲೀಸ್ ಠಾಣೆಯ ಮೆಟ್ಟಿಲೇರುವಂತೆಯೂ ಮಾಡಿದ್ದಾರೆ. ಬೀದಿ ನಾಟಕ, ಹಾಡುಗಳ ಮೂಲಕ, ಜಾಗೃತಿ ಮೂಡಿಸುತ್ತಿದ್ದಾರೆ. ಬಳೆ ಒಡೆಯುವುದು, ಬೆತ್ತಲೆಸೇವೆ, ಅರೆಬೆತ್ತಲೆ ಸೇವೆ, ಪ್ರಾಣಿಬಲಿ, ದೇವದಾಸಿ ಸಮರ್ಪಣೆ ಮುಂತಾದವು

ಅನಿಷ್ಟ ಪದ್ಧತಿಗಳಿಗೆ ವಿದಾಯ ಹೇಳುವಂತೆ ಜನರ ಮನವೊಲಿಸುವ ಕಾರ್ಯವನ್ನು ಈ ಮಾಜಿ ದೇವದಾಸಿಯರು ಮಾಡುತ್ತಿದ್ದಾರೆ. ಗ್ರಾಮಗಳಲ್ಲಿ ಜಾಗೃತಿ, ಆರೋಗ್ಯ, ಕಾನೂನು ತಿಳುವಳಿಕೆ ಮುಂತಾದ ಶಿಬಿರಗಳನ್ನು ನಡೆಸುತ್ತಿದ್ದಾರೆ. ಅಷ್ಟೇ ಅಲ್ಲ ಸ್ವ-ಸಹಾಯ ಗುಂಪುಗಳ ಮೂಲಕ ಆದಾಯ ತರುವ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. ಸರ್ಕಾರದ ವಿವಿಧ ಯೋಜನೆಗಳ ಫಲ ಕೂಡಾ ನೇರವಾಗಿ ದೇವದಾಸಿಯರಿಗೆ ತಲುಪಿಸುವ ಜವಬ್ದಾರಿಯನ್ನು ಮಾಸ್ ಹೊತ್ತುಕೊಂಡಿದೆ.

**೧೨. ಸ್ವ ಸಹಾಯ ಸಂಘಗಳು**

ದೇವದಾಸಿ ಮಹಿಳೆಯರನ್ನು ಅವರವರ ಗ್ರಾಮಗಳಲ್ಲಿಯೇ ಸ್ವಸಹಾಯ ಸಂಘಗಳನ್ನು ಸಂಘಟಿಸುವ ಮೂಲಕ ಆರ್ಥಿಕ ಅಭಿವೃದ್ಧಿ ಸಾಮಾಜಿಕ ಚಿಂತನೆ, ಶೈಕ್ಷಣಿಕ ಪ್ರಗತಿ, ಮತ್ತು ಸಂಘಟನಾ ಪ್ರಕ್ರಿಯೆಯು ಪ್ರಾರಂಭಗೊಂಡಿದೆ. ಬೀದಿ ನಾಟಕ, ಹಾಡುಗಳ ಮೂಲಕ ಜಾಗೃತಿ, ಗೋಡೆ ಬರಹ, ವಿಡಿಯೋ ಚಿತ್ರ ಪ್ರದರ್ಶನ, ಕರಪತ್ರ ಹಂಚುವುದು. ಧಾರ್ಮಿಕ ಗುರುಗಳಿಂದ ಜಾಗೃತಿ ಸಂದೇಶ ಮೂಡಿಸುವುದು. ಬಳೆ ಒಡೆಯುವುದು, ಜೋಗತಿ ಬಿಡುವುದು, ಬೆತ್ತಲೆ ಸೇವೆ, ಅರೆಬೆತ್ತಲೆ ಸೇವೆ ಪ್ರಾಣಿಬಲಿ, ದೇವದಾಸಿ ಸಮರ್ಪಣೆ ಮುಂತಾದ ಅನಿಷ್ಟ ಪದ್ಧತಿಗಳಿಗೆ ವಿದಾಯ ಹೇಳುವಂತೆ ಜನರ ಮನವೊಲಿಸುವ ಜಾಗೃತಿ ಕಾರ್ಯಕ್ರಮ ಕೈಗೊಳ್ಳಬೇಕಾಗಿದೆ.

ಕರ್ನಾಟಕ ದೇವದಾಸಿ ಕಾಯ್ದೆ ಜಾರಿಯಾದ ನಂತರದಲ್ಲಿ ದೇವದಾಸಿ ಪದ್ಧತಿ ನಿಷೇಧಗೊಳಿಸುವ ಹಾಗೆ ಜನರಲ್ಲಿ ಜಾಗೃತಿ ಮೂಡಿಸುವ ಕಾರ್ಯವನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮಾಡುತ್ತಿದ್ದು ಅಲ್ಲದೇ ಇನ್ನು ಹೆಚ್ಚಿನ ಜವಬ್ದಾರಿಯನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭಿವೃದ್ಧಿ ನಿಗಮ, ಮಹಿಳಾ ಅಭಿವೃದ್ಧಿ ನಿಗಮ ವಹಿಸಿಕೊಂಡಿದೆ.

**೧೩. ಮಹಿಳಾ ಸಾಂತ್ವಾನ ಯೋಜನೆ**

ಸಮಾನ ಅವಕಾಶಗಳಿಂದ ವಂಚಿತರಾದ ಮಹಿಳೆಗೆ ನ್ಯಾಯ ದೊರಕಿಸಿಕೊಡಲು ಸರ್ಕಾರ ರೂಪಿಸಿರುವ ಯೋಜನೆ 'ಸಾಂತ್ವಾನ' ನೊಂದ ಮಹಿಳೆಯರ ಮನಕ್ಕೆ ನೆಮ್ಮದಿ ಶಾಂತಿ, ತಂದುಕೊಡುವುದು ಈ ಯೋಜನೆಯ ಮೂಲ ಉದ್ದೇಶ. ಶೋಷಿಸಲ್ಪಟ್ಟ ಮಹಿಳೆಯರಿಗೆ ಆರ್ಥಿಕ ಪರಿಹಾರ, ತಾತ್ಕಾಲಿಕ ಆಶ್ರಯ, ಮುಂದೆ ಸ್ವಾತಂತ್ರ ಜೀವನ ನಡೆಸಲು ಅವರಿಗೆ ತರಬೇತಿ, ಇತ್ಯಾದಿಗಳನ್ನು ಸಾಂತ್ವಾನ ಒದಗಿಸುತ್ತವೆ. ಶೋಷಣೆಗೆ ಒಳಗಾದ ದೈಹಿಕ, ಮಾನಸಿಕ ಕ್ಷೋಭೆಗಳ ತೀವ್ರತೆಯನ್ನು ಕಡಿಮೆ ಮಾಡಿ, ಆಕೆಯ ಸ್ನೇಹ ಹಸ್ತದ ಅಭಯ ನೀಡುತ್ತದೆ. ಸಂಕಷ್ಟಕ್ಕೊಳಗಾದ ಮಹಿಳೆ ಕೂಡಲೇ ತನಗೆ ನೆರವು ಯಾಚಿಸಲೆಂದು ಮಹಿಳಾ ಸಹಾಯವಾಣಿಗಳನ್ನು ಸ್ಥಾಪಿಸಲಾಗಿದೆ. ಮಹಿಳಾ ಸಹಾಯವಾಣಿಗೆ ದೂರು ಸಲ್ಲಿಸಿದ ಮಹಿಳೆಗೆ ತಕ್ಷಣವೇ ಸೂಕ್ತ ರಕ್ಷಣೆ ಮತ್ತು ಅಗತ್ಯ ನೆರವು ಒದಗಿಸಲಾಗುವುದು. ಜಿಲ್ಲಾ ಮಟ್ಟದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ನೆರವನ್ನು ಈ ಉದ್ದೇಶಕ್ಕಾಗಿ ಪಡೆದುಕೊಳ್ಳಲಾಗಿದೆ. ಎಲ್ಲಾ ಜಿಲ್ಲಾ ಮಟ್ಟಗಳಲ್ಲೂ ಮಹಿಳಾ ಮತ್ತು ಮಕ್ಕಳ ಕಲ್ಯಾಣಾಭಿವೃದ್ಧಿ ಇಲಾಖೆಯ ಅಧಿಕಾರಿಗಳು ಸಂಕಷ್ಟಕೊಳ್ಳಗಾದ ಮಹಿಳೆಗೆ ತಾತ್ಕಾಲಿಕ ವಸತಿ ಸೌಲಭ್ಯ ಮತ್ತು ಅಗತ್ಯವಿದ್ದರೆ, ಕಾನೂನು ನೆರವು ಒದಗಸಲಾಗುತ್ತದೆ. ದೌರ್ಜನ್ಯಕ್ಕೆ ಒಳಗಾದ ಮಹಿಳೆ ಆಕಸ್ಮಾತ್ ಮರಣ ಹೊಂದಿದರೆ, ಆಕೆಯ ಮಕ್ಕಳ ಶಿಕ್ಷಣ

ಮತ್ತು ಪುನರ್‌ವಸತಿಗಾಗಿ ೫ ರಿಂದ ೧೦ ಸಾವಿರ ರೂ. ಗಳನ್ನು ಬ್ಯಾಂಕಿನಲ್ಲಿ ಠೇವಣಿಯಿಡುವ ವ್ಯವಸ್ಥೆ ಮಾಡಲಾಗಿದೆ. ದೌರ್ಜನ್ಯ, ಅತ್ಯಾಚಾರಕ್ಕೊಳಗಾದ ಮಹಿಳೆಗೆ ಮುಂದೆ ಸ್ವಾವಲಂಬಿ ಜೀವನವನ್ನು ನಡೆಸಲು ಅನುವಾಗುವಂತೆ ಸೂಕ್ತ ಶಿಕ್ಷಣ ತರಬೇತಿ ಮತ್ತು ಆರ್ಥಿಕ ಪರಿಹಾರವನ್ನು ನೀಡಲಾಗುತ್ತದೆ.

### ೧೪. ಸ್ತ್ರೀ ಶಕ್ತಿ ಯೋಜನೆ

ಮಹಿಳೆಯರು ಅದರಲ್ಲೂ ಗ್ರಾಮೀಣ ಪ್ರದೇಶದ ಮಹಿಳೆಯರು ಸ್ವಂತ ಆದಾಯ ಪಡೆಯುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರ ಅನುಷ್ಠಾನಕ್ಕೆ ತಂದಿರುವ ಯೋಜನೆಯೇ 'ಸ್ತ್ರೀ ಶಕ್ತಿ' ಮಹಿಳೆಯರಲ್ಲಿ ಆತ್ಮವಿಶ್ವಾಸ, ಹಾಗೂ ಸ್ವಾವಲಂಬನೆಗೆ ಪ್ರೇರಣೆ ನೀಡುವ ಸ್ತ್ರೀ ಶಕ್ತಿ ಯೋಜನೆ ಸ್ತ್ರೀಯರ ಜೀವನಮಟ್ಟ ಸುಧಾರಣೆ ಮಾಡುವಲ್ಲಿ ಮಹತ್ವದ ಪಾತ್ರ ವಹಿಸಲಿದೆ. ಬೇರೆ ಬೇರೆ ಇಲಾಖೆಗಳಲ್ಲಿರುವ ಕೆಲವು ಕಾರ್ಯಕ್ರಮಗಳನ್ನು ಸ್ತ್ರೀ ಶಕ್ತಿ ಯೋಜನೆಯಡಿ ತಂದು ಮಹಿಳಾ ಸ್ವ-ಸಹಾಯ ಗುಂಪುಗಳ ಸದಸ್ಯರಿಗೆ ಒದಗಿಸಲಾಗುವುದಿಲ್ಲ. ಸರ್ಕಾರದಿಂದ ಸಿಗುವ ಸೌಲಭ್ಯಗಳ ಮಾಹಿತಿಯನ್ನು ಮಹಿಳೆಯರಿಗೆ ಸ್ವ-ಸಹಾಯ ಗುಂಪುಗಳ ಮೂಲಕ ಸೌಲಭ್ಯಗಳನ್ನು ಪಡೆಯಲು ಉತ್ತೇಜಿಸಲಾಗುತ್ತದೆ. ಸರ್ಕಾರದ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಫಲ ಇವರಿಗೆ ದೊರೆಯುವಂತೆ ಮಾಡಿ ಸಾಲ ಸೌಲಭ್ಯ ಒದಗಿಸುವುದರ ಜೊತೆಗೆ ಸ್ವಸಹಾಯ ಗುಂಪುಗಳ ಮೂಲಕ ಹೆಣ್ಣು ಮಕ್ಕಳ ಆರೋಗ್ಯ, ಶಿಕ್ಷಣ, ಪೌಷ್ಠಿಕ ಆಹಾರ, ರೋಗ ನಿರೋಧಕ ಚುಚ್ಚುಮದ್ದು ಮುಂತಾದ ಸಾಮುದಾಯದ ಅಭಿವೃದ್ಧಿ ಚಟುವಟಿಕೆಗಳನ್ನು ಸ್ತ್ರೀ ಶಕ್ತಿ ಮೂಲಕ ಅಳವಡಿಸಲಾಗಿದೆ. ೨೦೦೦ ಅಕ್ಟೋಬರ್‌ನಲ್ಲಿ ಪ್ರಾರಂಭವಾದ ಸ್ತ್ರೀ ಶಕ್ತಿ ಕಾರ್ಯಕ್ರಮದಡಿಯಲ್ಲಿ ೧೦ ಲಕ್ಷಕ್ಕೂ ಹೆಚ್ಚು ಸದಸ್ಯರಿರುವ ೭೫,೫೧೨ ಸ್ವ-ಸಹಾಯ ಗುಂಪುಗಳು ರಚನೆಗೊಂಡಿದೆ. ಈ ಗುಂಪುಗಳ ಸದಸ್ಯರು ೪೦ ಕೋಟಿ ರೂ. ಗಿಂತ ಹೆಚ್ಚಿನ ಉಳಿತಾಯ ಮಾಡಿ, ದೇವದಾಸಿ ಪದ್ಧತಿಯ ಬಲೆಯಿಂದ ತಪ್ಪಿಸಿಕೊಳ್ಳಲು ಹಲವಾರು ಸ್ತ್ರೀಯರಿಗೆ ಇದು ನೆರವಾಗಿದೆ.

### ೧೫. ಜನನೀ ಸುರಕ್ಷಾ ಯೋಜನೆ

ಕೇಂದ್ರ ಸರ್ಕಾರವು ಬಡ ಬಾಣಂತಿಯರಿಗಾಗಿ ಜಾರಿಗೆ ತಂದಿರುವ ಇನ್ನೊಂದು ಯೋಜನೆ. ಶುಷ್ಮಾಸ್ವರಾಜ್‌ರವರು ಈ ಯೋಜನೆಯನ್ನು ಉದ್ಘಾಟಿಸುತ್ತಾ, ಇದು ಬಡ ತಾಯಂದಿರಿಗೊಂದು ರಕ್ಷಾ ಕವಚ. ಎಂದು ಹೇಳಿದ್ದಾರೆ. ಶಿಶು ಮರಣ, ಬಾಣಂತಿಯರ ಮರಣದ ಸಂಖ್ಯೆಯೇ ಒಂದು ದೇಶದ ಪ್ರಗತಿಯ ಅಳತೆಗೋಲೆಂದು ಯುನಿಸೆಫ್ ಹೇಳಿದ್ದರ ಹಿನ್ನೆಲೆಯಲ್ಲಿ ಹಲವಾರು ದೇಶಗಳ ಸರಕಾರಗಳು ಶಿಶು ಹಾಗೂ ಬಾಣಂತಿಯರ ಮರಣ ಪ್ರಮಾಣ ತಗ್ಗಿಸಲು ಸರ್ವ ಪ್ರಯತ್ನ ನಡೆಸಿದೆ. ಈ ಯೋಜನೆ ಪ್ರಕಾರ ಬಡ ಗರ್ಭಿಣಿಯೊಬ್ಬಳು ಸರ್ಕಾರಿ ಆಸ್ಪತ್ರೆಯಲ್ಲಿ ಹೆಣ್ಣು ಮಗುವಿಗೆ ಜನ್ಮ ನೀಡಿದರೆ, ೧೦೦೦ ರೂ. ಹಾಗೂ ಗಂಡುಮಗುವಿಗೆ ಜನ್ಮ ನೀಡಿದರೆ ೫೦೦ ರೂ ನೀಡಲಾಗುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ಈಗಲೂ ಕೂಡ ಬಡ ಮಹಿಳೆಯರ ಸುರಕ್ಷಿತ ಹೆರಿಗೆಗೆ ಆಸ್ಪತ್ರೆಗಳಿಗೆ ಹೋಗುತ್ತಿಲ್ಲ. ಅನಾರೋಗ್ಯಕರ ವಾತಾವರಣದಲ್ಲಿ ಸೂಕ್ತ ಆರೋಗ್ಯದ ಮೇಲ್ವಿಚಾರಣೆ ಇಲ್ಲದೇ ಹೆರಿಗೆ ಮಾಡಿಸಿಕೊಂಡು ಸಾವು ನೋವುಗಳಿಗೆ ಬಲಿಯಾಗುತ್ತಿದ್ದಾರೆ. ಆರು ಜನ ಹುಡುಗಿಯರು ತಮ್ಮ ಅಕ್ಕ ಹೆರಿಗೆಯಲ್ಲಿ ತೀರಿಹೋಗಿದ್ದರಿಂದ ಮನೆ ನೋಡಿಕೊಳ್ಳುವವರ್‍ಯಾರೂ

ಇಲ್ಲವೆಂದು ನಮಗೆ ದೇವದಾಸಿಯರನ್ನಾಗಿ ಮಾಡಿದರೆಂಬ ವಿಷಯವು ಅಧ್ಯಯನದಿಂದ ತಿಳಿದು ಬಂದಿದೆ. ಇದನ್ನು ತಪ್ಪಿಸಲು, ಹಾಗೂ ಬಡ ಗರ್ಭಿಣಿಯರು ಆಸ್ಪತ್ರೆಗೆ ಬರುವಂತೆ ಆಕರ್ಷಿಸಲು ಜನನಿ ಸುರಕ್ಷಾ ಯೋಜನೆಯಡಿ ಆರ್ಥಿಕ ನೆರವು ಘೋಷಿಸಲಾಗಿದೆ.

**೧೩. ಮಾನವಿ ಮಹಿಳಾ ಸಂಘ**

ಮೈಸೂರಿನ ಒಡನಾಡಿ ಸಂಸ್ಥೆ ಆರಂಭಿಸಿದ್ದು ಲೈಂಗಿಕ ಶೋಷಣೆಗೆ ಒಳಗಾದ ಯುವತಿಯರನ್ನು ರಕ್ಷಿಸುವ ಮತ್ತು ಅವರ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ಕೆಲಸದಲ್ಲಿ ಕಳೆದ ಹಲವಾರು ವರ್ಷಗಳಿಂದ ಸಕ್ರೀಯವಾಗಿ ದುಡಿಯುತ್ತಿದೆ. ಮಹಿಳೆಯರಿಗೆ ಸ್ವಾವಲಂಬನೆಯ ಬದುಕನ್ನು ರೂಪಿಸಿಕೊಳ್ಳಲು ಸಿದ್ಧಪಡಿಸಿರುವ ವೇದಿಕೆ ಇದಾಗಿದೆ.

'ಮಾನವಿ ಮಹಿಳಾ ಸಂಘ'ದ ವತಿಯಿಂದ ಮಾನವಿ ಸೌಂದರ್ಯ ಮತ್ತು ಸ್ವಾಸ್ಥ್ಯ ಸಂರಕ್ಷಣೆ ಕೇಂದ್ರ (ಬ್ಯೂಟಿ ಪಾರ್ಲರ್) ಮಾನವಿ ಟ್ರಾವೆಲ್ಸ್ ಏಜನ್ಸಿ, ಎಂಪೋರಿಯಂ ಹಾಗೂ ಅಮುಲ್ ಪಾರ್ಲರ್, ಈ ನಾಲ್ಕು ಮಳಿಗೆಗಳು ವ್ಯಾಪಾರ ಚಟುವಟಿಕೆಗಳನ್ನು ನಡೆಸುತ್ತವೆಯಾದರೂ ಅವು ಲಾಭವನ್ನು ಮಾತ್ರ ಗುರಿಯಾಗಿಟ್ಟುಕೊಂಡಿಲ್ಲ. ಅದಕ್ಕೊಂದು ಮಾನವೀಯ ಸೇವೆಯ ಕಾಳಜಿ ಇದೆ. ಲೈಂಗಿಕ ಶೋಷಣೆಗೆ ಒಳಗಾದ ಮಹಿಳೆಯರ ಮನಸ್ಸು ಅತ್ಯಂತ ಸೂಕ್ಷ್ಮವಾಗಿರುತ್ತದೆ. ಸಮಾಜವನ್ನು ಎದುರಿಸುವ ಯಾವುದೇ ಧೈರ್ಯ ಅವರಲ್ಲಿ ಇರುವುದಿಲ್ಲ. ಕೀಳರಿಮೆಯಿಂದ ಅವರು ನರಳುತ್ತಿರುತ್ತಾರೆ. ಒಂದು ತರಹದ ಮಾನಸಿಕ ವ್ಯಾದಿಗೆ ತುತ್ತಾಗಿರುವ ಅವರಿಗೆ ಪುನರ್ವಸತಿ ಕಲ್ಪಿಸುವದು ಸುಲಭದ ಮಾತಲ್ಲ. ಅವರಲ್ಲಿ ಆತ್ಮವಿಶ್ವಾಸ ತುಂಬಿ ಸಮಾಜದ ಒಳ್ಳೆಯ ಮುಖದ ಪರಿಚಯವನ್ನು ಮಾಡಬೇಕು. ಯಾವುದೇ ಕೆಟ್ಟ ಆಲೋಚನೆಗಳು ಬಾರದಂತೆ ಅವರನ್ನು ಕ್ರಿಯಾಶೀಲರನ್ನಾಗಿ ಇಡಬೇಕು. ಈ ಉದ್ದೇಶದಿಂದಲೇ ಮಾನವಿ ಕೆಲಸ ಮಾಡುತ್ತಿದೆ. ಮಾನವಿಯಲ್ಲಿ ಕೆಲಸ ಕಲಿತ ಬಹಳಷ್ಟು ಸ್ತ್ರೀಯರು ಸ್ವಂತ ಉದ್ಯೋಗ ಕೈಗೊಂಡಿದ್ದಾರೆ. ಇದು ಮೇಲ್ನೋಟಕ್ಕೆ ಒಂದು ವಾಣಿಜ್ಯ ವಹಿವಾಟು ನಡೆಸುವ ಸಂಸ್ಥೆಯಾಗಿ ಕಾಣುವುದಾದರೂ ಅದರ ಮೂಲ ಸೆಲೆ ಮಾನವೀಯತೆ. ಇಂತಹ ಮಹಿಳೆಯರ ಬಗ್ಗೆ ಸಮಾಜದ ನಿಲುವನ್ನು ತಿದ್ದುವ ಕೆಲಸವನ್ನು ಮಾನವಿ ಮಾಡುತ್ತಿದೆ.

**೧೭. ಜೀವನ್ಮುಖಿ ಸಂಸ್ಥೆ**

ದೇವದಾಸಿಗಳು ಸೇರಿದಂತೆ ಏಡ್ಸ್ ಸೋಂಕಿತರಲ್ಲಿ ಆತ್ಮವಿಶ್ವಾಸ, ಛಲ ತುಂಬಲೆಂದೇ ಜೀವನ್ಮುಖಿ ಸಂಸ್ಥೆ ಜನ್ಮ ಪಡೆದಿದೆ. ಊರು ಊರುಗಳಿಂದ ಬರುವ ಇಂಥ ಹೆಂಗಳೆಯರಿಗೆ ಹೊಸ ಬದುಕು ಕಲ್ಪಿಸುವ ಕನಸು ಸಂಸ್ಥೆಯದು. ಅಂಥವರೆಲ್ಲ ಒಂದೆಡೆ ಸೇರಿದ್ದಾರೆ. ರೋಗ ಹಾಗೂ ರೋಗಗ್ರಸ್ಥ ಸಮಾಜವನ್ನು ಎದುರಿಸಿ ಸೋಲಿಸುವ ಕನಸಿನೊಂದಿಗೆ ಜೀವಿಸುತ್ತಿದ್ದಾರೆ.

**೧೮. ನವ ಜೀವನ ಯೋಜನೆ**

ಬಡತನದ ರೇಖೆಗಿಂತ ಕೆಳಗಿರುವ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ, ವಿಧವೆಯರಿಗೆ ಆರ್ಥಿಕವಾಗಿ, ಸ್ವಾವಲಂಬಿಗಳಾಗಲು ಸಹಾಯಧನ ನೀಡುವುದು, ಮಹಿಳೆಯರು ಮತ್ತು ವಿಧವೆಯರು ತಮ್ಮ ಆದಾಯವನ್ನು ಹೆಚ್ಚಿಸಿಕೊಂಡು ಇತರ ಚಟುವಟಿಕೆಗಳನ್ನು ಪ್ರಾರಂಭಿಸಿ ತಮ್ಮ ಆರ್ಥಿಕ ಹಾಗೂ ಸಾಮಾಜಿಕ ಭದ್ರತೆಗೆ ಮತ್ತು

ಸ್ಥಾನಮಾನ ಹೆಚ್ಚಿಸುವಂತಹ ಚಟುವಟಿಕೆಗಳಿಗೆ ಆರ್ಥಿಕ ಸಹಾಯ ನೀಡುವುದು. ಈ ಯೋಜನೆಯ ಉದ್ದೇಶವಾಗಿದೆ.

**೧೯. ವಿಕಾಸಿನಿ ಯೋಜನೆ**

ಆರ್ಥಿಕವಾಗಿ ಬಡತನದ ರೇಖೆಗಿಂತ ಕೆಳಗಿರುವ ಗ್ರಾಮೀಣ ಹೆಣ್ಣು ಮಕ್ಕಳ ಸ್ವಯಂ ಉದ್ಯೋಗ ಪ್ರಾರಂಭಿಸಲು ಧನಸಹಾಯ ನೀಡುವುದು ಮತ್ತು ತಾವು ಸಿದ್ಧಪಡಿಸಿದ ವಸ್ತುಗಳ ಮಾರಾಟಕ್ಕೆ ಮೂಲಭೂತ ಸೌಕರ್ಯವಾದ ಸ್ಥಳದ ಏರ್ಪಾಡು ಮಾಡುವುದು. ೧೮ ವರ್ಷ ತುಂಬಿದ ಹಾಗೂ ಆರ್ಥಿಕವಾಗಿ ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯರು ಅದರಲ್ಲೂ ಬುಡಕಟ್ಟು ಮಹಿಳೆಯರು ಪ್ರಯೋಜನ ಪಡೆಯಲು ಅರ್ಹರಿರುತ್ತಾರೆ.

**೨೦. ಜಾಗೃತಿ ಯೋಜನೆ**

ಪ್ರಾಯಪೂರ್ವ ಬಾಲಕಿಯರಲ್ಲಿ, ಆರೋಗ್ಯ, ನೈರ್ಮಲ್ಯ, ಪೋಷಣೆ, ಕುಟುಂಬ ಕಲ್ಯಾಣ, ಮಗುವಿನ ಆರೈಕೆ, ಮತ್ತು ಗೃಹ ನಿರ್ವಹಣೆ ಬಗ್ಗೆ ಅರಿವು ಮೂಡಿಸುವುದು. ಪ್ರಾಯಪೂರ್ವ ಬಾಲಕಿಯರಿಗೆ ವೃತ್ತಿ ಕುಶಲತೆಯನ್ನು ಒದಗಿಸುವುದು. ಪ್ರಾಯಪೂರ್ವ ಬಾಲಕಿಯರನ್ನು ಅವರ ಮುಂದೆ ಬರುವ ತಾಯ್ತನ ಪ್ರವೇಶಿಸಲು ದಾರಿಮಾಡಿಕೊಟ್ಟು ಅವಳು ಚಟುವಟಿಕೆಗಳ ಬಗ್ಗೆ ತಿಳಿದುಕೊಂಡು ಶಾಲಾಪೂರ್ವ ಚಟುವಟಿಕೆಗಳನ್ನು ನಡೆಸಲು ಅಂಗನವಾಡಿ, ಕಾರ್ಯಕರ್ತೆಯರಿಗೆ ಸಹಾಯ ಮಾಡುವುದು. ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

**೨೧. ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳಿಗೆ ಹಾಜರಾತಿ ಶಿಷ್ಯವೇತನ**

ಶಾಲೆಗೆ ಹೋಗುವ ಗ್ರಾಮಾಂತರ ಹೆಣ್ಣು ಮಕ್ಕಳು ಶಾಲೆಯನ್ನು ಬಿಡುವುದನ್ನು ತಪ್ಪಿಸಲು ಹಾಗೂ ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವ ಸಲುವಾಗಿ ಆರ್ಥಿಕ ಸಹಾಯ ಮಾಡುವುದು. ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ.

ಮೇಲಿನ ಈ ಎಲ್ಲಾ ದೇವದಾಸಿ ಸುಧಾರಣಾ ಕ್ರಮಗಳು ಮತ್ತು ಪುನರ್‌ವಸತೀಕರಣಕ್ಕೆ ಸಂಬಂಧಿಸಿದ ಕಾನೂನುಗಳು, ಯೋಜನೆಗಳು, ಸಂಘ ಸಂಸ್ಥೆಗಳಿದ್ದರೂ, ಇವುಗಳ ಜೊತೆಗೆ ಈ ಕಾರ್ಯಕ್ಕೆ ಪೂರಕವಾದ ಇನ್ನು ಕೆಲವು 'ಭಾರತೀಯ ಸಂವಿಧಾನವು' ಮಹಿಳೆಯರಿಗಾಗಿಯೇ ಕೆಲವು ಶಾಸನಾತ್ಮಕ ಕ್ರಮಗಳನ್ನು ಜಾರಿ ಮಾಡಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ,

೦೧. ೧೮೨೯ - ಸತಿಸಹಗಮನ ಪದ್ಧತಿ ನಿಷೇಧ ಕಾನೂನು

೦೨. ೧೮೫೬ - ವಿಧವಾ ಪುನರ್ವಿವಾಹ ಕಾಯ್ದೆ

೦೩. ೧೮೬೪ - ಭಾರತೀಯ ವಿಚ್ಛೇದನಾ ಕಾನೂನು

೦೪. ೧೮೭೨ - ವಿಶೇಷವಿವಾಹ ಕಾಯ್ದೆ

೦೫. ೧೯೨೯ - ಬಾಲ್ಯವಿವಾಹ ನಿರ್ಬಂಧನಾ ಕಾಯ್ದೆ

೦೬. ೧೯೩೭ - ವಿಧವೆಯರಿಗೆ ಆಸ್ತಿ ಮೇಲಿನ ಹಕ್ಕಿನ ಕಾಯ್ದೆ

೦೮. ೧೯೩೯ - ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆ

೦೯. ೧೯೪೮ - ಹಿಂದೂ ಸ್ತ್ರೀಯರ ಆಸ್ತಿ ಹಕ್ಕಿನ ಕಾಯ್ದೆ

೧೦. ೧೯೪೯ - ಬಹುಪತ್ನಿ ನಿಷೇಧ ಕಾಯ್ದೆ

೧೧. ೧೯೫೫ - ಹಿಂದೂ ವಿವಾಹ ಕಾಯ್ದೆ

೧೨. ೧೯೫೫ - ನಾಗರಿಕ ಹಕ್ಕುಗಳ ಸಂರಕ್ಷಣೆ ಅಧಿನಿಯಮ

೧೩. ೧೯೫೬ - ಹಿಂದೂ ಪಿತ್ರಾರ್ಜಿತ ಆಸ್ತಿ, ಅಧಿಕಾರ ಕಾಯ್ದೆ

೧೪. ೧೯೫೬ - ಹಿಂದೂ ದತ್ತಕ ಮತ್ತು ಜೀವನಾಂಶ ಕಾಯ್ದೆ

೧೫. ೧೯೫೬ - ಸ್ತ್ರೀ ಸಂರಕ್ಷಣಾ ನಿಷೇಧ ಕಾಯ್ದೆ

೧೬. ೧೯೬೧ - ವರದಕ್ಷಣಾ ನಿಷೇಧ ಕಾಯ್ದೆ

೧೭. ೧೯೭೧ - ವೈದ್ಯಕೀಯ ಗರ್ಭಪಾತ ಕಾನೂನು

೧೮. ೧೯೮೦ - ಮಹಿಳಾ ಅಸಭ್ಯ ನಿಷೇಧ ಅಧಿನಿಯಮ

ಇವುಗಳ ಜೊತೆಗೆ ಸಾಮಾಜಿಕ ಶಾಸನಗಳು ಕೂಡ ಮಹಿಳೆಯರಿಗೆ ರಕ್ಷಣೆ ಒದಗಿಸುವ ಕಾರ್ಯದಲ್ಲಿ ನಿರತವಾಗಿವೆ. ಅವುಗಳೆಂದರೆ,

೦೧. ೧೯೮೬ - ಜುವೆನೈಲ್ ಜಸ್ಟಿಸ್ ಅಧಿನಿಯಮ

೦೨. ೧೯೫೮ - ಅಪರಾಧಿಗಳ ಪರಿವೀಕ್ಷಣಾ ಅಧಿನಿಯಮ

೦೩. ೧೯೫೬ - ಅನೈತಿಕ ವ್ಯವಹಾರಗಳ ಅಧಿನಿಯಮ

೦೪. ೧೯೮೧ - ದೇವದಾಸಿ ಸಮರ್ಪಣಾ ನಿಷೇಧ ಅಧಿನಿಯಮ.

ಮೇಲಿನ ಇಷ್ಟೆಲ್ಲಾ ಪ್ರಯತ್ನಗಳು ಆಗಿದ್ದು. ಆಗುತ್ತಿದ್ದರೂ ಇವುಗಳ ಮಧ್ಯದಲ್ಲಿಯೂ ದೇವದಾಸಿ ಪದ್ಧತಿ ಇನ್ನೂ ಜೀವಂತವಾಗಿರುವುದು ಏಕೆ? ಎಂಬ ಪ್ರಶ್ನೆ ಇದ್ದು. ಈ ಕ್ಷೇತ್ರಕ್ಕೆ ಸಂಬಂಧಿಸಿದ ಪರಿಣಿತರು ಈ ಬಗ್ಗೆ ಚಿಂತಿಸುವಂತೆ ಮಾಡಿದೆ. ಈ ಚಿಂತನೆಯ ಹಿನ್ನೆಲೆಯಲ್ಲಿ ಬುಡಕಟ್ಟು ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಅವಶ್ಯವಿರುವ ಯೋಜನೆಗಳ ರೂಪಿಕೆ ಹಾಗೂ ಅನುಷ್ಠಾನಕ್ಕಾಗಿ ಬುಡಕಟ್ಟು ದೇವದಾಸಿಯರೊಂದಿಗೆ ಒಂದು ಮುಕ್ತ ಚರ್ಚಾಕೂಟ ಅಥವ ಸಂವಾದದ ಅಗತ್ಯವನ್ನು ಮನಗಂಡ ಬುಡಕಟ್ಟು ಅಧ್ಯಯನ ವಿಭಾಗದ ಅಧ್ಯಾಪಕ ವರ್ಗವು ಚರ್ಚಿಸಿ, ಡಾ.ಕೆ.ಎಂ.ಮೇತ್ರಿ ಅವರ ಸಂಚಾಲಕತ್ವದಲ್ಲಿ ಕೂಡ್ಲಿಗಿಯ ಸ್ನೇಹ ಮತ್ತು ಸ್ಪಂದನ ಸಂಸ್ಥೆಗಳ ಸಹಯೋಗದೊಂದಿಗೆ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗ, ಇವರು 'ಸುಗಮ' ಕಾರ್ಯಕ್ರಮವನ್ನು ದಿನಾಂಕ ೧೪-೨-೨೦೦೪ ರಿಂದ ಬುಡಕಟ್ಟು ದೇವದಾಸಿಯರ ಸಂವಾದ ನಿರ್ಮೂಲನೆ ಮತ್ತು ಸೌಲಭ್ಯಗಳ ವಿಶ್ಲೇಷಣೆ ಕಾರ್ಯಕ್ರಮ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿಯಲ್ಲಿ ಅರ್ಥಪೂರ್ಣವಾಗಿ ನೆರವೇರಿಸಲಾಗಿದ್ದು, ಈ ನಿಟ್ಟಿನಲ್ಲಿ ಅಪಾರ ಜ್ಞಾನ ಹೊಂದಿದ ತಜ್ಞರ ಜೊತೆ ಚರ್ಚಿಸಿ, ಅದರಲ್ಲಿ ದೇವದಾಸಿ ಪದ್ಧತಿಯು ನಿರ್ಮೂಲನೆ ಹೊಂದಿ, ದೇವದಾಸಿಯರು ಸಮಾಜದ ಮುಖ್ಯಧಾರೆಯಲ್ಲಿ ಸಂಚಲನೆಗೊಳ್ಳಲು ದೇವದಾಸಿಯರಿಂದಲೇ ಸಂವಾದದಲ್ಲಿ ಹೊರ ಹೊಮ್ಮಿದ ಮಾರ್ಗೋಪಾಯಗಳು ಮತ್ತು ಸರ್ವಾನುಮತದಿಂದ ಕೈಗೊಂಡ ನಿರ್ಣಯಗಳು ಹೀಗಿವೆ.

**ಸುಗಮ ಕಾರ್ಯಕ್ರಮದಲ್ಲಿ ಕೈಗೊಂಡ ನಿರ್ಣಯಗಳು**

೦೧. ದೇವದಾಸಿಯರೇ ತಮ್ಮ ವಿಮೋಚನೆಗಾಗಿ ಮಾನಸಿಕವಾಗಿ ಸಿದ್ಧರಾಗಿ, ದೃಢ ಸಂಕಲ್ಪ ಮಾಡಿ, ಸಂಘಟಿತರಾಗಿ ಬುಡಕಟ್ಟು ದೇವದಾಸಿ ವಿಮೋಚನಾ ಸಂಘ ಸ್ಥಾಪಿಸಿ, ದೇವದಾಸಿ ವಿಮೋಚನಾ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರುವುದು.

೦೨. ದೈವ ಮತ್ತು ಆಚರಣೆಯ ಹೆಸರಿನಲ್ಲಿ ದೇವದಾಸಿಯರೊಂದಿಗೆ ಜರುಗುವ ಓಕುಳಿ, ಕಡುಬಿನ ಕಾಳಗ, ನೃತ್ಯ, ಅರೆ ಬೆತ್ತಲೆಸೇವೆ, ಮುತ್ತುಕಟ್ಟುವ ಅಥವಾ ಮುದ್ರೆಒತ್ತುವ ಕ್ರಿಯಾವಿಧಿಗಳನ್ನು ಕಟ್ಟುನಿಟ್ಟಾಗಿ ನಿರ್ಬಂಧಿಸಬೇಕು. ದೇವದಾಸಿ ಪದ್ಧತಿಗೆ ಒಳಪಡಿಸುವವರಿಗೆ, ಅವರೊಂದಿಗೆ ಅನೈತಿಕ ಸಂಬಂಧ ಇಟ್ಟುಕೊಂಡವರಿಗೆ ತಪ್ಪಿಸ್ಥರೆಂದು ದಂಡ ಮತ್ತು ಕಠಿಣ ಶಿಕ್ಷೆಯನ್ನು ಕಡ್ಡಾಯವಾಗಿ ವಿಧಿಸಬೇಕು.

೦೩. ಕುಟುಂಬ, ಸಮಾಜ, ಧರ್ಮ, ದೈವ, ಜಾತಿ ಪಂಚಾಯತಿ, ಸ್ವಯಂ ಸೇವಾ ಸಂಸ್ಥೆ ಮತ್ತು ಸರಕಾರದ ಹಂತಗಳಲ್ಲಿ ದೇವದಾಸಿ ಪದ್ಧತಿಯ ನಿರ್ಮೂಲನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

೦೪. ವಾಲ್ಮೀಕಿ ಗುರುಪೀಠವು ದೇವದಾಸಿ ವಿಮೋಚನೆಗಾಗಿ ಧಾರ್ಮಿಕ ಆಂದೋಲನವನ್ನು ಕೈಗೊಂಡು ಜನರಲ್ಲಿ ಜಾಗೃತಿಯನ್ನು ಮೂಡಿಸಬೇಕು.

೦೫. ಬುಡಕಟ್ಟಿನ ಜಾತಿ ಪಂಚಾಯಿತಿಯ ಪಂಚರು ಮತ್ತು ಯುವ ಸಂಘಗಳು ದೇವದಾಸಿ ವಿಮೋಚನೆಗಾಗಿ ಸಾಮಾಜಿಕ ಆಂದೋಲನವನ್ನು ಪ್ರತಿ ಗ್ರಾಮ ಮಟ್ಟದಲ್ಲಿಯೂ ಕೈಗೊಳ್ಳಬೇಕು.

೦೬. ಕರ್ನಾಟಕ ಬುಡಕಟ್ಟು ದೇವದಾಸಿಯರ ಸಮಗ್ರ ಸಮೀಕ್ಷೆ ಮತ್ತು ಈ ಕುರಿತು ಪರಿಣತರಿಂದ ಅಧ್ಯಯನ ಆಗಬೇಕು.

೦೭. ದೇವದಾಸಿಯರಿಗೆ ಮತ್ತು ಅವರ ಮಕ್ಕಳಿಗೆ ಸಂಬಂಧಪಟ್ಟ ಅಧಿಕಾರಿಗಳು ಸರಳವಾಗಿ ದೇವದಾಸಿ ಪ್ರಮಾಣ ಪತ್ರ ನೀಡಬೇಕು.

೦೮. ಎಲ್ಲೆಡೆ ದೇವದಾಸಿ ವಿಮೋಚನೆಗಾಗಿ ವಿಚಾರ ಸಂಕಿರಣ, ಸಮ್ಮೇಳನ, ಕಮ್ಮಟ, ತರಬೇತಿ ಶಿಬಿರಗಳನ್ನು ಏರ್ಪಡಿಸಿ ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕಬೇಕು.

೦೯. ಗಿರಿಜನ ಉಪಯೋಜನೆ ಅಡಿಯಲ್ಲಿ ಬುಡಕಟ್ಟು ದೇವದಾಸಿ ಪದ್ಧತಿಯ ವಿಮೋಚನೆಗಾಗಿ ಪರಿಣತ ದೇವದಾಸಿಯರಿಂದಲೇ ವಿಶೇಷ ಯೋಜನೆಗಳನ್ನು ರೂಪಿಸಿಕೊಂಡು ಈ ಹಣಕಾಸಿನ ವರ್ಷದಿಂದಲೇ ಅನುಷ್ಠಾನಗೊಳಿಸಲು ಸರಕಾರ ಮುಂದಾಗಬೇಕು.

೧೦. ದೇವದಾಸಿಯರ ವಿಮೋಚನೆಗಾಗಿ ಸರಕಾರ ದೇವದಾಸಿ ಸ್ವಶಕ್ತಿ ಗುಂಪುಗಳನ್ನು ದೇವದಾಸಿಯರು ಇದ್ದಲ್ಲೆಲ್ಲಾ ಸ್ಥಾಪಿಸಬೇಕು. ಅವರ ವಿಮೋಚನೆಗಾಗಿ ಅವರು ಯೋಜಿಸಿದ ಯೋಜನೆಗಳನ್ನೇ ಅನುಷ್ಠಾನಗೊಳಿಸಲು ಸರಕಾರ ಮುಂದಾಗಬೇಕು.

೧೧. ದೇವದಾಸಿಯರ ಮತ್ತು ಅವರ ಹೆಣ್ಣು ಮಕ್ಕಳ ವಿವಾಹಕ್ಕೆ ಉತ್ತೇಜನ ನೀಡಲು ಮದುವೆಯ ವೆಚ್ಚ ಹಾಗೂ ಜೀವನ ನಿರ್ವಹಣೆಗಾಗಿ ವಿಶೇಷ ಸೌಲಭ್ಯಗಳನ್ನು ಸರಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಕಲ್ಪಿಸಬೇಕು.

೧೨. ದೇವದಾಸಿಯ ದೀಕ್ಷೆ ಸಂದರ್ಭದಲ್ಲಿ ಸಿಕ್ಕ ಬಾಲಕಿಗೆ ರಾಜ್ಯದ ಮಹಿಳಾ ಪುನರ್‌ವಸತಿ ಕೇಂದ್ರಗಳ ಆಶ್ರಯ ಪಡೆಯುವಂತೆ ಮನವಲಿಸಬೇಕು.

೧೩. ದೇವದಾಸಿಯರ ಮಕ್ಕಳಿಗೆ ಮೌಲ್ಯಯುತ ಅನ್ವಯಿಕ ಶಿಕ್ಷಣ ಮತ್ತು ದೇವದಾಸಿಯರಿಗೆ ವೃತ್ತಿ ಶಿಕ್ಷಣ ತರಬೇತಿ ಪಡೆಯಲು ವಿಶೇಷ ಸೌಲಭ್ಯಗಳನ್ನು ಸರಕಾರ, ಸ್ವಯ ಸೇವಾ ಸಂಸ್ಥೆಗಳು ಕಲ್ಪಿಸಬೇಕು.

೧೪. ಒಣ ಬೇಸಾಯದ ದೇವದಾಸಿಯರಿಗೆ ನೀರಾವರಿಗಾಗಿ ಉಚಿತವಾಗಿ ಕೊಳವೆಬಾವಿ ಕೊರೆಸಿ ಮತ್ತು ಪಂಪ್‌ಸೆಟ್‌ಗಳನ್ನು ಸರಕಾರ ನೀಡಬೇಕು.

೧೫. ಭೂರಹಿತ ಕೃಷಿಕೂಲಿ ಆಧಾರಿತ ದೇವದಾಸಿಯರಿಗೆ ಜೀವನ ನಿರ್ವಹಣೆಗಾಗಿ ಕನಿಷ್ಠ ೩ ಎಕರೆ ಭೂಮಿಯನ್ನು ಸರಕಾರ ನೀಡಿ ಸಹಕರಿಸಬೇಕು.

೧೬. ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗಾಗಿ ಸರಕಾರ ಸರಳವಾಗಿ ದೇವದಾಸಿಯರಿಗೆ ಸಾಲ ಸೌಲಭ್ಯಗಳನ್ನು ಕಲ್ಪಿಸಬೇಕು.

೧೭. ದೇವದಾಸಿಯರಿಗೆ ಮತ್ತು ಅವರ ಮಕ್ಕಳಿಗೆ ಸರಕಾರಿ ಮತ್ತು ಖಾಸಗಿ ಸೇವಾ ಸಂಸ್ಥೆಗಳಲ್ಲಿಯ ಹುದ್ದೆಗಳಲ್ಲಿ ಮೀಸಲಾತಿಯನ್ನು ಕಲ್ಪಿಸಬೇಕು.

೧೮. ಜೀವನ ನಿರ್ವಹಣೆಗಾಗಿ ನಿರ್ಗತಿಕ ವೃದ್ಧ ದೇವದಾಸಿಯರಿಗೆ ವೃಧ್ಯಾಪವೇತನ ಮತ್ತು ವೃದ್ಧಾಶ್ರಮ ಕಲ್ಪಿಸಬೇಕು.

೧೯. ನಿರಾಶ್ರಿತ ದೇವದಾಸಿಯರಿಗೆ ಆಶ್ರಯ ಮನೆಗಳನ್ನು ಸರಕಾರ ನಿರ್ಮಿಸಿ ಕೊಡಬೇಕು.

೨೦. ಕರ್ನಾಟಕ ದೇವದಾಸಿ (ಸಮರ್ಪಣಾ ನಿಷೇಧ) ಶಾಸನ ೧೯೮೨ರಲ್ಲಿ ಸೂಕ್ತ ತಿದ್ದುಪಡಿಗಳನ್ನು ತಂದು ಜಾರಿಗೊಳಿಸುವುದು.

೨೧. ವರದಕ್ಷಿಣೆ ನಿಷೇಧ ಕಾಯ್ದೆ ಕಟ್ಟುನಿಟ್ಟಾಗಿ ಜಾರಿಗೊಳಿಸುವುದು.

೨೨. ದೇವದಾಸಿ ವಿಮೋಚನಾ ಅಭಿವೃದ್ಧಿ ನಿಗಮ ಒಂದನ್ನು ಸರಕಾರ ಸ್ಥಾಪಿಸಬೇಕು.

೨೩. ದೇವದಾಸಿಯರಲ್ಲಿ ಲೈಂಗಿಕ ಮತ್ತು ಏಡ್ಸ್‌ನಂತಹ ಮಾರಕ ರೋಗಗಳನ್ನು ಸುಳಿಯದಂತೆ ನೋಡಿಕೊಳ್ಳಬೇಕು. ಒಂದು ವೇಳೆ ಅಂತಹ ರೋಗಗಳಿಗೆ ದೇವದಾಸಿಯರು ತುತ್ತಾದರೆ ಸರಕಾರವೇ ಉಚಿತ ಚಿಕಿತ್ಸೆ ನೀಡಬೇಕು.

೨೪. ದೇವದಾಸಿಯರಿಗೆ ಆರೋಗ್ಯ ವಿಮಾ ಪಾಲಸಿ ಯೋಜನೆಯನ್ನು ಜಾರಿಗೊಳಿಸಬೇಕು.

೨೫. ದೇವದಾಸಿ ಪದ್ಧತಿ ಮತ್ತು ಏಡ್ಸ್‌ನಂತಹ ರೋಗಗಳಿಂದಾಗುವ ಅನಾಹುತಗಳ ತಿಳಿ ಹೇಳಲು ಜಾಗೃತಿ ಶಿಬಿರಗಳನ್ನು ಏರ್ಪಡಿಸಬೇಕು.

೨೬. ಬುಡಕಟ್ಟು ದೇವದಾಸಿ ವಿಮೋಚನೆಗೆ ಸಂಬಂಧಿಸಿದಂತೆ ಕೂಡ್ಲಿಗಿಯ ಸ್ನೇಹ, ಸ್ಪಂದನ, ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗ ಇತ್ಯಾದಿಗಳ ಸಹಕಾರ ಪಡೆಯುವುದು. ಈ ರೀತಿಯ ಮಾರ್ಗೋಪಾಯಗಳನ್ನು ಸೂಚಿಸಲಾಗಿದೆ.

## ೬.೮ ಅಧ್ಯಯನದ ಫಲಿತಗಳು

ದೇವದಾಸಿ ಸಂಪ್ರದಾಯಕ್ಕೆ ಒಂದು ದೊಡ್ಡ ಪರಂಪರೆಯೇ ಇದೆ. ಆರಂಭದಲ್ಲಿ ಭಾರತೀ ಸಂಪ್ರದಾಯದ ಮೂಲ ನಿವಾಸಿಗಳಾದ ದ್ರಾವಿಡರು ತಮ್ಮ ಮಾತೃದೇವತೆಯನ್ನು ತೃಪ್ತಿಪಡಿಸಲು, ಆಕೆಯ ಕೃಪೆಗಾಗಿ ಪೂಜಿಸಿ, ಆಕೆ ಸಂತುಷ್ಟಳಾದರೆ, ಮಳೆ ಬೆಳೆ ಸಮೃದ್ಧವಾಗಿ, ತಾವೆಲ್ಲ ಆರೋಗ್ಯದಿಂದಿರಲು ಸಾಧ್ಯವೆಂದು ನಂಬಿ. ಮನೆ ಮನೆಗೆ ಒಬ್ಬ ಮಾತೃವಿದ್ದಂತೆ, ಗ್ರಾಮಕ್ಕೊಬ್ಬ ದೇವತೆ ಇದ್ದು, ಆಕೆಯನ್ನು ಪೂಜಿಸಲು ಪೂಜಾರಿಣಿಯರಿದ್ದು. ಶುದ್ಧ ಆರಾಧನೆಯ ರೂಪದಲ್ಲಿತ್ತು. ನಂತರ ಬಂದ ಆರ್ಯರು ದ್ರಾವಿಡರನ್ನು ಸೋಲಿಸಿ, ಗುಲಾಮರನ್ನಾಗಿ ಮಾಡಿಕೊಂಡು ಅವರ ಮಾತೃ ದೇವತೆಯ ಸ್ಥಾನದಲ್ಲಿ ಪುರುಷ ದೇವರುಗಳನ್ನು ಸ್ಥಾಪಿಸಿ, ಗ್ರಾಮ ದೇವತೆಯ ಪೂಜಾರಿಣಿಯರನ್ನು ಪುರುಷ ದೇವರನ್ನು ದಾಸಿಯರನ್ನಾಗಿ ನೇಮಿಸಿ, ಶೋಷಣೆಯ ನೆಲೆಯಲ್ಲಿ ದೇವದಾಸಿ ಸಂಪ್ರದಾಯವನ್ನು ಆಚರಣೆಗೆ ತಂದರು. ಜೊತೆಗೆ ಸಮಾಜದಲ್ಲಿ ಪಿತೃಪ್ರಧಾನ ಕೌಟುಂಬಿಕ ಆಚರಣೆಗೆ ತಂದು, ಪುರುಷ ಪ್ರಧಾನತೆಯಿಂದ ಕೂಡಿದ ಧಾರ್ಮಿಕ ನಂಬಿಕೆಗಳು, ವರ್ಣ ವ್ಯವಸ್ಥೆ, ವೇದೋಪನಿಷತ್ತುಗಳು, ಶಾಸ್ತ್ರ ಪುರಾಣಗಳನ್ನು ತಿರುಚಿ ಕರ್ಮಸಿದ್ಧಾಂತವನ್ನು ಆಚರಣೆಗೆ ತಂದರು. ಹಾಗೆಯೇ ಕೆಳವರ್ಗದ ಸ್ತ್ರೀಯರನ್ನು ದೇವರ ಹೆಸರಿನಲ್ಲಿ ದೇವದಾಸಿಯರನ್ನಾಗಿ, ರಾಜರ ಹೆಸರಿನಲ್ಲಿ ರಾಜ ದಾಸಿಯರನ್ನಾಗಿ, ಸಾಹುಕಾರರ ಹೆಸರಿನಲ್ಲಿ ಪಾತರದವರನ್ನಾಗಿ, ಯಲ್ಲಮ್ಮನ ಹೆಸರಿನಲ್ಲಿ ಜೋಗತಿಯರನ್ನಾಗಿ ಮಾಡಿದರು. ಇವೆಲ್ಲವುಗಳಿಗೆ ಧರ್ಮದ ಹಿನ್ನೆಲೆ ಕೊಟ್ಟು, ಪುರೋಹಿತರು ರಾಜರು, ರಾಜ ಪರಿವಾರದವರು ಸಾಮಂತರು ಸಾಹುಕಾರರು, ಇವರ ಜೊತೆಗೆ ಸಂಬಂಧ ಇಟ್ಟುಕೊಂಡಿದ್ದರಿಂದ ಘನತೆ, ಗೌರವಗಳಿಂದ ಜೀವನ ನಡೆಸುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸೈನಿಕರಿಗೆ ತೃಪ್ತಿ ಪಡಿಸುವ ಕಾರ್ಯ ಇವರದಾಗಿದ್ದು, ಉತ್ತಮ ಸ್ಥಾನ ಹೊಂದಿದ್ದರು. ನಂತರ ತಾಳಿಕೋಟೆಯ ಯುದ್ಧದಲ್ಲಿ ವಿಜಯನಗರ ಹಾಳಾಗುತ್ತಿದ್ದಂತೆ ತಮ್ಮ ರಕ್ಷಣೆಗಾಗಿ ಆಂಧ್ರದ ನೆಲಗೊಂಡ, ತಮಿಳುನಾಡಿನ ತಂಜಾವೂರುಗಳನ್ನು, ಮಧುರೈ ಮೀನಾಕ್ಷಿ ಪುರಂ, ಮೊದಲಾದ ಪಟ್ಟಣ ಸೇರಿಕೊಂಡರು (Nitya samangali, saskia C.Kereson Bhoom Story) ಎನ್ನಲಾಗಿದೆ. ಮುಂದಿನ ದಿನಗಳಲ್ಲಿ ಇವರು ತಮ್ಮ ಪ್ರತಿಷ್ಠಿತ ಸ್ಥಾನಮಾನ ಕಳೆದುಕೊಂಡು ಜೀವನೋಪಾಯಕ್ಕಾಗಿ ವೇಶ್ಯೆಯರಾಗಬೇಕಾಯಿತು. ಪರಿಣಾಮ ಸಮಾಜದ ದೃಷ್ಟಿಯೂ ಬದಲಾಯಿತು.

**ದೇವದಾಸಿ ಸಂಪ್ರದಾಯ ಪ್ರಬಲಗೊಳ್ಳಲು ಇರುವ ಕಾರಣಗಳು**

೧. ಕೈಗಾರಿಕೀಕರಣ, ನಗರೀಕರಣದ ಬೆಳವಣಿಗೆಗೆ ಅನುಗುಣವಾಗಿ ಗ್ರಾಮಾಂತರ ಪ್ರದೇಶಗಳಿಂದ ಯಥೇಚ್ಛವಾಗಿ ಕಾರ್ಮಿಕರನ್ನು ಆಕರ್ಷಿಸಿದ ನಗರಗಳು ದೇವದಾಸಿಯರ ಕೇಂದ್ರವೂ ಆಗಿದೆ. ಕಾರ್ಮಿಕ ಸಂಘಟನೆ ಪ್ರಾರಂಭವಾಗುವ ಮುನ್ನ ಕೈಗಾರಿಕೆಗಳಲ್ಲಿ ಈ ವರ್ಗ ಬಹು ದೀರ್ಘಕಾಲ ದುಡಿಯಬೇಕಿತ್ತು. ತಮ್ಮ ಹೆಂಡತಿಯರನ್ನು ಗ್ರಾಮಾಂತರ ಪ್ರದೇಶಗಳಲ್ಲಿಯೇ ಬಿಟ್ಟು ಬಂದಿದ್ದು, ಹೊಸ ಪ್ರದೇಶಗಳಲ್ಲಿ ಉಂಟಾದ ಏಕಾಂತತೆಯನ್ನು ಹೋಗಲಾಡಿಸಿಕೊಳ್ಳಲು ಅವರು ವೇಶ್ಯೆರಿಗೆ ಮಾರು ಹೋದದ್ದು ಸಹಜವಾದುದೇ ಆಗಿದೆ. ಇದರಿಂದಾಗಿ ದೇವದಾಸಿಯರು ಈ ಲಾಭದಾಯಕವಾದ ವೇಶ್ಯಾವೃತ್ತಿಗಿಳಿಯಲು ಉತ್ಸುಕರಾದರು.

೨. ಸ್ಥಳೀಯ ಮೇಲ್ವರ್ಗದ ಜನರು ಈ ಪದ್ಧತಿಯನ್ನು ಪರೋಕ್ಷವಾಗಿ ಪ್ರೋತ್ಸಾಹಿಸಿ ಅವರ ಕಡುಬಡತನ ನೀಗಿದಂತಾಗುವ ಜೊತೆಗೆ ಇದೊಂದು ಸಾಮಾಜಿಕ ದುಷ್ಟಪದ್ಧತಿ ಎಂಬ ಅರಿವು ಬಾರದಂತೆ ಮಾಡಿರುವುದಾಗಿದೆ.

೩. ಇದರಲ್ಲಿ ತೊಡಗಿರುವ ಎಲ್ಲಾ ಹೆಣ್ಣುಮಕ್ಕಳು ಕೆಳವರ್ಗಕ್ಕೆ ಸೇರಿದವರಾಗಿದ್ದು, ಬಂಡವಾಳವಿಲ್ಲದೇ ದುಡಿಯುವ ಸುಲಭ ವ್ಯಾಪಾರಿ ಉದ್ದೇಶದಿಂದ ಈ ಪದ್ಧತಿ ಬೆಳೆಯಲು, ವೇಶ್ಯೆಯರಾಗಿ ಪರಿವರ್ತಿತರಾಗಲು ಕಾರಣವಾಗಿದೆ.

೪. ದೇವದಾಸಿ ಪದ್ಧತಿ ಕರ್ನಾಟಕದ, ಬೆಳಗಾವಿ, ಬಿಜಾಪುರ, ಗುಲಬರ್ಗಾ, ರಾಯಚೂರು, ಬಳ್ಳಾರಿ, ಧಾರವಾಡ, ಶಿವಮೊಗ್ಗ, ಬೀದರ್ ಜಿಲ್ಲೆಗಳಲ್ಲಿದ್ದು, ಇದಕ್ಕೆ ಕಾರಣ ಬರಗಾಲ ಬಂದಾಗ ತುಂಬಿದ ಸಂಸಾರಗಳಲ್ಲಿ ಮಕ್ಕಳನ್ನು ದೇವಸ್ಥಾನಗಳಿಗೆ ಮಾರುತ್ತಿದ್ದರು. ದೇವಾಲಯಗಳ ಪೂಜಾರಿಗಳು, ಘರವಾಲಿಯಾಗಳು ಆರೋಗ್ಯವಂತ ಹೆಣ್ಣುಮಕ್ಕಳನ್ನು ಆರಿಸಿಕೊಂಡು ದೇವದಾಸಿಯರನ್ನಾಗಿ ಮಾಡುತ್ತಿದ್ದರು.

೫. ನತದೃಷ್ಟವೆಂದು ಕಂಡುಬಂದ ಅಥವಾ ಕೆಟ್ಟ ನಕ್ಷತ್ರದಲ್ಲಿ ಜನಿಸಿದ ಹೆಣ್ಣುಮಗು, ಮೈಮೇಲೆ ಬಂದ ದೇವಿ ಅಥವಾ ಚರ್ಮರೋಗ, ಖಾಯಿಲೆಯಿಂದ ನರಳುತ್ತಿದ್ದರೆ, ಜಿಡ್ಡುಗಟ್ಟಿದ ತಲೆಗೂದಲು, ಮುಂತಾದವು ಕಂಡು ಬಂದರೆ, ಅವರನ್ನು ದೇವದಾಸಿಯರಾಗಿ ಬಿಡುತ್ತಿರುವುದು ಈಗಲೂ ಇದೆ.

೬. ಇಂದು ನೀತಿಗೆಟ್ಟವರು, ಅವಿವಾಹಿತೆ ತಾಯಂದಿರು ಬಡತನದಲ್ಲಿ ಬಳಲುತ್ತಿರುವ ಅನೇಕ ಸ್ತ್ರೀಯರು ತಮ್ಮ ಅನೈತಿಕ ಜೀವನಕ್ಕೆ ಸಾಮಾಜಿಕ ಅನುಮೋದನೆ ಪಡೆಯಲು ತಮ್ಮ ಮಕ್ಕಳಿಗೆ ಸೂಕ್ತ ಪಿತೃತ್ವ ಪಡೆಯಲು, ದೇವದಾಸಿ ಪದ್ಧತಿಯ ನೆರವು ತೆಗೆದುಕೊಂಡಿದ್ದಾರೆ.

೭. ದೇವದಾಸಿಯಾಗಿ ಸ್ತ್ರೀಯನ್ನು ಬಿಡುವುದರಿಂದ ಒಂದು ಮನೆತನಕ್ಕೆ ಗ್ರಾಮಕ್ಕೆ, ಜಾತಿಗೆ ಒಳಿತಾಗುವುದೆಂದು, ಅಂತಹ ಸ್ತ್ರೀಗೆ ಸಮಾಜದಲ್ಲಿ ಅನೇಕ ಸ್ಥಾನಮಾನಗಳು, ಗೌರವಗಳು ಇರುತ್ತಿದ್ದವು. ಹಬ್ಬ, ತೇರು, ಮದುವೆ ಮುಂತಾದ ಸಂದರ್ಭಗಳಲ್ಲಿ ಅವರಿಗೆ ಕೆಲವು ನಿರ್ದಿಷ್ಟವಾದ ಕಾರ್ಯಗಳಿರುತ್ತಿದ್ದವು. ಇವುಗಳಲ್ಲಿ ಎಣ್ಣೆಯ ಪವಿತ್ರ ದೀಪ ಹಿಡಿಯುವುದು. ಸಿಡಿ ಆಡುವುದು, ಓಕಳಿ ಆಡುವುದು ಬೆತ್ತಲೆ ಸೇವೆ ಮಾಡುವುದು ಪರಾಕು ಹೇಳುವುದು, ಮುಂತಾದ ಕಾರ್ಯಗಳಿರುತ್ತಿದ್ದವು. ಈ ಎಲ್ಲಾ ಸಂದರ್ಭಗಳಲ್ಲಿ ದೇವದಾಸಿಯರಿಗೆ ಗ್ರಾಮದಿಂದ ಸೂಕ್ತ ಗೌರವ, ಹೊಸ ಸೀರೆ, ಹಣ, ಆಹಾರ ಮುಂತಾದವುಗಳ ರೂಪದಲ್ಲಿ ಸಲ್ಲುತ್ತಿದ್ದವು. ಈ ಎಲ್ಲಾ ಪದ್ಧತಿಗಳು ಒಂದೆಡೆ ಸೂಕ್ತವಾಗಿ ಆಚರಿಸುವುದರಿಂದ ದೇವರು ಸಂತುಷ್ಟನಾಗಿ ಗ್ರಾಮಕ್ಕೆ ಒಳಿತನ್ನು ತರುತ್ತಾನೆಂದು ನಂಬಿ, ದೇವದಾಸಿಯರಿಗೆ ಪ್ರೇರಣೆ ನೀಡುತ್ತಿದ್ದರು.

೮. ರಾಜರುಗಳು ರಾಜನರ್ತಕಿಯರ ಮೂಲಕ ಅರಮನೆ ಮತ್ತು ಅಂತಃಪುರದ ಆಕರ್ಷಣೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಂತೆ ಪುರೋಹಿತರೂ ಕೂಡ ದೇವಸ್ಥಾನಗಳ ಆಕರ್ಷಣೆಯನ್ನು ಹೆಚ್ಚಿಸಲು ದೇವಸ್ಥಾನದ ಜಾತ್ರೆ, ಉತ್ಸವ ಹಾಗೂ ಧಾರ್ಮಿಕ ಸಮಾರಂಭಗಳಿಗೆ ಜನರನ್ನು ಆಕರ್ಷಿಸಲು ಸುಂದರ ಸ್ತ್ರೀಯರನ್ನು 'ದೇವದಾಸಿಯಾಗಿ' ಮಾಡುತ್ತಿದ್ದಾರೆನ್ನಲಾಗಿದೆ.

೯. ದೇವದಾಸಿ ಪದ್ಧತಿ ಕಾನೂನು ಬಾಹಿರವಾಗಿದ್ದರೂ ಅದರಲ್ಲಿನ ನ್ಯೂನತೆಯನ್ನು ಉಪಯೋಗಿಸಿಕೊಂಡು ಇನ್ನೂ ಮುಂದುವರೆಸಿರುವುದು ಕಂಡು ಬರುತ್ತದೆ. ಇಂದಿಗೂ ಅನೇಕ ದೇವಾಲಯಗಳಲ್ಲಿ ಮುಚ್ಚು ಮರೆ ಇಲ್ಲದೇ ದೇವದಾಸಿ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದಿದೆ. ಕಾರಣ ಧರ್ಮದ ಹೆಸರಿನಲ್ಲಿನ ಅಂಧಶ್ರದ್ಧೆ ಮತ್ತು ಮೋಸಗಾರಿಕೆ, ಭಕ್ತರ ಅಜ್ಞಾನ, ಸರ್ಕಾರದ ದುರಾಡಳಿತದಿಂದಾಗಿ, ಜೀವನಕ್ಕೆ ಅನ್ಯಮಾರ್ಗವಿಲ್ಲದೇ ಅನೇಕ ಕುಟುಂಬಗಳು ಆರ್ಥಿಕ ಸ್ಥಿತಿ ಉತ್ತಮಗೊಳಿಸಿಕೊಂಳ್ಳಲು ದೇವದಾಸಿ ಪದ್ಧತಿಗೆ ಮೊರೆ ಹೋಗುತ್ತಿದ್ದಾರೆ.

೧೦. ತಂದೆ ತಾಯಿಗಳು ತಮ್ಮ ಮಕ್ಕಳನ್ನು ದೇವದಾಸಿಯರನ್ನಾಗಿ ಮಾಡ ಬಯಸುತ್ತಿದ್ದರೆ, ಇದಕ್ಕೆ ಅಜ್ಞಾನ, ಶೋಷಣೆ ಮುಂತಾದವುಗಳಷ್ಟೇ ಕಾರಣವಿರದೇ ಆರ್ಥಿಕ ಸಹಾಯ, ಸಾಮಾಜಿಕ ಸ್ಥಾನ, ವ್ಯಕ್ತಿ ಮತ್ತು ಜಾತಿಯ ಗುಂಪಿನ ಸಂಸ್ಕೃತಿ ಮನೋಭಾವನೆ ಮುಂತಾದವು ಪೋಷಕವಾಗಿವೆ.

೧೧. ದೇವದಾಸಿಯಂತಹ ಅನಿಷ್ಠ ಪದ್ಧತಿಯನ್ನು ಹೊಂದಿದ ಅನೇಕ ಜಾತಿಗಳು ಹೆಚ್ಚು ಸಂಖ್ಯೆಯಲ್ಲಿ ಆರ್ಥಿಕವಾಗಿ ಉತ್ತಮ ಸ್ಥಾನದಲ್ಲಿದ್ದು. ಇಡೀ ಜಾತಿಯ ಸಂರಕ್ಷಣೆ, ಆರೋಗ್ಯ ಮುಂತಾದವುಗಳನ್ನು ಉಳಿಸಿಕೊಂಡು ಬಂದಿದ್ದು, ಇಂದು ಆರ್ಥಿಕ ಮತ್ತು ಸಾಮಾಜಿಕವಾಗಿ ಕೆಳಗಿನ ಜಾತಿಗಳಿಗೆ ಸೇರಿದ ಹೆಚ್ಚಿನ ವಿದ್ಯಾವಂತರೂ, ರಾಜಕಾರಣಿಗಳೂ, ಅಧಿಕಾರಿಗಳೂ, ದೇವದಾಸಿಯರ ಮಕ್ಕಳು, ಮೊಮ್ಮಕ್ಕಳು ಇದ್ದುದ್ದನ್ನು ನೋಡಬಹುದಾಗಿದ್ದು, ಇದು ಆ ಜಾತಿ ಜನರಿಗೆ ಪ್ರೇಗಣೆಯ ಅಂಶವಾಗಿದೆ.

೧೨. ಕುಟುಂಬದಲ್ಲಿ ಒಬ್ಬಳನ್ನು ದೇವದಾಸಿಯಾಗಿ ಮಾಡಿದರೆ, ಇದರಿಂದ ಇಡೀ ಕುಟುಂಬದವರೆಲ್ಲಾ ಐಷಾರಾಮ ಜೀವನ ನಡೆಸುತ್ತಿದ್ದು, ಅವರ ಆಸ್ತಿಪಾಸ್ತಿ, ಮದುವೆಗಳು, ಮಕ್ಕಳು, ಬಂಗಾರದ ಆಭರಣಗಳು ಯಾವುದಕ್ಕೂ ಕೊರತೆ ಇಲ್ಲದೇ ಮನೆ ಮಂದಿಯೆಲ್ಲಾ ಜೀವಿಸುವುದು ನೋಡಿದರೆ ಇತರರನ್ನು ಇದು ಆಕರ್ಷಿಸುತ್ತದೆ.

೧೩. ರೇಣುಕಾ ಯಲ್ಲಮ್ಮದೇವಿಗೆ ನಡೆದುಕೊಳ್ಳುವ ಭಕ್ತರಲ್ಲಿ ಆರೋಗ್ಯ ನೈರ್ಮಲ್ಯದ ಬಗ್ಗೆ ಸೂಕ್ತ ಜ್ಞಾನವಿಲ್ಲ. ಉತ್ತಮ ಮತ್ತು ಸೂಕ್ತ ಆಹಾರ ಸೇವಿಸುವ ಜನಸಾಮಾನ್ಯರು ಸದಾ ಅನ್ನಾಂಗಗಳ ಕೊಬ್ಬಿನ ಕೊರತೆಯಿಂದಾಗಿ ಚರ್ಮರೋಗಕ್ಕೆ ಗುರಿಯಾಗುತ್ತಾರೆ. ಇದಕ್ಕೆ ದೇವಿಯ ಕೋಪವೇ ಕಾರಣವೆಂದು ನಂಬುತ್ತಾರೆ. ಹಾಗೆ ತಲೆಕೂದಲು ಗಂಟಾಗಿ ಜಡೆ ಕಟ್ಟುವುದು ದೇವಿಯ ಆವೇಶದಿಂದ ಎಂದು ನಂಬಿದ್ದಾರೆ. ಇದು ದೇವತೆಯ ಕರೆಯ ಸಂದೇಶವಾಗಿದೆಂದು ನಂಬಿ ಕೂಡಲೇ ಅದಕ್ಕೆ ಸಂಬಂಧಿಸಿದ ವಿಧಾನಗಳನ್ನು ಮಾಡಿ, ದೇವಿಯ ಧರ್ಮದ ಮುದ್ರೆ ಒತ್ತಿಬಿಡುತ್ತಾರೆ. ಅಂದರೆ ದೇವದಾಸಿಯಾಗುತ್ತಾರೆ.

೧೪. ಕೆಲವೊಮ್ಮೆ ಯಾರಾದರೂ ಪ್ರಭಾವ ವ್ಯಕ್ತಿ ತನಗೆ ಬೇಕಾದ ಹುಡುಗಿಯನ್ನು ಬೇರೆ ಮಾರ್ಗದಿಂದ ಅಂದರೆ, ದೇವದಾಸಿಯಾಗದೇ ಸಿಗದಿದ್ದರೆ, ಆಕೆಯನ್ನು ಪಡೆಯಲು ಈ ಮಾರ್ಗ ಅನುಸರಿಸುವುದು ತಿಳಿದು ಬಂದಿದೆ. ಈ ಕೆಲಸಕ್ಕೆ ಅನುಕೂಲರಾದ ಜೋಗತಿಯರನ್ನು ಕೂಡಿಕೊಂಡು ಆ ಹುಡುಗಿಯ ಕೂದಲು ಕೃತಕವಾಗಿ ಗಂಟುಕಟ್ಟುವಂತೆ ಮಾಡುತ್ತಾರೆ. ಇದಕ್ಕೆ ತಮ್ಮ ತಲೆಯ ಕೆಳಭಾಗದ ಕೊಳೆಯನ್ನು ತೆಗೆದು ಆಕೆಯು ಕೂದಲಿನಲ್ಲಿ ಹಾಕಿ, ಅನಂತರ ಈಕೆಯಲ್ಲಿ ದೇವತೆ ಕಾಣಿಸಿಕೊಂಡಳು ಎಂದು ಪ್ರಚಾರ ಮಾಡಿ,

ಇತರರು ಪರೀಕ್ಷಿಸುವ ಮುನ್ನ ಅರಿಶಿಣ, ಕುಂಕುಮ, ಎಣ್ಣೆ, ಹಾಕಿ, ಪೂಜೆ ಮಾಡಿ ಬಿಡುತ್ತಾರೆ. ಕೆಲವೊಮ್ಮೆ ಹುಡುಗಿಯ ತಂದೆತಾಯಿ, ಹಿರಿಯರ ಪ್ರತಿರೋಧ ಬಂದರೂ ಅವರ ಜಾತಿಯ ಅಥವಾ ಸಂಪ್ರದಾಯದಲ್ಲಿಯ ಪ್ರಭಾವಿ ವ್ಯಕ್ತಿಗಳು ಇವರನ್ನು ಸಂಪ್ರದಾಯದ ವಿರೋಧಿಗಳು, ದೇವಿ ಮುನಿದು ಜಾತಿ, ಊರಿಗೆ ಕೆಡಕು ತರುತ್ತಾಳೆ. ಆದ್ದರಿಂದ ದೇವಿಯ ಆದೇಶದಂತೆ ಆಕೆಯನ್ನು ದೇವದಾಸಿ ಮಾಡಲೇಬೇಕು ಎಂದು ಸಾರ್ವಜನಿಕವಾಗಿ ಒತ್ತಡವಿರಬಹುದು. ಈ ಒತ್ತಡಕ್ಕೆ ಹೆದರಿ ಹುಡುಗಿಯ ಕುಟುಂಬ ಮಣಿಯಬೇಕಾಗುತ್ತದೆ. ಹೀಗೆ ತನಗೆ ಬೇಕಾದ ಹುಡುಗಿ ಈ ಪ್ರಭಾವಿ ವ್ಯಕ್ತಿಗೆ ಸಿಗುತ್ತಾಳೆ. ತಮಗೆ ಸಿಗುವ ಹಣಕ್ಕಾಗಿ ಜೋಗತಿಯರು ಮತ್ತು ಸ್ಥಾನಿಕರು ಇದಕ್ಕೆ ಅನುಮೋದನೆ ನೀಡುತ್ತಾರೆ. ಇದಕ್ಕೆ ಇನ್ನೊಂದು ಮಾರ್ಗವೂ ಇದ್ದು, ಕೆಲ ಶ್ರೀಮಂತರು ಈ ಕರೆಯಿಂದ ಬಿಡಿಸಿಕೊಳ್ಳಲು ಈಕೆಯ ಜಾಗದಲ್ಲಿ ಬೇರೊಬ್ಬ ಹುಡುಗಿಯನ್ನು ಕೊಂಡು ಕೊಡಬೇಕು. ಬೆಳ್ಳಿ ಅಥವಾ ಬಂಗಾರ ಮುಂತಾದ ಬೆಲೆ ಬಾಳುವ ವಸ್ತುಗಳನ್ನು ನೀಡಬೇಕು. ಗಂಡಸರಲ್ಲಿ ಹೀಗೆ ಗಂಟು ಕಟ್ಟಿದ ಜಡೆಯನ್ನು ಕತ್ತರಿಸಿ ಅದಕ್ಕೆ ಸರಿತೂಕದ ಬೆಳ್ಳಿ ಅಥವಾ ಬಂಗಾರವನ್ನು ಸ್ಥಾನಿಕರು ಪಡೆದು ದೇವಿಯ ಕರೆಯಿಂದ ಮುಕ್ತ ಮಾಡುವರು. ಇವು ಕೇವಲ ಶ್ರೀಮಂತರಿಗೆ ಸಾಧ್ಯವಿದ್ದು, ಬಡವರು ತಮ್ಮ ಮಕ್ಕಳನ್ನೇ ಕಾಣಿಕೆಯಾಗಿ ನೀಡಿ ಬಿಡುತ್ತಾರೆ. ಅಲ್ಲದೇ ಆಕೆ ದೇವದಾಸಿಯಾಗಿ ಗಳಿಸುವ ಹಣದಿಂದ ತಮಗೂ ಜೀವನ ಮಾಡಲು ಸಹಾಯವಾಗಿರುತ್ತದೆ. ಎಂದು ಸಂತೈಸಿಕೊಳ್ಳುತ್ತಾರೆ.

೧೫. ಕೆಲ ಸಂದರ್ಭದಲ್ಲಿ ಜೀವನ ಮಾಡಲು ಸ್ಥಾನ ಮಾನಗಳಿಸಲು ಅನ್ಯ ಮಾರ್ಗವಿಲ್ಲದವರು ಕೃತಕವಾಗಿ ತಲೆಗೂದಲು ಗಂಟು ಕಟ್ಟುವಂತೆ ಮಾಡುತ್ತಾರೆ ಎಂದು ಸಂಶೋಧನೆಗಳಿಂದ ತಿಳಿದು ಬಂದಿದೆ. ಹಿರಿಯ ದೇವದಾಸಿಯರಿಗೆ ಆಸೆ ಆಮಿಷಗಳಿಗೆ ಒಳಪಡಿಸಿ, 'ಆಲದಮರದ ಅಂಟು' ಎಣ್ಣೆ, ಅರಶಿಣದ ಹುಡಿ, ಹಾಕಿ ಜಡೆ ಕಟ್ಟಿದೆ ಎಂದು ಪ್ರಚಾರ ಮಾಡಿ, ಸ್ಥಾನಿಕ ಮತ್ತು ಪೂಜಾರಿಗಳನ್ನು ಒಪ್ಪಿಸಿ ದೀಕ್ಷೆ ನೀಡಿಸಿ ಧಾರ್ಮಿಕರ ಜಂಗಮ ಸ್ಥಾನ ಪಡೆಯುತ್ತಾರೆ. ಕೆಲವರು ಹುಟ್ಟುತ್ತಲೇ ಅಥವಾ ಅನಂತರ ಲೈಂಗಿಕವಾಗಿ ನಪುಂಸಕರಾದವರು, ಲೈಂಗಿಕ ರೋಗಗಳಿಗೆ ಗುರಿಯಾದವರು, ಅಥವಾ ಲೈಂಗಿಕ ಅಂಗಗಳು ಇಲ್ಲದವರು, ಮತ್ತು ವಿಕಾರತೆ ಹೊಂದಿದವರು ಜೋಗತಿ, ಜೋಗಪ್ಪಗಳಾಗುತ್ತಾರೆ. ಇದಕ್ಕೆ ಕಾರಣ ಸಮಾಜದಲ್ಲಿ ಪುರುಷತ್ವ, ಮದುವೆ, ಮಕ್ಕಳನ್ನು ಪಡೆಯುವುದು, ಇವುಗಳಿಗೆ ಸಮಾಜದಲ್ಲಿ ವಿಶೇಷತೆ ಮತ್ತು ಮಹತ್ವವಿದ್ದು, ಇವು ವ್ಯಕ್ತಿ ಋಣಗಳಿಂದ ಮುಕ್ತನಾಗಲು, ಸಾಮಾಜಿಕವಾಗಿ ನಿರ್ವಹಿಸಬೇಕಾದ ಕರ್ತವ್ಯಗಳಾಗಿರುತ್ತವೆ. ಈ ದೃಷ್ಟಿಯಿಂದ ಇದೊಂದು ಸಮಸ್ಯೆಯಾಗುತ್ತದೆ. ಇದಕ್ಕೆ ಪರಿಹಾರೋಪಾಯವಾಗಿ ಇದು ದೇವಿಯ ಶಾಪ ಎಂದು ಹೇಳಿ ಆಕೆಯ ಸೇವೆಗೆ ಜೋಗಪ್ಪ, ಜೋಗತಿಯಾಗಿ ಸೇರುವುದು ಕಂಡುಬರುತ್ತದೆ. ಹೀಗೆ ಸಮಾಜದ ಕೆಲವೊಂದು ಪದ್ಧತಿಗಳು, ನಂಬಿಕೆಗಳು, ಸಂಪ್ರದಾಯಗಳು ಅನಿವಾರ್ಯವಾಗಿ ಇಂದಿಗೂ ಮುಂದುವರಿಯುತ್ತಿವೆ.

೧೬. ರೇಣುಕೆ ಯಲ್ಲಮ್ಮನ ಕ್ಷೇತ್ರದಲ್ಲಿನ ಅನೇಕ ರಾಜರ ಆಳ್ವಿಕೆ ಮತ್ತು ಅವರು ಪ್ರತಿಪಾದಿಸಿದ ಧಾರ್ಮಿಕ ಸಂಪ್ರದಾಯಗಳು, ಭಿನ್ನವಾಗಿದ್ದು, ತಮ್ಮ ತಮ್ಮ ತತ್ವಗಳನ್ನು ಪೂಜಾರಿಗಳು ಪ್ರತಿಪಾದಿಸುತ್ತಾ ಪ್ರಚಾರ

ಮಾಡುತ್ತಾ ನಡೆದುದರ ಪರಿಣಾಮ ಜನ ಸಾಮಾನ್ಯರು, ಅವಿದ್ಯಾವಂತರೂ, ಮೂಢ ನಂಬಿಕೆಗಳಿಗೆ ಬಲಿಯಾದ ಭಕ್ತರು ಹೆಚ್ಚಿನ ಗೊಂದಲಕ್ಕೆ ಸಿಕ್ಕಿಹಾಕಿಕೊಂಡರು. ಜೊತೆಗೆ ಅನಾವೃಷ್ಟಿ, ರೋಗಗಳು, ಬಡತನ, ಅಕಾಲ ಮೃತ್ಯು, ಬರಗಾಲ ಮುಂತಾದವು ಅವರನ್ನು ಸದಾ ಕಾಡುತ್ತಿದ್ದರಿಂದ ಧರ್ಮ ಅವರಿಗೆ ಸರಿ ದಾರಿ ತೋರಿಸುವ ಬದಲು ಅವರಲ್ಲಿ ಭಯ, ಅಸಹಾಯಕತೆಯ ಸೃಷ್ಟಿಸಿ, ಶೋಷಣೆ ಮಾಡಲು ಪ್ರಾರಂಭಿಸಿದರು. ದೇವಿಯು ರೋಗ, ಕಷ್ಟ, ನಪುಂಸಕತ್ವ, ಬಡತನ, ತರುತ್ತಾಳೆಂದು ಹೆದರಿಸಿ ಕತೆಗಳನ್ನು ಸೃಷ್ಟಿಸಿ ತಮ್ಮ ಮಹಿಳೆಯರನ್ನು ದೇವದಾಸಿಯರಾಗಿ ಬಿಡಲು ಪ್ರೇರೇಪಿಸುವರು.

೧೭. ಈ ದಂಧೆಯಿಂದ ಆದಷ್ಟು ಬೇಗ ಮತ್ತು ಸುಲಭವಾಗಿ ಶ್ರೀಮಂತರಾಗಿಬಿಡುವ ಜಾಲವೇ ಇದರ ಸುತ್ತ ಗಿರಕಿ ಹೊಡೆಯುತ್ತಿರುತ್ತವೆ. ಕಾಮುಕರು ಜೊಲ್ಲು ಸುರಿಸುತ್ತ, ತಮ್ಮ ಹೊಣೆ ಏನು? ತಾವೇನು ಮಾಡುತ್ತಿದ್ದೇವೆ ಎನ್ನುವುದರ ಅರಿವೂ ಇಲ್ಲದೆ ಪಾತಕಿಗಳಂತೆ, ರಾಜಕಾರಣಿಗಳು, ಗಣ್ಯರು, ಅಧಿಕಾರಿಗಳೂ, ಮಠಾಧೀಶರುಗಳು ಪಾಲ್ಗೊಳ್ಳುತ್ತಿದ್ದಾರೆ ಎಂದರೆ ಅದೆಷ್ಟು ಪ್ರಭಾವಯುತವಾಗಿದೆ ಎನ್ನಿಸದಿರದು.

**ಇವುಗಳ ಜೊತೆಗೆ ಕೆಳಗಿನ ಕಾರಣಗಳನ್ನು ಹೇಳಬಹುದು.**

"೧. ಆರ್ಥಿಕ ಕಾರಣಗಳು: ಹೆಚ್ಚು ಜನಸಂಖ್ಯೆ, ಕುಟುಂಬದ ಆರ್ಥಿಕ ದುರಾವಸ್ಥೆ, ನಿರುದ್ಯೋಗ, ಸಾಲದ ಹೊರೆ.

೨. ಸಾಮಾಜಿಕ ಕಾರಣಗಳು: ಭಗ್ನಕುಟುಂಬ, ವರದಕ್ಷಿಣೆಯ ಕ್ರೌರ್ಯ, ಅವಿಭಕ್ತ ಕುಟುಂಬದ ಶಿಥಿಲತೆ, ರಕ್ಷಣೆ ಭದ್ರತೆ, ಗೌರವಯುತ ನೆಮ್ಮದಿ ಜೀವನಕ್ಕೆ ಅವಕಾಶವಿಲ್ಲದಿರುವಿಕೆ. ತಂದೆ ತಾಯಿಯರ ಅಲಕ್ಷ್ಯ, ಸುಖಮಯ ಜೀವನದ ಆಸೆ.

೩. ಧಾರ್ಮಿಕ ಕಾರಣಗಳು: ದೇವರು ಮತ್ತು ಧರ್ಮದ ಹೆಸರಿನಲ್ಲಿ ಅವಿವಾಹಿತ ಕನ್ಯೆಯನ್ನು 'ಸಮಾಜದ ಸೊತ್ತು' ಎಂಬಂತೆ ಪರಿಗಣಿಸಿ ಸಮಾಜದ ಮಾನ್ಯತೆಯೊಂದಿಗೆ ದೇವದಾಸಿ ಪದ್ಧತಿ ನೂಕಲಾಗಿತ್ತು.

೪. ಶಾರೀರಿಕ ಮತ್ತು ಮಾನಸಿಕ ಕಾರಣಗಳು: ಅಕ್ರಮ ಸಂಬಂಧ, ತಿರಸ್ಕಾರಕ್ಕೆ ಒಳಗಾಗಿ ಐಶಾರಾಮದ ಜೀವನ ಬಯಸುವುದು.

೫. ಬೇಡಿಕೆ ಮತ್ತು ಪೂರೈಕೆಯ ತತ್ವ: ಈಗಿನ ಬದಲಾದ ಆರ್ಥಿಕ ಸಾಮಾಜಿಕ ಪರಿಸ್ಥಿತಿಗಳು ಈ ಬೇಡಿಕೆಯನ್ನು ಮತ್ತಷ್ಟು ಹೆಚ್ಚಿಸಿದೆ. ಬೇಡಿಕೆ ಹೆಚ್ಚಿದಷ್ಟು ಪೂರೈಕೆಯು ಅಧಿಕವಾಗುತ್ತಾಹೋಗುವುದು.

೬. ಇತರ ಕಾರಣಗಳು: ಅನಕ್ಷರತೆ, ಬಡತನ, ಅಜ್ಞಾನ, ವಾಣಿಜ್ಜೀಕರಣ ದುಶ್ಚಟಗಳ ಹೆಚ್ಚಳ"[೯].

**ಇಂದಿನ ಪ್ರಸ್ತುತ ದೇವದಾಸಿಯರ ಹೊಸ ಬಗೆಯ ಶೋಷಣೆಗಳು**

ವೇದ ಉಪನಿಷತ್ತು ಶಾಸ್ತ್ರಗಳ ಕಾಲದಿಂದ ಇಲ್ಲಿಯತನಕ ಹೆಣ್ಣು ನಾನಾ ಬಗೆಯಿಂದ ಹೋರಾಟ ನಡೆಸುತ್ತಿದ್ದರೂ ಓದು ಕಲಿತ ಅಧಿಕಾರಿಗಳು, ಬಂಡವಾಳಶಾಹಿಗಳು, ರಾಜಕೀಯ ವ್ಯಕ್ತಿಗಳು ಬೇರೆ ಬೇರೆ ಬಗೆಯಲ್ಲಿ ಶೋಷಿಸುತ್ತಿರುವುದನ್ನು ಕಾಣುತ್ತೇವೆ. "ಹಿಂದೆ ದೇವರ ಹೆಸರಿನಲ್ಲಿ ನಡೆದರೆ, ಈಗ ರಾಜಕೀಯ ಹೆಸರಿನಲ್ಲಿ ವ್ಯಾಪಾರದ ಹೆಸರಿನಲ್ಲಿ ಮಾರಾಟ ನಡೆಯುತ್ತಿದೆ.

೧.ಕಾಲ್‌ಗರ್ಲ್‌ಗಳಾಗಿ ಉಪಯೋಗಿಸುವುದು

೨.ಲಂಚದ ರೂಪದಲ್ಲಿ ಹೆಣ್ಣನ್ನು ಭೋಗಿಸಲು ಕೊಡುವುದು

೩.ಪರದೇಶಗಳಿಗೆ ಮಾರಾಟ ಮಾಡುವುದು

೪.ಕೆಲಸ ಕೊಡಿಸುತ್ತೇವೆಂದು ಭೋಗಿಸುವುದು

೫.ಪರೀಕ್ಷೆಯಲ್ಲಿ ಹೆಚ್ಚು ಅಂಕ ಹಾಕುತ್ತೇವೆಂದು ಸುಖಿಸುವುದು

೬.ಬಡ್ತಿ ನೀಡುತ್ತೇವೆಂದು ಹಿಂಸಿಸುವುದು"[೯]

ವಿವಿಧ ಸಮಿತಿ ಮಂಡಳಿಗಳಿಗೆ ಸದಸ್ಯರನ್ನಾಗಿ ಮಾಡುತ್ತೇವೆಂದು ಆಮಿಷಕ್ಕೊಳಪಡಿಸಿ, ಅಥವಾ ಚಿತ್ರನಟಿಯಾಗಿ ಮಾಡುವ, ಅಥವಾ ಪ್ರಶಸ್ತಿಕೊಡಿಸುವ ನೆಪದಲ್ಲಿ ತಮ್ಮ ಪರವಾಗಿ ಇತರರನ್ನು ಸೆಳೆಯಲು ಬಳಸುವುದನ್ನು ನೋಡಬಹುದಾಗಿದೆ. ಕೆಲ ವಿದ್ವಾಂಸರ ಪ್ರಕಾರ ಮಹಿಳೆಯರ ಸ್ಥಾನಮಾನ ಕುರಿತ ಕಾನೂನುಗಳು ಅಮೇರಿಕಾ, ಗ್ರೇಟ್ ಬ್ರಿಟನ್‌ಗಿಂತ ಹೆಚ್ಚು ಶಾಸನಗಳು ಭಾರತದಲ್ಲಿವೆ. ಆದರೆ ಆ ಶಾಸನಗಳನ್ನು ಯಶಸ್ವಿಯಾಗಿ ಬಳಸದೆ ಇರುವುದರಿಂದ ಭಾರತದಲ್ಲಿ ಮಹಿಳೆಯರ ಸ್ಥಿತಿ ಅಷ್ಟೇನು ಗಮನಾರ್ಹ ಬದಲಾವಣೆಯಾಗದೆ ಇನ್ನು ಅನೈತಿಕವಾಗಿ ಸ್ತ್ರೀಯನ್ನು ವಿಭಿನ್ನ ಬಗೆಗಳಲ್ಲಿ ಅನುಭೋಗಿಸಲು ದಾರಿಯಾಗಿದೆ.

**ದೇವದಾಸಿಯರ ಬೆಲೆ ಮತ್ತು ಬೇಡಿಕೆಗಳು**

ದೇವದಾಸಿಯರ ವಯಸ್ಸು, ಸೌಂದರ್ಯ, ಮನೆತನದ ಹಿನ್ನೆಲೆಯ ಆಧಾರದ ಮೇಲೆ ನಾಡಿನಾದ್ಯಂತ ಬೆಲೆ ಮತ್ತು ಬೇಡಿಕೆ ಇದ್ದದ್ದು ಕಂಡು ಬರುತ್ತದೆ. ಅವರ ರೂಪ, ಯೌವನ, ರಕ್ತ, ಮಾಂಸ, ತುಂಬಿಕೊಂಡಿರುವಷ್ಟು ದಿನ ಗಿರಾಕಿಗಳು ಹೆಚ್ಚುವರು. ರಸಹೀನ, ಬಾಡಿದ ಹೆಣ್ಣುಗಳಿಗೆ ಯಾರೂ ಕೇಳಲಾರದಂತಹ ಸ್ಥಿತಿಯೂ ಇದೆ.

೧. ೧೫-೨೫ ವಯಸ್ಸು, ಬಹುಬೇಡಿಕೆ ಇದ್ದು, ಬೆಲೆ-೧೦೦೦ ರಿಂದ ೧೫೦೦

೨. ೨೬-೩೫ ವಯಸ್ಸು, ಸಾಮಾನ್ಯಬೇಡಿಕೆ ಇದ್ದು, ಬೆಲೆ-೫೦೦ ರಿಂದ ೧೦೦೦

೩. ೩೬-೪೫ ವಯಸ್ಸು, ಬೇಡಿಕೆ ಬೆಲೆ-೩೦೦ ರಿಂದ ೫೦೦

೪. ೪೬-೫೫ ವಯಸ್ಸು, ಬೇಡಿಕೆ ಬೆಲೆ-೨೦೦ ರಿಂದ ೩೦೦

೫. ೫೬-೬೦ ವಯಸ್ಸು, ಬೇಡಿಕೆ ಬೆಲೆ-೧೦೦ ರಿಂದ ೫೦ ಎಂಬುದು ಅಧ್ಯಯನದಿಂದ ತಿಳಿದು ಬಂದಿದೆ. ಇವರ ಸಮಸ್ಯೆಯು ಮುಗಿಯದ ಕಥೆ. ದೇವಸ್ಥಾನದ ನರ್ತಕಿಯರು, ಜೋಗತಿ, ಬಸವಿಯರು ಇಂದು ಸೂಳೆಯರಾಗಿ, ಪಂಚತಾರಾ ಹೋಟೆಲುಗಳಲ್ಲಿ ಕಣ್ಮಣಿಗಳಾಗಿ, ಕಾಲ್‌ಗರ್ಲ್‌ಗಳಾಗಿ, ಬ್ಯೂಟಿ ಪಾರ್ಲರ್‌ಗಳ ದಲ್ಲಾಳಿಗಳಾಗಿ, ನೈಟ್ ಕ್ಲಬ್‌ಗಳ ನಗ್ನ ನರ್ತಕಿಯರಾಗಿದ್ದಾರೆ. ಸಿನಿಮಾ ಮತ್ತು ನಾಟಕಗಳಲ್ಲಿ ಅಂಗಾಂಗಗಳನ್ನು ಕುಣಿಸುವವರಾಗಿದ್ದಾರೆ. ವ್ಯಾಪಾರದ ಅಂಗಡಿಗಳಲ್ಲಿ ಸೇಲ್ಸ್‌ಗರ್ಲ್ಸ್‌ಗಳಾಗಿದ್ದಾರೆ. ಲಾಡ್ಜ್‌ಗಳಲ್ಲಿ ಸ್ವಾಗತಕಾರರಾಗಿದ್ದು, ರಾಜಕಾರಣದಲ್ಲಿ, ಶಿಕ್ಷಣದಲ್ಲಿ, ಸಮಾಜಾಭಿವೃದ್ಧಿಯ ವಿವಿಧ ಸಂಘ ಸಂಸ್ಥೆಗಳಲ್ಲಿ ದುಡ್ಡುಗಳಿಸಲು ಗುಪ್ತವಾಗಿ ಮೈಮಾರಿಕೊಳ್ಳುವವರಾಗಿದ್ದಾರೆ.

ಇಂದು ಸಂಘ, ಸಂಸ್ಥೆ, ಸಂಸ್ಕೃತಿಯ ಹೆಸರಿನಲ್ಲಿ ಸಮಾಜ ಸುಧಾರಣೆ, ರಾಜಕಾರಣ, ಮನರಂಜನೆ ವ್ಯವಹಾರ, ವಾಣಿಜ್ಯಗಳ ಹೆಸರಿನಲ್ಲಿ ಹಾಡುಹಗಲೇ ಸೂಳೆಗಾರಿಕೆ ನಡೆಯುತ್ತಿದೆ. ಆಗ ರಾತ್ರಿ ನಡೆದರೆ ಈಗ ಹಗಲು, ಆಗ ಮುಚ್ಚಿ ನಡೆದರೆ ಈಗ ಬಿಚ್ಚಿ ನಡೆಯುತ್ತಿದೆ.

ಧರ್ಮಗುರುಗಳು, ರಾಜಕಾರಣಿಗಳು, ಸಮಾಜ ಸುಧಾರಕರು, ದೇವಾನುದೇವತಾ ಮನುಷ್ಯರೆಂದು ಕರೆಯಿಸಿಕೊಳ್ಳುವವರು, ಅಣ್ಣ, ಅಪ್ಪ, ತಾಯಿ, ಅಕ್ಕ, ತಂಗಿ, ಅತ್ತೆ, ಅಳಿಯ ಎಲ್ಲರೂ ಇಲ್ಲಿ ಸೇರುವರು. ಹೊಟ್ಟೆಗಾಗಿ, ಬಟ್ಟೆಗಾಗಿ ಎಲ್ಲರೂ ಬಂದಿಲ್ಲಿ ಮಾರಾಟಕ್ಕೆ ನಿಲ್ಲುವರು. ರಚನಾತ್ಮಕ ಕಾಮವಾದ ಲಿಬಿಡೋ (Libido) ಕ್ಕಿಂತ ವಿನಾಶಾತ್ಮಕ ಕಾಮವಾದ ಮೋರ್ಟಿಡೋ (Mortido) ಬಗೆಯ ವಿಕೃತ ಕಾಮ ಹುಟ್ಟುವುದು ಬಿಹಾರದ ಮಾಜಿ ಮುಖ್ಯಮಂತ್ರಿಯೊಬ್ಬರು ಬರಿ ಬೆತ್ತಲೆಯಾಗಿ ಕಾಮಕೇಳಿ ಮಾಡುತ್ತಿದ್ದ ಸಂಗತಿ, ಕ್ಲಿಯೋಪಾತ್ರ ಹಾವಿನೊಂದಿಗೆ ಸರಸವಾಡಿ ಸತ್ತ ಸಂಗತಿ, ಇಂತಹ ವಿಚಿತ್ರಗಳು ವಿಕೃತ ಕಾಮಕ್ಕೆ ಉದಾಹರಣೆಯಾಗಿವೆ.

ಸ್ವಾತಂತ್ರ ನಂತರ ಭಾರತದಲ್ಲಿ ನಗರಗಳಂತೂ ವೇಶ್ಯೆಯರಿಂದ ತುಂಬಿ ತುಳಿಕಿದವು. ಕೆಂಪು ದೀಪದ ಕಬಂದ ಬಾಹುವಿನಲ್ಲಿ ಸಿಕ್ಕಿ ಬಿದ್ದಿರುವ ವೇಶ್ಯೆಯರಲ್ಲಿ ಮೂರನೇ ಒಂದು ಭಾಗವು ಚಿಕ್ಕ ಮಕ್ಕಳೇ ಆಗಿದ್ದಾರೆ. ಅಪ್ರಾಪ್ತರಾದ ಹೆಣ್ಣು ಮಕ್ಕಳೊಂದಿಗೆ ಸಂಭೋಗಿಸುವುದರಿಂದ ಲೈಂಗಿಕ ಕಾಯಿಲೆಗಳು ವಾಸಿಯಾಗುತ್ತವೆ ಎಂಬ ಮೂಢ ನಂಬಿಕೆಯಿಂದ ಬಾಲ ವೇಶ್ಯೆಯರಿಗೆ ಬೇಡಿಕೆ ಹೆಚ್ಚು. ಸಂಭೋಗವೇನೆಂಬುದರ ಅರಿವೇ ಇರದ ಹಸುಗೂಸುಗಳನ್ನು ಈ ದೌರ್ಜನ್ಯಕ್ಕೆ ಒಳಪಡಿಸಿದ್ದು ಅಮಾನವೀಯತೆಯ ಪರಮಾವಧಿಯಾಗಿವೆ. ಅದರಲ್ಲೂ ಅತ್ಯಾಚಾರಕ್ಕೊಳಗಾದ ಬಾಲಕಿ ಶೀಲಗೆಟ್ಟವಳೆಂದು ಅವಳನ್ನು ಸಮಾಜ ತಿರಸ್ಕರಿಸುತ್ತದೆ. ಈ ತೆರನಾಗಿ ತಿರಸ್ಕೃತರಾದವರು, ಬಾಲವೇಶ್ಯೆರಾಗಿ ವೇಶ್ಯಾಗೃಹ ಸೇರಿದವರ ಸಂಖ್ಯೆ ಶೇಕಡಾ ಲಂಕ್ಕೂ ಹೆಚ್ಚು. ಅಲ್ಲದೇ ಅಪಹರಣಕ್ಕೀಡಾದ ಶೇಕಡಾ ೯೦ರಷ್ಟು ಬಾಲಕಿಯರಿಗೆ ವೇಶ್ಯಾಗೃಹಗಳೇ ಗತಿಯಾಗುತ್ತಿವೆ.

ಒಟ್ಟಾರೆ ಭಾರತವು ವಿಶ್ವದಲ್ಲಿಯೇ ಅತಿ ಹೆಚ್ಚು ಬಾಲವೇಶ್ಯೆಯರನ್ನು ಹೊಂದಿರುವ ದೇಶವಾಗಿದೆ. ಏಡ್ಸ್ ಭಯದಿಂದಾಗಿ ಬಾಲವೇಶ್ಯೆಯರಿಗೆ ಹೆಚ್ಚಿನ ಬೇಡಿಕೆ ಬಂದಿದೆ. ಭಾರತದಲ್ಲಿ ೧೦ ಲಕ್ಷದಷ್ಟು ಬಾಲವೇಶ್ಯೆಯರಿದ್ದಾರೆ ಎಂಬುದು ನಾಚಿಕೆಗೇಡಿನ ಸಂಗತಿಯಾಗಿದೆ.

ಡಾ.ಚೆನ್ನಣ್ಣವಾಲೀಕರ್ ಅವರು ತಿಳಿಸಿದಂತೆ "ಬೆಳಗಾಂ ಜಿಲ್ಲೆಯಾದ್ಯಾಂತ ಮುಂಬಾಯಿಯಲ್ಲಿರುವ ಘರವಾಲಿಗಳ ಏಜಂಟರುಗಳು ಬಡ ತಾಯಿ ತಂದೆಯರ ಮನೆಯಲ್ಲಿ ಮೈನೆರೆಯದ ಕುಮಾರಿಯರ ಖರೀದಿ ಮಾಡಿ ದೇವಿಗೆ ಬಿಡುವ ಕಾರ್ಯಕ್ರಮ ಮಾಡಿಸುವರು. ಇದಕ್ಕೆ ೫೦೦೦ ರೂ ಒಮ್ಮೊಮ್ಮೆ ೧೦,೦೦೦ ರೂ ಗಳನ್ನು ಕೊಡುವರು. ಮುಂದಾಕೆ ದೊಡ್ಡವಳಾದ ಮೇಲೆ ೨೦ ಅಥವಾ ೨೫ ಸಾವಿರ ರೂಪಾಯಿ ಕೊಟ್ಟು ಪೂರ್ಣ ದೇವದಾಸಿಯನ್ನಾಗಿ ಮಾಡಿ ಮುಂಬಾಯಿಗೆ ಕರೆದುಕೊಂಡು ಹೋಗುವರು. ಈ ಜನರು ಅಥಣಿ, ಅಥರ್ಗಾ ತಿಕೋಟಾ, ಜಮಖಂಡಿಗಳಲ್ಲಿ ಹೆಚ್ಚಾಗಿರುವರೆಂದು ಹೇಳಿದ್ದಾರೆ"[೧೦].

ಮುಂಬಾಯಿ ಮಹಾನಗರದಲ್ಲಿನ ಒಂದು ಬಡಾವಣೆ. ಇಲ್ಲಿನ 'ರೆಡ್‌ಲೈಟ್' ಪ್ರದೇಶ ದೇಶದಲ್ಲಷ್ಟೇ ಅಲ್ಲ. ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಪಡೆದಿವೆ. ಒಂದು ಕಾಲಕ್ಕೆ ವಿದೇಶಿ ವನಿತೆಯರು ವಯ್ಯಾರ ಲಾವಣ್ಯಗಳಿಗೆ ಸ್ವರ್ಗ ಸುಖದ ತಾಣ. ಈಗ ಈ ಪ್ರದೇಶದಲ್ಲಿ ಇಂದು ಭಾರತೀಯ ಮಹಿಳೆಯರು ಜೀವನೋಪಾಯಕ್ಕಾಗಿ ಈ ವೇಶ್ಯಾವೃತ್ತಿ ನಡೆಸುವ ಕಂದರವಾಗಿದೆ. ಬ್ರಿಟಿಷರ ಆಡಳಿತದಲ್ಲಿ ಸೇನಾಧಿಕಾರಿಗಳ ದೈಹಿಕ ಬಯಕೆಯನ್ನು ತೀರಿಸಿಕೊಳ್ಳಲು ಅಂದು ಯುರೋಪಿನ ವಿವಿಧ ಭಾಗಗಳಿಂದ ಸುಂದರ ಯುವತಿಯರನ್ನು ತರುತ್ತಿದ್ದರು. ಈ

ಬಡಾವಣೆಗೆ 'ಸಫೇದ್‌ಗಲ್ಲಿ' ಎಂದು ಹೆಸರಿದ್ದಿತು. ಶ್ವೇತ ವರ್ಣದೊಂದಿಗೆ ಮೋಹಕವಾಗಿರುವ ವಿದೇಶಿ ಮಹಿಳೆಯರಲ್ಲೇ ಇಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದರಿಂದ ಆ ಹೆಸರು ಬಂದಿದೆ. ಅನಂತರ ಭಾರತೀಯರಲ್ಲೇ ದೇವದಾಸಿಯರು ಈ ವೃತ್ತಿ ಆರಂಭಿಸಿದರು. ಇವರನ್ನು ನೋಡಿ ನಿಧಾನವಾಗಿ ಒಬ್ಬೊಬ್ಬರು ಸುಲಭವಾಗಿ ಹಣ ಸಂಪಾದಿಸಿಕೊಳ್ಳಬಹುದೆಂಬ ಅತಿ ಆಸೆ ಗರಿಗೆದರಿತು! ಅಂತೆಯೇ ವೇಶ್ಯಾವೃತ್ತಿಯಲ್ಲಿ ಸಿಲುಕಿದರು. ಲೈಂಗಿಕವಾಗಿ ಯಾವುದೇ ಕಾಯಿಲೆ ಸೋಂಕದಂತಿರಲು ಮಹಿಳೆಯರ ಆರೋಗ್ಯ ರಕ್ಷಣೆಗೆ ೧೯೧೫ರಲ್ಲಿ ಬ್ರಿಟಿಷರ ಸರ್ಕಾರ ಓರ್ವ ಅಧಿಕಾರಿಯನ್ನು ನೇಮಿಸಿತು. ದೇಶಕ್ಕೆ ಸ್ವಾತಂತ್ರ್ಯ ಬಂದು ಸೇನಾಧಿಕಾರಿಗಳು ತೊಲಗಿದಾಗ, ಅವರೊಂದಿಗೆ ವಿದೇಶಿ ಶ್ವೇತ ಸುಂದರಿಯರೂ ಹೊರಟರು. ಕೆಲಕಾಲ ಆ ಪ್ರದೇಶ ಭೂಗತ ಲೋಕದ ಸಾಮ್ರಾಜ್ಯವಾಯಿತು. ಅಪರಾಧಿಗಳು ವಿಜೃಂಭಿಸುವ ತಾಣವಾಯಿತು. ಆಮೇಲೆ ಮುಂಬಾಯಿ ನಗದಲ್ಲಿಯೇ ಮನೆಕಟ್ಟುವ ಕೆಲಸದಲ್ಲಿ ನಿರತರಾದ ಆಂಧ್ರಪ್ರದೇಶ ಕರ್ನಾಟಕ, ಗೋವಾದ, ಕಾರ್ಮಿಕರು ಇಲ್ಲಿ ತಮ್ಮ ನೆಲೆಯಾಗಿಸಿಕೊಂಡು ಕಟ್ಟಡ ನಿರ್ಮಾಣ ಕೆಲಸ ಮಾಡುವವರನ್ನು ಮರಾಠಿಯಲ್ಲಿ 'ಕಾಮಟಿ'ಯರೆಂದು ಕರೆಯುತ್ತಾರೆ. ಹಾಗಾಗಿ ಈ 'ಸಫೇದಗಲ್ಲಿ' ಕ್ರಮೇಣ 'ಕಾಮಾಟಿಪುರವೆಂದು' ಮಾರ್ಪಾಡಾಯಿತು.

ಸಾವಿರ ಸಾವಿರ ಸಂಖ್ಯೆಯಲ್ಲಿ ಇಡೀ ದೇಶದಲ್ಲಿ ವೇಶ್ಯಾವೃತ್ತಿಗಾಗಿ ಹೆಸರಾದ ಕಾಮಾಟೀಪುರದಲ್ಲಿ ಹಣಕ್ಕಾಗಿ ಹಸಿವೆ ತಣಿಸಿಕೊಳ್ಳಲು ಮೈಮಾರಿಕೊಳ್ಳುವ ಮಹಿಳೆಯರು ಸಂಖ್ಯೆ ೨೫,೦೦೦! ಈ ವೃತ್ತಿಗೆ ಕೇಂದ್ರ ಬಿಂದುವಾದ ಕಾಮಟಿಪುರದಲ್ಲಿ ಸುಮಾರು ೧೪ ಬೀದಿಗಳಲ್ಲಿ ವಿಸ್ತರಿಸಿಕೊಂಡಿದೆ. ಮೊದಲ ಬೀದಿಯಲ್ಲಿ ಕೋಜಾಗಳೇ ಇರುತ್ತಾರೆ. ಇವರು ಯಾರ ಜೊತೆಯಲ್ಲಿ ಸೇರುವುದಿಲ್ಲ. ಇತರರನ್ನು ಸೇರಿಸುವುದಿಲ್ಲ. ಎರಡನೇ ರಸ್ತೆಯಿಂದ ಉಳಿದೆಲ್ಲಾ ಬೀದಿಗಳಲ್ಲಿ ಕುಟುಂಬವಾಸಿಗಳೇ ಇದ್ದಾರೆ. ಇಲ್ಲಿ ಅವರವರ ಸೌಂದರ್ಯಕ್ಕನುಗುಣವಾಗಿ ನೂರರಿಂದ ಒಂದು ಸಾವಿರ, ಎರಡುಸಾವಿರದವರೆಗೂ ಬೇಡಿಕೆ ಮುಂದೊಡ್ಡುತ್ತಾರೆ.

ಈ ನರಕಕ್ಕೆ ನೂರು ದಾರಿ....ಎಂಬಂತೆ ಕೆಲವರು ಬಡತನದಲ್ಲಿ ಬೆಂದು ಬೆಂಡಾದ ನತದೃಷ್ಟ ಮಹಿಳೆಯರು ಈ ನರಕದ ದಾರಿ ಹಿಡಿಯುತ್ತಾರೆ. ಕೆಲವರು ಪ್ರೇಮ, ಮತ್ತೊಬ್ಬರಿಗೆ ಉದ್ಯೋಗ, ಇನ್ನೂ ಕೆಲವರು ನಗರ ಜೀವನದ ಮೇಲಿನ ಥಳುಕಿಗೆ ಮಾರುಹೋಗಿ ಸಿಲುಕಿಕೊಂಡವರೂ ಉಂಟು ಒಮ್ಮೆ ಈ ವೇಶ್ಯಾಗೃಹದಲ್ಲಿ ಸಿಲುಕಿಕೊಂಡರೇ ಹೊರಬರುವುದು ಅಸಾಧ್ಯ. ಬಳ್ಳಾರಿ ಜಿಲ್ಲೆಯ ಕೆಲವು ತಾಲೂಕಿನ ದೇವದಾಸಿಯರು ಕಾಣೆಯಾಗಿದ್ದು, ಅವರುಗಳು ಅಲ್ಲಿಯೇ ಇರಬಹುದೆಂಬ ಗುಮಾನಿ ಕೆಲವರಿಗಿದೆ. ಇಂಥಹ ಮಹಿಳೆಯರು ತಪ್ಪಿಸಿಕೊಳ್ಳಲು ಏನಾದರೂ ಮಾಡಿದರೆ, ಗಂಟೆಯೊಳಗೆ ಹಿಡಿಯುವುದು ಖಚಿತ. ಯಾರಾದರೂ ತಪ್ಪಿಸಿಕೊಂಡ ಸುದ್ದಿ ಕ್ಷಣಾರ್ಧದಲ್ಲೇ ನಾಲ್ಕು ದಿಕ್ಕುಗಳಲ್ಲಿರುವ ಏಜಂಟರ ಕಿವಿಗೆ ತಲುಪುತ್ತದೆ. ಇವರು ರೈಲು ನಿಲ್ದಾಣ, ಬಸ್‌ನಿಲ್ದಾಣ, ಸಿನಿಮಾ ಮಂದಿರ ಮುಂತಾದ ಸ್ಥಳಗಳಲ್ಲಿ ಜಾಲಾಡಿ ಹಿಡಿದು ಇಕ್ಕಟ್ಟಾದ ಕೋಣೆಯಲ್ಲಿ ಕೂಡಿ ಹಾಕುತ್ತಾರೆ. ಈ ಕೋಣೆಗಳನ್ನು ಪಂಜರವೆಂದೇ ಕರೆಯುತ್ತಾರೆ. ಶವಸಂಸ್ಕಾರಕ್ಕೆ ಅಗತ್ಯವಿರುವಷ್ಟು ಸಣ್ಣ ಸ್ಥಳ. ಬದುಕುವುದೆಂದರೆ ನರಕ ಅನುಭವಿಸಿದಂತೆಯೇ ತಮ್ಮ ಮಾತನ್ನು ಕೇಳದ ಯುವತಿಯರನ್ನು ಇಂತಹ ನಿಗೂಢ ನರಕ ಕೂಪದಲ್ಲಿ ಬಂಧಿಸಿಡುತ್ತಾರೆ. ಅವರು ಹೇಳಿದಂತೆ ಕೇಳಲು ಅನಂತರವೇ ಮತ್ತೆ ಮಾಮೂಲಿ ಸ್ಥಳಕ್ಕೆ ಬಿಡುತ್ತಾರೆ.

ಈ ಕಾಮಾಟಿಪುರದಲ್ಲಿರುವ ಮಹಿಳೆಯರೆಲ್ಲರೂ ಮೋಸ ಹೋಗಿ ಬಂದವರೇನೂ ಅಲ್ಲ. ಕೆಲವರು ಹಣದ ಮೇಲಿನ ವ್ಯಾಮೋಹದಿಂದ, ಸುಖದ ಬದುಕಿಗೆ ಅಭ್ಯಾಸವಾದವರು, ಹವ್ಯಾಸಕ್ಕಾಗಿ ಈ ವೃತ್ತಿಯನ್ನು ಅವಲಂಬಿಸಿದವರು ಉಂಟು. ಇಲ್ಲಿ ಪ್ರತಿ ವರ್ಷ ಸುಮಾರು ೧೦೦ ರಿಂದ ೧೫೦೦ ರವರೆಗೆ ಬಾಲಕಿಯರನ್ನು ಬಲವಂತವಾಗಿ ಈ ನರಕಕ್ಕೆ ತಳ್ಳಲಾಗುತ್ತದೆ. ಇವರೆಲ್ಲರೂ ಬಡತನದಿಂದ ತತ್ತರಿಸಿದವರು. ಪರಿಸ್ಥಿತಿಯ ಒತ್ತಡಕ್ಕೆ ಒಳಗಾದವರು. ಇನ್ನು ಅನೇಕ ಕಾರಣಗಳಿಂದ ಬಂದು ಬಂಧಿಯಾಗಿರುತ್ತಾರೆ. ಬಿಹಾರದಂತಹ ದಟ್ಟ ದಾರಿದ್ರ್ಯ ರಾಜ್ಯದ ಕೆಲ ಕುಟುಂಬಗಳು ತಮ್ಮ ಮಕ್ಕಳನ್ನು ಕೇವಲ ೮೦೦ ರೂಪಾಯಿಗೆ ಮಾರಾಟ ಮಾಡಿದ ಉದಾಹರಣೆಗಳೂ ಇವೆ. ಹೀಗೆ ದೇವದಾಸಿಯಾಗಿರುವ ಯುವತಿಯರನ್ನು ಇಲ್ಲವೇ ದೇವದಾಸಿಯರ ಮಕ್ಕಳನ್ನು ವೇಶ್ಯಾವೃತ್ತಿಗೆ ಆಕರ್ಷಿಸುವ ಒಂದು ಬೃಹತ್ ಜಾಲವೇ ಕೆಲಸ ಮಾಡುತ್ತಿದೆ. ಮುಂಬೈ ಅಲ್ಲದೇ ಕೊಲ್ಹಾಪುರ, ಗೋವಾ, ಮೀರಜ್, ಆಂಧ್ರಪ್ರದೇಶದ ಹಲವು ಕಡೆಗಳಲ್ಲಿರುವ 'ಕೆಂಪು ದೀಪದ' ಬಡಾವಣೆಗಳಲ್ಲಿ ವಾಸಿಸುತ್ತಿರುವ ಬಹುತೇಕರು ದೇವದಾಸಿಯರು ಎಂಬುದು ಅಧ್ಯಯನವೊಂದರಿಂದ ಧೃಡಪಟ್ಟಿದೆ.

ಉತ್ತರ ಕರ್ನಾಟಕದ ಈ ಜಿಲ್ಲೆಗಳಲ್ಲಿ ೬೦ ರ ದಶಕದವರೆಗೆ ರಾಜಾರೋಷವಾಗಿ ನಡೆಯುತ್ತಿತ್ತು, ಈ ಅನಿಷ್ಠ ಪದ್ಧತಿಯ ಆಚರಣೆ ಇತ್ತೀಚಿನ ವರ್ಷಗಳಲ್ಲಿ ಗಣನೀಯವಾಗಿ ಕಡಿಮೆಯಾಗಿದೆ ಎನ್ನಬಹುದಾದರೂ ತಮ್ಮ ಬದುಕಿಗಾಗಿ ವೇಶ್ಯಾವೃತ್ತಿ ಕೈಗೊಂಡ ಇವರನ್ನು ಸಮಾಜವು ನೋಡುವುದ ಕಡೆಗಣ್ಣಿನಿಂದ. ಬೀದಿಗೆ ಬಂದ ಇವರು ಸಾವಿರಗಟ್ಟಲೆ ಹಣ ಸಂಪಾದಿಸುತ್ತಾರೆಯೆ? ಅವರ ಬಡತನ ನಿವಾರಣೆಯಾಗುತ್ತದೆಯೆ? ಯಾವುದೂ ಇಲ್ಲ. ಇವರ ಕೈಗೆ ಹಣ ಸೇರುವಾಗಲೇ ಅದರಲ್ಲಿ ಸಿಂಹಪಾಲು ಕಸಿದುಕೊಳ್ಳಲು ತಲೆ ಹಿಡುಕರು, ಪೊಲೀಸರು, ಜಾತಕ ಪಕ್ಷಿಗಳಂತೆ ಕಾಯುತ್ತಿರುತ್ತಾರೆ. ಪಾಲಿಗೆ ಬಂದದ್ದು ಪಂಚಾಮೃತ ಎನ್ನುವಂತೆ, ಇವರ ಪರಿಸ್ಥಿತಿ ಇದ್ದು ಕೆಲ ಮಹಿಳೆಯರು ಮಧ್ಯದ ಚಟವನ್ನು ಅಂಟಿಸಿಕೊಂಡಿರುತ್ತಾರೆ. ಹಾಗಾಗಿ ಲೈಂಗಿಕ ವ್ಯಾಪಾರಕ್ಕೆಂದು ಬೀದಿಗೆ ಬರುವ ಹೆಣ್ಣುಮಕ್ಕಳ ಸ್ಥಿತಿ ಅವರ ಮೊದಲಿನ ಜೀವನದ ಸ್ಥಿತಿಗಿಂತ ಕಠಿಣ ಹಾಗೂ ಅಪಾಯಕಾರಿಯಾಗಿರುತ್ತದೆ. ಅವರಲ್ಲಿಗೆ ಬರುವ ಗಿರಾಕಿಗಳು, ಗಿರಾಕಿಗಳನ್ನು ಹುಡುಕಿತರುವ ತಲೆಹಿಡುಕರು, ಮೈಮಾರಿಕೊಳ್ಳಲು ಸ್ಥಳಾವಕಾಶ ನೀಡುವ ಹೋಟಲಿನವರು ಅಥವಾ ಇಂಥ ಚಟುವಟಿಕೆಗಳಿಗಾಗಿಯೇ ಮನೆಗಳನ್ನು ನಡೆಸುವವರು, ಔಷಧಿ ಅಂಗಡಿಯವರು, ರೌಡಿಗಳು...ಹೀಗೆ ಅನೇಕರು ಪಾಲ್ಗೊಳ್ಳುತ್ತಾರೆ. ಬೀದಿಗೆ ಬರುವ ಹೆಣ್ಣುಮಕ್ಕಳ ಬದುಕನ್ನು ಅರಿತುಕೊಳ್ಳಬೇಕಾದರೆ, ವೇಶ್ಯಾವಾಟಿಕೆ, ಕ್ಯಾನರ್ತಕಿಯರು, ವೇಶ್ಯಾವೃತ್ತಿಗಾಗಿಯೇ ಬೀದಿಗೆ ಬರುವ ಸಲಿಂಗ ಕಾಮಿಗಳ ಬದುಕಿನ ರೀತಿಯನ್ನು ತಿಳಿದುಕೊಳ್ಳುವುದು ಅನಿವಾರ್ಯವಾಗುತ್ತದೆ. ಅಷ್ಟೇ ಅಲ್ಲದೇ ಮುಂಬಾಯಿ, ದೆಹಲಿ, ಕೋಲ್ಕತ್ತಾಗಳಂತೆ ಬೆಂಗಳೂರಿನಲ್ಲಿ 'ರೆಡ್‌ಲೈಟ್ ಏರಿಯಾ' ಇಲ್ಲದಿರುವುದರಿಂದ ವೇಶ್ಯಾವಾಟಿಕೆಗಳು ಎಲ್ಲೆಲ್ಲೋ ಹರಡಿಕೊಂಡಿವೆ. ಹೀಗೆ ನಡೆಸುವುದು ಎಲ್ಲರಿಗೂ ತಿಳಿದಿದ್ದರೂ 'ಗುಟ್ಟ'ನಂತೆ ನಡೆಯುತ್ತವೆ.

ಈ ೨೧ನೇ ಶತಮಾನದಲ್ಲಿ ವೇಶ್ಯಾವೃತ್ತಿಗೆ 'ಫೈವ್‌ಸ್ಟಾರ್ ಕಾಂತಿ' ಇದೆ. ದಿಲ್ಲಿಯೊಂದರಲ್ಲಿ ವಾರ್ಷಿಕ ೫೦೦ ಕೋಟಿ ರೂಪಾಯಿಗಳ ವಹಿವಾಟು ನಡೆಯುತ್ತಿದೆ. ಎಷ್ಟೇ ಆಗಲಿ, ರಾಜಕೀಯ ವ್ಯಕ್ತಿಗಳು, ಅಧಿಕಾರವರ್ಗದವರು, ಬಂಡವಾಳಶಾಹಿಗಳು ಇಲ್ಲಿನ Fat-cat clients! ಅಂದರೆ ಒಳ್ಳೆಯ ಕಾಸು ಕೊಡುವ ಗಿರಾಕಿಗಳು ಇದುವರೆಗೂ High-end technology ಬಗ್ಗೆ ಮಾತು ಕೇಳಿ ಬರುತ್ತಿತ್ತು. ಆದರೆ ಈಗ ನಮ್ಮ ಮೆಟ್ರೋಗಳಲ್ಲಿ High-end

ಅಥವಾ Upmarket prostitution ನದೇ ಮಾತು, ಗದ್ದಲ. ಇದಕ್ಕೆ ಪೂರಕವಾದ ಇನ್ನೊಂದು ಜಾಲ ಬೆಳಕಿಗೆ ಬಂದಿದೆ. ಬೆಂಗಳೂರಿನ ಯುವತಿ ಸೇರಿದಂತೆ ನವೆಂಬರ್ ೨೯.೨೦೦೩ ರಂದು ಅನೇಕ ಯುವತಿಯರನ್ನು ಬಂಧಿಸಿದ್ದಾರೆ. ಈ ಜಾಲದ ಹಿಂದೆ ಅನೇಕ ಉನ್ನತ ಪೊಲೀಸ್ ಅಧಿಕಾರಿಗಳು ಮತ್ತು ಪುಡಾರಿಗಳು ಇದ್ದಾರೆ. ಹಾಗೂ ಬಂಧಿತ ೧೦ ಯುವತಿಯರು ಉನ್ನತ ಪೊಲೀಸ್ ಅಧಿಕಾರಿಗಳ ಹತ್ತಿರದ ಸಂಬಂಧಿಗಳೆಂದು ತಿಳಿದು ಬಂದಿದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪೊಲೀಸ್ ಸೂಪರಿಂಟೆಂಡೆಂಟ್ ಮತ್ತು ನ್ಯಾಯವಾದಿಯಾಗಿರುವ ಆತನ ಸಹೋದರ ಈ ಜಾಲ ನಡೆಸುತ್ತಿದ್ದರು ಎಂಬುದು ತಿಳಿದು ಬಂದಿದೆ. ಪಂಚತಾರಾ ಹೋಟೆಲ್‌ಗಳು, ರೆಸಾರ್ಟ್‌ಗಳು, ಹೊರವಲಯದ ವೇಶ್ಯಾಗೃಹಗಳು ತೋಟದ ಮನೆಗಳು, ಕಾಂಪೌಂಡಿನ ಅತಿ ಗಣ್ಯರ ವಿಲಾಸಿ ಗೃಹಗಳಲ್ಲಿ ನಿರಂತರವಾಗಿ ಈ ದಂಧೆ ನಡೆಯುತ್ತಲೇ ಇದೆ. ಇಲ್ಲಿ ಅಮಾಯಕ ಹೆಣ್ಣುಗಳ ಸಾಮೂಹಿಕ ಅತ್ಯಾಚಾರಗಳು ನಡೆಯುತ್ತಿದ್ದು. ಪ್ರತಿಯಾಗಿ ತಲೆಹಿಡುಕರು ಕೋಟ್ಯಾಧೀಶರುಗಳಾಗುತ್ತಿದ್ದಾರೆ. ರಾಜಕೀಯ ದುರುದ್ದೇಶಗಳು, ಭ್ರಷ್ಟಾಚಾರಗಳು ಇಲ್ಲಿ ಗೂಡು ಕಟ್ಟಿಕೊಳ್ಳುತ್ತವೆ. ಪಕ್ಷಾಂತರಗಳಾಗುತ್ತ ಖಾವಿ, ಖಾದಿ, ಖಾಕಿಗಳು ಅದೆಷ್ಟೋ ಜೀವಗಳು ಇಲ್ಲಿ ಬೆತ್ತಲಾಗುತ್ತವೆ. ಇಂದು ಈ ದಂಧೆ ಎಷ್ಟು ಪ್ರಭಾವಿಯುತವಾದುದೆಂದರೆ, ಬಹಳ ಸುಲಭವಾಗಿ ಶ್ರೀಮಂತರಾಗಿ ಬಿಡುವ ಜಾಲವೇ ಇದರ ಸುತ್ತ ಗಿರಕಿ ಹೊಡೆಯುತ್ತಿರುತ್ತದೆ.

ದೂರದ ರಾಷ್ಟ್ರಗಳಿಂದ ಪ್ರವಾಸಿ ವೀಸಾ ಮೂಲಕ ಭಾರತಕ್ಕೆ ಆಗಮಿಸುತ್ತಿರುವ ಯುವತಿಯರು, ಕೆಲವು ಲಕ್ಷಗಳೊಂದಿಗೆ ಹಿಂದಿರುಗುತ್ತಿರುವ ವಿಚಾರ ಹೊಸದೇನಲ್ಲ. ಆದರೆ ದೇವದಾಸಿ, ವೇಶ್ಯೆಯರ ಸಾಲಿನಲ್ಲಿ ಮೈಚಳಿ ಬಿಟ್ಟಿರುವ ನಮ್ಮ ಕಾಲೇಜು ಹುಡುಗಿಯರು ಈಗ ಭಾರಿ ಸ್ಪರ್ಧೆ ನೀಡಲಾರಂಭಿಸಿದ್ದಾರೆ. ಇವರಿಗೆ ಮೋಜಿನ ಜೊತೆಗೆ easy money ಯೂ ಬೇಕು. ಹೀಗೆ ಇಂದಿನ ಯುವ ಜನರಲ್ಲಿ ನೈತಿಕ ಅಧಃಪತನವಾಗಲು ಮಾಧ್ಯಮಗಳು ಬಹುಮಟ್ಟಿಗೆ ಕಾರಣವೆನ್ನಬಹುದಾಗಿದೆ. ಇಂದು ನನ್ನ ಮಗಳು ಮಾಡೆಲ್ ಎಂದು ಹೇಳಿಕೊಳ್ಳುವುದೇ ಹೆಮ್ಮೆಯ ವಿಚಾರ ಹಾಗಾಗಿ "You live only once, live as a model for others"(ಇರುವುದೊಂದೇ ಬದುಕು ಇತರರಿಗೆ ಮಾದರಿಯಾಗಿ ಬದುಕು) ಎಂಬುದು ಮರೆಯಾಗಿ "You live only once live it to the full for yourself'(ಇರುವುದೊಂದೇ ಬದುಕು, ಬದುಕು ನಿನಗಾಗಿ) ಎಂಬಂತೆ ತಾನು, ತನಗಾಗಿ, ತನಗೋಸ್ಕರ ಎಂದು ಯುವ 'ಜನಾಂಗ ಸೆಲ್ಫ್‌ಸೆಂಟರ್ಡ್ ಆಗುತ್ತಿದ್ದು, ಮೈಯನ್ನೇ ಬಂಡವಾಳವಾಗಿ ಮಾಡಿಕೊಂಡು ಇಲ್ಲಿ No investment, all profit! ಅಂದರೆ 'ಬಂಡವಾಳವೇ ಇಲ್ಲ, ಲಾಭವೇ ಎಲ್ಲ' ಹಾಗೂ ಕೆಲವೇ ನಿಮಿಷಗಳಲ್ಲಿ ಕೈತುಂಬಾ ಹಣ. ಅಮೇರಿಕಾ ಮತ್ತು ಯುರೋಪ್‌ನಿಂದ ಲಕ್ಷಾಂತರ ಶ್ರೀಮಂತರು ಪ್ರವಾಸಿಗರ ರೂಪದಲ್ಲಿ 'ಹಾಲಿಡೇ ಸೆಕ್ಸ್'ಗಾಗಿ ಬೇರೆ ರಾಷ್ಟ್ರಗಳಿಗೆ ಆಗಮಿಸುತ್ತಿದ್ದ ಇಂಟರ್‌ನೆಟ್‌ನಲ್ಲಿಯ ೧೩ಲಕ್ಷ ಸೈಟುಗಳು ಏಷ್ಯಾದ ಇಂತಹ 'ಹಾಲಿಡೇ ಸೆಕ್ಸ್' ತಾಣಗಳ ಬಗ್ಗೆ ಮಾಹಿತಿ ಒದಗಿಸುತ್ತವೆ. ಭಾರತವೂ ಆ ಸಾಲಿಗೆ ಸೇರಲಿದೆ. ಅಂದರೆ ಇಂಡಿಯಾ ಸೆಕ್ಸ್‌ಗೈಡ್‌ನಲ್ಲಿ ಸಿಗುವ ಎಲ್ಲಾ ರಾಜ್ಯಗಳ 'ಸೆಕ್ಸ್ ಬಗೆಗಿನ ವಿವರಗಳು ಪುಟ್ಟ ಕಂಪ್ಯೂಟರ್‌ನಲ್ಲಿ ತೆರೆದುಕೊಳ್ಳುತ್ತದೆ. ಅದರಲ್ಲಿ ಕರ್ನಾಟಕ ರಾಜ್ಯವೂ ಒಂದು. ಎಲ್ಲಾ ಜಿಲ್ಲೆಗಳಲ್ಲಿಯೂ ಸೆಕ್ಸ್‌ಗೆ ಸಂಬಂಧಿಸಿದ ಎಲ್ಲಾ ಸಂಪನ್ಮೂಲಗಳು, ಹೋಟೆಲ್‌ಗಳ ವಿವರ, ಅಲ್ಲಿಯ ಹೆಣ್ಣುಗಳ ವಿವರ, ಜಾಹಿರಾತುಗಳು, ಎಲ್ಲವೂ ಮಾಯಾ ಲೋಕದ ಪುಟ್ಟ ಪೆಟ್ಟಿಗೆಯೊಳಗಿನ

ಇಂಟರ್‌ನೆಟ್ ಪ್ರಪಂಚದ ಜ್ಞಾನದ ವಾರಸುದಾರ ಎಂಬಂತೆ ಎಲ್ಲವನ್ನು ಬೆತ್ತಲು ಮಾಡುತ್ತದೆ. ಯಾವ ಯಾವ ನಗರಗಳಲ್ಲಿ ಎಷ್ಟು ಲಾಡ್ಜ್‌ಗಳಿವೆ, ಕ್ಲಬ್‌ಗಳಿವೆ, ಯಾವ ರಸ್ತೆಯಲ್ಲಿ ಎಂಥ ಸರಕುಗಳು ಲಭ್ಯ, ಅವುಗಳ ರೂಪುರೇಶೆಗಳು, ದರಗಳು ಮುಂತಾದ ವಿವರಗಳು ದೊರೆಯುತ್ತವೆ. ಈ ವಿಚಾರಗಳು ಒಂದು ರಾಜ್ಯಕ್ಕೆ, ದೇಶ್ಯಕ್ಕೆ ಸೀಮಿತವಾಗಿಲ್ಲ. ಅಂತರರಾಷ್ಟ್ರೀಯವಾಗಿ ಕೂಡ ಈ ಸಂಪರ್ಕ ಜಾಲ ಪ್ರತಿ ದೇಶಗಳ ಲೈಂಗಿಕ ಲೋಕವನ್ನು ಅನಾವರಣಗೊಳಿಸುತ್ತವೆ.

ಇಂಥ ಚಟುವಟಿಕೆಗಳನ್ನು ಪ್ರೇರೇಪಿಸುವ ನಿಟ್ಟಿನಲ್ಲಿ ಮಾಧ್ಯಮಗಳು ನಿರತವಾಗಿರುವದನ್ನು ನೋಡಬಹುದಾಗಿದೆ. ಉದಾಹರಣೆಗೆ ತಮ್ಮ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸುವುದಕ್ಕೊಸ್ಕರ ಸೆಕ್ಸ್ ಎಜ್ಯುಕೇಶನ್, ಪೋರ್ನೋಗ್ರಾಫಿ, ಲೇಟೆಸ್ಟ್ ಟ್ರೆಂಡ್ ಮತ್ತು ಫ್ಯಾಶನ್ ಹೆಸರಿನಲ್ಲಿ ಪಾರದರ್ಶಕ ಫೋಟೋಗಳಂತಹ 'Litillating marerial' (ಪ್ರಚೋದಕ)ಗಳನ್ನು ಪ್ರಕಟಿಸಿದರೆ ಸ್ವಾಸ್ಥ್ಯ ಸಮಾಜ ಕೆಡದೇ ಇದ್ದೀತೆ? ಮನೆ ಮಂದಿಯಲ್ಲಿ ಓದುವ ದಿನಪತ್ರಿಕೆ ಹಾಗೂ ನಿಯತಕಾಲಿಕೆಗಳಲ್ಲಿ ಈ ಕೀಳು ಮಟ್ಟವನ್ನು ಗುರುತಿಸಬಹುದಾಗಿದೆ. ದೇಶಾದ್ಯಾಂತ ಕೇವಲ ೭೮೪ ಜನರನ್ನು ಸಮೀಕ್ಷೆ ಮಾಡಿ ಬೆಂಗಳೂರಿನಲ್ಲಿರುವ ಶೇ.೩೧ರಷ್ಟು ಮಹಿಳೆಯರು ಗಂಡ, ಪ್ಲಸ್ ಬಾಯ್‌ಫ್ರಂಡ್ ಅಥವಾ ಫ್ರೆಂಡ್ ಜೊತೆ 'Threesome' ಸೆಕ್ಸ್ ಮಾಡಲು ಬಯಸುತ್ತಾರೆ. ಚೆನ್ನೈನಲ್ಲಿರುವ ಶೇ ೪೨ ರಷ್ಟು ಮಹಿಳೆಯರು ಗಂಡನಿಗಿಂತ ಬೇರೊಬ್ಬರ ಜೊತೆ ಸೆಕ್ಸ್ ಮಾಡುವುದರಲ್ಲಿಯೇ ಹೆಚ್ಚು ಸುಖ ಕಾಣುತ್ತಾರೆ. ಅಹಮದಾಬಾದ್‌ನ ಶೇ.೭೭ರಷ್ಟು ಮಹಿಳೆಯರು ತಮಗಿಂತ ಕಿರಿಯರ ಜೊತೆ ಸೆಕ್ಸ್ ಮಾಡಲು ಬಯಸುತ್ತಾರೆ ಎಂದು 'ಔಟ್‌ಲುಕ್' ತೀರ್ಪು ನೀಡುವ ಅಗತ್ಯಗಳಿರುವುದಿಲ್ಲ. (ಇಂಡಿಯಾ ಟುಡೇಯಲ್ಲಿ) ಆಧುನಿಕ ಮಾಹಿತಿ ತಂತ್ರಜ್ಞಾನಗಳು, ಮಾಧ್ಯಮಗಳ ನಂಟು, ಪತ್ರಿಕೋದ್ಯಮಗಳು ತಲೆಹಿಡುಕ ಕಸಬು ಮಾಡುತ್ತಿದ್ದು, ಆಧುನಿಕ ಮಾಹಿತಿ ಸಂಪರ್ಕ ಜಾಲದೊಂದಿಗೆ ಇಂತಹ ಪೇಜರುಗಳು, ಮೊಬೈಲ್‌ಗಳು, ಇ-ಮೇಲ್‌ಗಳು, ಗೌಪ್ಯ ಫೋನ್‌ಗಳು, ಎಸ್.ಎಂ.ಎಸ್ ಸಂದೇಶಗಳು, ಇಂದಿನ ವೇಶ್ಯಾಗಳ ಸಂಪರ್ಕ ಪಡೆಯಲು ಸಹಾಯಕವಾಗಿದ್ದು, ಪರಿಣಾಮ ಅತಿ ವೇಗದಲ್ಲಿ HIV/ ಏಡ್ಸ್‌ನೊಂದಿಗೆ ಈ ದಂಧೆ ಸಾಗಿದೆ. ಇದಕ್ಕೆ ಸಾಕ್ಷಿ ಎಂಬಂತೆ ಒಂದು ಅತಿರೇಕದ ಘಟನೆ ಹದಿಹರೆಯದ ಜೋಡಿಯೊಂದು 'ಇಂಟರ್‌ನೆಟ್‌ನಲ್ಲಿ' ತಾವು ನಡೆಸುವ ಸಂಭೋಗ ಕ್ರಿಯೆಯನ್ನು ಲೈವ್ ಆಗಿ ಬಿಂಬಿಸಿದೆ. ಸುಮಾರು ೩೫-೪೦ ನಿಮಿಷಗಳ ಈ ಲೈವ್ ದೃಶ್ಯವನ್ನು ಲಕ್ಷಾಂತರ ಜನ ಸಮುದಾಯ ವೀಕ್ಷಿಸಿದೆ. ಅದರಲ್ಲೂ ಭಾಗವಹಿಸಿದ್ದ ಯುವತಿಯನ್ನು 'ಮಾಡೆಲ್' ಆಗಿ ಬಳಸಲು ಅನೇಕ ಉದ್ಯಮಿಗಳು ಮುಗಿ ಬೀಳುತ್ತಿದ್ದಾರಂತೆ! ಅವಳ ರೇಟು ಘಳಿಗೆ ಘಳಿಗೆಗೂ ಏರುತ್ತಿದೆಯಂತೆ.

ಇಂತಹ ಸಂಗತಿಗಳು ಸ್ವೇಚ್ಛಾಚಾರಕ್ಕೆ ದಾರಿ ಮಾಡಿಕೊಡುತ್ತದೆ. ಸೆಕ್ಸ್ ವಿಷಯದಲ್ಲಿ ಅನೈತಿಕತೆ ಹೆಚ್ಚಲು ಕಾರಣವಾಗಿ, ಕ್ಯಾಬರೆ ನರ್ತಕಿಯರ ಕೆಲಸವನ್ನು ಹೀರೋಯಿನ್‌ಗಳು ಮಾಡುತ್ತಿದ್ದಾರೆ. ವಿದ್ಯೆ ಕಲಿಯುತ್ತಿರುವ ಯುವಕ ಯುವತಿಯರ ಮನಸ್ಸು ಭ್ರಷ್ಟವಾಗುತ್ತಿದೆ. ಮಾಧ್ಯಮಗಳ ಪ್ರಭಾವವು ವ್ಯಕ್ತಿತ್ವವನ್ನು ರೂಪಿಸುವ ಬದಲು ಬೇಲಿ ಹಾರುವ ಬೆಳವಣಿಗೆ ಉಂಟುಮಾಡುತ್ತಿವೆ. ಇನ್ನು ದೇವದಾಸಿಯರನ್ನು ಕೇಳುವವರ್ಯಾರು? ಇಂತಹ ಕಲುಷಿತ ಪರಿಸರ, ಸಂಸ್ಕೃತಿಯ ಪರಿಣಾಮವಾಗಿ ಮಹಿಳೆಯ ವಿರುದ್ಧದ ಅಪರಾಧಗಳೂ ಹೆಚ್ಚುತ್ತಿವೆ.

ಹೆಚ್ಚುತ್ತಿರುವ ದೌರ್ಜನ್ಯಗಳು ವಿರುದ್ಧ ಮಹಿಳೆಯರ ಆಕ್ರೋಶ ಕಟ್ಟೆ ಒಡೆಯುತ್ತಿದೆ. ಮಣಿಪುರದ ಮಹಿಳೆಯರ ನಗ್ನ ಪ್ರತಿಭಟನೆ, ನಾಗಪುರದಲ್ಲಿ ಸರಣಿ ಅತ್ಯಾಚಾರಿಯನ್ನು ನ್ಯಾಯಾಲಯದ ಆವರಣದಲ್ಲಿಯೇ ಮಹಿಳೆಯರು ಕೊಂದಿರುವ ಘಟನೆಗಳು ಇದಕ್ಕೆ ಸಾಕ್ಷಿ. ದೆಹಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಯ ಮೇಲೆ ರಾಷ್ಟ್ರಪತಿಗಳ ೪ ಜನ ಅಂಗರಕ್ಷಕರಿಂದ ನಡೆದ ಅತ್ಯಾಚಾರ, ಅತ್ಯಂತ ಜನನಿಬಿಡ ಪ್ರದೇಶವಾದ ಬಹದ್ದೂರ್ ಶಾ ಜಾಫರ್ ಮಾರ್ಗದಲ್ಲಿ ಹಾಡುಹಗಲೇ ವೈದ್ಯಕೀಯ ವಿದ್ಯಾರ್ಥಿನಿಯ ಮೇಲೆ ನಡೆದ ಅತ್ಯಾಚಾರ, ದಿಲ್‌ಶಾದ್ ಗಾರ್ಡನ್‌ನಲ್ಲಿ ಮನೆಯೊಂದಕ್ಕೆ ನುಗ್ಗಿ ಮಹಿಳೆಯರ ಮೇಲೆ ಪೋಲೀಸರಿಂದ ನಡೆದ ಅತ್ಯಾಚಾರ. ಮುಂತಾದ ಭೀಕರ ಘಟನೆಗಳನ್ನು ನೆನೆಯಬಹುದಾಗಿದೆ.

ದೇಶದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಹೋರಾಟ ಬೆಳೆಸದಂತೆ ಯುವಜನರ ನೀತಿ, ನೈತಿಕತೆಗಳನ್ನು ಹಾಳುಗೆಡವಲು ಆಳುವ ವರ್ಗದವರು ನಡೆಸುತ್ತಿರುವ ಪಿತೂರಿಯೇ ಕಾರಣ. ಇದರಿಂದಾಗಿ, ಗುಂಪು ಅತ್ಯಾಚಾರ, ಆಸಿಡ್ ಎರಚುವಿಕೆಯಂತಹ ಘಟನೆಗಳು ಸರ್ವೆ ಸಾಮಾನ್ಯವಾಗುತ್ತಿವೆ. ಅಲ್ಲದೇ ಮದ್ಯ ಮತ್ತು ಮಾದಕ ವಸ್ತುಗಳ ಹಾವಳಿ, ಜನ ಜೀವನವನ್ನು ಅಸ್ತವ್ಯಸ್ತಗೊಳಿಸಿವೆ. ಕೊಲೆಗೂ ಮುಂದಾಗುವುದು ಸಾಮಾನ್ಯ ಸಂಗತಿಯಾಗಿದ್ದು, ವ್ಯಭಿಚಾರ ಹೆಚ್ಚಲು ಕಾರಣವಾಗಿದೆ. ನಿರುದ್ಯೋಗ, ಹೆಚ್ಚುತ್ತಿರುವ ಅಪರಾಧಗಳು, ಆತ್ಮಹತ್ಯೆ, ಅನೈತಿಕತೆ, ಅಶ್ಲೀಲ, ಸಿನಿಮಾ, ಟಿ.ವಿ. ಮುಂತಾದವು ಇಂದಿನ ಯುವಜನತೆಗೆ ಸರಿಯಾದ ಮಾರ್ಗದರ್ಶನ ನೀಡದೇ ದಾರಿ ತಪ್ಪಿಸುತ್ತಿರುವುದನ್ನು ಗಮನಿಸಬಹುದಾಗಿದೆ.

ಮಾಧ್ಯಮಗಳ ಪ್ರಭಾವದಿಂದ ಸಮಾಜದಲ್ಲಿ ಹಿಂಸಾ ಪ್ರವೃತ್ತಿ ಬೆಳೆಯುತ್ತಿರುವುದು ಗಾಬರಿ ಹುಟ್ಟಿಸುವ ವಿಷಯ. ವಿಶ್ವದಾದ್ಯಂತ ತಂದೆ, ತಾಯಿಯರ ನೆಮ್ಮದಿ ಕೆಡಿಸುವ ಈ ಬೆಳವಣಿಗೆಗಳ ಬಗ್ಗೆ ಸರ್ಕಾರಗಳ ಗಮನವೇ ಇಲ್ಲ. ಸ್ತ್ರೀಯರನ್ನು ಕೇವಲ ಒಂದು ಭೋಗದ ವಸ್ತುವನ್ನಾಗಿ ನೋಡುವ ಪ್ರವೃತ್ತಿ ಬೆಳೆಯುತ್ತಿದೆ. ಈ ನಿಟ್ಟಿನಲ್ಲಿ ಮಾಧ್ಯಮಗಳು ಬೆಂಕಿಗೆ ತುಪ್ಪ ಸುರಿಯುವ ಕೆಲಸವನ್ನು ಮಾಡುತ್ತಿರುವುದರಿಂದ ಎಲ್ಲೆಡೆ ಮಹಿಳೆಯರ ಮೇಲೆ ಆಕ್ರಮಣಗಳು ಏರುತ್ತಿವೆ. ಉದಾಹರಣೆಗೆ ಕಳೆದ ಸಾಲಿನಲ್ಲಿ ೨೦೦೪ ಮಹಿಳೆಯರ ಮೇಲೆ ನಡೆದ ದೌರ್ಜನ್ಯ, ಅತ್ಯಾಚಾರ, ವರದಕ್ಷಿಣೆ ಕಿರುಕುಳ, ಹಿಂಸೆಗಳ ಪ್ರಕರಣಗಳ ಪ್ರಮಾಣ ೬೬೧೭ ರಷ್ಟಾಗಿದೆ.

| | |
|---|---|
| ಅತ್ಯಾಚಾರದ ಪ್ರಕರಣ-೨೯೧ | ಕೊಲೆಯ ಪ್ರಕರಣ-೩೪೩ |
| ಮಾನಭಂಗ ಪ್ರಕರಣ-೧೪೩೫ | ಆತ್ಮಹತ್ಯೆಗೆ ಚಿತಾವಣೆ-೨೩೨ |
| ಅಪಹರಣ ಪ್ರಕರಣ-೨೫೬ | ಇತರೆಕಾರಣಗಳಿಗಾಗಿ-೨೨೫ |
| ಚುಡಾಯಿಸುವಿಕೆಯ ಪ್ರಕರಣ-೫೭ | ಸರಗಳ್ಳತನ ೩೭೫ |
| ಕೊಲೆ ಪ್ರಯತ್ನ-೪೦, | ಇತರ ಅಪರಾಧಗಳು-೫೨೦ |
| ವರದಕ್ಷಿಣೆ ಸಾವು-೩೪, | ಅನೈತಿಕ ವ್ಯವಹಾರದ ಪ್ರಕರಣ-೧೧೭೦ |
| ವರದಕ್ಷಿಣೆ ಕೊಲೆ-೧೬ | ಸರಗಳ್ಳತನ ೩೭೫ |

ವರದಕ್ಷಿಣೆಗಾಗಿ ಬೆಂಕಿಹಚ್ಚಿ ಸುಟ್ಟ ಪ್ರಕರಣ-೧೪ ವರದಕ್ಷಿಣೆಗಾಗಿ ಕೊಲೆ ಪ್ರಯತ್ನ-೧೨, ಇತರೆ-೮ ಎಂದು ದೌರ್ಜನ್ಯ ಪ್ರಕರಣ ದಾಖಲಾದ ಅಂಕಿಅಂಶಗಳಿಂದ ಬೆಳಕಿಗೆ ಬಂದಿವೆ.

### ಇಂದು ದೇವದಾಸಿಯರು ಎದುರಿಸುತ್ತಿರುವ ಅಪಾಯಗಳು

ಅಪೌಷ್ಠಿಕ ಆಹಾರ, ಗಾಳಿ, ಬೆಳಕಿಲ್ಲದ ಕಿಷ್ಕಿಂದೆಯಾದ ಕೊಠಡಿಗಳು, ದಾರಿದ್ರ್ಯ, ಬಹುಮಂದಿಯೊಡನೆ ಲೈಂಗಿಕ ಸಂಬಂಧಗಳು, ಗರ್ಭಪಾತಗಳು, ಇವುಗಳ ಕಾರಣ ಬಹುಪಾಲು ದೇವದಾಸಿಯರು ಲೈಂಗಿಕ ರೋಗಗಳಿಂದ ನರಳುತ್ತಿರುತ್ತಾರೆ. ಈಗ ಮತ್ತೊಂದು ಹೊಸ ಹಣೆಪಟ್ಟಿ ಏಡ್ಸ್ (AIDS) ರೋಗವನ್ನು ಹಬ್ಬಿಸುವ ಅಪರಾಧವನ್ನು ಇವರುಗಳ ತಲೆಗೆ ಕಟ್ಟಲಾಗಿದೆ.

೧೯೫೬ರಲ್ಲಿ ಬಂದ ಸಪ್ರೇಷನ್ ಆಫ್ ಇಮ್ಮರಲ್ ಟ್ರಾಫಿಕ್ ಆಕ್ಟ್ (SITA) ದಿಂದ ಇತ್ತೀಚಿನ ದಿನಗಳಲ್ಲಿ ಬಂದ ಪ್ರಿವೆನ್ಸನ್ ಆಫ್ ಇಮ್ಮಾರಲ್ ಆಕ್ಟ್(PITA)ದ ವರೆಗೂ ದೇವದಾಸಿಯರನ್ನು ಅಪರಾಧಿಗಳನ್ನಾಗಿಸುವ ಮನೋಭಾವನೆ ಬದಲಾಗಿಲ್ಲ. ಎಲ್ಲಾ ರೀತಿಯಿಂದಲೂ ಧಮನಕ್ಕೆ ಒಳಗಾಗುವ ವೇಶ್ಯೆಯರ ಸ್ಥಿತಿ ನಿಜಕ್ಕೂ ಶೋಚನೀಯ. ಒಮ್ಮೆ 'ಕೆಂಡ ಪತ್ರಿಕೆ'ಯ ಒಂದು ಲೇಖನದಲ್ಲಿ ದೇವದಾಸಿಯರು ಏಡ್ಸ್ ತಗಲಿಸುವ ತಾಣಗಳು. ಆದ್ದರಿಂದ ಅವರುಗಳ ಬೀದಿಗೆ ಬೆಂಕಿ ಹಚ್ಚಬೇಕು ಇಂದು ಏಡ್ಸ್‌ನಿಂದ ಸಾಯುತ್ತಿರುವ ಸಂಬಂಧಿಗಳು ಇವರ ವಿರುದ್ಧ ಕ್ಷುದ್ರರಾಗಿದ್ದಾರೆ. ಅವರುಗಳೆಲ್ಲಾ ಸಿಡಿಯುವ ಮುನ್ನ ಈ ದೇವದಾಸಿಯರು ತಮ್ಮ ವೃತ್ತಿ ಬದಲಿಸಿಕೊಳ್ಳಬೇಕಾಗಿದೆ. ಪೊಲೀಸರ ಲಾಠಿ ಇದೆ ಎಂಬುದನ್ನು ಅವರಿಗೆ ತೋರಿಸುವುದು ಅತ್ಯಾವಶ್ಯಕ ಅಂತರಂಗವೆಂಬುದು ಇವರಿಗಿದೆಯೋ ಎನ್ನುವ ಪ್ರಶ್ನೆ. ಎಂದು ಈ ಬಗ್ಗೆ ಸಂಪೂರ್ಣ ಪರಿಚಯವಿಲ್ಲದೇ ಬಹು ಕೀಳಾದ ರೀತಿ ಬರೆದಿರುವುದು ಖಂಡನಾರ್ಹವಾಗಿದೆ. ಕಾರಣ ಅಂತಹ ದೇವದಾಸಿಯರು ಹುಟ್ಟಲು ಕಾರಣ ದೇವದಾಸಿಯರಿಗೆ ಏಡ್ಸ್‌ನ್ನು ತಗಲಿಸುವುದು ಕಾಮುಕ ಪುರುಷರು ಅವರುಗಳು ಕೊಡುವ ಹಿಂಸೆ, ಶೋಷಣೆಗೆ ಒಳಗಾಗಿರುವುದು, ಅವರುಗಳು ಸಹ ಏಡ್ಸ್‌ನಿಂದ ಬಳಲುತ್ತಿದ್ದಾರೆ. ಅವರುಗಳ ಮಕ್ಕಳು ಅನಾಥರಾಗಿದ್ದಾರೆ. ಸಂಬಂಧಿಗಳು ಶಾಪ ಹಾಕುತ್ತಾರೆ ಎನ್ನುವ ಕಲ್ಪನೆ ಇವರಿಗಿಲ್ಲ. ದೇವದಾಸಿಯರ ದೇಹದಲ್ಲಿ ಅಂತರಂಗವಿದೆಯೋ ಎಂದು ಪ್ರಶ್ನಿಸುವ ಇವರ ಸಮಾಜವು ಸಾವಿರಾರು ಸೂಳೆಯರನ್ನು ನಿರ್ಮಿಸುವ ಇದಕ್ಕೆ ಅಂತರಂಗ, ದಯೆ ಇದೆಯೇ ? ಎಂದು ಕೇಳಬೇಕಾಗುತ್ತದೆ. ದೇವದಾಸಿಯರನ್ನು 'ಸಂಸಾರದ ನಾಶಕ ಶಕ್ತಿ'ಯರು ಎಂದು ಕರೆಯಲಾಗಿದ್ದು, ಮುದ್ದು ಮುಖದ ಮಡದಿಯರನ್ನು ಬಿಟ್ಟು ಹಳಸಿದ ಎಂಜಲಿನ ಕಡೆಗೆ ಬರುವಂತಿಹರು ದಿಂಡು, ದಿಂಡು, ಎಂದು ತಮ್ಮ ನಾಟಕದಲ್ಲಿ ಸುಮಿತ್ರಜ್ಜರವರು ಹೇಳಿದ್ದಾರೆ.

ಜೀವಮಾನವಿಡೀ ಯಾರಿಂದಲೋ ವಂಚಿತರಾಗಿ, ಅಥವಾ ವಂಚಿಸಿ, ಅನುಮಾನ, ಅಪನಂಬಿಕೆ, ಅವಿಶ್ವಾಸಗಳೇ ಅವರ ಬದುಕಾಗಿದ್ದು, ಅವರ ಬದುಕು ಸಾಕಷ್ಟು ಗುಮಾನಿಗಳಿಂದ ಕೂಡಿರುತ್ತದೆ. ಬಂದಂತಹ ಗಿರಾಕಿಗಳು ಪೊಲೀಸರ ಕಡೆಯವರಿರಬಹುದೇ, ಬೇಕಾದಷ್ಟು ಹಣವನ್ನು ಪಡೆಯಲು ಬಂದಿರಬಹುದೆ, ನಮ್ಮನ್ನು ಪತ್ರಿಕ ಮಾಧ್ಯಮಗಳಿಗೆ ಬಹಿರಂಗಪಡಿಸಲು ಬಂದಿರಬಹುದೇ, ನಮ್ಮನ್ನು ಒಲಿಸಿ ಎಲ್ಲಿಗಾದರೂ ಮಾರಾಟ ಮಾಡಲೂಬಹುದೇ ಅಥವಾ ಕೊಂಡೊಯ್ಯಲು ಬಂದಿರಬಹುದೇ, ನಮ್ಮಲ್ಲಿ ಏಡ್ಸ್ ಇದೆಯೆಂದು ಪರೀಕ್ಷಿಸಲು, ಖಾತ್ರಿ ಪಡಿಸಿಕೊಳ್ಳಲು ಬಂದಿರಬಹುದೇ ಎಂಬ ಅನುಮಾನಗಳ ಜೊತೆಯಲ್ಲಿ ವ್ಯವಹಾರ. ಇವುಗಳ ಜೊತೆಗೆ ಅನಗತ್ಯವಾಗಿ ಗರ್ಭಧರಿಸುವಿಕೆ, ಯಾತನಮಯವಾದ ಗರ್ಭಪಾತ, ಲೈಂಗಿಕ ರೋಗಗಳ ಅಪಾಯಗಳು ಇವುಗಳಿಗೆ ಅವೈಜ್ಞಾನಿಕ ಹಾಗೂ ಅಪಾಯಕಾರಿ ಚಿಕಿತ್ಸೆಗಳಿಗೆ ತುತ್ತಾಗುವಿಕೆ, ಅಸುರಕ್ಷಿತವಾದ ರೀತಿಯಲ್ಲಿದ್ದು,

ಲೈಂಗಿಕ ರೋಗಗಳ ಸೋಂಕಿಗೆ ತುತ್ತಾಗುವ ಅಪಾಯಗಳು, ವಿಪರೀತ ರಕ್ತಸ್ರಾವ, ಇವುಗಳು ಸರ್ವೆ ಸಾಮಾನ್ಯವಾಗಿರುತ್ತವೆ. ಇವರು ಅತ್ಯಂತ ಅಪಾಯಕಾರಿಯಾದ ವಾತಾವರಣದಲ್ಲಿ ಜೀವಿಸುತ್ತಿದ್ದಾರೆ.

**ದೇವದಾಸಿ ಸಂಪ್ರದಾಯದ ಪರಿಣಾಮಗಳು**

ಧರ್ಮದ ಹೆಸರಿನಲ್ಲಿ, ದೇವತೆಗಳಿಗೆ ಅರ್ಪಿಸುವ ಹೆಣ್ಣುಗಳನ್ನು ಪುರುಷ ಪ್ರಧಾನ ಸಮಾಜದ ತೋರುಂಬುವ ನೀತಿಯಿಂದ ಸಂಪ್ರದಾಯದ ನೆಪದಲ್ಲಿ ಹಿಂದುಳಿದ ಸಮುದಾಯದ ತರುಣಿಯರನ್ನು ಲೈಂಗಿಕ ಶೋಷಣೆಗೆ ಒಳಪಡಿಸಿ, ಸಾಮಾಜಿಕ, ಮಾನಸಿಕ ಹಾಗೂ ದೈಹಿಕ ಆರೋಗ್ಯಕ್ಕೆ ಪಿಡುಗಾಗುವಂತೆ ಮಾಡಿ, ಸಮಾಜದ ಸ್ವಾಸ್ಥ್ಯಕ್ಕೆ ಆತಂಕಕಾರಿಯಾಗಿದ್ದು, ಅದರ ಅಸ್ತಿತ್ವವು ನಾಗರಿಕ ಸಮಾಜಕ್ಕೆ ಹತ್ತಿದ ಕಳಂಕವೇ ಸರಿ. ಸಮಾಜವ ನೈತಿಕತೆಗೆ ಮಾನವೀಯತೆಗೆ ಸವಾಲೆಸೆದು ಮೌಲ್ಯಗಳ ವ್ಯವಸ್ಥೆಯ ಬುಡವನ್ನೇ ಅಲುಗಾಡಿಸುವಂತಹ ಸಾಮಾಜಿಕ ಸಮಸ್ಯೆಯಾಗಿ, ಇಂದಿನ ಏಡ್ಸ್‌ನಂತಹ ಭಯಾನಕ ರೋಗಗಳಿಗೂ ಮೂಲ ಸೂತ್ರವಾಗುತ್ತಿದ್ದು. ಭಯಾನಕ ಹಾಗೂ ಗಂಭೀರ ಸ್ವರೂಪದ ದುಷ್ಪರಿಣಾಮಗಳನ್ನು ಬೀರುತ್ತಿದೆ. ಅವುಗಳ ಸೂಕ್ಷ್ಮ ವಿವರಣೆ ಈ ಕೆಳಗಿನಂತೆ ನೋಡಬಹುದಾಗಿದೆ.

ಪುರುಷ ಪ್ರಧಾನ ಸಮಾಜದ ದ್ವಿಗುಣ ನೀತಿಯಿಂದ ದೇವದಾಸಿ ಪದ್ಧತಿ ಸೇರಿದಂತೆ ಇದಕ್ಕೆ ಪೂರಕವಾದ ಇತರ ಶೋಷಣೆಗಳಿಗೂ ಒಳಗಾಗಿ ಪ್ರಾಣಿಗಳಿಗಿಂತಲೂ ಕಡೆಯಾಗಿ ನಡೆಸಿಕೊಳ್ಳುವ ವಿಕೃತ ಮನಸ್ಸುಗಳಿದ್ದು ಪರಿಣಾಮ ಸ್ತ್ರೀಯರ ಆರ್ತನಾದ ಮುಗಿಲನ್ನೇ ಮುಟ್ಟಿದೆ.

ಇಂದು ಸ್ತ್ರೀಯರು ಯಾವುದೇ ರೀತಿಯ ಶೋಷಣೆಗಳನ್ನು ಸವಾಲಾಗಿ ನಿಂತು ಎದುರಿಸಬಲ್ಲವಳಾಗಿದ್ದಾಳೆ. ಆದರೆ ಲೈಂಗಿಕ ಕಿರುಕುಳ ಹಾಗೂ ಬಲಾತ್ಕಾರಗಳ ಕ್ರೌರ್ಯದಿಂದ ಆಕೆ ತನ್ನನ್ನು ತಾನು ರಕ್ಷಿಸಿಕೊಳ್ಳಲಾರದವಳಾಗಿದ್ದಾಳೆ. ಇಂದು ಈ ದುಷ್ಕೃತ್ಯಗಳಿಂದ ಯಾವ ಹೆಣ್ಣೂ ಸುರಕ್ಷಿತಳಾಗಿಲ್ಲ. ಜನರ ನೈತಿಕ ಮಟ್ಟ ಕುಸಿದು ಬಿದ್ದಿದೆ. ಪುರುಷರ ದೈಹಿಕ ಬಲದ ಮುಂದೆ ಆಕೆ ದುರ್ಬಲಳಾಗಿರುವುದು, ಎಲ್ಲಕ್ಕಿಂತ ಮುಖ್ಯವಾಗಿ ಹೆಣ್ಣಾಗಿರುವುದು ಕಾರಣಗಳಾಗಿವೆ. ಬಲತ್ಕಾರ ಹಾಗೂ ಲೈಂಗಿಕ ಕಿರುಕುಳಗಳ ಶೋಷಣೆಯ ವಿಷಯದಲ್ಲಿ ಯಾವುದೇ ಪ್ರಗತಿ ಉಂಟಾಗಿಲ್ಲದಿರುವುದು ಕಳವಳಕಾರಿ ಸಂಗತಿಯಾಗಿದೆ.

ಕುರುಡಿ, ಕುಂಟಿ, ಕುರೂಪಿ, ಶ್ರೀಮಂತೆ, ಅಥವಾ ಕೂಲಿಯವಳು ಬುದ್ಧಿಮಾಂದ್ಯಳೇ ಆಗಲಿ ಹೆಣ್ಣಾಗಿದ್ದರೆ ಸಾಕು. ಅರಿಯದ ಹಸುಗೂಸೇ? ಹರೆಯದ ಹುಡುಗಿಯೆ ವಿವಾಹಿತಳೇ? ಅಥವಾ ವಯಸ್ಸಾದ ಮುದುಕಿಯೆ? ಯಾರಾದರೇನು? ಪುರುಷ ಪ್ರಧಾನ ಸಮಾಜದ ಅನ್ಯಾಯ, ಅಸಮಾನತೆ, ಅಧರ್ಮ, ಅಮಾನವೀಯತೆಯ ನೀತಿ ನಿಯಮಗಳಿಂದಾಗಿ, ಪುರುಷರ ಲೈಂಗಿಕ ಸ್ವಭಾವದ ಕಿಡಿಗೇಡಿತನದಿಂದ ಸ್ವಾರ್ಥ, ವಿವೇಚನಾರಹಿತ ವರ್ತನೆ ಲೈಂಗಿಕ ಸ್ವೇಚ್ಛಾಚಾರದ ಭಾವನೆ ಹಾಗೂ ಮುಕ್ತ ಅವಕಾಶಗಳಿಂದಾಗಿ ನಿರ್ಬಂಧರಹಿತನಾಗಿ, ಬಲಾತ್ಕಾರ ಮಾಡುವ ಕ್ರೂರಿಗಳಾಗಿ, ಎಲ್ಲರನ್ನು ಒಂದೇ ರೀತಿಯಲ್ಲಿ ಅತ್ಯಾಚಾರ, ಬಲತ್ಕಾರ, ಲೈಂಗಿಕ ಶೋಷಣೆ ಮಾಡುತ್ತಿದ್ದು, ಆಳುವವರಿಂದ ಕಾರ್ಯಕರ್ತೆಯರ, ಮೇಲೆ ಬಲತ್ಕಾರ, ಆರಕ್ಷಕರಿಂದ, ದೇಶದ ರಕ್ಷಕರಿಂದ, ಮೇಲಾಧಿಕಾರಿಗಳಿಂದ, ಸಹೋದ್ಯೋಗಿಗಳಿಂದ, ಸಾರ್ವಜನಿಕ ಸ್ಥಳಗಳಲ್ಲಿ, ಇತ್ಯಾದಿ ಒಂದೇ ಎರಡೇ ಲೈಂಗಿಕ ಕಿರುಕುಳ ಹಾಗೂ ಅತ್ಯಾಚಾರ ಬಲಾತ್ಕಾರಗಳ ಮೂಲಗಳು. ಹೋಗಲಿ, ಮನೆಯಲ್ಲಾದರೂ ಹೆಣ್ಣು

ಸುರಕ್ಷಿತಳೆಂದು ಕೊಂಡರೆ ಅದೊಂದು ದೊಡ್ಡ ತಪ್ಪು ಅಭಿಪ್ರಾಯ. ಮನೆಗೆ ಬಂದು ಹೋಗುವ ಬಂಧುಗಳು, ಸ್ನೇಹಿತರು, ಇವರೇ ಅಲ್ಲದೇ ಒಡಹುಟ್ಟಿದವರೂ ಕೂಡ ಒಮ್ಮೊಮ್ಮೆ ಹೆಣ್ಣಿನ ಮೇಲಿನ ಲೈಂಗಿಕ ಕಿರುಕುಳ ಹಾಗೂ ಬಲಾತ್ಕಾರಕ್ಕೆ ಕಾರಣರಾಗುತ್ತಾರೆ.

ರಾಷ್ಟ್ರೀಯ ಕ್ರೈಮ್ ರೆಕಾರ್ಡ್ ಬ್ಯೂರೋ ೨೦೦೬ ಸೆಪ್ಟೆಂಬರ್ ತಿಂಗಳಲ್ಲಿ ಬಿಡುಗಡೆ ಮಾಡಿದ ಅಂಕಿ ಅಂಶಗಳ ಪ್ರಕಾರ ಕಳೆದ ವರ್ಷ ದೇಶದಲ್ಲಿ ಒಟ್ಟು ೫೦,೨೬,೩೩೭ ಅಪರಾಧಗಳು ದಾಖಲಾಗಿದೆ. ಪ್ರತಿ ೩ ನಿಮಿಷಕ್ಕೆ ಒಂದರಂತೆ ಮಹಿಳೆಯರ ವಿರುದ್ಧ ಅಪಾರಧಗಳು. ಪ್ರತಿ ೨೭ ನಿಮಿಷಕ್ಕೆ ಒಂದರಂತೆ ಮಹಿಳೆಯರ ಮೇಲೆ ಅತ್ಯಾಚಾರ ನಡೆಯುತ್ತದೆ. ಪ್ರತಿ ೭೭ ನಿಮಿಷಕ್ಕೆ ಒಂದರಂತೆ ಮಹಿಳೆಯರ ವರದಕ್ಷಣಾ ಸಾವು ಎಂಬ ಮಾಹಿತಿ ನೀಡಿದೆ.

ಇದಕ್ಕಿಂತ ಇನ್ನೂ ಭಯಂಕರ ಹಾಗೂ ಎದೆ ನಡುಗಿಸುವ ಸತ್ಯವೊಂದಿದೆ. ಅದೇ ಹೆತ್ತ ತಂದೆಯಿಂದ ಬಲತ್ಕಾರಕ್ಕೊಳಗಾಗುವುದು. ಹೀಗೆ ಮಹಿಳೆಯರ ಲೈಂಗಿಕ ಶೋಷಣೆ ಅಸಹ್ಯ ಕಳವಳ ಉಂಟುಮಾಡುತ್ತದೆ. ಎದ್ದು ಕಾಣುವ ಅಸಮಾನತೆಗಳನ್ನು ಹೋಗಲಾಡಿಸಿ ತಾನೂ ಏನನ್ನಾದರೂ ಸಾಧಿಸಿ ತೊರ ಬಯಸುವ ಮಹಿಳೆಯನ್ನು ಆಕೆ ತನ್ನ ಛಲ ಹಾಗೂ ಹೋರಾಟಗಳನ್ನು ಬಿಟ್ಟು ಮತ್ತೆ ಮನೆಯ ನಾಲ್ಕು ಗೋಡೆಗಳ ಮಧ್ಯ ಮುದುರಿ ಕೂಡುವಂತೆ, ಬಲತ್ಕಾರ, ದೌರ್ಜನ್ಯ, ಲೈಂಗಿಕ ಕಿರುಕುಳಗಳು ಮಾಡುತ್ತಿವೆ. ಇವು ಕೆಳ, ಮಧ್ಯಮ, ಬಡ, ಹಿಂದುಳಿದ ಕೂಲಿ ಅಥವಾ ಅನಕ್ಷರಸ್ಥ ಹೆಣ್ಣಿಗೆ ಹೆಚ್ಚಾಗಿ ಸಂಬಂಧಿಸಿದಂತಿರುತ್ತವೆ. ಅಲ್ಲದೇ ಈ ಪ್ರಕರಣಗಳು ಬೆಳಕಿಗೆ ಬಂದವುಗಳು ಇಷ್ಟಾದರೆ, ಬೆಳಕಿಗೆ ಬಾರದ ಅದೆಷ್ಟೋ ಅಸಂಖ್ಯಾತ ಪ್ರಕರಣಗಳಿವೆಯೋ? ತಿಳಿಯದು. ಆದರೂ ಇದು ಸತ್ಯ. ಹೆಣ್ಣೆಂದರೆ ಕೈಗೆಟುಕುವಲ್ಲಿ ಇರಿಸಿದ ರಸಬಾಳೆ ಹಣ್ಣು ಎಂಬ ಅಭಿಪ್ರಾಯ ಉಂಟಾಗುವಂತೆ ಮಾಧ್ಯಮಗಳಲ್ಲಿ ಚಿತ್ರಿಸಿರುವುದು ಸಾಮಾನ್ಯವಾಗಿದೆ. ಹಣ್ಣನ್ನು ತಿನ್ನುವಂತೆ ಏಳೆಂಟು ವರ್ಷ ಪ್ರಾಯದ ಹೆಣ್ಣು ಮಗುವನ್ನು ಕಚ್ಚಿ ಕಚ್ಚಿ ತಿನ್ನಬೇಕೆನಿಸುವ ಪೈಶಾಚಿಕ ಕಾಮ ಸೃಷ್ಟಿಯಾದ ನಿದರ್ಶನಗಳೂ ಕೂಡ ಸಿಗುತ್ತವೆ. ವೈಭವದ ಮತ್ತು ಅವಾಸ್ತವಿಕ ಕಾಮವಾಂಛೆಯನ್ನು ಜೀವಂತವಾಗಿರಿಸಿಕೊಳ್ಳುವ ಮೂಲಕ ದ್ರವ್ಯ ಪಿಪಾಸಿಗಳಾಗಿದ್ದಾರೆ. ಇಂತಹ ಹೀನ ಪದ್ಧತಿಯನ್ನು ಖಂಡಿಸಿದವರಲ್ಲಿ 'ಗಾಂಧಿ ಮತ್ತು ಪಂಡಿತ ಮದನ' ಮೋಹನ ಮಾಲವೀಯರು ಮುಖ್ಯರು. ಇವರು ಇದು ಸಮಾಜಕ್ಕಂಟಿದ ಕಳಂಕವಾಗಿದೆ ಜನತೆ ಮೌಢ್ಯ. ಆಲಸ್ಯಗಳಿಂದ ಬೆಳೆಯುತ್ತಿದೆ ಎಂದಿದ್ದಾರೆ.

ಪಂಡಿತ ಮದನ ಮೋಹನ ಮಾಲವೀಯರು ಇದೊಂದು ಧಾರ್ಮಿಕ ಎನ್ನುವ ಒಂದು ವಿಚಿತ್ರ ನಂಬಿಕೆ ಹೇಗೋ ಬೆಳೆದಿದೆ. ನಮ್ಮ ಧರ್ಮಗ್ರಂಥಗಳಲ್ಲಿ ಈ ಪದ್ಧತಿಯನ್ನು ಪ್ರತಿಪಾದಿಸಿರುವ ಒಂದು ಸಾಲನ್ನು ತೋರಿಸಿ ನೋಡುವ, ಈ ಪದ್ಧತಿ ಅಧಾರ್ಮಿಕ, ಅಮಾನವೀಯ, ಅತ್ಯಂತ ಪಾಪದ್ದು, ಪೈಶಾಚಿಕ, ವಯಸ್ಸಿಗೆ ಬರುವ ಮುನ್ನವೇ ಕನ್ಯೆಯರನ್ನು ಅವಮಾನಕರವಾಗುವಂತೆ ಬಲಿಕೊಡುವುದು ಮಾನವೀಯತೆಗೆ ಮಸಿ ಬಳಿಯುವಂತಹ ದುಷ್ಟ ಸಂಪ್ರದಾಯ ಎಂದಿದ್ದಾರೆ.

ತತ್ವಜ್ಞಾನಿ ಡಾ.ಎಸ್ ರಾಧಕೃಷ್ಣನ್‌ರವರು "ನಮ್ಮ ಕಾನೂನು ವಿಧಾತರು ರಾಕ್ಷಸರು ನಮ್ಮ ಹೆಂಗಸರಿಗೂ ಆತ್ಮವುಂಟು ಎಂಬುದನ್ನು ಅರಿತಿಲ್ಲ. ಅವರಿಗೂ ಕಾಮನೆಗಳುಂಟು, ಅವರೂ ಸ್ವಪ್ನಗಳನ್ನು, ಆಕಾಂಕ್ಷೆಗಳನ್ನು

ನಿರೀಕ್ಷಿಸುತ್ತಾರೆಂಬುದನ್ನು ಅರಿತಿಲ್ಲ. ಎಲ್ಲಿಯವರೆಗೆ ನಮ್ಮ ಹೆಂಗಸರನ್ನು ಗಂಡಸರ ದಾಸಿಯರು ಅವರ ಸ್ವಚ್ಛಂದತೆಗೆ ಗೊಂಬೆಗಳು, ಎಂದು ಬಗೆಯುತ್ತಾರೋ, ಅಲ್ಲಿಯವರೆಗೆ ಸಾಂಘಿಕ ವ್ಯವಸ್ಥೆಯಲ್ಲಿ ಅನಾಚಾರ ಇದ್ದೇ ಇರುತ್ತದೆ. ಹೆಂಗಸಿನ ಗುಣ ಪಾತಿವ್ರತ್ಯ ಮತ್ತು ಗಂಡನಿಗೆ ವಿಧೇಯತೆಯಂದರೋ ಎಂದು ಹೇಳುವ ಸಂಪ್ರದಾಯವು ಗಂಡಸಿನ ದಬ್ಬಾಳಿಕೆಗೆ ಕ್ಷುಲ್ಲಕವಾದ ಸಮಾಧಾನ ಗಂಡಸಿನಲ್ಲಿ ಯಾವುದೂ ಸದ್ಗುಣವೋ ಹೆಂಗಸಿನಲ್ಲೂ ಅದೇ ಸದ್ಗುಣ, ನಮ್ಮ ನಡುವೆ ಹೆಂಗಸರನ್ನು ತಮ್ಮ ಕಾಮಕ್ಕೆ ತಕ್ಕಂತೆ ಬೇಕಾದಂತೆ ಉಪಯೋಗಿಸಿ ಕೊಳ್ಳುವ ನಿಷ್ಕರುಣಿಗಳಾದ ಭಂಡರಿರುವುದು ದುರದೃಷ್ಟ ಎಂದು ಅವರು ಮಾನವ ಮೃಗಗಳು. ವಿಷಯಕ್ಕೆ ಗಾವಿಲರು"[೨೧] ಎಂದು ಹೇಳಿದ್ದಾರೆ.

ಮದುವೆಯಾಗಿ, ಉಳಿದವರಂತೆ ಗಂಡ, ಮನೆ, ಮಕ್ಕಳೆಂದು ಸುಖ ಜೀವನ ಮಾಡಬೇಕಾದ ಈಕೆ ಗಂಡನಿಲ್ಲದೇ ಮದುವೆಯಾಗಿ, ಕರೆದ ಪುರುಷರೊಂದಿಗೆ ಮಲಗುತ್ತ ಕೆಲವೊಮ್ಮೆ ತಮ್ಮ ವಿಲಾಸದ ಪ್ರತಿಫಲವಾಗಿ ನಿಗದಿತ ಹಣವನ್ನು ಕೊಡದೆ ಪರಾರಿಯಾಗುವ ಕಾಮುಕರ ದಬ್ಬಾಳಿಕೆಗೆ ಬಲಿಯಾಗುವುದೂ ಇಲ್ಲದಿಲ್ಲ.

ಬೇರೆ ಸ್ತ್ರೀಯರಂತೆ ಪ್ರಥಮ ರಾತ್ರಿಯ ಸಂಭ್ರಮ, ಪುಳಕಿತ ತಂದು ಪತಿ ಪತ್ನಿಯ ಪರಸ್ಪರ ಭಾವನಾತ್ಮಕತೆಯಿಂದ ಮಿಲನ ಹೊಂದುವ ಗಳಿಗೆ, ಜೀವನ ಪೂರ್ತಿ ಹಸಿರಾಗಿರುವಂತದ್ದು. ಆದರೆ ಆ ರಾತ್ರಿ ದೇವದಾಸಿಯರ ಪಾಲಿಗೆ ಕರಾಳ ರಾತ್ರಿಯಾಗಿರುತ್ತದೆ. ಭಾವನೆಗಳಿಲ್ಲದೇ ಅಪರಿಚಿತ ವ್ಯಕ್ತಿಯೊಂದಿಗೆ ಹಣಕ್ಕಾಗಿ ಕೊಂಡವನಲ್ಲಿ ದಾಸಿಯಂತೆ ವರ್ತಿಸಿ, ಅನಿಸಿಕೆ, ಅಭಿಪ್ರಾಯಗಳ ವಿನಿಮಯವಿಲ್ಲದೇ ವ್ಯವಹಾರಿಕವಾಗಿ ನಡೆದುಕೊಳ್ಳುವುದು. ಅವರಾದಕೋ ಹಸುವಿನ ಮೇಲೆ ಹಾರುವ ಹುಲಿಯಂತೆ, ಮುಗ್ಧ ಬಾಲಕಿಯ ಮೇಲೆ ಎರಗಿ ತನ್ನ ಕಾಮದಾಹ ತೀರಿಸಿಕೊಳ್ಳುತ್ತಾರೆ. ಅವಳ ಪ್ರತಿಭಟನೆಯನ್ನು ಕೇಳುವವರಿಲ್ಲ. ದುಡ್ಡು ಕೊಟ್ಟಿದ್ದೇನೆಂಬ ಅಹಂಕಾರದಲ್ಲಿ ಬೀಗುತ್ತಾರೆ. ಬಡತನ, ಅಜ್ಞಾನ, ಹಸಿವು, ಆಶ್ರಯ ಮುಂತಾದವುಗಳಿಂದ ನರಳಬೇಕಾದ ದುರಂತಸ್ಥಿತಿ, ದುರ್ಬುದ್ಧಿ ಕಾಮುಕ ಪುರುಷ, ನಿತ್ಯ ಮುತ್ತೈದೆ, ಚಿರ ಸುಮಂಗಳೆ, ಸದಾ ಸೌಭಾಗ್ಯವತಿ, ಎಂಬ ಬಿರುದು ಬಾವಲಿ ಹೊಗಳಿಕೆಯಿಂದ ಅವರ ಜೀವನ ಕರಾಳ ಪಾಪದ ಕೂಪಕ್ಕೆ ತಳ್ಳಿದ್ದಾರೆ.

ದೇವಾಲಯಗಳಲ್ಲಿ ಬಹುತೇಕ ಕಾಮೋತ್ತೇಜಕ, ನಗ್ನ, ಮೈಥುನ ಕಾಮಕೇಳಿಗಳ ವಿಶೇಷ ಭಂಗಿ, ಆಸನಗಳಲ್ಲಿ ವಿಕೃತ ಮನಸ್ಸಿನ ಮಾನವನ ಕುಟಿಲೋಪಾಯ ಅನಾಚಾರಗಳು ಇಂದಿಗೂ ಶಿಲ್ಪಕಲೆಯ ಹೆಸರಿನಲ್ಲಿ ತಾಂಡವಾಡುತ್ತಿವೆ.

ಕೆಳವರ್ಗದವರ ಸ್ವಾಭಿಮಾನವನ್ನು ನಾಶಪಡಿಸುವಂತಹ. ಧರ್ಮದ ರಕ್ಷೆಯಲ್ಲಿ ಸೂಳೆಗಾರಿಕೆ ಮಾಡಿಕೊಂಡು ಬದುಕಲು ಹೇಳಿಕೊಡುವ ಕಾರ್ಯ ಕೀಳಿರಿಮೆ ಮೂಡಿಸುವಂತಹದ್ದು. ಇದೊಂದು ಅವಹೇಳನಕಾರಕವಾದ ವೃತ್ತಿ. ಅನೀತಿಯುತವಾದ ಹಾಗೂ ಅಸಹಜವಾದ ಲೈಂಗಿಕ ಸಂಬಂಧವನ್ನು ಬೆಳೆಸಿಕೊಂಡು ಧನ ಸಂಗ್ರಹಕ್ಕಿಳಿಯುವುದು.ಸ್ತ್ರೀಯರನ್ನು ಶೋಷಣೆಗೆ ಒಳಪಡಿಸಿರುವುದು ಕೂಡ ಇಂದಿನ ಮೌಲ್ಯಗಳ ವ್ಯವಸ್ಥೆಗೆ ವಿರುದ್ಧವಾದುದಾಗಿದೆ.

ಇದು ವೈಯಕ್ತಿಕ ವಿಘಟನೆಗೂ ಕಾರಣವಾಗಿದೆ. ದೇವದಾಸಿಯರಲ್ಲಿಗೆ ಬರುವ ವೈವಿಧ್ಯಮಯವಾದ

ವ್ಯಕ್ತಿಗಳು, ವಿಕೃತರು, ರೋಗಿಗಳು, ವಯಸ್ಸಾದವರು ಕಿರಿಯರು, ದೃಢಕಾಯರು, ಹೀಗೆ ಅವರೆಲ್ಲರ ಆಸೆ ಪೂರೈಸಬೇಕು. ಜೊತೆಗೆ ಮನೆಯವರ ತಂದೆ ತಾಯಿ, ಕುಟುಂಬದ ಸದಸ್ಯರ ಆಸೆಗಳನ್ನು ಪೂರೈಸಬೇಕು. ಆದರೆ ಇವರ ಆಸೆ, ಅಭಿರುಚಿಗಳಿಗೆ ಬೆಲೆ ಇಲ್ಲ. ತಮ್ಮ ಘನತೆ ಗೌರವಗಳನ್ನು ಕಳೆದುಕೊಂಡು ಅಸಹಾಯಕತೆ, ನಿರಾಸೆ, ಜಿಗುಪ್ಸೆ, ನಿದ್ರೆಯ ಏರುಪೇರು, ಸುಸ್ತು, ದಣಿವುಗಳಿಂದ ದುಃಶ್ಚಟಗಳಿಗೆ ಮಾರುಹೋಗುವುದು ಸಾಮಾನ್ಯವಾಗಿದೆ. ಮಧ್ಯಪಾನ, ಮಾದಕ ವಸ್ತು ಸೇವನ, ಗುಟಕಾ, ಮುಂತಾದವು ಸಮಾಜಕ್ಕೆ ಮಾತ್ರವಲ್ಲ ವ್ಯಕ್ತಿಯ ಹಿತದ ದೃಷ್ಟಿಯಿಂದಲೂ ಮಾರಕವಾಗಿವೆ.

ಕೌಟುಂಬಿಕ ವಿಘಟನೆಗೂ ಇದು ಕಾರಣವಾಗಿದೆ. ದೇವದಾಸಿಯರ ಸಹವಾಸದ ವ್ಯಕ್ತಿಯ ಹೆಂಡತಿ, ಮಕ್ಕಳನ್ನು ಬಿಡುವುದು, ಅಥವಾ ಅವರ ಮೂಲಭೂತ ಬೇಡಿಕೆ ಪೂರೈಸದೇ ಜವಾಬ್ದಾರಿಯಿಂದ ಜಾರಿಕೊಳ್ಳುವುದು, ಘರ್ಷಣೆಗಳಿಗೆ ಅವಕಾಶವಾಗುವುದು. ವೇಶ್ಯೆಯ ಸಹವಾಸದ ವ್ಯಕ್ತಿ ಗುಹ್ಯರೋಗಗಳಿಗೆ ಬಲಿಯಾಗಿ ಅದು ಹೆಂಡತಿ ಮಕ್ಕಳಿಗೂ ಬರಬಹುದು. ಹೀಗಾಗಿ ಕುಂಟುಬ ಜೀವನ ದುರಂತ ಮಯವಾಗುವುದು. ನೈತಿಕ ಜೀವನ ನಿಯತ್ತು ಮರೆಯಾಗಿ ಕುಟುಂಬವು ಮೆಲ್ಲನೇ ವಿರಸ, ಪ್ರತ್ಯೇಕವಾಸ, ವಿಚ್ಛೇದನ ಹಾಗೂ ವಿಘಟನೆಯತ್ತ ಸರಿಯುವದು. ಕೆಲವೊಮ್ಮೆ ಆತ್ಮಹತ್ಯೆಗಳು ಜರುಗಿವೆ. ದೇವದಾಸಿಯರ ಶೃಂಗಾರ, ಅವಯವಗಳ ಪ್ರದರ್ಶನದಿಂದ ಯುವಕರ ಚಿತ್ತಚಂಚಲದಿಂದ ಅನೈತಕತೆ ಹೆಚ್ಚುವುದು.

ಹನುಮಾಕ್ಷಿ ಗೋಗಿ' ಅವರು ಇದೊಂದು ಅಮಾನುಷವಾದ ಮೃಗೀಯ ವರ್ತನೆಯಾಗಿದೆ. ಇವರುಗಳ ಜೊತೆ ಸಂಬಂಧ ಇಟ್ಟುಕೊಳ್ಳುವವರು ಮನಸ್ಸಿನ ಸಂಬಂಧ ಇರುವುದಿಲ್ಲ. ಕೆಲ ಬಾರಿ ತಂದೆ, ಮಗ, ಇಬ್ಬರೂ ಒಬ್ಬಳೊಡನೆ ಸಂಬಂಧ ಇಟ್ಟುಕೊಳ್ಳುವ, ಇದು ಮನುಷ್ಯನ ನೈತಿಕ ಮೌಲ್ಯಗಳನ್ನೇ ಬದಲಿಸುತ್ತದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಒಬ್ಬ ಗರತಿ ಎಷ್ಟೇ ಸುಂದರವಾಗಿದ್ದರೂ ಕಾಮುಕ ವ್ಯಕ್ತಿ ಅವಳೆಡೆ ಕಣ್ಣೆತ್ತಿ ನೋಡಲು ಹಿಂಜರಿಯುತ್ತಾನೆ. ಅದೇ ದೇವದಾಸಿಯಾಗಿದ್ದರೆ ಎಂಥ ನಿಶ್ಚಲ ಮನಸ್ಸಿನ ಗಂಡಸಿದ್ದರೂ ಮನಸ್ಸು ಹೊಯ್ದಾಡುತ್ತದೆ. ಕಣ್ಣುಗಳಲ್ಲಿ ಕಾಮುಕತೆ ಮಿಂಚುತ್ತದೆ. ನಾಲಿಗೆ ತುಟಿಗಳನ್ನು ಸವರುತ್ತದೆ. ಹೀಗಾಗಿ ಮನುಷ್ಯನ ನೈತಿಕತೆ ಅಧಃಪತನಕ್ಕೆ ಈ ಸಂಪ್ರದಾಯ ಬಹುವಾಗಿ ಕಾರಣವಾಗುತ್ತದೆ ಎಂದು ಹೇಳಿದ್ದಾರೆ. ಮೇಲಿನ ಅಂಶಗಳ ಜೊತೆಗೆ ಈ ಕೆಳಗಿನ ದುಷ್ಪರಿಣಾಮಗಳನ್ನು ಸೂಚಿಸಬಹುದಾಗಿದೆ.

**ದೇವದಾಸಿ ಮಕ್ಕಳ ದುರಾವಸ್ಥೆ**

ಈ ವೃತ್ತಿಗಿಳಿದ ಸ್ತ್ರೀಯರು ಮಾತ್ರವಲ್ಲ, ಅವರ ಮಕ್ಕಳು ಕೂಡ ಗಂಭೀರ ಸ್ವರೂಪದ ದುಷ್ಪರಿಣಾಮಗಳನ್ನು ಎದುರಿಸಬೇಕಾಗುವುದು. ತಂದೆ ಇಲ್ಲದೆ ಹುಟ್ಟಿದವರೆಂಬ ಕಳಂಕ ಹೊತ್ತು ಅವಮಾನದಿಂದ ನಗೆಪಾಟಲಿಗೆ ಗುರಿಯಾಗುವಂತೆ ೮೦ % ಮಕ್ಕಳು ಬಾಲ್ಯದಿಂದಲೂ ಅಪಮಾನ, ತಿರಸ್ಕಾರ, ಅಪಾಯಕಾರಿ ಸಾಮಾಜಿಕ ವ್ಯವಸ್ಥೆಗೆ ತಲೆ ಬಾಗಿ, ಬಲಿಪಶುಗಳಾಗುತ್ತಿದ್ದಾರೆ. ವ್ಯಭಿಚಾರ ನಡೆಸುವ ತಾಯಿ ಗುಹ್ಯ ರೋಗಕ್ಕೆ ಒಳಗಾಗಿದ್ದಾಗಲೇ ಮಗುವು ಹುಟ್ಟಿದ್ದರಂತೂ ಆ ಮಗುವು ತನ್ನ ದೈಹಿಕ ಆರೋಗ್ಯವನ್ನು ಕಾಯ್ದುಕೊಳ್ಳುವುದೇ ಕಷ್ಟಕರವಾಗುವುದು. ಈ ಮಕ್ಕಳು ತಾಯಿಯ ರಕ್ಷಣೆ ಪ್ರೀತಿಪೂರ್ವಕವಾದ ಆರೈಕೆ ಹಾಗೂ ಸಂಪೋಷಣೆಯಿಂದ ವಂಚಿತವಾಗುತ್ತದೆ. ತಂದೆಯ ರಕ್ಷಣೆ, ನಿಯಂತ್ರಣ ಹಾಗೂ ಪ್ರೇಮಪೂರ್ವಕ ಮಾರ್ಗದರ್ಶನದಿಂದ

ವಂಚಿತರಾಗುವ ವಿಲಕ್ಷಣ ಪರಿಸ್ಥಿತಿಯುಂಟಾಗುತ್ತದೆ. ಅವರ ಕಣ್ಣೆದುರಿಗೆ ನಡೆಯುವ ಅವರ ತಾಯಂದಿರ ಅನೈತಿಕ ಲೈಂಗಿಕ ವ್ಯವಹಾರಗಳಂತೂ ಆ ಮಕ್ಕಳ ನೈತಿಕತೆಯ ಬೇರುಗಳನ್ನೇ ಕತ್ತರಿಸಿ ಬಿಡುವುವು. ಇದರಿಂದಾಗಿ ಮಕ್ಕಳ ಭಾವನಾತ್ಮಕ ಹಾಗೂ ಬೌದ್ಧಿಕ ಬೆಳವಣಿಗೆಗೆ ಬಹಳಷ್ಟು ಅಡಚಣೆಗಳಾಗುತ್ತಿವೆ. ತಮ್ಮ ಗೃಹಗಳಲ್ಲಿ ವಿಟ ಪುರುಷರನ್ನು ಕರೆತರುವ ತಲೆಹಿಡಕರು ಅಥವಾ ಏಜಂಟರುಗಳ ಜೊತೆಗೆ ತಮ್ಮ 'ಮಾಮೂಲು' ಗಳನ್ನು ವಸೂಲು ಮಾಡಲು ಯಾವಾಗಲೂ ಭೇಟಿಕೊಡುವ ಭ್ರಷ್ಟ ಪೊಲೀಸರ ಜೊತೆಗೆ ನಿಕಟ ಸಂಪರ್ಕ ಪಡೆಯುತ್ತವೆ. ಪರಿಣಾವಾಗಿ ಅವರೂ ಕೂಡ ಕಳ್ಳತನ, ದರೋಡೆ, ಜೂಜು, ಕುಡುಕತನ, ಮಾದಕವಸ್ತು ಸೇವನೆ ಮುಂತಾದ ದುಷ್ಟ ಕೃತ್ಯಗಳಲ್ಲಿ ತೊಡಗಿ ತಮ್ಮ ಭವಿಷ್ಯವನ್ನು ಹಾಳುಗೆಡವಿಕೊಳ್ಳುವರು. ಕ್ಷೇತ್ರಾಧ್ಯಯನದಲ್ಲಿ ತಿಳಿದುಬಂದಂತೆ ೭೦ % ಹುಡುಗರು ಈ ರೀತಿಯಾಗಿ ಚಟಗಳ ದಾಸರಾಗಿದ್ದಾರೆ. ಹಾಗೂ ಅವಿವಾಹಿತರಿರುವಾಗಲೇ ಕೆಲವರು ಸತ್ತ ಬಗ್ಗೆ ಮಾಹಿತಿ ತಿಳಿದು ಬರುತ್ತದೆ. ಅವರು ತಮ್ಮ ತಾಯಿ, ಅಕ್ಕ, ತಂಗಿಯರಿಗಿಂತಲೂ ಬೇಗನೇ ಸಾವನ್ನಪ್ಪುತ್ತಿದ್ದಾರೆ. ಈ ಮಕ್ಕಳಲ್ಲಿ ಹೆಣ್ಣು ಮಕ್ಕಳಾದರಂತೂ ಬಹಳ ಚಿಕ್ಕ ವಯಸ್ಸಿನಲ್ಲಿಯೇ ಅವರ ಲೈಂಗಿಕ ಶೋಷಣೆ ನಡೆಯುವುದು. ನಾಲ್ಕೈದು ಜನ ತಾಯಿಯನ್ನು ಇಟ್ಟುಕೊಂಡವರು ನಂತರ ಅವರ ಮಕ್ಕಳನ್ನು ಇಟ್ಟುಕೊಂಡ ನಿದರ್ಶನಗಳಿವೆ. ಇಂತಹ ಮಕ್ಕಳ ದಾರುಣಾವಸ್ಥೆಯನ್ನು ಅಧ್ಯಯನ ಮಾಡುವ ವ್ಯವಸ್ಥಿತ ಪ್ರಯತ್ನಗಳೇ ನಡೆದಿಲ್ಲ. ಅಂತಹ ಪ್ರಯತ್ನದಿಂದ ಹೊರಹೊಮ್ಮುವ ಅಂಕಿ ಅಂಶಗಳು ನಮ್ಮನ್ನು ದಿಗ್ಭ್ರಮೆಗೊಳಿಸುವಷ್ಟು ಭಯಾನಕವಾಗಿವೆ.

**ಸ್ತ್ರೀಯರ ವ್ಯವಸ್ಥಿತವಾದ ಶೋಷಣೆ**

ದೇಶದ ಸಂಸ್ಕೃತಿಯ ಸಾಕಾರ ಮೂರ್ತಿಯಾದ ಹೆಣ್ಣಿನ ಒಂದು ಭಾಗ ಕೊಳೆಯಲು ಬಿಟ್ಟು ಇದರಿಂದ ಬಂದ ಮೂಢ ನಂಬಿಕೆಗಳನ್ನು ಅಂಧಶ್ರದ್ಧೆ, ಅನಾಚಾರ ಹತ್ತಿರ ಇಟ್ಟುಕೊಂಡು ಬದುಕುತ್ತಿರುವುದು. ಸ್ತ್ರೀ ಪುರುಷರ ನಡುವಿನ ತಾರತಮ್ಯವು ವೇಶ್ಯಾವೃತ್ತಿಯಲ್ಲಿ ಎದ್ದು ಕಾಣುವುದು. ಮನಃಶಾಸ್ತ್ರಜ್ಞರ ಪ್ರಕಾರ ಒಬ್ಬ ಪುರುಷನು ಲೈಂಗಿಕವಾಗಿ ಒಬ್ಬ ಸ್ತ್ರೀಯನ್ನು ಮಾತ್ರ ತೃಪ್ತಿಗೊಳಿಸಬಲ್ಲ. ಲೈಂಗಿಕ ವಿಷಯದಲ್ಲಿ ಮುಕ್ತವಾದ ಅವಕಾಶವನ್ನು ಹೊಂದಿದ ಪುರುಷನು ಆ ಅವಕಾಶವನ್ನು ದುರುಪಯೋಗಪಡಿಸಿಕೊಂಡು ವೈವಿಧ್ಯತೆಗಳ ಹುಡುಕಾಟದಲ್ಲಿ ತೊಡಗಿದ್ದಾನೆ. ಅತಿಯಾದರೆ "ಅಮೃತವೂ ವಿಷವಾದಂತೆ" ದುರ್ಬಲತೆಗೆ ಒಳಗಾಗಿ ಮಹಿಳೆಯರನ್ನು ವಸ್ತುಗಳಂತೆ ಬಳಿಸಿಕೊಳ್ಳುತ್ತಾ ಇದರಿಂದ ತಾವುಗಳ ಸಹ ಬೀದಿ ಭಿಕಾರಿಗಳಾಗುವ ಜೊತೆಗೆ ಕುಟುಂಬದವರನ್ನು ಸಂಕಷ್ಟಕ್ಕೆ ಸಿಲುಕಿಸುವರು. ಸೂಳೆಯರು ಭಿಕ್ಷುಕರು, ರೋಗಿಗಳು, ಅನಾಥರು, ಕೊಳೆಗೇರಿಯಲ್ಲಿ ತುಂಬಿರುವುದರಿಂದ ಇದು ನಮ್ಮ ಸಂಸ್ಕೃತಿಗೆ ಕಪ್ಪು ಚುಕ್ಕೆ, ದೇಶದ ೧/೨ ಭಾಗದಷ್ಟು ಸ್ತ್ರೀ ಸಮುದಾಯವು ರೋಗಿಗಳನ್ನಾಗಿ ಮಾಡಿದ್ದು ಸಾಮಾಜಿಕ ವ್ಯವಸ್ಥೆಗೆ ಮಾರಕವಾಗಿದೆ.

**ವೇಶ್ಯಾಗೃಹಗಳಿಗೆ ದೇವದಾಸಿ ಸ್ತ್ರೀಯರನ್ನು ಸರಬರಾಜು ಮಾಡುವುದು :**

ದೇವದಾಸಿ ಪದ್ಧತಿಯು ವೇಶ್ಯಾವಾಟಿಕೆಯ ಮೂರನೇ ಎರಡು ಭಾಗದಷ್ಟು ಕಾಣಿಕೆಯನ್ನು ನೀಡಿದೆ. ಅಪ್ರಾಪ್ತ ಹೆಣ್ಣು ಮಕ್ಕಳನ್ನು ದತ್ತುವಾಗಿ ಪಡೆಯುವುದು.ಹಣಕೊಟ್ಟು ಕೊಂಡು ಕೊಳ್ಳುವುದು, ಅಪಹರಣ, ಉದ್ಯೋಗದ ಆಮಿಷ, ವಿವಾಹ ಹೀಗೆ ವಿವಿಧ ರೂಪಗಳಲ್ಲಿ ಮಕ್ಕಳನ್ನು ಗಾಣಿಕೆ ಮಾಡುವ ಕಪ್ಪು ವ್ಯವಹಾರ

ನಡೆಯುತ್ತಲೇ ಇದೆ. ಹೀಗೆ ಗಾಣಿಕೆಗೊಳಗಾದವರು ಬಲಾತ್ಕಾರದ ವೇಶ್ಯಾವಾಟಿಕೆ ಮತ್ತು ಲೈಂಗಿಕ ಪ್ರವಾಸೋಧ್ಯಮ, ವೇಶ್ಯಾವೃತ್ತಿ, ಜೀತಕ್ಕೆ, ಇತ್ಯಾದಿ ಬಳಕೆ ಮಾಡಿಕೊಂಡು, ಕೆಲವರು ಅಂಗಾಂಗ ಮಾರಾಟದ ಜಾಲಗಳಿಗೂ ಬಲಿಪಶುಗಳಾಗುತ್ತಾರೆ. ಮಾನವೀಯ ಹಕ್ಕುಗಳನ್ನು ಪೂರ್ಣವಾಗಿ ದಮನ ಮಾಡುವಂತಹ ಈ ಬಗೆಯ ವಿಷ ವರ್ತುಲದೊಳಗೆ ಹೆಣ್ಣುಮಕ್ಕಳು ಸಿಲುಕಿ ಹೊರ ಬರಲಾರದೇ ಕಣ್ಣೀರು ಸುರಿಸುತ್ತಾ ಜೀವನ ನಡೆಸುತ್ತಿದ್ದಾರೆ. ಇಂತಹ ವಿಕ್ರಯಿಸುವವರ ಭೂಗತ ಪ್ರಪಂಚದ ದೊಡ್ಡ ಜಾಲವೇ ಭಾರತದಲ್ಲಿ ಸೃಷ್ಟಿಯಾಗಲು ಕಾರಣವಾಗಿದೆ.

**ವೇಶ್ಯಾವೃತ್ತಿಯೊಂದಿಗೆ ಹಿಂಸೆ, ಬೆದರಿಕೆ, ಬಲಪ್ರಯೋಗ ಹಾಗೂ ಕ್ರೌರ್ಯಗಳೂ ಅಂಟಿಕೊಂಡಿವೆ**

ಬಂದ ಗಿರಾಕಿಗಳನ್ನು ಸರಿಯಾಗಿ ಸಂತೃಪ್ತಿ ಪಡಿಸಿದರೆ ಅವರು ಮತ್ತೊಮ್ಮೆ ಬರುತ್ತಾರೆ. ಇದರಿಂದ ಅವರುಗಳು ನೀಡಿದ ಆಜ್ಞೆಯನ್ನು ಪಾಲನೆ ಮಾಡದವರಿಗೆ ಗಿರಾಕಿಗಳು ಬರುವುದಿಲ್ಲ. ಇದರಿಂದ ನಾವು ಬದುಕುವುದೇಗೆಂದು ಕುಟುಂಬದವರು ಅವಳೊಂದಿಗೆ ಕ್ರೂರವಾಗಿ ವರ್ತಿಸುವರು. ಕೊಠಡಿಯಲ್ಲಿ ಕೂಡಿ ಹಾಕುವುದು. ಜೊತೆಗೆ ವೇಶ್ಯಾವಾಟಿಕೆಗಳಲ್ಲಾದರೆ, ಚಿತ್ರಹಿಂಸೆ ನೀಡುವುದು, ಉಪವಾಸವಿರಿಸುವುದು. ಕೆಟ್ಟ ಭಾಷೆಯ ಬೈಗಳ ಸುರಿಮಳೆ, ದಣಿವಾಗಿ, ಸುಸ್ತಾಗಿ ನಿದ್ರಿಸಿದರೆ ಒಡೆದು, ಬಡಿದು ಮಾಡುವುದು ಕೆಲವರು ಉರಿಯುವ ಸಿಗರೇಟ್‌ನಿಂದ ಚುಚ್ಚತೊಡಗುವರು, ಇನ್ನೂ ಕೆಲ ವಿಕೃತ ಕಾಮಿಗಳು ದೇಹದ ಕೆಲ ಸೂಕ್ಷ್ಮ ಭಾಗಗಳನ್ನು ಕಚ್ಚುವುದು, ಕಡಿಯುವುದು ಮಾಡುತ್ತಾರೆ. ಇಂತಹ ನಿದರ್ಶನಗಳ ಬಗೆಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮುಕ್ತವಾಗಿ ತೋರಿಸಿದ್ದಾರೆ. ಇವೆಲ್ಲ ಮೈ ನಡುಗಿಸುವಂತಹ ಕೃತ್ಯಗಳು.

**ಧರ್ಮದ ಹೆಸರಿನಲ್ಲಿ ಸ್ತ್ರೀಯರ ಲೈಂಗಿಕ ಶೋಷಣೆ**

ವ್ಯಕ್ತಿಯನ್ನು ರಕ್ಷಿಸುವ ಉದ್ಧರಿಸುವಂತಹ ಧರ್ಮದಿಂದಲೇ ಬಡ, ಮುಗ್ಧ, ಅಜ್ಞಾನಿ ಜನತೆಯನ್ನು ಕೊಲ್ಲುವುದರ ಉರುಲಾದರೆ ಸುಖ ಸಂಪತ್ತು ಲೂಟಿ ಮಾಡಿದರೆ ರಕ್ತಿ ಹೀರುವ ಜಿಗುಳೆಯಾದರೆ ಅದರ ಅಸ್ತಿತ್ವದ ಅಗತ್ಯವೇನು? ಎನ್ನಬಹುದು. ಧರ್ಮದ ಮುಖವಾಡದಲ್ಲಿ ದೇವರ ಹೆಸರಿನಲ್ಲಿ ಅನೀತಿಯಿಂದ ಕಾಮತೃಪ್ತಿಯ ಸೇವೆ ಪಡೆಯುತ್ತಾ, ಅಮಾನವೀಯತೆಯಿಂದ ನಡೆದುಕೊಳ್ಳುತ್ತಾ ಸ್ತ್ರೀಯರ ಘನತೆ, ಗೌರವ ಹಕ್ಕು ಬಾಧ್ಯತೆಗೆ ವಿರುದ್ಧವಾಗಿರುವ ಎಲ್ಲ ಧರ್ಮಗಳ ಬರ್ಬರವಾದ ಆಚರಣೆಗೆ ಸಮ್ಮತಿ ನೀಡಿದಂತಿದೆ. ಧರ್ಮಶಾಸ್ತ್ರಗಳು ಸ್ತ್ರೀಯರ ದೌರ್ಬಲ್ಯದ ಸಂಕೇತಗಳಾಗಿವೆ. ಕಾಮ ಪ್ರಚೋದನೆಗೆ ಅವಕಾಶ ನೀಡುವಂತಹ ಪುರಾಣಗಳನ್ನು ರಚಿಸಿ, ಭಗವಂತನನ್ನು ಮಾನವರಿಗಿಂತ ಅದೆಷ್ಟೋ ಹೀನರಾಗಿ ಕಾಣಿಸಿಕೊಳ್ಳುವಂತೆ ಮಾಡಿ, ದೇವರ ನೀತಿಗೆಟ್ಟ ಕತೆಗಳು, ಲೀಲೆಯನ್ನು ಕೇಳಿದರೆ ಪುಣ್ಯ ಎಂದು ನಮ್ಮ ಜನರನ್ನು ಪಾಪಿಗಳನ್ನಾಗಿ, ನಮ್ಮ ಸ್ತ್ರೀಯರನ್ನು ಸೂಳೆಯರನ್ನಾಗಿಸಲು ಈ ಕಥೆಗಳು ಪ್ರೇರಣೆ ನೀಡುವಂತಾಗಿವೆ.

ಉದಾಹರಣೆಗೆ ವಾಲಿ ಸುಗ್ರೀವರ ಕಥೆ, ವಿಷ್ಣು ಜಲಂದರ ಕಥೆ, ಕುದುರೆಯಲ್ಲಿ ಜನಿಸಿದ ಅಶ್ವಥಾಮನ ಕತೆ, ಕರ್ಣನ ಕಥೆ, ಬುದ್ಧನ ಜನ್ಮ, ಗೌತಮ ದೇವೇಂದ್ರರ ಕತೆ, ಜೋಕುಮಾರನ ಕತೆ, ಯಲ್ಲಮ ಜಮದಗ್ನಿಯರ ಕತೆ ಜೊತೆಗೆ ಕೆಳಜಾತಿಯ ಸ್ತ್ರೀದೇವರುಗಳನ್ನೆಲ್ಲಾ ಮೇಲುಜಾತಿಯ ಪುರುಷ ದೇವರುಗಳಿಗೆ ಸೂಳೆಯರನ್ನಾಗಿ ಪ್ರತಿನಿಧಿಕರಿಸಿದ ಸಾಂಸ್ಕೃತಿಕ ಕಥೆಗಳು ಹೇರಳವಾಗಿ ದೊರೆಯುತ್ತವ.

ಹೀಗೆ ನೀತಿ ಬಾಹಿರ ಪಟ್ಟಭದ್ರ ಹಿತಾಸಕ್ತಿಯಿಂದ ಧರ್ಮವನ್ನು ತಿರುಚಿ ಸಾವಿರಾರು ಮುಗ್ಧ ಸ್ತ್ರೀಯರ ಅನೈತಿಕ ಜೀವನಕ್ಕೆ ಪ್ರೇರಣೆ ನೀಡುತ್ತಿವೆ. ರೂಪ ಯೌವನಗಳನ್ನು ಕಳೆದುಕೊಂಡ ದೇವದಾಸಿಯರ ಸ್ಥಾನಮಾನ ಅತಿ ಕನಿಷ್ಠವಾಗಿರುತ್ತದೆ. ವಯಸ್ಸಾದ ದೇವದಾಸಿಯರ ಬದುಕು ದಾರುಣವಾಗಿರುತ್ತದೆ. ಭಿಕ್ಷೆ, ಅನಿವಾರ್ಯವಾಗುತ್ತದೆ. ಕೆಲವರು ಕಳ್ಳತನಕ್ಕೂ ಇಳಿಯುತ್ತಾರೆ. ಒಂದು ಹೊತ್ತಿನ ಊಟದ ಯೋಚನೆ ಅವರ ತಲೆ ತಿನ್ನುತ್ತದೆ. ಬರಗಾಲ ಪೀಡಿತ ಪ್ರದೇಶಗಳಲ್ಲಿ, ದಾರಿದ್ರ್ಯದಿಂದಾಗಿ ಹೆಣ್ಣುಮಕ್ಕಳು ಅನಿವಾರ್ಯವಾಗಿ ದೇವದಾಸಿಯರಾಗಿರುತ್ತಾರೆ. ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳೊಂದಿಗೆ ಸಂಭೋಗಿಸುವುದರಿಂದ ಲೈಂಗಿಕ ಕಾಯಿಲೆಗಳು ವಾಸಿಯಾಗುತ್ತವೆ ಎಂಬ ಮೂಢನಂಬಿಕೆಯಿಂದಾಗಿ "ಬಾಲವೇಶ್ಯೆಯರಿಗೆ ಬೇಡಿಕೆ ಹೆಚ್ಚು. ಇದರಿಂದ ಅಪ್ರಾಪ್ತ ವಯಸ್ಕರು ಅಜ್ಞಾನದಿಂದಲೂ ಮುಗ್ಧತೆಯಿಂದಲೂ ಏಯ್ಡ್ಸ್ ಮುಂತಾದ ಲೈಂಗಿಕ ರೋಗಗಳಿಂದ ನರಳಲು ಕಾರಣವಾಗಿದೆ"[೨]. ದೇವದಾಸಿಯರು ಯೌವ್ವನ ಕಳೆದುಕೊಂಡು, ಅಗ್ಗದ ಬೆಲೆಗೆ ತಮ್ಮನ್ನು ಮಾರಿಕೊಂಡು ನಡುಬಾಗಿ, ಹಲ್ಲು ಉದುರಿ ಅಭದ್ರ ಸ್ಥಿತಿಗೆ ತಲುಪಿದಾಗ, ತಮ್ಮ ರಕ್ಷಣೆಗಾಗಿ ಸ್ವಂತ ಮಕ್ಕಳನ್ನೇ ಆ ಕೂಪಕ್ಕೆ ತಳ್ಳುತ್ತಾರೆ. ಸೂಳೆ, ಬಸವಿ, ದೇವದಾಸಿಯಾದರೆ ಉಪಜೀವನ ಸುಲಭವಾಗಬಹುದೆಂದು ಕೆಲ ಸ್ತ್ರೀಯರು ತಾವಾಗೇ ಈ ನರಕದ ಹಾದಿ ಹಿಡಿಯುತ್ತಾರೆ.

**ಬೆತ್ತಲೆ ಸೇವೆ**

ಬೆತ್ತಲೆ ಸೇವೆಗೆ ಅವಕಾಶ ಕೊಟ್ಟಿದ್ದರಿಂದ ಅಮಾನವೀಯತೆಯಿಂದ ಕೂಡಿದ ಹೀನಾಯವಾದ ಮೂಢನಂಬಿಕೆಯಾಗಿದೆ. ಮನೋವಿಜ್ಞಾನಿ ಸಿಗ್ಮಂಡ್ ಫ್ರೈಡ್ ಬೆತ್ತಲೆ ಸೇವೆ ಭಕ್ತಿ ಭಾವದ ಪೂಜಾ ಕ್ರಮವೆಂದು ವ್ಯಕ್ತಿಯ ಒಳಗಡೆ ತನ್ನ ಕಾಮಾಂಗವನ್ನು ಅನ್ಯರಿಗೆ ಪ್ರದರ್ಶಿಸಿ ಲೈಂಗಿಕ ತೃಪ್ತಿಯನ್ನು ಪಡೆಯುವಂತಹ ತೋರ್ಪಡಿಕೆ ಇದರಲ್ಲಿದೆ. ಕಾಮಾಂಗವನ್ನು ಕದ್ದು ನೋಡಿ ತೃಪ್ತಿ ಹೊಂದುವುದಕ್ಕೆ ಹಣಕ್ಕಿಕ್ಕುವುದಾಗಿದೆ. ಹೀಗೆ ಸ್ತ್ರೀಯರ ಕಾಮಾಂಗವನ್ನು ನೋಡಿದ ಬಳಿಕ ಒಲಿಸಿ ಅಥವಾ ಆಕ್ರಮಣ ಮಾಡಿ ಸಂಭೋಗಕ್ಕಿಳಿಯುವಂತದ್ದು ಸಾಮಾನ್ಯ ಎಂದಿದ್ದಾರೆ. ಸ್ತ್ರೀವಾದ ಕಾರ್ಯಕರ್ತೆಯರು ಇದನ್ನು ವ್ಯಾಪಾರಕ್ಕಾಗಿ ಬೆತ್ತಲೆ ದೇಹವನ್ನು ಬಳಸಿಕೊಳ್ಳಲಾಗುವುದೆಂದು ಪ್ರತಿಭಟಿಸಿದ್ದಾರೆ. ಬೆತ್ತಲೆ ಸೇವೆ ಮಾಡುವ ದಲಿತರು ತಮ್ಮ ಹಕ್ಕುಗಳೇನೆಂದು ತಿಳಿಯಬೇಕೆಂದು ನಮ್ಮಂತೆ ಎಚ್ಚರಗೊಂಡವರಾಗಬೇಕೆಂದು ಮಹದೇವರು ಬಯಸುತ್ತಾರೆ. ಬೆತ್ತಲೆಸೇವೆ ನಡೆದರೆ ಅದು ಮಾಧ್ಯಮಗಳ ಮೂಲಕ, ದೂರದರ್ಶನದ ಮೂಲಕ ಇಡೀ ಜಗತ್ತಿನ ಟಿ.ವಿ. ಪರದೆಯ ಮೇಲೆ ಮೂಡುತ್ತದೆ. ನತದೃಷ್ಟ ಹೆಣ್ಣುಮಕ್ಕಳು, ಮುಗ್ಧತೆಯಿಂದ, ಅಜ್ಞಾನದಿಂದ ತಮ್ಮ ಬೆತ್ತಲೆ ದೇಹವನ್ನು ಇಡೀ ಜಗತ್ತಿನ ಕಣ್ಣುಗಳ ಮುಂದಿರಿಸುತ್ತಿರುವುದು ಆಕ್ರೋಶವನ್ನುಂಟು ಮಾಡುತ್ತದೆ ಅರ್ಚಕರ ಅಥವಾ ಶ್ರೀವಂತರ ಕಣ್ಣಿಗೆ ಕೆಳಸ್ತರದ ಸುಂದರ ಹೆಣ್ಣುಮಕ್ಕಳು ಬಿದ್ದರೆ ದೇವರೇ ಇವರನ್ನು ದಾಸಿಯರನ್ನಾಗಿ ಮಾಡಿಕೊಳ್ಳಲು ಇಚ್ಛಿಸಿದ್ದಾನೆಂದು ಹೇಳಿಸಿ, ತಮ್ಮ ಭೋಗಲಾಲಸೆಗೆ ಬಳಸಿಕೊಳ್ಳುತ್ತಿರುವುದೂ ಕೂಡ ಚಾರಿತ್ರಿಕ ಸತ್ಯ ಸಂಗತಿಯಾಗಿದೆ.

ಯೋನಿ ಪೂಜೆ, ಕುಂಚುಕೋತ್ಸವ, ಸಿರಿಆಚರಣೆ, ಬಿದಿರುಮಳೆ ಸೇವೆ, ಸಿಡಿ ಕಂಬ ನೆಡುವುದು. ಓಕುಳಿಯಾಟ, ಮುಂತಾದ ಅಶ್ಲೀಲತೆಗೆ ಸಂಬಂಧಿಸಿದ ಆಚರಣೆಗಳಾಗಿದ್ದು ಇವು ಕಾಮವನ್ನು ಉತ್ತೇಜಿಸುವ ವಿಧಾನಗಳಾಗಿವೆ.

**ಗುಹ್ಯರೋಗಗಳು ಅಥವಾ ರತಿರೋಗಗಳು**

'ಆರೋಗ್ಯವೇ ಮಹಾ ಭಾಗ್ಯ' ಎನ್ನುವರು, ಇಂಥ ಭಾಗ್ಯವನ್ನು ಕಳೆದುಕೊಳ್ಳುವುದಕ್ಕೆ ಮಾರ್ಗವಾಗಿದೆ. ಇದು ದೇವದಾಸಿ ಪದ್ಧತಿಯಿಂದ ಉಂಟಾದ ವೇಶ್ಯಾವೃತ್ತಿಯು ಭಯಾನಕವಾದ ದುಷ್ಪರಿಣಾಮಗಳನ್ನು, ಗುಹ್ಯರೋಗಗಳನ್ನು ಕಾಣಬಹುದು. ವೇಶ್ಯೆಯರು ಲೈಂಗಿಕ ರೋಗಗಳನ್ನು ಹರಡುವ ವಾಹಕಗಳಂತೆ ಸಮಾಜ ನೋಡುತ್ತಿದ್ದು, ಅವರನ್ನು ಲೈಂಗಿಕವಾಗಿ ಸಂಪರ್ಕಿಸುವ ಪುರುಷರೆಲ್ಲಾ ಈ ರೋಗಗಳಿಗೆ ಬಲಿಪಶುಗಳಾಗುವರಲ್ಲದೇ ಮತ್ತೆ ತಾವು ಲೈಂಗಿಕವಾಗಿ ಸಂಪರ್ಕಿಸುವ ಇತರೆ ಸ್ತ್ರೀಯರಿಗೂ 'ಹೂವಿಂದ ಹೂವಿಗೆ ಹಾರುವದುಂಬಿ' ಎನ್ನುವಂತೆ ಆ ರೋಗಗಳನ್ನು ಹರಡುತ್ತಾ ಹೋಗುವರು. ಆದ್ದರಿಂದಲೇ ಅವು ವೇಗವಾಗಿ ಪ್ರಸಾರವಾಗುತ್ತವೆ. ಈ ರೋಗಗಳನ್ನು ಇಂದು S.T.D (Sexual Transmitted Diseases) (ಲೆಂಗಿಕವಾಗಿ ಪ್ರಸಾರವಾಗುವ ಕಾಯಿಲೆಗಳು) ಎಂಬ ಹೆಸರಿನಿಂದ ಕರೆಯಲಾಗಿದೆ.

ಲೈಂಗಿಕ ರೋಗಗಳಲ್ಲಿ ಮುಖ್ಯವಾದವುಗಳೆಂದರೆ, ಸಿಫಿಲಿಸ್, ಅಥವಾ ಪರಂಗಿ ಹುಣ್ಣಿನ ರೋಗ ಮತ್ತು 'ಗೊನೋರಿಯಾ' ಅಥವಾ 'ಮೇಹ ರೋಗ' ಅಥವಾ 'ಶುಕ್ಲದೋಷ' ಇವು ಬಹಳ ಭಯಾನಕವಾದವುಗಳು. 'ಕಾಂಕ್ರಾಯ್ಡ್' ಎಂಬ ಇನ್ನೊಂದು ರೋಗವು ಸೋಂಕು ರೋಗದಂತೆ ಹರಡುತ್ತಾ ಹೋಗುವುದಿದ್ದರೂ ಅಷ್ಟೊಂದು ಹಾನಿಕಾರಕವಾದುದಲ್ಲ ಎನ್ನಲಾಗಿದೆ.

'ಸಿಫಿಲಿಸ್' ರೋಗವು ಗುಪ್ತಾಂಗದ ಮೇಲಿನ ವ್ರಣದಂತೆ ಆರಂಭವಾಗಿ ಅನಂತರ ಹರಡುತ್ತಾ ಹೋಗುವುದು. ಈ ರೋಗದ ಸೋಂಕು ತಗುಲಿದ ೬-೮ ವಾರಗಳಲ್ಲಿ ಗಂಟಲಿನ ಹುಣ್ಣು, ಚರ್ಮದ ತುರಿಕೆ, ತಲೆನೋವು, ರಸ ಗ್ರಂಥಿಗಳು ದೊಡ್ಡದಾಗುವುದು ಮುಂತಾದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ತಕ್ಷಣವೇ ಸೂಕ್ತ ಚಿಕಿತ್ಸೆ ಮಾಡದೇ ಇದ್ದಲ್ಲಿ ಮುಂದೆ ಹೃದಯ, ಪಿತ್ತಜನಕಾಂಗ ಸ್ನಾಯುಗಳು, ಮೂಳೆ ಮುಂತಾದ ಅಂಗಗಳು ದುರ್ಬಲಗೊಳ್ಳ ತೊಡಗುತ್ತವೆ. ಆದ್ದರಿಂದ ಬುದ್ಧಿ ಭ್ರಮಣೆ, ಪಾರ್ಶ್ವವಾಯು, ದೇಹದ ಕೀಲುಗಳ ಊತ, ಗುಣಪಡಿಸಲಾಗದಂತಹ ನಿಶ್ಯಕ್ತಿ ಕೊನೆಗೆ ಸಾವು ಕೂಡ ಬರಬಹುದು. ಈ ರೋಗದಿಂದ ನರಳುವ ಹೆಂಗಸರ, ಮಕ್ಕಳು ಹುಟ್ಟು ಕುರುಡರು, ಅಥವಾ ಕಿವುಡರು, ಅಥವಾ ವಿಕಾರ ರೂಪಿಗಳೂ ಆಗಿರಬಹುದಾಗಿದೆ. ಇದು ಪುರುಷರನ್ನು ಹೆಚ್ಚಾಗಿ ಕಾಡುವ ರೋಗವಾಗಿದೆ.

ಗೊನೋರಿಯಾ ರೋಗವು ಪುರುಷರಿಗಿಂತಲೂ ಸ್ತ್ರೀಯರಲ್ಲಿ ಬೇಗನೇ ಹರಡುವುದು. ಈ ರೋಗದಿಂದ ಉರಿತ, ಹೃದಯರೋಗ, ಕೊಳೆಯುವಿಕೆ ಮತ್ತು ಕೀಲು ಊತಗಳು ಕಾಣಿಸಿಕೊಳ್ಳುತ್ತವೆ. ಕೆಲವೇ ದಿನಗಳಲ್ಲಿ ಸ್ತ್ರೀಯರ ಗುಪ್ತಾಂಗದಿಂದ ಗಡುಸಾದ ಹಳದಿ ವರ್ಣದ ದ್ರವ ಶ್ರವಿಸಲು ಆರಂಭವಾಗುವುದು. ಜೊತೆಗೆ ಮಂಡಿ, ಮಣಿಕಟ್ಟು, ಹಿಮ್ಮಡಿ ಇತ್ಯಾದಿ ಕಡೆಗಳಲ್ಲಿ ಬಿಗಿತ, ಊತ ಹಾಗೂ ನೋವು ಕಾಣಿಸಿಕೊಳ್ಳುವುದು. ಈ ರೋಗದಿಂದ ನರಳುವ ಸ್ತ್ರೀ ಬಂಜೆಯಾಗಲೂಬಹುದು. ಈ ರೋಗ ಸೋಂಕಿದವರ ಮಕ್ಕಳು ಹುಟ್ಟಿನಿಂದಲೇ ಈ ರೋಗದ ಬಲಿಪಶುಗಳಾಗಿರುತ್ತಾರೆ. ಅಂತಹ ಮಕ್ಕಳು ಹುಟ್ಟಿದೊಡನೆ ಸಾಯಬಹುದು. ಅಥವಾ ಅಂಗವಿಕಲತೆಯನ್ನು ಹೊಂದಬಹುದು. ಅಮೇರಿಕಾದಲ್ಲಿ ೨೫ % ಭಾಗ ಮಕ್ಕಳ ಅಂಧತ್ವಕ್ಕೆ ಅವರ ತಾಯಂದಿರು ಈ ರೋಗಕ್ಕೆ ಒಳಗಾದುದೇ ಕಾರಣವೆಂದು ಹೇಳಲಾಗಿದೆ. ಇದು ದೇಶದ ಏಳಿಗೆ ದೃಷ್ಟಿಯಿಂದ ಮಾರಕವಾಗಿದೆ.

**ಏಯ್ಡ್ಸ(AIDS: Acquired Immuno Deficiency Syndrome):**

೨೦ನೇ ಶತಮಾನದ ಅತ್ಯಂತ ಭಯಾನಕ ರೋಗವಾಗಿರುವ ಏಯ್ಡ್ಸ್ ಮತ್ತು ಅದನ್ನು ಉಂಟು ಮಾಡಲು ಕಾರಣವಾದ HIV (Human Immunodeficiency Virus) ಇವು ಅನಿರ್ಬಂಧಿತ ಲೈಂಗಿಕ ಸಂಬಂಧದ ಕಾರಣದಿಂದ ಬಹುವ್ಯಾಪಕವಾಗಿ ಹರಡತೊಡಗಿವೆ. ಪ್ರಪಂಚದ ಎಲ್ಲೆಡೆ ಹಬ್ಬುತ್ತಿರುವ ಮಾರಕ ರೋಗವಾಗಿದೆ. ಇದರಿಂದ ಈಗಾಗಲೇ ಲಕ್ಷಾಂತರ ಜನರು ಈ ರೋಗಕ್ಕೆ ತುತ್ತಾಗಿದ್ದರೆ ಇದನ್ನು '೩ನೇ ಜಾಗತಿಕ ಯುದ್ಧ' ಎಂದು ಸಹ ಕರೆಯುವುದುಂಟು.

ಯುವ ಜನರು HIV/AIDS ರೋಗಗಳ ಪಟ್ಟಿಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದ್ದಾರೆ. ಭವ್ಯ ಬದುಕನ್ನು ಕಂಡು ಭವ್ಯ ರಾಷ್ಟ್ರ ಕಟ್ಟಬೇಕಾದವರು. ಇಂದು ಮಣ್ಣು ಪಾಲಾಗುತ್ತಿದ್ದಾರೆ. ಜಗತ್ತಿನಾದ್ಯಂತ ಪ್ರತಿಶತ ೫೦ ಭಾಗ HIV/AIDS ರೋಗಕ್ಕೆ ತುತ್ತಾದವರಲ್ಲಿ ೧೪-೧೫ ರ ವಯಸ್ಸಿನವರಾಗಿದ್ದಾರೆ. ಈ ರೋಗವು ಲೈಂಗಿಕ ಕ್ರಿಯೆಯಿಂದಲೇ ಪ್ರಾಥಮಿಕವಾಗಿ ಯುವ ಜನತೆಯಲ್ಲಿ ಅಂಟಿಕೊಳ್ಳುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಈ ರೋಗದ ಬಗ್ಗೆ ಸರಿಯಾದ, ಸೂಕ್ತವಾದ ಜ್ಞಾನದ ಕೊರತೆ, ಪರಿಣಾಮ ಬರಬಹುದಾದ ಶೇಖಡವಾರು ಕಾರಣಗಳೆಂದರೆ,

ಟ್ರಾನ್ಸ್‌ಮಿಷನ್ ಆಫ್ HIV: ಭಾರತದಲ್ಲಿ HIV ಸೋಂಕು

ಲೈಂಗಿಕ ಕ್ರಿಯೆಯಿಂದ : ೮೦ - ೯೦

ರೋಗದ ಸೋಂಕು ತಗುಲಿತ ರಕ್ತದಿಂದ : ೧೦ - ೧೫

ಔಷಧಿ ಮೂಲಕ : ೧೦

ಸೋಂಕು ತಗುಲಿದ ಗರ್ಭಿಣಿ ಸ್ತ್ರೀಯಿಂದ ಮಗುವಿಗೆ : ೪೦

ನ್ಯಾಷನಲ್ ಇಂಟಲಿಜೆನ್ಸ್ ಕೌನ್ಸಿಲ್ ವರದಿಯ ಪ್ರಕಾರ ೨೦೧೦ ನೇ ಇಸವಿಯ ಹೊತ್ತಿಗೆ ಭಾರತದಲ್ಲಿ ೨೦ ರಿಂದ ೨೫ ಮಿಲಿಯನ್ ಜನರು ಏಡ್ಸ್‌ಗೆ ತುತ್ತಾಗಲಿದ್ದಾರೆ. ಭಾರತ ಈ ನಿಟ್ಟಿನಲ್ಲಿ ಪ್ರಪಂಚದ ಎಲ್ಲಾ ರಾಷ್ಟ್ರಗಳಿಗಿಂತಲೂ ಮುಂದಿರುತ್ತದೆ ಎಂದು ಅಂದಾಜಿಸಲಾಗಿದೆ.

ಕರ್ನಾಟಕದಲ್ಲಿ ೨೦೦೧ ರ ಹೊತ್ತಿಗೆ ೧.೧೩ ಶೇಕಡವಿದ್ದು. ಇಂದು ಭಾರತದಲ್ಲಿ ಕರ್ನಾಟಕ ೬ನೇ ಸ್ಥಾನವನ್ನು ಪಡೆದಿದೆ. ಕರ್ನಾಟಕದಲ್ಲಿ ಸುಮಾರು ೫ ಲಕ್ಷ ಜನರು ಈ ರೋಗದ ಸೋಂಕಿನಿಂದ ಬಳಲುತ್ತಿದ್ದಾರೆ.

ಭಾರತ ಪುಣ್ಯಭೂಮಿ, ನೈತಿಕವಾಗಿ, ಸಾಂಸ್ಕೃತಿಕವಾಗಿ ಉನ್ನತ ಸಂಸ್ಕಾರವುಳ್ಳದ್ದು ಎಂದೇ ಪ್ರತಿಪಾದಿಸುತ್ತಾ ಏಡ್ಸ್ ವಿಚಾರದಲ್ಲಿ ಕಣ್ಣು ಮುಚ್ಚಿತ್ತು. ಜಾಗತಿಕವಾಗಿ ಏಡ್ಸ್ ಬಗ್ಗೆ ಗಂಭೀರವಾಗಿ ಚರ್ಚೆ ಆರಂಭವಾಗುತ್ತಿದ್ದರೂ ಭಾರತ ಅದು ತನ್ನ ದೇಶದ ಸಮಸ್ಯೆಯಲ್ಲ, ಅನ್ನೋ ಭ್ರಮೆಯಲ್ಲಿಯೇ ಇತ್ತು. ಇದೇ ಮನೋಭಾವದಲ್ಲಿಯೇ ಭಾರತದ ಜನ ಕೂಡ ಇದ್ದರು. "ಏಡ್ಸ್ ವಿಚಾರ ಏನಿದ್ದರೂ ಅನೈತಿಕ ಬದುಕಿನ ಅಪಾಯಕಾರಿ ಗುಂಪುಗಳಿಗೆ ಮಾತ್ರ". ಎನ್ನುವ ಮನೋಭಾವದಲ್ಲಿದ್ದರು. ಆದರೆ ಈಗಿನ ವರದಿಯೊಂದರ ಪ್ರಕಾರ ಭಾರತದಲ್ಲಿ ೨೦ ಲಕ್ಷ ಮಹಿಳೆಯರು HIV ಸೋಂಕಿನಿಂದ ಬಳಲುತ್ತಿದ್ದಾರೆ. ಅವರು ವರ್ಷಕ್ಕೆ ೯೨೦೦೦ HIV ಪಾಸಿಟೀವ್ ಮಹಿಳೆಯರು ಮಕ್ಕಳಿಗೆ ಜನ್ಮಕೊಡುತ್ತಿದ್ದಾರೆ. ಆ ಮಕ್ಕಳು ಪಾಸಿಟಿವ್ ಆಗಿ ಹುಟ್ಟದಿದ್ದರೂ ಪುಟ್ಟ

ಕಂದಮ್ಮಗಳು ಅಪಾಯಕಾರಿ ಗುಂಪಿಗೆ ಸೇರುತ್ತಿವೆ. ಹೀಗೆ HIV/AIDS ವಿಚಾರವು ಸಾಮಾನ್ಯ ಜನಸಂಖ್ಯೆಗೆ ಬಹಳ ವೇಗವಾಗಿ ವರ್ಗಾವಣೆಯಾಗುತ್ತಿದೆ. ಈ ವರದಿಗಳು ಎಲ್ಲರ ನಿದ್ದೆಗೆಡಿಸುತ್ತಿದೆ. ಇದಕ್ಕೆ ಉದಾಹರಣೆಯಾಗಿ ಒಬ್ಬ ಏಡ್ಸ್ ರೋಗಿಯ ಮನದ ಅಳಲು ಹೀಗಿದೆ,

'ಒಂದಿಷ್ಟು ಪ್ರೀತಿ ನೀಡಿ ನನ್ನನ್ನು ಕೊಂದುಬಿಡಿ' ನಾನು ಸಾಯುತ್ತೇನೆ ಎಂಬುದು ನನಗಿಂತಲೂ ಚೆನ್ನಾಗಿ ನಿಮಗೆ ಗೊತ್ತು. ಏಕೆಂದರೆ ನನಗಿರುವುದು ಔಷಧಿಯನ್ನೇ ಕಂಡುಹಿಡಿಯಲಾಗದಿರುವ ಏಡ್ಸ್ ರೋಗ! ಡಾಕ್ಟರ್ ನೀಡುವ ಇಂಜೆಕ್ಷನ್, ಏಡ್ಸ್ ಹೋಗಿಯ ರಕ್ತ, ಅನೈತಿಕ ಸಂಬಂಧ ಹೀಗೆ ಯಾವ ಕಾರಣದಿಂದ ಏಡ್ಸ್ ಬಂದಿರಬಹುದೆಂದು ನನಗೆ ಮಾತ್ರ ಗೊತ್ತು. ನಾನು ಬದುಕಿರುವಾಗಲೇ ನನ್ನ ಬಟ್ಟೆಗಳನ್ನೆಲ್ಲಾ ಗಂಟುಕಟ್ಟಿ ಸುಟ್ಟು ಹಾಕಿದರೆ, ನಾನೇ ಜನ್ಮ ನೀಡಿದ ಮಕ್ಕಳನ್ನು ನನ್ನಿಂದ ದೂರವಿಟ್ಟರೆ, ಎಲ್ಲರನ್ನೂ ತಬ್ಬಿಕೊಂಡು ಊಟಮಾಡುತ್ತಿದ್ದ ನನಗೆ ಪ್ರತ್ಯೇಕ ತಟ್ಟೆಯಲ್ಲಿ ಅನ್ನವಿಟ್ಟು ದೂಡಿದರೆ, ನನ್ನ ಕೈಗಳನ್ನು ಮುಟ್ಟಲು ಕಾತರಿಸುತ್ತಿದ್ದ ನೀವು ನನ್ನ ಕೈ ತಗುಲಿದರೆ ರೋಗ ಅಂಟುವುದೆಂದು ಭಯಪಡುತ್ತಿದ್ದರೆ ನನಗಾಗುವ ವೇದನೆಯನ್ನು ಯಾರ ಬಳಿ ಹೇಳಿಕೊಳ್ಳಲು ಸಾಧ್ಯ? Please, Please, ನನ್ನಪ್ರೀತಿ ಪಾತ್ರರೇ, ನನ್ನಿಂದ ನಿಮಗೆ ಈ ರೋಗ ಅಂಟಿಕೊಳ್ಳುವುದಿಲ್ಲ ಎಲ್ಲಾ ನೋವುಗಳೂ ನನಗೆ ಮಾತ್ರ ಸೀಮಿತವಾಗಿರಲಿ. ಆದರೆ ನನ್ನದೊಂದು ವಿನಂತಿ! ಕೊಲೆಗಡುಕನನ್ನು ಗಲ್ಲಿಗೇರಿಸುವಾಗ ಕೊನೆಯ ಆಸೆ ಏನೆಂದು ಕೇಳುತ್ತಾರೆ. ಹುಂ! ನನಗೂ ಆಸೆ ಇದೆ, ಪ್ರಾಣ ಬಿಡುವ ಮುನ್ನ ಒಮ್ಮೆ ನಿಮ್ಮೆಲ್ಲರೊಂದಿಗೆ ಕುಳಿತು ಊಟಮಾಡಬೇಕು, ನಿಮ್ಮೆಲ್ಲರನ್ನೂ ಒಮ್ಮೆ ನಗಿಸಬೇಕು. ಪ್ರೀತಿಯ ಮಕ್ಕಳನ್ನು ಅಪ್ಪಿ ಮುದ್ದಾಡಬೇಕು, ನನ್ನ ಬಟ್ಟೆ ಹಾಕಿಕೊಳ್ಳಲು ಕಿತ್ತಾಡುತ್ತಿದ್ದ ಸಹೋದರರು ಅದೇ ರೀತಿಯಲ್ಲಿ ಕಿತ್ತಾಡುತ್ತಿರಬೇಕು, ನನ್ನ ಬಟ್ಟೆಯನ್ನು ಹಾಕಿಕೊಂಡು ಅವರು ನನ್ನ ರೀತಿಯಲ್ಲಿ ನಡೆದಾಡಿ ನನ್ನನ್ನು ಅಣಕಿಸಬೇಕು. ಕೊನೆಯದಾಗೊಮ್ಮೆ ನನ್ನ ಪ್ರೀತಿಯ ಮಕ್ಕಳಿಗೆ ಮುತ್ತಿಡುತ್ತೇನೆ. ತಕ್ಷಣ ನನ್ನ ತಲೆಯ ಮೇಲೆ ಕಲ್ಲುಹಾಕಿ, ವಿಷ ನೀಡಿ, ಕುತ್ತಿಗೆಗೆ ಹಗ್ಗ ಬಿಗಿಯಿರಿ... ಹೇಗಾದರೂ ನನ್ನನ್ನು ಕೊಂದು ಬಿಡಿ! ನಗುನಗುತ್ತಾ ಸಾಯುತ್ತೇನೆ. ಆದರೆ ನನ್ನನ್ನು ಪ್ರೀತಿಯಿಂದ ದೂರ ಮಾಡಬೇಡಿ, ಪ್ರತ್ಯೇಕವಾಗಿ ಊಟ ಹಾಕಬೇಡಿ! ನನ್ನ ಕಣ್ಣೆದುರಿಗೇ ನನ್ನ ಬಟ್ಟೆಗಳಿಗೆ ಬೆಂಕಿಯಿಡಬೇಡಿ! ಪ್ರೀತಿಯಿಂದ ಹತ್ತಿರ ಬರುವ ಮಕ್ಕಳನ್ನು ದೂರ ಎಳೆದುಕೊಳ್ಳಬೇಡಿ! ನೀವು ಎಷ್ಟೇ ಪ್ರೀತಿ ನೀಡಿದರೂ ನಾನು ಸಾಯುತ್ತೇನೆ ನಿಜ! ಆದರೆ ಒಣಗಿದ ಮರಕ್ಕೆ ಬೆಂಕಿ ಇಟ್ಟಂತೆ ನಿಮ್ಮ ಪ್ರೀತಿಯಿಂದ ನನ್ನನ್ನು ದೂರ ಮಾಡಬೇಡಿ. Please, ಬೊಗಸೆಯಷ್ಟು ಪ್ರೀತಿ ನೀಡಿ! ನಗು ನಗುತ್ತಾ ಸಾಯುತ್ತೇನೆ ಎನ್ನುವ ಮಾತುಗಳು, ಕಲ್ಲು ಮನಸ್ಸುಗಳನ್ನು ಕರಗಿಸುವಂತಹುಗಳಾಗಿವೆ.

**ದೇವದಾಸಿ ಮಹಿಳೆಯ ಇತರ ವಿಪರೀತ ರೋಗಗಳು**

ದೇವದಾಸಿ ಮಹಿಳೆಯರಿಗೆ ಅನೇಕ ರೋಗಗಳು ತಗಲಿ ಗರ್ಭಿಣಿಯಾಗದಿರುವುದು, ಗರ್ಭಪಾತಗಳು ಜಾಸ್ತಿಯಾಗುವುದು. ಮಗು ಹುಟ್ಟಿದರೂ ಸತ್ತು ಹುಟ್ಟುವುದು. ಬದುಕಿದ ಮಕ್ಕಳಿಗೆ ಸರಿಯಾದ ಜೋಪಾನ ಇಲ್ಲದಿರುವುದು ಆದ್ದರಿಂದ ಬದುಕುವವರ ಸಂಖ್ಯೆ ಕಡಿಮೆ. ಸಿಫಿಲಸ್, ಜಾಂಕ್ರೈಡ್, ಗನೋರಿಯಾ, ಲಿಂಫ್ರೋ, ಗ್ರ್ಯಾನೋಲೋಮ, ವೆನರಿಯಮ್, ಹರ್ಪ್ಸ್, ಪರಂಗಿ ರೋಗ, ಮಧುಮೋಹರೋಗ ಮೊದಲಾದವುಗಳಿಗೆ ಬಲಿಯಾಗುವುದಿದೆ.

ನೀತಿಗೆಟ್ಟವರು. ಅವಿವಾಹಿತ ತಾಯಂದಿರು, ಸಂತಾನದ ಸೂಕ್ತ ಪಿತೃತ್ವಕ್ಕಾಗಿ ಈ ಸಂಪ್ರದಾಯದ ಅಡಿಯಲ್ಲಿ ನುಸುಳಿಕೊಳ್ಳುತ್ತಿದ್ದಾರೆ. ನಪುಂಸಕರು, ಉಭಯ ಲಿಂಗಿಗಳು, ಕುರೂಪಿಗಳೂ, ವಿಧವೆಯರು, ಅಂಗವಿಕಲರು, ತಮ್ಮ ಜೀವನೋಪಾಯಕ್ಕಾಗಿ ಈ ಧಾರ್ಮಿಕ ಭಿಕ್ಷಾವೃತ್ತಿ ಕೈಗೊಳ್ಳುವುದನ್ನು ಪ್ರಾರಂಭಿಸಿದ್ದಾರೆ. ಇದನ್ನು ನಿಲ್ಲಿಸಲು ಸಮರ್ಪಕವಾದ ಯೋಜನೆಗಳನ್ನು ರೂಪಿಸಬೇಕಾಗಿದೆ. ಇದರ ಜೊತೆಗೆ ದೇವದಾಸಿ ಪದ್ಧತಿಯಿಂದ ಸಮಾಜದಲ್ಲುಂಟಾಗುವ ಕೆಡಕುಗಳಿಗೆ ಕಾರಣವಾಗಿದೆ ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.

**೬.೯ ದೇವದಾಸಿ ಸಂಪ್ರದಾಯದ ನಿರ್ಮೂಲನೆಗೆ ನೀಡಬಹುದಾದ ಕೆಲವು ಸಲಹೆಗಳು**

ಇದುವರೆಗೆ ದೇವದಾಸಿ ಪದ್ಧತಿಯ ನಿರ್ಮೂಲನೆ ಮಾಡುವ ದಿಸೆಯಲ್ಲಿ ಆಗಿರುವ ಶಾಸನಗಳು, ಅನುಷ್ಠಾನಕ್ಕೆ ಬಂದಿರುವ ವಿವಿಧ ಕಾರ್ಯಕ್ರಮಗಳು, ಸ್ತುತ್ಯಾರ್ಹವಾದವುಗಳಾಗಿದ್ದರೂ, ವಸ್ತುಸ್ಥಿತಿ ತೀರಾ ಗಂಭೀರವಾಗಿರುವುದನ್ನು ಕಡೆಗಣಿಸುವಂತಿಲ್ಲ. ಈಗ ಆಗಿರುವ ಪ್ರಯತ್ನಗಳೆಲ್ಲವೂ 'ರಾವಣನ ಹೊಟ್ಟೆಗೆ ಚಮಚ ಮಜ್ಜಿಗೆ' ಎನ್ನುವಂತಿದೆ. ಶಾಸನಗಳೆಲ್ಲವೂ ಕಾಗದದಲ್ಲಿ ಗರ್ಜಿಸುತ್ತಿವೆಯೇ ಹೊರತು ಅಮಾಯಕ, ಮುಗ್ಧ ಹುಡುಗಿಯರನ್ನು, ಆಶ್ರಯ ತಪ್ಪಿದ ಸ್ತ್ರೀಯರನ್ನು ಒಂದಲ್ಲ ಒಂದು ಕಾರಣದಿಂದ ದೇವದಾಸಿ ಪದ್ಧತಿಗೆ ದೂಡಲಾಗುತ್ತಿರುವುದನ್ನು ತಡೆಯುತ್ತಿಲ್ಲ. ಇವರ ಪುನರ್‌ವಸತೀಕರಣ ಕಾರ್ಯವನ್ನು ಕೈಗೊಳ್ಳಬೇಕಾದ ಅಗತ್ಯವಿದೆ. ಸಮಾಜದ ಸಾರ್ವಜನಿಕರು ಈ ದುಷ್ಟ ಪದ್ಧತಿಯನ್ನು ಕಿತ್ತೊಗೆಯಲು ದೊಡ್ಡ ಸಮರವನ್ನೇ ಹೂಡಿ, ಅಮೂಲಾಗ್ರ ಬದಲಾವಣೆಗಾಗಿ ಬದುಕನ್ನು ಮೀಸಲಿಡಬೇಕಾಗಿದೆ.

**ಮಹಿಳೆಯರಲ್ಲಿ ಜಾಗೃತಿ ಮೂಡಿಸಿ, ಸುಸ್ಥಿತಿಯಲ್ಲಿರುವಂತೆ ಮಾಡುವುದು**

ಇಂದು ಮಹಿಳೆ ಯಾವುದೇ ಸಮಸ್ಯೆಯನ್ನಾಗಲಿ, ಸವಾಲಾಗಿ ಸ್ವೀಕರಿಸಿ ಎದುರಿಸುತ್ತಾಳೆ. ಆದರೆ ದೇವದಾಸಿ ಬೆತ್ತಲೆಸೇವೆ, ಲೈಂಗಿಕ ಕಿರುಕುಳ, ಬಲತ್ಕಾರಗಳ ಕ್ರೌರ್ಯದಿಂದ ಆಕೆ ತನ್ನನ್ನು ತಾನು ರಕ್ಷಿಸಿಕೊಳ್ಳಲಾರದವಳಾಗಿದ್ದಾಳೆ. ಸ್ತ್ರೀಯನ್ನು 'ಭೋಗದ ವಸ್ತು'ವಾಗಿ ಆಕೆಯ ವೇಶ್ಯಾವಾಟಿಕೆಯನ್ನು ಉದ್ಯಮಶೀಲವನ್ನಾಗಿ ಮಾಡಿಕೊಂಡ ಅದೆಷ್ಟೋ ನರಭಕ್ಷಕರಿದ್ದಾರೆ. ಇವರನ್ನು ನಿರ್ಮೂಲನೆಗೊಳಿಸಿ, ಆ ಮೂಲಕ ಅವರ ಸ್ಥಿತಿ ಸುಸ್ಥಿತಿಯಲ್ಲಿಡುವ ಕ್ರಮ ಕೈಗೊಳ್ಳುವುದು ಜರೂರಿನ ಕಾರ್ಯವಾಗಿದೆ.

**ಸ್ತ್ರೀ ಸಮಸ್ಯೆಗಳಲ್ಲಿ ಪ್ರಮುಖವಾದವುಗಳು ಸಮಾಜದ ಅಸ್ವಸ್ಥತೆಗೆ ಅಧೋಗತಿಗೆ, ಅನೈತಿಕತೆಗೆ ಕಾರಣವಾಗುವ ಅಂಶಗಳ ಬಗ್ಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳುವುದು.**

ಬಾಲ್ಯವಿವಾಹ ತಡೆಗೆ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳುವುದಿಲ್ಲ, ವಿಧವೆಯರ ಪುನರ್‌ವಿವಾಹ, ಹೆಣ್ಣು ಭ್ರೂಣಹತ್ಯೆಯ ತಡೆ, ಮಹಿಳಾ ಕಳ್ಳಸಾಗಣಿಕೆ ತಡೆ, ವಿಶ್ವಮಾರುಕಟ್ಟೆಯಲ್ಲಿ ಭೋಗವಸ್ತುವಾಗಿರುವ ಸ್ಥಿತಿಯ ನಿವಾರಣೆ, ವರದಕ್ಷಣಾ ಪದ್ಧತಿ, ಅತ್ಯಾಚಾರ ಲೈಂಗಿಕ ಕಿರುಕುಳಗಳು, ಕೌಟುಂಬಿಕ ಹಿಂಸೆ, ಮುಂತಾದವುಗಳಿಗೆ ಸಂಬಂಧಿಸಿದಂತೆ, ಕಠಿಣ ಕ್ರಮ ಕೈಗೊಂಡು ಪರಿಸ್ಥಿತಿ ಬದಲಿಸುವುದು.

**ಸ್ತ್ರೀಯರಿಗೆ ಉದ್ಯೋಗ ಭದ್ರತೆಯ ಭರವಸೆ ಮೂಡಿಸುವುದು**

ಸ್ತ್ರೀಯರಿಗೆ ಸ್ವಯಂ ಉದ್ಯೋಗವಕಾಶಗಳನ್ನು ಕಲ್ಪಿಸಿ, ದುಡಿಮೆಯೇ ಬದುಕಿನ ಯಶಸ್ಸಿನ ವೇದಿಕೆ ಎನ್ನುವಂತೆ, ಸ್ವಾಭಿಮಾನದಿಂದ, ಆತ್ಮಸ್ಥೈರ್ಯದಿಂದ, ಸ್ತ್ರೀ ಬದುಕು ಕಟ್ಟಿಕೊಳ್ಳಲು ಅವಕಾಶ ನೀಡಿ, ನನ್ನ

ದೇಶಕ್ಕೆ ನನ್ನ ಎರಡೂ ಕೈಗಳ ದುಡಿತದ ಅಗತ್ಯವಿದೆ ಎಂಬ ಮನೋಭಾವನೆ ಬೆಳೆಸಿ, ಅದರಲ್ಲೂ ದೇವದಾಸಿಯರನ್ನು ಸ್ವ ಸಹಾಯ ಗುಂಪುಗಳಾಗಿ ಮಾರ್ಪಡಿಸಿಕೊಳ್ಳುವ ತಿಳುವಳಿಕೆ ನೀಡುವುದು.

ಈ ಎಲ್ಲಾ ಸ್ವ ಸಹಾಯ ಗುಂಪುಗಳಿಗೆ ಸದರಿ ಸಂಘಗಳ ಕಾರ್ಯದ ಬಗ್ಗೆ, ಸಂಘವನ್ನು ನಡೆಸುವ ಬಗ್ಗೆ ತಿಳುವಳಿಕೆ ನೀಡಿ ಮಹಿಳಾ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು. ಜೊತೆಗೆ ಈ ಸಂಘಗಳಿಂದಾಗುವ ಲಾಭದ ಬಗ್ಗೆ ಮನವರಿಕೆ ಮಾಡಿಕೊಡುವುದು.

ಇಂತಹ ಸಂಘಗಳನ್ನು ಗ್ರಾಮ ಮಟ್ಟದಿಂದ ತಾಲ್ಲೂಕು, ಜಿಲ್ಲಾ, ರಾಜ್ಯ ಮಟ್ಟದವರೆಗೆ ಸ್ಥಾಪಿಸುವುದು.

**ಲೈಂಗಿಕ ಶಿಕ್ಷಣವನ್ನು ನೀಡುವುದು**

'ಲೈಂಗಿಕತೆ' ಸೃಷ್ಟಿಯ ಸುಂದರ ಕ್ರಿಯೆ, ಇದು ಗಂಡು ಹೆಣ್ಣಿನ ದೇಹ ಮನಸ್ಸು ಆತ್ಮಗಳ ಸಮಭೋಗವಾಗಿದ್ದು. ಅದು ತನ್ನ ಎಲ್ಲೆಮೀರಿದರೆ ಪೈಶಾಚಿಕ ಸ್ವರೂಪ ತೋರಿಸುತ್ತದೆ. 'ಆರ್ನಾಲ್ಡ್ ಟಾಯ್ನಬೀ' ಪ್ರಕಾರ ಪ್ರಪಂಚದಲ್ಲಿದ್ದ ೨೨ ನಾಗರಿಕತೆಗಳಲ್ಲಿ ೧೯ ನಾಗರಿಕತೆಗಳು ಲೈಂಗಿಕ ಸ್ವಚ್ಛಂದತೆಯಿಂದ ಸರ್ವನಾಶಾವಾಗುವ ಜೊತೆಗೆ ನೈತಿಕ ಅಧಃಪತನದಿಂದ ನಾಶವಾದವು. ಎಂದಿದ್ದಾರೆ. ಲೈಂಗಿಕ ಸ್ವಚ್ಛಂದಕ್ಕೆ ಕಟ್ಟುನಿಟ್ಟಿನ ನಿಯಂತ್ರಣ ಒದಗಿಸಿ, ಆ ಮೂಲಕ ಸಮಾಜವನ್ನು ಸಾಂಸ್ಕೃತಿಕವಾಗಿ ಉನ್ನತಮಟ್ಟ ತಲುಪುವಂತೆ ಮಾಡುವುದು. ಪ್ರೊ ಎ.ಸಾರೋಕಿನ್ ತಮ್ಮ 'ಸೇನ್‌ಸೆಕ್ಸ್ ಆರ್ಡರ್' ಎಂಬ ಗ್ರಂಥದಲ್ಲಿ ಲೈಂಗಿಕ ನಿಯಂತ್ರಣಗಳಿಲ್ಲದ ಸಮಾಜಗಳು ಅವನತಿ ಹೊಂದುವವು ಎಂದಿದ್ದಾರೆ. ಈ ಬಗ್ಗೆ ತಂದೆ ತಾಯಿ, ಗುರುಗಳು ಮಕ್ಕಳ ವಯಸ್ಸಿಗನುಗುಣವಾಗಿ ಮಾಹಿತಿ ನೀಡಬೇಕು. ಈ ವಿಷಯವಾಗಿ ೧೦% ಯುವಕರು ಮಾನಸಿಕ ರೋಗಿಗಳಾಗಿರುತ್ತಾರೆ. ದುಶ್ಚಟಗಳ ದಾಸರಾಗುವರು. ಆದ್ದರಿಂದ ಲೈಂಗಿಕ ನಿಗ್ರಹಣ, ಬ್ರಹ್ಮಚಾರ್ಯ, ಲೈಂಗಿಕತೆ ಬಗ್ಗೆ ತಪ್ಪುತಿಳುವಳಿಕೆ ಹೋಗಲಾಡಿಸುವುದು. ಜೊತೆಗೆ ಪುರುಷ ಇಂದು ಎಷ್ಟೇ ನಾಗರಿಕನಾಗಿದ್ದರೂ, ಸ್ತ್ರೀ ವಿಷಯದಲ್ಲಿ ಅನಾಗರಿಕನಾಗಿ, ಕಾಮಾಂಧನಾಗಿ, ವರ್ತಿಸದಂತೆ ಅವರ ದೃಷ್ಟಿಕೋನ ಬದಲಿಸುವ ಕ್ರಮಕೈಗೊಳ್ಳುವುದು 'ಲೈಂಗಿಕ ವಾಂಛೆ' ಯನ್ನು ಇಮ್ಮಡಿಗೊಳಿಸುವ 'ವಯಾಗ್ರ' ಮುಂತಾದ ಔಷಧಿಗಳು ಅಡ್ಡದಾರಿಗೆ ಪ್ರಚೋದಿಸುವ ಸಾಮಗ್ರಿಗಳಾಗಿದ್ದು, ಅಂತಹವುಗಳನ್ನು ನಿಷೇಧಿಸುವುದು ಅಥವಾ ನಿಯಂತ್ರಣದಲ್ಲಿರಿಸುವುದು ಕುಟುಂಬಗಳಲ್ಲಿಯ ಅತಿಯಾದ ಸ್ವಾತಂತ್ರ್ಯ, ತಂದೆ ತಾಯಿಗಳ ವಿಚಿತ್ರ ನಡೆವಳಿಕೆ, ಮಾದಕ ವಸ್ತುಗಳ ಸೇವನೆ, ಕಾಮದ ಪ್ರಭಾವಕ್ಕೊಳಪಡಿಸುವ ಮಾಧ್ಯಮಗಳ ಬಗ್ಗೆ ಕಟ್ಟುನಿಟ್ಟಾಗಿ ಕ್ರಮ ಕೈಗೊಂಡು ಸಮನ್ವಯತೆಯನ್ನು ಸಾಧಿಸಿ, ಸಾರ್ಥಕ ಜೀವನದ ಲೈಂಗಿಕ ಶಿಕ್ಷಣ ನೀಡುವುದು ಈ ಕಾರ್ಯದಲ್ಲಿ ಮಾನವ ಹಕ್ಕುಗಳ ವಿಶ್ವಸಂಸ್ಥೆ ಲೈಂಗಿಕ ಕಾರ್ಯಕರ್ತೆಯರ ಸಂಘಟನೆಗಳು ಜನ ಜಾಗೃತಿಯನ್ನುಂಟು ಮಾಡಬೇಕು, ಜೊತೆಗೆ ಲೈಂಗಿಕತೆಯನ್ನು ಕುರಿತ ದೃಷ್ಟಿಕೋನ ಬದಲಾಗುತ್ತಿರುವ ಈ ಸನ್ನಿವೇಶದಲ್ಲಿ ಮಕ್ಕಳಿಗೆ ಲೈಂಗಿಕ ಆರೋಗ್ಯದ ಬಗ್ಗೆ ಅರಿವು ಮೂಡಿಸುವುದು ಅಗತ್ಯ. ಮಡಿವಂತಿಕೆ ಲೈಂಗಿಕತೆ ಬಗ್ಗೆ ಸಲ್ಲದು. ಎಂಬುದು ತಜ್ಞವೈದ್ಯರ ಅಭಿಪ್ರಾಯವಾಗಿದೆ. ವೈದ್ಯಕೀಯ ಕ್ಷೇತ್ರದಲ್ಲಿ ಇತರೆ ವಿಭಾಗಗಳಂತೆ, ಲೈಂಗಿಕ ಆರೋಗ್ಯ ವಿಭಾಗಕ್ಕೆ ಮಾನ್ಯತೆ ಹೆಚ್ಚು ಕೊಡಬೇಕು. ಮಕ್ಕಳ ದೈಹಿಕ ಬೆಳವಣಿಗೆಯಲ್ಲಿ ಬದಲಾವಣೆ ಉಂಟಾಗುವ ಅವಧಿಯಲ್ಲಿ ಪೋಷಕರು, ಶಿಕ್ಷಕರು, ಲೈಂಗಿಕತೆ ಮತ್ತು ಪರಸ್ಪರ ಸಂಬಂಧಗಳ ಬಗ್ಗೆ ತಿಳುವಳಿಕೆ ಮೂಡಿಸಬೇಕು. ಅನಂತರದಲ್ಲಿ ಮದುವೆ, ಮಕ್ಕಳನ್ನು ಹೆರಲು

ಸಿದ್ಧರಾಗುವ ಬಗ್ಗೆ ಅರಿವು ಮೂಡಿಸಬೇಕು.

**ದೇವದಾಸಿ ಪದ್ಧತಿಗೆ ಪ್ರೇರಣೆ ನೀಡುವ ಸಂಪ್ರದಾಯಗಳ ನಿರ್ಮೂಲನೆ ಮಾಡುವುದು**

ದೇವದಾಸಿ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವಿಕೆ, ಬಸವಿಪದ್ಧತಿ ಓಕುಳಿಯಾಟ, ಕಡುಬಿನ ಕಾಳಕ, ಬೆತ್ತಲೆಸೇವೆ, ಕರ್ಮ, ಪುನರ್ಜನ್ಮ, ಸ್ವರ್ಗ, ದೈವ, ಮುಂತಾದವುಗಳ ಬಗ್ಗೆ ಇರುವ ಮೂಢನಂಬಿಕೆ ನಾಶಗೊಸುವ ತಿಳುವಳಿಕೆ ನೀಡುವುದು ಮೇಲ್ವರ್ಗದ ಪುರುಷರ ಹುನ್ನಾರಗಳ ಹಿನ್ನೆಲೆಯಲ್ಲಿ ಕೆಳ ಜಾತಿ ಮತ್ತು ವರ್ಗಗಳಿಗೆ ಮೀಸಲಾದ ಗೊಡ್ಡು ಸಂಪ್ರದಾಯಗಳು, ನೀತಿಗೆಟ್ಟ ಪುರಾಣಗಳನ್ನು ದೇವದಾಸಿ ಪದ್ಧತಿಗೆ ಪ್ರೇರಣೆ ನೀಡುವ ಗುಡಿಗೋಪುರಗಳ ಪರಂಪರೆಯನ್ನು ಮಸುಕುಗೊಳಿಸಿ, ಈ ಬಗ್ಗೆ ವೈಚಾರಿಕ ದೃಷ್ಟಿಕೋನ ಮೂಡಿಸುವುದು.

**ಸಮಾಜದ ದ್ವಿಮುಖ ನೀತಿಗೆ ಪ್ರೋತ್ಸಾಹ ನೀಡದಿರುವುದು**

ಪ್ರತಿಯೋರ್ವ ಮಹಿಳೆಯೂ ತಾವು ಸ್ತ್ರೀಯರು ಅಬಲೆಯರು, ಪುರುಷ ವರ್ಗದವರಿಗಿಂತ ಕನಿಷ್ಟರು, ನಿಕೃಷ್ಟರು ಎಂಬ ಕೀಳಿರಿಮೆಯನ್ನು ಸೇರಿದಂತೆ ಲಿಂಗಭೇದವೊಂದನ್ನು ಹೊರತುಪಡಿಸಿ ಮತ್ತಾವ ಬಗೆಯಲ್ಲೂ ತಾರತಮ್ಯವನ್ನೆಣಿಸಕೂಡದು. ದೇಶದಲ್ಲಿ ಪ್ರತಿವರ್ಷ ೬.೭ ದಶಲಕ್ಷ ಗರ್ಭಪಾತ ಪ್ರಕರಣಗಳು ನಡೆಯುತ್ತಿವೆ. ಇದರಲ್ಲಿ ೫.೭ ದಶಲಕ್ಷ ಪ್ರಕರಣಗಳು ಕಾನೂನು ಬಾಹಿರವಾಗಿ ಜರುಗುತ್ತಿವೆ ಎಂದು ಸಿ.ಎಸ್.ಇ.ಪಿ.ಐ. ಸಹ ಅಧ್ಯಕ್ಷ ಡಾ.ಡಿ.ನಾರಾಯಣರೆಡ್ಡಿ ತಿಳಿಸಿದ್ದಾರೆ, ಈ ಬಗ್ಗೆ ಇರುವ ಕಾನೂನುಗಳನ್ನು ದಕ್ಷವಾಗಿ ಮತ್ತು ಯಶಸ್ವಿಯಾಗುವ ಹಾಗೆ ಆಚರಣೆಗೆ ತರಬೇಕು. ಸಮಾಜದಲ್ಲಿ ಅನ್ಯಾಯ, ಅಸಮಾನತೆಗಳಿಂದಾಗಿ, ಅನಿವಾರ್ಯವಾಗಿ ಅನುಭವಿಸಬೇಕಾಗಿ ಬರುವ ಕಷ್ಟಗಳಿಂದ ಮುಕ್ತಳನ್ನಾಗಿ ಮಾಡಿ, ಆತ್ಮವಿಶ್ವಾಸ ಬೆಳಸಿ, ಪುರುಷ ವರ್ಗಕ್ಕೇ ಸಲ್ಲುವ ಪ್ರಾಧಾನ್ಯತೆ ಸ್ತ್ರೀಯರಿಗೂ ಸಲ್ಲಬೇಕು. ಮೇಲು ಕೀಳು ಎಂಬ ಭಾವನೆಯನ್ನು ಬೇರು ಸಹಿತ ಕಿತ್ತು ಹಾಕಿ ಸಮಭಾವ ತಾಳಿದಾಗ ಮಾತ್ರ ಆರೋಗ್ಯಕರ ಸಮಾಜದ ದೇವದಾಸಿ ಪದ್ಧತಿ ಇಲ್ಲದ ನವ ನಿರ್ಮಾಣದ ಸಮಾಜ ಸೃಷ್ಟಿಯಾಗುವುದು. ಪುರುಷರ ಸ್ವೇಚ್ಛಾಚಾರದ ವರ್ತನೆಗೆ ಲಗಾಮು ಹಾಕಬೇಕು, ಶಿಕ್ಷೆಗೊಳಪಡಿಸಬೇಕು. 'ಶ್ರೀಮತಿ ರಂಗನಾಯಕಿಯವರು' ಕಾಮದ ವಿಷಯದಲ್ಲಿ ದ್ವಿಮುಖ ನೀತಿಯನ್ನು ಅನುಸರಿಸುವುದು ವಾಸ್ತವಿಕವಾಗಿ ಅಸಾಧ್ಯವಾದುದು. ಪುರುಷನಲ್ಲಿ ಪಾತಿವ್ರತ್ಯ ಇಲ್ಲವಾದರೆ ಸ್ತ್ರೀಯರಲ್ಲಿ ಪಾತಿವ್ರತ್ಯ ಇರುವುದು ಸಾಧ್ಯವೇ ಇಲ್ಲ. ಸ್ತ್ರೀಯರು ಪತಿವ್ರತೆಯಾಗಿರಬೇಕೆಂಬುದಾಗಿ ಮತ್ತು ಪುರುಷರು ಮನಬಂದಂತೆ ಇರಬಹುದಾಗಿ ನಿರೀಕ್ಷಿಸಲಾಗಿಯೇ ಸಹ್ಯವಾದ ದುರ್ಮಾರ್ಗ ಅಭಿವೃದ್ಧಿಗೊಂಡಿದೆ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಸ್ತ್ರೀಗೆ ಅನ್ಯಾಯವೆಸಗಿದ ಧರ್ಮಶಾಸ್ತ್ರಗಳನ್ನು, ಪುರಾಣಗಳನ್ನು ಪರಿಷ್ಕರಿಸಬೇಕು. ಇವರ ಘನತೆ, ಗೌರವ, ಹಕ್ಕು ಬಾಧ್ಯತೆಗೆ ವಿರುದ್ಧವಾಗಿರುವ ಎಲ್ಲಾ ಧರ್ಮಗಳನ್ನು ನಿಷೇಧಿಸಬೇಕು. ಮಾನವೀಯತೆ ಮೆರೆಯುವಂತಾಗಬೇಕು.

**ದೇವದಾಸಿ ಪದ್ಧತಿಯ ನಿರ್ಮೂಲನೆಯ ಬಗ್ಗೆ ಪ್ರಚಾರ ಮತ್ತು ಪ್ರಸಾರ ಮಾಡುವುದು**

ಮಹಿಳೆಯರ ಆತ್ಮಗೌರವ ಕಾಪಾಡುವ ನಿಟ್ಟಿನಲ್ಲಿ ದೇವದಾಸಿಯರ ಬಗ್ಗೆ ವಿಶೇಷ ತಿಳುವಳಿಕೆ ನೀಡುವ

ಶಿಬಿರಗಳನ್ನು ಜಾತ್ರೆಗಳಲ್ಲಿ ಅತಿಹೆಚ್ಚು ಜನರು ಕೂಡುವ ಸ್ಥಳಗಳಲ್ಲಿ ದೇವದಾಸಿ ನಿಷೇಧದ ಶಾಸನಗಳ ಬಗ್ಗೆ, ಶಿಕ್ಷೆಯ ಬಗ್ಗೆ ಜಾಗೃತಿಯನ್ನು ಸಮೂಹ ಮಾಧ್ಯಮಗಳ ಪ್ರಚಾರ ಮತ್ತು ಪ್ರಸಾರ ಮಾಡುವುದು ಅವರ ಹೀನಾಯ ಜೀವನದ ಬಗ್ಗೆ ಅನುಭವಿಸುವ ಗುಹ್ಯರೋಗಗಳ ಬಗ್ಗೆ ವ್ಯವಸ್ಥಿತ ಪ್ರಚಾರಾಂದೋಲನ ಪ್ರಾರಂಭಿಸುವುದು.

ಕೀಳು ಅಭಿರುಚಿಯ ಭಿತ್ತಿ ಚಿತ್ರ, ಬ್ಲೂಫಿಲಂ, ಕ್ಯಾಬರೆ ನೃತ್ಯ, ಟಿ.ವಿ, ಸಿನಿಮಾ, ನಿಯತಕಾಲಿಕಗಳು, ಪತ್ರಿಕೆಗಳು, ಇಂಟರ್‌ನೆಟ್ ಮುಂತಾದವು ಕೀಳು ಸಂಸ್ಕೃತಿಯ ಹೆಬ್ಬಾಗಿಲು ತೆರೆದಿಟ್ಟಿವೆ. ಯುವ ಜನತೆಯನ್ನು ದಿಕ್ಕು ತಪ್ಪಿಸುತ್ತಿವೆ. ಮೃಗೀಯ ಭಾವನೆ ಬೆಳೆಸುವ, ಹಿಂಸೆಯನ್ನು ವೈಭವೀಕರಿಸುವ, ಮಾನವೀಯತೆಗೆ ಅಪಮಾನ ಮಾಡುವ ಅಶ್ಲೀಲತೆಯನ್ನು ಕಾನೂನುಗಳು, ಸಮಾಜಿಕ ಜನಾಭಿಪ್ರಾಯ, ಸಂಘಟನೆಗಳನ್ನು ಬೆಳೆಸುವ ಉತ್ತಮ ಅಭಿರುಚಿ ಬೆಳೆಸುವ ಆರೋಗ್ಯಕರ ಸಮಾಜ ಸೃಷ್ಟಿಸುವ ಕಲೆ, ಸಾಹಿತ್ಯ ಪ್ರೋತ್ಸಾಹಿಸುವ ನಿಟ್ಟಿನಲ್ಲಿ ಮಾಧ್ಯಮಗಳು ಹೇರಳ ಪ್ರಸಾರ ಸರ್ಕಾರ, ಸಂಬಂಧ ಪಟ್ಟ ಸಂಸ್ಥೆಗಳು ಈ ಪ್ರಚಾರಕ್ಕೆ ಒತ್ತು ನೀಡಿ ಆರೋಗ್ಯಪೂರ್ಣ ಸಮಾಜಕ್ಕಾಗಿ ಶ್ರಮಿಸುವುದು.

**ವೇಶ್ಯಾವಾಟಿಕೆಗಳ ಮೇಲೆ ಕೈಗೊಳ್ಳಬಹುದಾದ ಕ್ರಮಗಳು**

ರಾಷ್ಟ್ರಮಟ್ಟದ ಎಲ್ಲಾ ವೇಶ್ಯಾಗೃಹಗಳನ್ನು ಮುಚ್ಚಲು ಕ್ರಮಕೈಗೊಳ್ಳುವುದು. ಅವುಗಳ ಒಡೆಯರ ಆಸ್ತಿಪಾಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡು, ಸೆರೆಮನೆಗೆ ತಳ್ಳಬೇಕು.

ಈ ಮಹಿಳೆಯರು ಸ್ವಾತಂತ್ರವಾಗಿರಲು ಮನೆಗಳನ್ನು ಒದಗಿಸಿ, ಆರೋಗ್ಯದಿಂದಿರಲು ವ್ಯವಸ್ಥೆಮಾಡಿ, ವಯಸ್ಸಿನಾಧಾರ ಇವರಲ್ಲಿ ಗುಂಪುಗಳಾಗಿ ವಿಂಗಡಿಸಿ, ವೇಶ್ಯಾವೃತ್ತಿಯ ಕೆಡಕುಗಳ ಬಗ್ಗೆ ಮನವರಿಕೆ ಮಾಡಿಕೊಟ್ಟು, ಸ್ವಯಂ ಉದ್ಯೋಗವಕಾಶ ಕಲ್ಪಿಸಲು ಸಮಾಜ ಕಲ್ಯಾಣ ಸಲಹಾ ಮಂಡಲಿ, ಸ್ಥಳೀಯ ಅಧಿಕಾರಿಗಳ ಸಮಿತಿ ರಚಿಸಿ, ಅವರು ದೇವದಾಸಿಯರ ವೇಶ್ಯಾವೃತ್ತಿಗಿಳಿಯಲು ಕಾರಣವಾಗುವ ಅಂಶಗಳನ್ನು ಪತ್ತೆ ಹಚ್ಚಿ ಅವುಗಳ ಪರಿಹಾರಕ್ಕೆ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸುವುದು.

ಇವರಲ್ಲಿನ ಪಾಪಪ್ರಜ್ಞೆ , ಕೀಳರಿಮೆಗಳಿಂದ ಮಾನಸಿಕವಾಗಿ ಅಂತರಾಳದಲ್ಲಿ ಕುಸಿದು ಹೋಗಿರುವ ಬಗ್ಗೆ ನಿಗಾವಹಿಸಿ, ಸಮಾಜದ ಮುಖ್ಯವಾಹಿನಿಯ ಭಾಗವಾಗಿ ಪರಿಗಣಿಸುವ ಮೂಲಕ ಇವರನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸದೇ ಮನುಷ್ಯರನ್ನಾಗಿ ನೋಡುವುದು. ಕಾರಣ ಸಾವಿರಾರು ಸೂಳೆಯರನ್ನು ನಿರ್ಮಿಸಿದ ಈ ನಿರ್ದಯಿ ಸಮಾಜಕ್ಕೆ ಮಾನವೀಯ ಅಂತರಂಗ ಹೊಂದುವ ಅವಶ್ಯಕತೆ ಇದೆ.

ಇವರನ್ನು ಸಮಾಜದಲ್ಲಿ ತುಂಬಿ ತುಳುಕುತ್ತಿರುವ ಕಾಮದ ಕೊಳಕನ್ನು ಕೊಚ್ಚಿ ಕೊಂಡ್ಯೊಯ್ಯುವ ಪ್ರವಾಹದಂತೆ ಈ ವೇಶ್ಯಾವಾಟಿಕೆ ಇರಬೇಕು. ದೇವದಾಸಿ ಪದ್ಧತಿ ಇರುವುದರಿಂದ ನಮ್ಮ ಹೆಣ್ಣುಮಕ್ಕಳು ಗೌರವದಿಂದ ಬೀದಿಯಲ್ಲಿ ಓಡಾಡುತ್ತಿದ್ದಾರೆ ಎಂದು ಖ್ಯಾತ ವಕೀಲ ನಾನಿ ಪಾಲ್ಕಿವಾಲಾ ಹೀಗೆ ಕೆಲ ಹಿರಿಯ ಚಿಂತಕರು ಈ ಭಾವನೆ ವ್ಯಕ್ತ ಪಡಿಸಿದ್ದಾರೆ. ಇದು ಎಷ್ಟರ ಮಟ್ಟಿಗೆ ನ್ಯಾಯಯುತವಾದುದು. ನಮ್ಮ ಸ್ವಂತ ಸಹೋದರಿಯರನ್ನು ಇಂತಹ ಅನೀತಿ ಕೃತ್ಯಗಳಿಗೆ ಬಿಡದಿರುವಾಗ ಇವರನ್ನು ಈ ರೀತಿ ಉಪಯೋಗಿಸಲು ಅವಕಾಶ ಕೊಡುವುದಕ್ಕೆ ನಮಗೆ ಹೇಗೆ ಧೈರ್ಯವಿರುತ್ತದೆ? ತಮ್ಮ ಹೆಣ್ಣುಮಕ್ಕಳ ಕ್ಷೇಮಕ್ಕಾಗಿ ಇನ್ನೊಬ್ಬರನ್ನು

ಬಲಿ ಕೊಡುವಂತಹದ್ದು, ಈ ವಿಷಯದಲ್ಲಿ ಶೋಷಿತರಿಗೆ ಶೋಷಣೆಯಿಂದ ಮುಕ್ತಮಾಡಿ, ಸಾಂತ್ವಾನ ಹೇಳುವ ಬದಲು ಅದೇ ಕೂಪಕ್ಕೆ ತಳ್ಳುವ ಹುನ್ನಾರ ಅಮಾನವೀಯತೆಯಿಂದ ಕೂಡಿದೆ.

**ವೇಶ್ಯೆಯರ ಪುನರ್‌ವಸತಿಗೆ ಕ್ರಮಕೈಗೊಳ್ಳುವುದು**

ವೇಶ್ಯೆಯರಲ್ಲಿ ೨/೩ ಭಾಗದಷ್ಟು ದೇವದಾಸಿಯರೇ ಇರುವುದರಿಂದ ಈ ವೃತ್ತಿ ಅವಲಂಬಿಸಿರುವವರ ಮಕ್ಕಳೂ ಕೂಡ ಅದೇ ವೃತ್ತಿ ಅನುಸರಿಸದಂತೆ ಕ್ರಮ ಕೈಗೊಳ್ಳುವುದು. ವೇಶ್ಯೆಯರು ಮತ್ತು ಮಕ್ಕಳಿಗೆ ಮಾತ್ರವಲ್ಲದೇ ವೇಶ್ಯಾಗೃಹ ನಿರ್ವಾಹಕಿಯರಿಗೆ, ತಲೆಹಿಡುಕರಿಗೆ, ಕುಂಟಲಗಿತ್ತಿಯರಿಗೆ, ಏಜಂಟರುಗಳಿಗೆ, ಅವರ ಜೀವನೋಪಾಯಕ್ಕೆ ಅನುಕೂಲವಾಗುವ ಬದಲಿ ಉದ್ಯೋಗ ವ್ಯವಸ್ಥೆ ಕಲ್ಪಿಸಬೇಕಾದ್ದು ಅವಶ್ಯಕ ಗ್ರಾಹಕರ ಹಿತರಕ್ಷಣೆಯ ಕಾಯ್ದೆ ಅಡಿಯಲ್ಲಿ ಸರ್ಕಾರಿ ವೈದ್ಯರ ಉತ್ತರ ದಾಯಿತ್ವವನ್ನು ನಿಗದಿಪಡಿಸಿ, ನಕಲಿ ವೈದ್ಯರಿಂದ ಪಾರಾಗುವಂತೆ ಮಾಡುವುದು.

**ಸರ್ಕಾರ ಮತ್ತು ರಾಜಕಾರಣಿಗಳು ನಿರ್ವಹಿಸಬೇಕಾದ ಪಾತ್ರ**

ಪ್ರಥಮವಾಗಿ ಸರ್ಕಾರವು ಜರೂರಾಗಿ ರಾಜ್ಯದಲ್ಲಿ ದೇವದಾಸಿಯರ ಬಗ್ಗೆ ಸಮೀಕ್ಷೆ ನಡೆಸಿ, ದೇವದಾಸಿಯರು ಹೆಚ್ಚು ಸಂಖ್ಯೆಯಲ್ಲಿ ಕಂಡು ಬರುವ ಪ್ರದೇಶಗಳನ್ನು ಗುರುತಿಸಿ ಅಲ್ಲಿ ವಿಶೇಷ ಖಾಳಜಿಯಿಂದ ಆ ಪ್ರದೇಶಗಳಲ್ಲಿನ ಪ್ರಾಥಮಿಕ ಹಂತದಿಂದಲೇ ಅಂದರೆ ಆ ಸಮುದಾಯದವರಲ್ಲಿ ಪ್ರತಿ ಗ್ರಾಮದಲ್ಲಿ ಸ್ವ ಸಹಾಯ ಸಂಘ, ನೆರೆಹೊರೆ ಸಮಿತಿಗಳನ್ನು ರಚಿಸಿ ದೇವದಾಸಿಯರಾಗದಂತೆ ನಿರ್ಬಂಧಿಸುವ ಹೆಚ್ಚಿನ ಅಧಿಕಾರವನ್ನು ಇವರಿಗೆ ಕೊಡುವುದು. ಅವರಿಗೆ ಈ ಬಗ್ಗೆ ತಿಳುವಳಿಕೆ ನೀಡಿ ಆಮೂಲಕ ಸಮುದಾಯದವರಿಗೆ ಅರಿವು, ಜಾಗೃತಿಯನ್ನು ಯಶಸ್ವಿಯಾಗಿ ಮೂಡಿಸುವಂತೆ ಮಾಡುವುದು.

ಆ ಕ್ಷೇತ್ರದ ರಾಜಕೀಯ ಧುರೀಣರು, ಸಮಾಜ ಸುಧಾರಕರು, ಚಿಂತಕರು ಅನುಭವಿಗಳು ಸೇರಿ ಆಗಾಗ ಜನ ಸಂಪರ್ಕ ಸಭೆಗಳನ್ನು ಮಾಡಿ. ಅದರಲ್ಲಿ ಸರ್ಕಾರದ ಯೋಜನೆಗಳು ತಲುಪಿವೆಯೇ ಇಲ್ಲವೇ ಎಂಬುವುದು ತಲುಪಿದ್ದರೆ, ಅವುಗಳನ್ನು ಸದ್ಬಬಳಕೆ ಮಾಡಿಕೊಂಡ ಬಗ್ಗೆ ಮಾಹಿತಿ ಪಡೆಯುವುದು. ದೇವದಾಸಿಯ ಅಂಕಿ ಸಂಖ್ಯೆಯ ಆಧಾರದ ಮೇಲೆ, ಹೆಚ್ಚಿನ ಸೌಲಭ್ಯಗಳನ್ನು ಪಡೆಯುವ ಅವಧಿ ಇಂತಿಷ್ಟು ಎಂದು ಗೊತ್ತುಪಡಿಸಿ, ಆ ಅವಧಿಯಲ್ಲಿಯೇ ದೇವದಾಸಿಯರು ಹೊಸದಾಗಿ ಆಗದಂತೆ ಸಂಪೂರ್ಣ ಜವಾಬ್ದಾರಿ ಹೊತ್ತು ಹೊಣೆಗಾರರಾಗುವಂತೆ ಮಾಡುವುದು.

ಕೆಲ ಅಧಿಕಾರಿಗಳು ಸರ್ಕಾರದ ಯೋಜನೆ, ಸೌಲಭ್ಯಗಳ ಬಗ್ಗೆ ಸುಳಿವು ನೀಡದಂತವರೂ ಉಂಟು. ಇನ್ನು ಕೆಲವರು ಆಲಸ್ಯದಿಂದ ಸರಿಯಾದ ಮಾಹಿತಿ ನೀಡುವುದಿಲ್ಲ ಅಥವಾ ತಿಳಿಯಪಡಿಸುವುದಿಲ್ಲ. ದೇವರು ವರ ಕೊಟ್ಟರೂ ಪೂಜಾರಿ ಕೊಡಲ್ಲ ಎನ್ನುವಂತೆ. ಇಂತಹ ಅಧಿಕಾರಿಗಳ ಮೇಲೆ ಕಠಿಣ ಕ್ರಮ ಕೈಗೊಳ್ಳಬೇಕು. ಜೊತೆಗೆ ವೇಶ್ಯೆಯರ ವ್ಯವಸ್ಥಾಪಕರಾಗಿ, ಸಮುದಾಯದ ಪ್ರಮುಖರಂತೆ ವರ್ತಿಸುವವರನ್ನು ಮೊದಲು ಮಟ್ಟಹಾಕಬೇಕು. ಇದಕ್ಕೆ ಪ್ರೇರಣೆ ನೀಡುವ ಕಮಂಗಿ ರಾಜಕಾರಣಿಗಳನ್ನು ಕಲೆ, ಕಲಾವಿದರ ಹೆಸರಿನಲ್ಲಿ ಈ ದುಷ್ಟ ಪದ್ಧತಿ ಉಳಿಯಲು ಬೆಳೆಯಲು ಪ್ರೇರಣೆ ನೀಡುವವರನ್ನು ಶಿಕ್ಷಿಸಬೇಕು. ಇದಕ್ಕೆ ಇರುವ ಕಾನೂನುಗಳು ಹಲ್ಲಿಲ್ಲದ ಹಾವಿನಂತಿವೆ. ಇವನ್ನು ಪುನರ್‌ರಚಿಸಿ ಯಶಸ್ವಿಯಾಗಿ ಜಾರಿಗೊಳಿಸಬೇಕಾಗಿದೆ. ಪೊಲೀಸ್, ತಲೆಹಿಡಕರು ಮತ್ತು

ರಾಜಕಾರಣಿಗಳ ನಡುವಿನ ಸಂಬಂಧಗಳನ್ನು ಕಡಿದು ಹಾಕಬೇಕು.

**ದೇವದಾಸಿ ಮಕ್ಕಳಿಗಾಗಿ ಕೈಗೊಳ್ಳಬಹುದಾದ ಕಾರ್ಯಕ್ರಮಗಳು**

ಇಂತಹ ಮಕ್ಕಳ ಜವಾಬ್ದಾರಿಯನ್ನು ಸರ್ಕಾರವೇ ವಹಿಸಿಕೊಂಡು ಅಥವ ಅಧೀನದಲ್ಲಿರುವ ಹಲವಾರು ವಸತಿಗೃಹಗಳನ್ನೊಳಗೊಂಡಿರುವ ಶಾಲೆಗಳಿಗೆ ಸೇರ್ಪಡೆ ಮಾಡಿ. ಈ ಮಕ್ಕಳಿಗಾಗಿ ರಾಷ್ಟ್ರೀಯ ಮಟ್ಟದಲ್ಲಿ ಹಕ್ಕುಗಳಿಗಾಗಿ ಒಂದು ಆಯೋಗವನ್ನು ನೇಮಿಸುವುದು. ಇದರಿಂದ ಮಕ್ಕಳು ಹಾಗೂ ವಯಸ್ಕರು ಮಕ್ಕಳ ಪರವಾಗಿ ಹಕ್ಕುಗಳ ಉಲ್ಲಂಘನೆಯಾದ ಸಂದರ್ಭದಲ್ಲಿ ಮುಖ್ಯವಾಗಿ ಲೈಂಗಿಕ ಕಿರುಕುಳದ ಬಗ್ಗೆ ವೇಶ್ಯಾವಾಟಿಕೆಗೆ ಮಹಿಳಾ ಸಾಗಾಣಿಕೆ ಮಾಡುವ ಬಗ್ಗೆ ವೇಶ್ಯಾವಾಟಿಕೆಗಳಲ್ಲಿ ತೊಡಗಿಸುವ ಬಗ್ಗೆ ಪ್ರಕರಣಗಳನ್ನು ದಾಖಲು ಮಾಡಿಕೊಳ್ಳಲು ಅವಕಾಶವಾಗುತ್ತದೆ. ಸರ್ಕಾರೇತರ ಸಂಸ್ಥೆಗಳನ್ನು ಇದರಲ್ಲಿ ಭಾಗಿಗಳನ್ನಾಗಿ ಮಾಡಬೇಕು. ಆಯೋಗಕ್ಕೆ ಹೆಚ್ಚಿನ ಅಧಿಕಾರವನ್ನು ಅಂದರೆ ನೇರವಾಗಿ ತಪ್ಪಿತಸ್ಥರನ್ನು ಶಿಕ್ಷಿಸುವ ಅಧಿಕಾರವನ್ನು ನೀಡಬೇಕು.

ಮಕ್ಕಳ ಹಿತರಕ್ಷಣೆಗಾಗಿ ಮಾಧ್ಯಮದವರನ್ನು ಒಳಗೊಂಡಂತೆ ಸಮಿತಿಯನ್ನು ರಚಿಸಿ, ಅದರಲ್ಲಿ ಸರ್ಕಾರೇತರ ಸಂಸ್ಥೆಗಳನ್ನು ಭಾಗಿಗಳನ್ನಾಗಿ ಮಾಡಿಕೊಳ್ಳಬೇಕು. ಮಾಧ್ಯಮದವರು ಮಕ್ಕಳಿಗೆ ಆದ ಅನ್ಯಾಯ, ಮೋಸ, ವಂಚನೆ, ಆ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳ ಬಗ್ಗೆ ಪ್ರಚಾರವನ್ನು ದಿನ ಪತ್ರಿಕೆಗಳಲ್ಲಿ ನೀಡಬೇಕು.

ಅತಿ ಕಠಿಣ ಕ್ರಮಗಳನ್ನು ಬಾಲ್ಯಾವಸ್ಥೆಯಲ್ಲಿರುವವರನ್ನು ವೇಶ್ಯಾವಾಟಿಕೆಯಲ್ಲಿ ತೊಡಗಿಸುವವರ ವಿರುದ್ಧ ತೆಗೆದುಕೊಳ್ಳಬೇಕು. ಇಂತಹ ಪ್ರದೇಶಗಳನ್ನು ಗುರುತಿಸಿ, ಅಂತಹ ಸ್ಥಳಗಳಲ್ಲಿ ನಿಗಾವಹಿಸಿ, ಅಪ್ರಾಪ್ತ ಮತ್ತು ಯುವತಿಯರು ತಲೆಹಿಡುಕರ ಕೈಗೆ ಸಿಗದ ಹಾಗೆ ಮಾಡಲು ಸರ್ವ ಪ್ರಯತ್ನಗಳನ್ನು ಮಾಡುವುದು.

ಕೇಂದ್ರೀಯ ಕಾನೂನುಬದ್ಧ ಮಂಡಳಿಯನ್ನು ರಚಿಸಬೇಕು. ಸದರಿ ಮಂಡಳಿಯು, ಜುವೆನೈಲ್ ಜಸ್ಟೀಸ್ ಯಾಕ್ಟ್ IPTA , ದಂಡ ಸಂಹಿತೆ, ದಂಡ ಪ್ರಕ್ರಿಯೆ ಸಂಹಿತೆಯ ಜಾರಿಯ ಬಗ್ಗೆ, ಪುರನ್‌ವಸತಿಯ ಬಗ್ಗೆ ಸಲಹೆ ಪುನರ್‌ವಸತಿ ಕಾರ್ಯಕ್ರಮಗಳ ಬಗ್ಗೆ, ತಡೆಗಟ್ಟುವ ಬಗ್ಗೆ ಕೈಗೊಳ್ಳುವ ಕ್ರಮಗಳ ಬಗ್ಗೆ, ನಿಗಾವಹಿಸಬೇಕು ಮತ್ತು ಮಾಹಿತಿ ಬ್ಯಾಂಕ್‌ನ್ನು ಸ್ಥಾಪಿಸಬೇಕು.

**ಧರ್ಮ ಮತ್ತು ನೈತಿಕ ಜೀವನದ ಬಗ್ಗೆ ಅರಿವು ಮೂಡಿಸುವುದು**

ಅನಾಥರಿಗೆ ಆಶ್ರಯ ನೀಡುವುದೇ ಧರ್ಮ. ಬಿದ್ದವರ, ನೊಂದವರಿಗೆ, ನಿರಾಶ್ರಿತರಿಗೆ, ದುಃಖಿಗಳಿಗೆ, ಶೋಷಿತರಿಗೆ, ಸಾಂತ್ವಾನ ಹೇಳಿ. ಅವರ ಬದುಕನ್ನು ಸುಂದರಗೊಳಿಸುವ ಧರ್ಮದ ಅರ್ಥವನ್ನು ಸಾರ್ವಜನಿಕರಿಗೆ ತಿಳಿಯಪಡಿಸುವುದು. ಮಠಾಧೀಶರನ್ನು ದೇವದಾಸಿ ನಿರ್ಮೂಲನಾ ಯೋಜನೆಗಳಿಗೆ ಬೆಂಬಲ ಸೂಚಿಸುವಂತೆ ಮಾಡಬೇಕು. ಇದರಿಂದ ಪರಿವರ್ತನೆ ಮಾಡುವುದಕ್ಕೆ ಸಹಾಯವಾಗುತ್ತದೆ. ದೇವದಾಸಿಯರು ಲಾಭಕ್ಕಾಗಿ ವಿವಾಹ ಮಾಡಿಕೊಳ್ಳುವುದನ್ನು ತಪ್ಪಿಸಿ, ಪವಿತ್ರ ಭಾವನೆಯಿಂದ, ನೈತಿಕ ಜೀವನ ನಡೆಸುವಂತೆ ಮಾಡಿ ಅವರ ಮದುವೆಯನ್ನು ಕಡ್ಡಾಯವಾಗಿ ನೋಂದಣಿ ಮಾಡುವಂತೆ ನೋಡಿಕೊಳ್ಳುವುದು.

ವ್ಯಕ್ತಿಯ ಮನಸ್ಸು ವಿಕಾರಗಳಿಗೆ ಬಲಿಯಾದರೆ ಏನನ್ನು ಸಾಧಿಸಲಾಗುವುದಿಲ್ಲ. ಮನೋದೌರ್ಬಲ್ಯಗಳಿಗೆ ಒಳಗಾಗದಂತೆ ಯೋಗಾಭ್ಯಾಸ ನಿಯಮದಂತೆ ಎಳೆದು ತಂದು ಆತ್ಮದ ವಶಕ್ಕೆ ಒಪ್ಪಿಸಿದಾಗ ಮಾತ್ರ ಮನೋನಿಗ್ರಹ ಸಾಧ್ಯ. ಸಮಾಜ ಅಧಃ ಪತನದಿಂದ ಮೌಲ್ಯಗಳ ಕುಸಿತದಿಂದ, ನೈತಿಕತೆಯ ಹರಣದಿಂದ

ಕಾಪಾಡಿದಂತಾಗುತ್ತದೆ. ವ್ಯಕ್ತಿಯ ಮನೋಸ್ಥಿತಿ, ಆಧ್ಯಾತ್ಮಕ ಜಾಗೃತಿ ಮಾಡಿಕೊಳ್ಳುವ ಮೂಲಕ ಉನ್ನತ ಸಮಾಜದ ನಿರ್ಮಾಣಕ್ಕೆ ಎಲ್ಲರೂ ಬದ್ಧರಾಗಬೇಕು ಎಂಬ ಅರಿವು ಮೂಡಿಸುವುದು.

**ಪೊಲೀಸ್ ಮತ್ತು ನ್ಯಾಯಾಲಯಗಳ ದೋಷ ಪೂರಿತ ನಿಯಮಗಳು**

ಪೊಲೀಸರು ದೇವದಾಸಿ ಪದ್ಧತಿಯ ಯಥಾಸ್ಥಿತಿಯ ರಕ್ಷಕರಾಗಿದ್ದಾರೆ. ಅವನ್ನು ಈ ಪದ್ಧತಿಯನ್ನು ಬದಲಿಸುವ ರೂವಾರಿಗಳಾಗುವಂತೆ ತರಬೇತಿ ನೀಡುವಲ್ಲಿ ಸರ್ಕಾರ ಒತ್ತುಕೊಡುವುದು ಅತ್ಯಂತ ಜರೂರಾಗಿದೆ. ಪೊಲೀಸರು ಭ್ರಷ್ಟರಾಗುವುದಕ್ಕೆ ನಿಜ ಕಾರಣಗಳನ್ನು ಕಂಡು ಹಿಡಿಯಬೇಕು. ಅವರು ಆಮಿಷಗಳಿಗೆ ಬಲಿಯಾಗದಂತೆ ಶಿಸ್ತು ಬದ್ಧರಾಗಿರುವಂತೆ, ಜೊತೆಗೆ ಈ ಅನಿಷ್ಠ ಪದ್ಧತಿಯ ಹಿಂದೆ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳ ಕೈವಾಡವಿದ್ದು, ಆ ಅಪರಾಧಿಗಳ ಪತ್ತೆ ಹಚ್ಚುವ ಹಂತದವರೆಗೂ ತಲುಪಲು ಸಾಧ್ಯವಾಗುವಂತೆ, ತನಿಖೆಯ ಮೇಲಿನ ಒತ್ತಡಗಳಿಂದ ಮುಕ್ತಿಗೊಳಿಸುವ ಕ್ರಮ ಕೈಗೊಳ್ಳುವುದು, ತನಿಖೆ ದೋಷವಿಲ್ಲದಿರುವಂತೆ ಮಾಡುವ ತಾವು ಬಂಧಿಸಿದ ವೇಶ್ಯೆಯರ ಜೊತೆಗೆ ಗಿರಾಕಿಗಳನ್ನು ಕಟ್ಟುನಿಟ್ಟಾಗಿ ಬಂಧಿಸಿ ಪೋಲೀಸರು ನ್ಯಾಯಾಲಯದಲ್ಲಿ ಹಾಜರುಪಡಿಸಬೇಕು. ಕೆಲ ಪೋಲೀಸರು ಇವರನ್ನು ಉಪಪತ್ನಿಯರಾಗಿ ಇಟ್ಟುಕೊಂಡು ವೇಶ್ಯಾವಾಟಿಕೆ ನಡೆಸುವುದು ಕಂಡು ಬರುತ್ತದೆ. 'ಬೇಲಿಯೇ ಎದ್ದು ಹೊಲ ಮೆಯ್ದೆ ಹಾಗೆ, ಇಂಥವರಿಗೆ ಕಠಿಣ ಶಿಕ್ಷೆಗೆ ಗುರಿ ಪಡಿಸಬೇಕು. ಪೊಲೀಸ್ ಠಾಣೆಗಳಲ್ಲಿ ಮಹಿಳಾ ಡೆಸ್ಕ್ ಸ್ಥಾಪಿಸುವುದು. ಬೇರೆ ಬೇರೆ ಸಾಮಾಜಿಕ ಕಾರ್ಯಕರ್ತರ ನೆರವಿನಿಂದ ಪೋಲೀಸರು ದೇವದಾಸಿ ಆಚರಣೆಯ ಪ್ರಕರಣಗಳನ್ನು ಪತ್ತೆ ಹಚ್ಚಿ ನಿರ್ದಾಕ್ಷಿಣ್ಯ ಕ್ರಮಕ್ಕೆ ಮುಂದಾಗಬೇಕು. ಸ್ವಯಂ ಪ್ರೇರಣೆಯಿಂದ ಕಾನೂನಿನಂತೆ ಕ್ರಮ ಜರುಗಿಸಬೇಕು. ದಿನದಿಂದ ದಿನಕ್ಕೆ ಹೆಚ್ಚೆಚ್ಚು ವಾಣಿಜ್ಜೀಕರಣಗೊಳ್ಳಲು ಸಹಕರಿಸದೇ ಕಾನೂನಿನಲ್ಲಿನ ಲೋಪ ದೋಷಗಳನ್ನು ಅನುಕೂಲಕ್ಕೆ ಉಪಯೋಗಿಸಿಕೊಳ್ಳದೇ ತಪ್ಪಿತಸ್ಥರನ್ನು ಶಿಕ್ಷಿಸಬೇಕು. ರಾಜ್ಯದಲ್ಲಿ ಈವರೆಗೂ ದೇವದಾಸಿ ಪದ್ಧತಿ ತಡೆ ಕಾನೂನಿನ ಅನ್ವಯ ಒಂದೇ ಒಂದು ಪ್ರಕರಣ ದಾಖಲಾಗಿಲ್ಲದಿರುವುದು ಇವರ ಅದಕ್ಷತೆಗೆ ಹಿಡಿದ ಕನ್ನಡಿಯಾಗಿದೆ.

ಸಮಾಜದ ನೈತಿಕ ಮಟ್ಟವೇ ಕಳಂಕಿತವಿದ್ದರೆ, ಅದರ ನ್ಯಾಯ ಪದ್ಧತಿ ಹೇಗೆ ಶುಚಿಯಾಗಿ ಉಳಿದೀತು? ರಾಜ್ಯದಲ್ಲಿ ೮೬% ಪ್ರಕರಣಗಳಲ್ಲಿ ಅಪರಾಧಿಗಳಿಗೆ ತಮ್ಮ ಅಪರಾಧಗಳಲ್ಲಿ ಮುಂದುವರೆಯುವುದಕ್ಕೆ ಹೆಚ್ಚಿನ ಧೈರ್ಯ ಬರುತ್ತದೆ. ಪರಿಣಾಮ ನ್ಯಾಯ ಪದ್ಧತಿಯಬಗ್ಗೆ ಸಂಶಯ ಹುಟ್ಟುವುದು. ನ್ಯಾಯಪದ್ಧತಿ ಅಪರಾಧಿಗಳಿಗೆ ಶಿಕ್ಷೆ ನೀಡುವ ಸಂಖ್ಯೆ ಹೆಚ್ಚಬೇಕು. ಅಲ್ಲದೇ ನಿರಪರಾಧಿಗಳ ವಿಳಂಬವಿಲ್ಲದ ಬಿಡುಗಡೆ ಪ್ರಮಾಣ ಪರಿಶೀಲಿಸಬೇಕು.

ನ್ಯಾಯಾಲಯದಲ್ಲಿ ಪ್ರಸ್ತುತ ೧೪.೫ ಲಕ್ಷ ಮಹಿಳೆಯರ ಮೇಲಿನ ಹಿಂಸೆಯ ಪ್ರಕರಣಗಳು ತೀರ್ಮಾನವಾಗದೇ ಉಳಿದಿದ್ದು. "ನ್ಯಾಯಾಲಯದಲ್ಲಿನ ವಿಳಂಬವೆಂದರೆ, ನ್ಯಾಯದ ನಿರಾಕರಣೆ" ಎಂಬ ಗಾದೆ ಇದೆ. ಇದು ಅಪರಾಧಿಗಳಿಗೆ ಅಪ್ರತ್ಯಕ್ಷವಾಗಿ ಸಹಾಯ ಮಾಡಿದಂತಾಗುತ್ತದೆ. ರಾಜ್ಯದ ೮೬% ಪ್ರಕರಣಗಳಲ್ಲಿ ಅಪರಾಧಿಗಳು ನಿರ್ದೋಷಿ ಎಂದು ಸಿದ್ಧರಾಗುತ್ತಾರೆ. ನ್ಯಾಯಾಲಯಗಳು ಸ್ತ್ರೀ ವಿರುದ್ಧ ತೀರ್ಪಿನ ಅಸಂಬದ್ಧತೆಯನ್ನಾಗಲಿ, ಅಥವಾ ಅದರಿಂದ ಸಮಾಜದ ಮೇಲೆ ದುಷ್ಪರಿಣಾಮಗಳನ್ನಾಗಲಿ, ಖಂಡಿಸಿದರೆ, ವಿರೋಧಿಸಿದರೆ ಅದು ನ್ಯಾಯ

ನಿಂದನೆಯಾಗುವುದಿಲ್ಲ. ಈ ಎಲ್ಲ ದೋಷಗಳಿಂದ ಪೊಲೀಸ್ ಮತ್ತು ನ್ಯಾಯಾಲಯ ವ್ಯವಸ್ಥೆಗಳಲ್ಲಿ ಕೆಲ ಬದಲಾವಣೆಗಳಾಗಬೇಕಾಗಿವೆ.

**ದೇವದಾಸಿ ನಿರ್ಮೂಲನಾ ಕಾರ್ಯದಲ್ಲಿ ಸಾರ್ವಜನಿಕರ ಪಾತ್ರ**

ದೇವದಾಸಿಯರನ್ನು ಎಲ್ಲಾ ಹಂತಗಳಲ್ಲಿ, ಎಲ್ಲಾ ಸ್ತರಗಳ ವ್ಯಕ್ತಿಗಳನ್ನು ಸಂಘಟಿತರನ್ನಾಗಿ ಮಾಡಿ, ಸಾರ್ವಜನಿಕರನ್ನು ಒಳಗೊಂಡಂತೆ, ಸಮರ್ಪಣಾ ಕಾರ್ಯಗಳ ಬಗ್ಗೆ ನಿಗಾವಹಿಸಿ, ಪ್ರೋತ್ಸಾಹಿಸುವುದರ ಬಗ್ಗೆ ನಿಗಾವಹಿಸಿ ವರದಿಯನ್ನು ಸಲ್ಲಿಸಿ ಅನಂತರ, ಅಂತಹವರ ವಿರುದ್ಧ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳುವುದು ಮತ್ತು ಇದರ ವಿರುದ್ಧ ಸೆಟೆದು ನಿಲ್ಲಬೇಕು.

ದೇವದಾಸಿ ಪ್ರಕರಣಗಳ ಬಗ್ಗೆ ಸ್ವಯಂ ಪ್ರೇರಣೆಯಿಂದ ದೂರು ನೀಡಲು ಮುಂದಾಗುವುದು. ಈ ಬಗ್ಗೆ ಸುಳಿವು ನೀಡಿ ಪೊಲೀಸರ ಕಾರ್ಯಾಚರಣೆಗೆ ಸಹಕರಿಸುವುದು. ಇದನ್ನು ಸಮರ್ಥಿಸುತ್ತಿರುವವರನ್ನು ಮತ್ತು ತಡೆಯನ್ನು ವಿರೋಧಿಸುವ ದೊಡ್ಡ ಮನುಷ್ಯರಿಗೆ ಬಹಿಷ್ಕಾರ ಹಾಕಬೇಕು. ಹೆಣ್ಣುಮಕ್ಕಳ ಮೈಸುಖಕ್ಕೆ ಜೊಲ್ಲು ಸುರಿಸುತ್ತಿರುವ ಅಶಕ್ತ ಮನಸ್ಸಿನ ಕಾಮುಕ ಪುರುಷನನ್ನು ಹೊಡೆದೋಡಿಸಿ, ಸ್ತ್ರೀಯರಿಗೆ ತಮ್ಮಲ್ಲಿನ ಶಕ್ತಿಯನ್ನು ಬಳಸಿ ಹೋರಾಡಿ, ಅತ್ಯಾಚಾರಿಯ ವಿರುದ್ಧ, ಮೈಕೊಡವಿ ಎದ್ದರೆ ಅತ್ಯಾಚಾರಿಗಳೇ ಇರುವುದಿಲ್ಲ ಎಂಬ ಮಾನಸಿಕ ಸ್ಥೈರ್ಯ, ಧೈರ್ಯ ತುಂಬಿ ತರಬೇತಿ ನೀಡುವುದು. ಈ ಬಗ್ಗೆ ಜಾಗೃತಿ, ಅಥವಾ ತಿಳುವಳಿಕೆ ಕಾರ್ಯಕ್ರಮಗಳನ್ನು ಪ್ರತಿ ಗ್ರಾಮದಲ್ಲಿ ಸಾರ್ವಜನಿಕ ಸಹಭಾಗಿತ್ವದೊಡನೆ ಆಯೋಜಿಸಬೇಕು. ಮುಖ್ಯವಾಗಿ ಸಮಾಜದ ತಳಮಟ್ಟದಿಂದ, ಗ್ರಾಮಪಂಚಾಯತಿಗಳನ್ನು ಇದರಲ್ಲಿ ತೊಡಗಿಸಿಕೊಳ್ಳಬೇಕು. ಬೀದಿ ನಾಟಕ, ಹಾಡುಗಳು, ಗೋಡೆ ಬರಹ ಮುತಾದವು ಮಾಧ್ಯಮಗಳ ಮೂಲಕ ಬೆತ್ತಲೆಸೇವೆ, ಅರೆ ಬೆತ್ತಲೆಸೇವೆ, ಪ್ರಾಣಿಬಲಿ,ದೇವದಾಸಿ ಸಮರ್ಪಣೆ, ಮುಂತಾದ ಅನಿಷ್ಠ ಪದ್ಧತಿಗಳಿಗೆ ವಿದಾಯ ಹೇಳುವಂತೆ ಜನರ ಮನವೊಲಿಸುವ ಕಾರ್ಯದಲ್ಲಿ ಸಾರ್ವಜನಿಕರು ಭಾಗಿಗಳಾಗಬೇಕು.

**ದೇವದಾಸಿ ನಿರ್ಮೂಲನಾ ಕಾರ್ಯದಲ್ಲಿ ಯುವಕರ ಪಾತ್ರ**

ಯಾವುದೇ ಪ್ರಮಾದದಿಂದ ವೇಶಾಗೃಹಗಳನ್ನು ಸೇರಿದರೂ ಅಲ್ಲಿಂದ ಹೊರಬಂದು ಪಶ್ಚತ್ತಾಪ ಹೊಂದಿ, ಪರಿಶುದ್ಧಮನಸ್ಸಿನಿಂದ ವೈವಾಹಿಕ ಜೀವನ ನಡೆಸಲು ಸಿದ್ದರಿರುವ ಎಳೆಯ ಪ್ರಾಯದ ವೇಶ್ಯೆಯರನ್ನು ವಿವಾಹವಾಗುವಂತೆ ಉದಾರ ಮನೋಭಾವದ ಯುವಕರಿಗೆ ಪ್ರೇರಣೆ ನೀಡಬೇಕು.

ಯುವಜನತೆ ದುಶ್ಚಟಗಳ ದಾಸರಾಗದಂತೆ, ನೈತಿಕ ಅಧಃಪತನ ಹೊಂದದಂತೆ ರಾಜಕಾರಣಿಗಳ ಕೈಗೊಂಬೆಯಾದ ಪಾತಾಕಿ ಗುಂಡಾಪಡೆಗೆ ಸೇರದಂತೆ ದೇವದಾಸಿಯರನ್ನಾಗಿಸುವ ಅವರ ಪ್ರಯತ್ನವನ್ನು ವಿಫಲಮಾಡಿ ಅವರಿಂದ ಹೆಣ್ಣುಮಕ್ಕಳನ್ನು ಕಾಪಾಡುವ ಜವಾಬ್ದಾರಿಯನ್ನು ಹೊರುವ ಮನಸ್ಸನ್ನು ಯುವ ಜನತೆಯಲ್ಲಿ ಮೂಢಿಸುವುದು.

**ದೇವದಾಸಿಯರಿಗೆ ಶಿಕ್ಷೆಗೆ ಒಳಪಡಿಸುವ ಕಾನೂನಿನಲ್ಲಿ ಬದಲಾವಣೆ ತರುವುದು.**

ಸಮಾಜದ ಶೋಷಿತ ಮಹಿಳೆಯಾದ ದೇವದಾಸಿ ಸ್ವ-ಇಚ್ಛೆಯಿಂದ ವೇಶ್ಯಾವೃತ್ತಿಗೆ ಇಳಿದಿರುವುದಿಲ್ಲ. ಅದಕ್ಕೆ ಕಾರಣವಾಗಿರುವುದು ವ್ಯವಸ್ಥೆ ಮತ್ತು ಆಕೆಯ ಸುತ್ತಲಿನ ವ್ಯಕ್ತಿಗಳು. ಅದರಲ್ಲೂ ಮುಖ್ಯವಾಗಿ ವಿಟ ಪುರುಷ. ಈತನ ಆಮಿಷಕ್ಕಾಗಿ ಆಕೆಗೆ ವೇಶ್ಯಾವೃತ್ತಿ ನಿರ್ವಹಿಸುವ ಸಂದರ್ಭ ಬಂದಿರುವುದು. ಇದು ಅನಿವಾರ್ಯ ಎಂಬಂತೆ

ಆಕೆಯ ಹಿಂದೆ ನಿರ್ದಯಿ ವ್ಯಕ್ತಿಗಳ ದೊಡ್ಡ ಹಿಂಡೆ ಇರುತ್ತದೆ. ಹೀಗಾಗಿ ಮೊದಲೇ ಶೋಷಣೆಗೆ ಒಳಗಾಗಿ, ನೊಂದು ಕೊರಗುತ್ತಿರುವ ಈಕೆಗೆ ಪುನಃ ನ್ಯಾಯ, ಸಮಾನತೆಯನ್ನು ಎತ್ತಿ ಹಿಡಿಯಬೇಕಾದ ಕಾನೂನೇ ಶಿಕ್ಷೆಗೆ ಒಳಪಡಿಸುವುದು ಸಮಂಜಸವಾದುದಲ್ಲ. ಈ ಕಾರಣದಿಂದಾಗಿ ಜೀವನೋಪಾಯಕ್ಕೆ ನಿರಂತರ ಆದಾಯ ಬರುವಂತಹ ಆರ್ಥಿಕ ಚಟುವಟಿಕೆಗಳನ್ನು ಅನುಷ್ಠಾನಗೊಳಿಸಿ ಸ್ವಾಭಿಮಾನದಿಂದ ಬಾಳುವ ಬಾಳನ್ನು ಕಲ್ಪಿಸಿಕೊಡುವ ವ್ಯವಸ್ಥೆಯನ್ನು ಸರ್ಕಾರ ಕೈಗೊಂಡು ಇವಳ ದಂಧೆಗೆ ಕಾರಣವಾಗುವ, ಪ್ರೇರೇಪಿಸುವ ವ್ಯಕ್ತಿಗಳಿಗೆ ಶಿಕ್ಷೆ ಕೊಡುವ ತರಹ ಕಾನೂನನ್ನು ತಿದ್ದುಪಡಿಗೊಳಿಸುವುದು.

ಮೇಲೆ ವಿವರಿಸದ ಸಲಹೆಗಳನ್ನ ಪ್ರಾಮಾಣಿಕವಾಗಿ ಅನುಷ್ಠಾನಕ್ಕೆ ತರಲು ಸಾಧ್ಯಾವಾದಲ್ಲಿ 'ದೇವದಾಸಿ ಸಂಪ್ರದಾಯ'ವೆಂಬ ಅಮಾನವೀಯ ಸಂಪ್ರದಾಯವನ್ನು ಸಮಾಜದಿಂದ ನಿರ್ಮೂಲನೆ ಮಾಡುವುದನ್ನು ನೀರೀಕ್ಷಿಸಬಹುದಾಗಿದೆ.

ದೇವದಾಸಿ ಸಂಪ್ರದಾಯವು ವ್ಯಕ್ತಿ, ಕುಟುಂಬ, ಸಮಾಜದ ಅಸ್ವಸ್ಥತೆಗೆ ಕಾರಣವಾಗಿರುವ ಒಂದು ಅನಿಷ್ಠ ಸಂಪ್ರದಾಯವಾಗಿರುವುದನ್ನ ಮನಗಂಡು ಸಮಾಜ ಚಿಂತಕರು, ಸುಧಾರಕರು, ನಾಯಕರು, ರಾಜ ಮಹಾರಾಜರು, ಸಾಧು ಸಂತರು, ಶರಣರು ಪ್ರಾಚೀನ ಕಾಲದಿಂದಲೂ ಪ್ರಯತ್ನಿಸಿದ್ದಾರೆ. ಅಂದರೆ ಜೈನ ಬೌದ್ಧ ಧರ್ಮಗಳ ಕಾಲದಲ್ಲಿ ಸ್ತ್ರೀಯರು ಆತ್ಮ ಸ್ಥೈರ್ಯದಿಂದ ಬಾಳಲು ಪ್ರಯತ್ನಿಸಲಾಗಿದೆ. ಹಾಗೆಯೇ ವಚನಕಾರರು ಧರ್ಮದ ಹೆಸರಿನಲ್ಲಿ ಪುರೋಹಿತ ವರ್ಗದ ಶೋಷಣೆಯ ನಿರ್ಮೂಲನಕ್ಕೆ ಆಂದೋಲನವನ್ನ ಕೈಗೊಂಡು ಮೂಢ ನಂಬಿಕೆಗಳ ವಿರುದ್ಧ ಜನರಲ್ಲಿ ಜಾಗೃತಿ ಮೂಢಿಸಿದರು. ಮಧ್ಯ ಯುಗದಲ್ಲಿ ಮುಸ್ಲಿಂ ದೊರೆಗಳು ದೇವಾಲಯಗಳನ್ನು ನಾಶಪಡಿಸುವ ಮೂಲಕ ಈ ಸಂಪ್ರದಾಯಕ್ಕೆ ತಡೆ ಒಡ್ಡಿದರು. ಬ್ರಿಟೀಶರು ಸಹ ಇದರ ನಿರ್ಮೂಲನೆಗಾಗಿ ನಿವಾರಣಾ ಕ್ರಮಗಳನ್ನು ಕೈಗೊಳ್ಳಲು ಇವರ ಮೇಲೆ ಒತ್ತಡ ತರುವಲ್ಲಿ ಸಮಾಜ ಸುಧಾರಕರು ಕಂಕಣಬದ್ಧರಾಗಿ ನಿಂತ ಪರಿಣಾಮವಾಗಿ ದೇವದಾಸಿ ಸಂಪ್ರದಾಯ ಸ್ವಲ್ಪ ಮಟ್ಟಿಗೆ ಹಿಡಿತಕ್ಕೆ ಬಂದಿತಾದರೂ ಸಮಾಜದಿಂದ ಸಂಪೂರ್ಣವಾಗಿ ತೊಲಗಿಸಲಾಗಲಿಲ್ಲ. ದೇಶಕ್ಕೆ ಸ್ವತಂತ್ರ ಬಂದ ನಂತರ ಇದರ ನಿರ್ಮೂಲನೆಗಾಗಿ ಹಲವಾರು ಕಾಯ್ದೆ ಕಾನೂನುಗಳನ್ನ ಜಾರಿಗೊಳಿಸಿ ಜೊತೆ ಸರ್ಕಾರದ ಸಹಯೋಗದಲ್ಲಿ ಹಲವಾರು ಸ್ವಯಂ ಸೇವಾ ಸಂಘ ಸಂಸ್ಥೆಗಳು ಇದರ ನಿವಾರಣೆಗಾಗಿ ಕಾರ್ಯನಿರತವಾಗಿವೆ. ಸಂವಿಧಾನದಲ್ಲಿ ಮಹಿಳೆಯರ ರಕ್ಷಣೆ ಮತ್ತು ಸಮಾನತೆಗಾಗಿ ಹಲವಾರು ಶಾಸನಗಳನ್ನ ಜಾರಿಗೊಳಿಸಲಾಗಿದೆ. ಇಷ್ಟೆಲ್ಲಾ ಪ್ರಯತ್ನಗಳನ್ನ ಕೈಗೊಂಡಿದ್ದರೂ ದೇವದಾಸಿ ಸಂಪ್ರದಾಯ ಇನ್ನೂ ಜೀವಂತವಿದ್ದು ಸಮಾಜದ ಹಿತಚಿಂತಕರನ್ನ ಬೆರಗುಗೊಳಿಸುವಂತೆ ಮಾಡಿ ಸಮಾಜದ ಅಸ್ವಸ್ಥತೆಗೆ ಕಾರಣವಾದ ಭೂತದಂತೆ ಕಾಣುತ್ತಿದೆ. ಕಾರಣ ಈ ಪದ್ಧತಿಗೆ ಪೋಷಕವಾಗಿರುವ ಹಲವಾರು ಅಂಶಗಳು ಇಂದಿಗೂ ಇದ್ದು ಇದರ ಪರಿಣಾಮ ಇಂದು ದೇವದಾಸಿಯರು ಹೊಸ ಬಗೆಯ ಶೋಷಣೆಗೆ ಸಿಲುಕಿ ಅವರ ಬೆಲೆ ಮತ್ತು ಬೇಡಿಕೆಗಳಲ್ಲಿ ವ್ಯತ್ಯಾಸವಾಗಿ ಹಲವಾರು ಅಪಾಯ ಮತ್ತು ರೋಗ ರುಜಿನಿಗಳಿಗೆ ಸಿಲುಕಿದ್ದಾರೆ ಜೊತೆಗೆ ಈ ಸಂಪ್ರದಾಯದ ವ್ಯಾಪ್ತಿಯೊಳಗೆ ಬರುವ ಎಲ್ಲರೂ ಒಂದಲ್ಲ ಒಂದು ರೀತಿಯ ದುಷ್ಪರಿಣಾಮಗಳನ್ನ ಎದುರಿಸುವಂತಾಗಿದೆ. ಇದರ ನಿವಾರಣೆಗಾಗಿ ಹಲವಾರು ಸಲಹೆ ಸೂಚನೆಗಳು

ಪರಿಹಾರೋಪಾಯಗಳನ್ನ ಸೂಚಿಸಬಹುದಾಗಿದ್ದರೂ ಆ ಸಲಹೆ ಸೂಚನೆಗಳನ್ನ ಸಮರ್ಥವಾಗಿ ಆಚರಣೆಗೆ ತರುವಲ್ಲಿ ಸರ್ಕಾರ, ಸಂಘ ಸಂಸ್ಥೆಗಳು ಮುಖ್ಯವಾಗಿ ಸಾರ್ವಜನಿಕರು ಆಸಕ್ತಿ ತೋರಿದಾಗ ಮಾತ್ರ ಸಾಧ್ಯವಿದೆ. ಅಂದರೆ 'ಸಾಧನೆಗೆ ಅಸಾಧ್ಯವಾದುದು ಯಾವುದೂ ಇಲ್ಲ. ಆದರೆ ಸಾಧಿಸುವ ಛಲ ಮನುಷ್ಯನಿಗೆ ಬೇಕು'. ಎಂಬ ಗಾದೆಯಂತೆ ಛಲ ಬೇಕು ಶರಣಂಗೆ ದೇವದಾಸಿ ಸಂಪ್ರದಾಯವನ್ನ ಬುಡ ಸಮೇತ ಸಮಾಜದಿಂದ ಕಿತ್ತೆಸೆಯುವೆನೆಂಬ ಭಾವನೆ ಬಂದಾಗ ಮಾತ್ರ ಇದು ಸಂಪೂರ್ಣ ನಿವಾರಣೆಯಾಗುವುದನ್ನ ನಿರೀಕ್ಷಿಸಬಹುದಾಗಿದೆ.

**ಅಡಿ ಟಿಪ್ಪಣಿಗಳು**

೦೧. ಬಸವಣ್ಣನವರ ಷಟ್‌ಸ್ಥಳದ ವಚನಗಳು, ಸಂ.ಪೊ.ಬಸವನಾಳ ಶಿವಲಿಂಗಪ್ಪನವರು, ಉಲ್ಲೇಖ ಡಾ.ಎಂ.ಬಿ.ಹೂಗಾರ, ಶರಣರ ಆಂದೋಲನ ಮತ್ತು ಹೊಸ ಸಮಾಜದ ಪರಿಕಲ್ಪನೆ. ಪು.೧೭೧, ೧೯೯೫

೦೨. ಅದೇ ಪು. ೧೭೧

೦೩. ಎಚ್ ಎಂ ಮರುಳಸಿದ್ದಯ್ಯ, ಸಮಾಜಕಾರ್ಯ ವಿಶ್ವಕೋಶ ಪು. ೪೭೬, ೧೯೯೩

೦೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೩, ಕರ್ನಾಟಕ ರಾಜ್ಯ ಸರ್ಕಾರ, ಮುಖ್ಯ ಸಂಪಾದಕರು, ಸೂರ್ಯನಾಥ ಯು.ಕಾಮಥ್, ಪು.೧೮೮

೦೫. ಎಚ್ ಎಂ ಮರುಳಸಿದ್ದಯ್ಯ, ಸಮಾಜಕಾರ್ಯ ವಿಶ್ವಕೋಶ, ಪು.೪೭೭, ೧೯೯೩

೦೬. ಡಾ.ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ಪು. ೧೯೪, ೧೯೯೩

೦೭. ಡಾ.ಚೆನ್ನಣ್ಣವಾಲಿಕರ್, ಕರ್ನಾಟಕದ ದೇವದಾಸಿಯರ ಸಮಾಜೋ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ ಪು. ೪೦೯, ೪೧೦, ೨೦೦೧

೦೮. The foundation of prostitution is hunger, M.L. Ondres, ಉಲ್ಲೇಖ: ಚ.ನ. ಶಂಕರ್‌ರಾವ್, ಭಾರತದ ಸಾಮಾಜಿಕ ಸಮಸ್ಯೆಗಳ, ಪು.೩೨೦, ೩೨೧, ೨೦೦೩

೦೯. ಡಾ.ಚೆನ್ನಣ್ಣ ವಾಲಿಕರ್, ಬುಡಕಟ್ಟಿನ ಆಚಾರಗಳು, ಪು.೧೮೮, ೨೦೦೧.

೧೦. ಅದೇ, ಪು.೨೨

೧೧. ಅದೇ, ಪು.೧೩೫

೧೨. ಎನ್ ಗಾಯತ್ರಿ, ನಿತ್ಯ ಸುಮಂಗಲಿಯ ಪಾಡು, ಪು ೧೧೩, ೧೯೯೧

